# ಬದಲಾವಣೆಯ ಬೆನ್ನಟ್ಟಿ...

## ಕಲೈಡೋಸ್ಕೋಪಿನಲ್ಲಿ ಕಾಲನ ಹೆಜ್ಜೆಗಳು



ಸಂಪಾದಕರು
ಪ್ರಕಾಶ್ ನಾಯಕ್
ಶಂಕರ ಹೆಗಡೆ

ಕನ್ನಡ ಸಾಹಿತ್ಯ ರಂಗ ಪುಸ್ತಕಮಾಲೆ - ೧೧

# ಬದಲಾವಣೆಯ ಬೆನ್ನಟ್ಟಿ...

## ಕಲೈಡೋಸ್ಕೋಪಿನಲ್ಲಿ ಕಾಲನ ಹೆಜ್ಜೆಗಳು

**ಸಂಪಾದಕರು:**

ಪ್ರಕಾಶ್ ನಾಯಕ್

ಶಂಕರ ಹೆಗಡೆ

**ಸಂಪಾದಕ ಮಂಡಳಿ:**

ತ್ರಿವೇಣಿಶ್ರೀನಿವಾಸರಾವ್

ಜ್ಯೋತಿ ಮಹಾದೇವ್

ಆನಂದ ರಾಮಮೂರ್ತಿ



**ಕನ್ನಡ ಸಾಹಿತ್ಯ ರಂಗ**

ಯು. ಎಸ್. ಎ.

**BADALAVANEYA BENNATTI –** Collection of essays, short stories and poems, edited by **Prakash Nayak** and **Shankar Hegde** (11th Book in the series of Kannada Saahitya Ranga Pustakamale); Published by **Kannada Saahitya Ranga**, No. 1941 Schanck Road, Frehold, NJ 07728, USA.

First Published in 2019 Book Size 1/8 Demy

Paper Used: 70 GSM N S Maplitho Pages:424 Price: Rs. 400/- USD 15



ವಿತರಣೆ:
**ಅಭಿನವ, ೧೭/೧೮-೨, ಮೊದಲನೆಯ ಮುಖ್ಯರಸ್ತೆ,**
**ಮಾರೇನಹಳ್ಳಿ, ವಿಜಯನಗರ, ಬೆಂಗಳೂರು ೫೬೦೦೪೦.**
**ದೂ: ೯೪೪೮೮೦೪೯೦೫.**
Email: abhinavaravi@gmail.com

ಸಾಹಿತ್ಯ ಸಲಹೆಗಾರರು:
**ನಾಗ ಐತಾಳ**
**ಮೈ. ಶ್ರೀ. ನಟರಾಜ**
**ನಳಿನಿ ಮೈಯ**
**ಗುರುಪ್ರಸಾದ ಕಾಗಿನೆಲೆ**



ಮುಖಪುಟದ ಕಲಾಕೃತಿ : **ಸುಜಯ ರಾಮಯ್ಯ,** ಹೇವರ್ಡ್
ವಿನ್ಯಾಸ : **ಗುರುಪ್ರಸಾದ್ ಎಂ. ಆರ್.**
ಮುದ್ರಣ : **ಲಕ್ಷ್ಮೀ ಮುದ್ರಣಾಲಯ,** ಬೆಂಗಳೂರು

**ಅರ್ಪಣೆ**

ಬದಲಾವಣೆಗಳ ಬೀಜ ಬಿತ್ತಿ, ಬೆಳೆಸಿ
ಮನುಕುಲವನ್ನು ಮುನ್ನಡೆಸಿದ
ಮಹಾನ್ ಚೇತನಗಳಿಗೆ

**ಕೃತಜ್ಞತೆಗಳು**

ಈ ಸಂಕಲನವನ್ನು ಪ್ರಾಯೋಜಿಸಿದ ಹ್ಯೂಸ್ಟನ್ನಿನ
ಹೆಮ್ಮೆಯ ಕನ್ನಡಿಗ
**ಶ್ರೀ ವತ್ಸಕುಮಾರ**
ಅವರಿಗೆ
**ಕನ್ನಡ ಸಾಹಿತ್ಯ ರಂಗದ**
ಹೃತ್ಪೂರ್ವಕ ಕೃತಜ್ಞತೆಗಳು.

# ಅನುಕ್ರಮ

ಅನುಬಂಧ :

# ಅಧ್ಯಕ್ಷರ ಮಾತು

'ಕಾಲ' ಎಂಬ ಶಬ್ದಕ್ಕೆ ಎಷ್ಟೊಂದು ಅರ್ಥಗಳಿವೆ ! ಭೂತ, ವರ್ತಮಾನ ಮತ್ತು ಭವಿಷ್ಯತ್ ಎಂಬ ಮೂರು ಕಾಲಗಳನ್ನು 'ಕಾಲ' ಎಂಬ ಶಬ್ದವು ಪ್ರತಿನಿಧಿಸುತ್ತದೆ. ಹಿಂದೆ ನಡೆದ, ಇಂದು ನಡೆಯುತ್ತಿರುವ ಮತ್ತು ಮುಂದೆ ನಡೆಯಬಹುದಾದ ಎಲ್ಲ ಘಟನೆಗಳನ್ನೂ ಈ ಶಬ್ದ ಒಳಗೊಂಡಿದೆ. ಹಲವು ಹಿಂದೆ ನಡೆದಂತೆಯೇ ಇಂದಿಗೂ ನಡೆಯುತ್ತಿವೆ, ಮುಂದೆಯೂ ನಡೆಯುತ್ತವೆ ಆದರೆ ಹಲವು ಬದಲಾವಣೆಗಳಿಗೆ ಒಳಗಾಗುತ್ತಿರುತ್ತವೆ. ಈ ಬದಲಾವಣೆಯೆಂಬ ಪ್ರಕ್ರಿಯೆ ನಮಗೆ ಗೊತ್ತಿದ್ದೋ ಗೊತ್ತಿಲ್ಲದೆಯೋ, ನಮಗೆ ಪ್ರಿಯವಾಗುವ ಹಾಗೋ ಅಪ್ರಿಯವಾಗುವ ಹಾಗೋ, ಅಂತೂ ನಡೆಯುತ್ತಲೇ ಇರುವಂಥದು. ಒಟ್ಟಿನಲ್ಲಿ ಬದಲಾವಣೆಯನ್ನು ಯಾರೂ ತಡೆಯಲಾರರು. ವರಕವಿ ಬೇಂದ್ರೆ ಕೊಟ್ಟ, ದೇಶ-ಕಾಲಗಳ ಪರಿಕಲ್ಪನೆಯಲ್ಲಿ ಇಡೀ ಬ್ರಹ್ಮಾಂಡಕ್ಕೆ ಅನ್ವಯಿಸುವ 'ಕಾಲ'ವೆಂಬ ಕಾಲ್ಪನಿಕ ಹಕ್ಕಿ ಹಾರುವ ಸುಂದರ ಪ್ರತಿಮೆಯನ್ನು ಇಲ್ಲಿ ಸಾಂದರ್ಭಿಕವಾಗಿ ನೆನೆಯಬಹುದು:

**ರಾಜ್ಯದ ಸಾಮ್ರಾಜ್ಯದ ತೆನೆ ಒಕ್ಕಿ**
**ಮಂಡಲ-ಗಿಂಡಲಗಳ ಗಡಮುಕ್ಕಿ**
**ತೇಲಿಸಿ ಮುಳುಗಿಸಿ ಖಂಡ-ಖಂಡಗಳ**
**ಸಾರ್ವಭೌಮರಾ ನೆತ್ತಿಯ ಕುಕ್ಕಿ**
**ಹಕ್ಕಿ ಹಾರುತಿದೆ ನೋಡಿದಿರಾ?**
**ಯುಗಯುಗಗಳ ಹಣೆ ಬರಹವ ಒರಸಿ**
**ಮನ್ವಂತರಗಳ ಭಾಗ್ಯವ ತೆರಿಸಿ**
**ರಕ್ಕೆಯ ಬೀರುತ ಚೇತನಗೊಳಿಸಿ**
**ಹೊಸಗಾಲದ ಹಸುಮಕ್ಕಳ ಹರಸಿ**
**ಹಕ್ಕಿ ಹಾರುತಿದೆ ನೋಡಿದಿರಾ?**

* * *

**ಮುಟ್ಟಿದ ದಿಗ್ಮಂಡಲಗಳ ಅಂಚ**
**ಆಚೆಗೆ ಚಾಚಿದೆ ತನ್ನಯ ಚುಂಚ**

**ಬ್ರಹ್ಮಾಂಡಗಳನು ಒಡೆಯಲು ಎಂದೋ**
**ಬಲ್ಲರು ಯಾರಾ ಹಾಕಿದ ಹೊಂಚ**
**ಹಕ್ಕಿ ಹಾರುತಿದೆ ನೋಡಿದಿರಾ?**

ಕನ್ನಡ ಸಾಹಿತ್ಯ ರಂಗ ಹುಟ್ಟಿ ಹದಿನೈದು ವರ್ಷಗಳಿಗೂ ಹೆಚ್ಚು ಸಮಯವಾಗಿದೆ, ಈ ಅಲ್ಪ ಸಮಯದಲ್ಲಿ ನಮ್ಮ ಸಂಘದಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ರಂಗದ ಹುಟ್ಟಿಗೆ ಮತ್ತು ಅದರ ಮುನ್ನಡೆಗೆ ಬಹಳಷ್ಟು ಶ್ರಮಿಸಿದ, ರಂಗವನ್ನು ಅತೀವ ಪ್ರೀತಿಯಿಂದ ಬೆಳೆಸಿದ ಶ್ರೀಯುತ ರಾಜಗೋಪಾಲ್ 'ಕಾಲ'ವಶರಾಗಿದ್ದಾರೆ! ನಮ್ಮ ಈ ಒಂಬತ್ತನೇ ಸಾಹಿತ್ಯೋತ್ಸವದಲ್ಲಿ ಅವರ ನೆನಪು ಮಾತ್ರ ಉಳಿದಿರುತ್ತದೆ; ಕಾಲಾಯ ತಸ್ಮೈ ನಮಃ!

'ಬದಲಾವಣೆ' ಎಂಬ ಮೂಲವಸ್ತುವನ್ನೇ ಆಧಾರವಾಗಿಟ್ಟುಕೊಂಡು ಮುಂದಿನ ಸಮ್ಮೇಳನವನ್ನು ನಡೆಸಲು ರಂಗ ತೀರ್ಮಾನಿಸಿದೆ. ಅದೇ ವಿಷಯವನ್ನು ಕುರಿತು ಅದರ ವಿವಿಧ ಮುಖಗಳನ್ನೊಳಗೊಂಡ "ಬದಲಾವಣೆಯ ಬೆನ್ನಟ್ಟಿ..." ಎಂಬ ಗ್ರಂಥವೊಂದನ್ನು ರಂಗದ ಸಂಪಾದಕ ಸಮಿತಿ ಸಿದ್ಧಗೊಳಿಸಿದೆ. ಶ್ರೀಯುತರಾದ ಪ್ರಕಾಶ್ ನಾಯಕ್ ಮತ್ತು ಶಂಕರ ಹೆಗಡೆ ಅತ್ಯಂತ ಶ್ರದ್ಧೆಯಿಂದ ದುಡಿದು ಹಲವು ಹತ್ತು ಲೇಖಕರನ್ನು ಗುರುತಿಸಿ ಲೇಖನಗಳನ್ನು ಆಹ್ವಾನಿಸಿ, ಪರಿಷ್ಕರಿಸಿ ಉತ್ತಮವಾದ ಗ್ರಂಥವೊಂದನ್ನು ಓದುಗರ ಮುಂದಿಡುತ್ತಿದ್ದಾರೆ. ಅವರಿಗೆ ಕನ್ನಡ ಸಾಹಿತ್ಯ ರಂಗದ ಪರವಾಗಿ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳು ಸಲ್ಲುತ್ತವೆ.

ಸಾಹಿತ್ಯೋತ್ಸವಕ್ಕೆ ಮುಖ್ಯ ಅತಿಥಿಗಳಾಗಿ ಆಹ್ವಾನಿತರಾಗಿರುವ ಕನ್ನಡದ ಪ್ರಸಿದ್ಧ ಕತೆಗಾರರಾಗಿರುವ ಶ್ರೀ ವಸುಧೇಂದ್ರ ಅವರ ಸತ್ವಯುತವಾದ ಪ್ರಾಸ್ತಾವಿಕ ಭಾಷಣವೂ ಗ್ರಂಥದ ಭಾಗವಾಗಿರುವುದರಿಂದ, ಹಾಗೂ ವೈವಿಧ್ಯತೆಯಿಂದ ಕೂಡಿದ ಕಥೆ, ಪ್ರಬಂಧ ಮುಂತಾದ ಸ್ವಾರಸ್ಯಕರ ಲೇಖನಗಳ ಸಂಗ್ರಹ ಇಲ್ಲಿರುವುದರಿಂದ ಕನ್ನಡದ ಓದುಗರಿಗೆ ಇದೊಂದು ಉತ್ತಮ ಕೊಡುಗೆಯಾಗುವುದರಲ್ಲಿ ನಮಗೆ ಸಂಶಯವಿಲ್ಲ. ನಮ್ಮ ಸಾಹಿತ್ಯೋತ್ಸವದಲ್ಲಿ ಭಾಗಿಯಾಗಲಿರುವ ಕನ್ನಡಾಭಿಮಾನಿಗಳಿಗೂ ಈ ಗ್ರಂಥವನ್ನು ಕೊಂಡು ಓದುವ ಇತರ ಕನ್ನಡ ಬಂಧುಗಳಿಗೂ ರಂಗ ತನ್ನ ಹೃತ್ಪೂರ್ವಕ ಅಭಿನಂದನೆಗಳನ್ನು ವ್ಯಕ್ತಪಡಿಸುತ್ತದೆ.

ಸಿರಿಗನ್ನಡ ಗೆಲ್ಗೆ!

ಕನ್ನಡ ಸಾಹಿತ್ಯ ರಂಗದ ಪರವಾಗಿ
**ಮೈ. ಶ್ರೀ. ನಟರಾಜ (ಕಾರ್ಯಕಾರೀ ಸಮಿತಿಯ ಅಧ್ಯಕ್ಷ)**
**ನಾಗ ಐತಾಳ (ಆಡಳಿತ ಮಂಡಲಿಯ ಅಧ್ಯಕ್ಷ)**

## ಸಂಪಾದಕರ ಮಾತು...

ಬದಲಾವಣೆ ಅಸ್ತಿತ್ವದ ಕುರುಹು. ಅಣುವಿನಿಂದ ಬ್ರಹ್ಮಾಂಡದವರೆಗೆ, ಅಮಿಬಾದಿಂದ ಮನುಷ್ಯನವರೆಗೆ, ಜೀವ-ನಿರ್ಜೀವಜಗತ್ತಿನ ಎಲ್ಲ ಸದಸ್ಯರಿಗೂ ಬದಲಾವಣೆ ಅನಿವಾರ್ಯ. ತನ್ನ ಇಷ್ಟಾನುಕೂಲಕ್ಕೆ ಈ ಬದಲಾವಣೆಯನ್ನು ಬಗ್ಗಿಸಿಕೊಳ್ಳುವ ಅಥವಾ ಈ ಬದಲಾವಣೆಗೆ ಒಗ್ಗಿಕೊಳ್ಳುವ ಪ್ರಯತ್ನ ಜೀವಜಗತ್ತಿನ ಮುಂಚೂಣಿಯಲ್ಲಿ ನಿಂತ ಮಾನವನದ್ದು. ಈ ಪ್ರಯತ್ನದಲ್ಲಿ ನಾಗರಿಕತೆಗಳು ಹುಟ್ಟಿವೆ, ಬೆಳೆದಿವೆ, ಅಳಿದಿವೆ. ದಿನವೂ ಹೊಸ ಸಂಪರ್ಕಸಾಧನಗಳ ಆವಿಷ್ಕಾರವಾಗಿ ಜಗತ್ತು ಕಿರಿದಾಗುತ್ತಿದೆ ಎನ್ನುವ ಸಂಭ್ರಮದ ನಡುವೆಯೇ, ಮಾನವೀಯ ಸಂಬಂಧಗಳು ಕುಸಿಯುತ್ತಿರುವ ದುರಂತವಿದೆ. ಇಂತಹ ಬಹುರೂಪಿ ಬದಲಾವಣೆಯ ಬೆನ್ನುಹತ್ತಿ, ಅದರ ವಿವಿಧ ಮುಖಗಳನ್ನು ಪುಸ್ತಕರೂಪದಲ್ಲಿ ದಾಖಲಿಸಹೊರಟ ಕನ್ನಡ ಸಾಹಿತ್ಯರಂಗದ ಪ್ರಯತ್ನದ ಫಲ ಈ ಪುಸ್ತಕ.

ಆರಂಭದಲ್ಲಿ ನಡೆದ ಚರ್ಚೆಯಲ್ಲಿ ಪುಸ್ತಕದ ವ್ಯಾಪ್ತಿಯನ್ನು ಸೀಮಿತಗೊಳಿಸುವ ಪ್ರಸ್ತಾಪವಿತ್ತು. ಕಳೆದ ದಶಕಗಳಲ್ಲಿ ಯಾವುದಾದರೂ ಒಂದು ರಂಗದಲ್ಲಿ -ವಿಜ್ಞಾನ, ತಂತ್ರಜ್ಞಾನ, ಸಾಮಾಜಿಕ ಅಥವಾ ಸಾಂಸ್ಕೃತಿಕ ಮುಂತಾದ, ಅಮೆರಿಕನ್ನಡಿಗರ ಅನುಭವಕ್ಕೆ ಬಂದ ಬದಲಾವಣೆಗಳ ದಾಖಲೆಗಳನ್ನು ಚಿತ್ರಿಸುವುದು ಹೆಚ್ಚು ವ್ಯಾವಹಾರಿಕವೂ ಆಗಿತ್ತು. ಆದರೆ ಅನಂತರೂಪಿ ಬದಲಾವಣೆಯ ಎಲ್ಲ ಆಯಾಮಗಳನ್ನು ಸೆರೆಹಿಡಿಯಲು ಸಾಧ್ಯವಿಲ್ಲದಿದ್ದರೂ ಆ ಅಗಾಧತೆಯನ್ನು ಪರಿಚಯಿಸಲು ಅವಕಾಶಕೊಡುವ ಸಲುವಾಗಿ ಮತ್ತು ಸಾಧ್ಯವಾದಷ್ಟು ನೋಟಗಳನ್ನು ಅಳವಡಿಸಿಕೊಳ್ಳಲು ಅನುಕೂಲವಾಗುವಂತೆ ಬದಲಾವಣೆಗಳ ಯಾವುದೇ ಮುಖವನ್ನು ದಾಖಲಿಸಲು ನಿರ್ಧರಿಸಲಾಯಿತು. ಲೇಖಕರು ತಮಗೆ ಇಷ್ಟವಾದ ರೂಪದಲ್ಲಿ – ಪ್ರಬಂಧ, ಕಥೆ, ಕವನ – ಅಭಿವ್ಯಕ್ತಿಸುವ ಅವಕಾಶವನ್ನು ಕೊಡಲಾಯಿತು. ರೂಪ-ರಂಗಗಳ ಹಂಗಿಲ್ಲದೇ ಬದಲಾವಣೆಯ ಮುಖಗಳನ್ನು ಚಿತ್ರಿಸಲು ಅಮೆರಿಕನ್ನಡ ಬರಹಗಾರರಿಗೆ ಕಳೆದ ಹಲವು ದಶಕಗಳಲ್ಲಿ ಅವರು ಕಂಡು, ಅನುಭವಿಸಿದ ವಿವಿಧ ಬದಲಾವಣೆಗಳ ಬೆರಗು-ಕೊರಗುಗಳ ಕಥೆಗಳನ್ನು ಹಂಚಿಕೊಳ್ಳಲು ಆಹ್ವಾನವಿತ್ತೆವು.

ಬರೆಯುವವರಿಗೆ ಅನುಕೂಲವಾಗಲಿ ಎಂದು ಏಳೆಂಟು ಕ್ಷೇತ್ರಗಳನ್ನು ಸೂಚಿಸಿರುವದರ ಹೊರತಾಗಿ, ಹೆಚ್ಚಿನ ನಿರ್ಬಂಧ ಹೇರಿರಲಿಲ್ಲ.

ನಮ್ಮ ಆಹ್ವಾನಕ್ಕೆ ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿ ಬಂದ ಲೇಖನಗಳ ಹರಹು, ವೈವಿಧ್ಯತೆ ನಮ್ಮ ನಿರೀಕ್ಷೆಯನ್ನೂ ಮೀರಿತ್ತು. ಬಂದ ಲೇಖನಗಳಲ್ಲಿ ವಿವಿಧ ಮಟ್ಟದ ಪ್ರಬಂಧಗಳು, ಸಣ್ಣ ಕಥೆಗಳು, ಕವನಗಳೂ ಇದ್ದವು. ಕೃತಿಗಳಲ್ಲಿ ಬದಲಾವಣೆಯ ಎಳೆ ಪ್ರತ್ಯಕ್ಷವಾಗಿ, ನೇರವಾಗಿ ಕಾಣಿಸಿಕೊಂಡರೆ, ಇನ್ನು ಕೆಲವು ಕಡೆ ಪರೋಕ್ಷವಾಗಿ, ನವಿರಾಗಿ ನುಸುಳಿಕೊಂಡಿದ್ದವು. ಲೇಖನಗಳನ್ನು ಓದಿದಂತೆ ನಮಗೆ ಬದಲಾವಣೆಯ ವಿಶ್ವರೂಪದ ಬಿಸಿ ಹತ್ತತೊಡಗಿ, ಯಾವುದು ನಮ್ಮ ಥೀಮಿಗೆ ಪೂರಕ ಎನ್ನುವ ಸಮಸ್ಯೆಗಿಂತ ಯಾವುದು ಪೂರಕವಲ್ಲ ಎಂದು ನಿರ್ಧರಿಸುವುದು ಕಷ್ಟವಾಯಿತು. ಹಾಗಾಗಿ ಬಂದ ಬಹುಮಟ್ಟಿನ ಲೇಖನಗಳನ್ನು ಸ್ವೀಕರಿಸುವ ನಿರ್ಧಾರಕ್ಕೆ ಬಂದೆವು.

ಇಲ್ಲಿಯ ಲೇಖನಗಳ ಮುಖ್ಯ ನಿರೂಪಕ ವಲಸೆಗಾರ. ಅದೂ ಕರ್ನಾಟಕದಿಂದ ಬಂದು ಅಮೆರಿಕೆಯಲ್ಲಿ ನೆಲೆಸಿರುವ ವಲಸೆಗಾರ. ಅಮೆರಿಕನ್ನಡಿಗರ ಅನುಭವ ವೈವಿಧ್ಯದಲ್ಲಿರುವ ಈ ಮಿತಿ, ಈ ಪುಸ್ತಕದ ಮಿತಿಯೂ ಹೌದು. ಕನ್ನಡ ಸಾಹಿತ್ಯ ರಂಗ ಕೆಲ ವರ್ಷಗಳ ಹಿಂದೆ ಹೊರತಂದ 'ಬೇರು ಸೂರು' ಗ್ರಂಥದ ಲೇಖನಗಳಲ್ಲಿಯೂ ಈ ವಲಸೆಗಾರನೇ ನಾಯಕ. ಅಲ್ಲಿ ಆತ ತನ್ನ ವಲಸೆ ಜೀವನದ ವೈಯಕ್ತಿಕ ನೋವು–ನಲಿವುಗಳನ್ನು ಹಂಚಿಕೊಂಡಿದ್ದರೆ, ಇಲ್ಲಿಯ ಬಹುಮಟ್ಟಿನ ಲೇಖನಗಳಲ್ಲಿ ಆತ ಹೊರ ಸಮಾಜದಲ್ಲಾಗುತ್ತಿರುವ ಬದಲಾವಣೆಗಳನ್ನು ವಿಶ್ಲೇಷಿಸಿ, ವಿವರಿಸುವ ಪ್ರಯತ್ನ ಮಾಡಿದ್ದಾನೆ. ಹೊಸ ದೇಶ, ಪರಿಸರದಲ್ಲಿ ವಲಸಿಗನಾಗಿ ಹಂತ–ಹಂತವಾಗಿ ಗಮನಿಸಿದ, ಅನುಭವಿಸಿದ ಸಾಮಾಜಿಕ, ನೈತಿಕ, ರಾಜಕೀಯ ಬದಲಾವಣೆಗಳು, ತನ್ನ ಜನ್ಮಭೂಮಿಗೆ ಆಗಾಗ ಕೆಲದಿನಗಳಮಟ್ಟಿಗೆ ಮರಳಿದಾಗ ಅಲ್ಲಿಯ ಸಮಾಜದಲ್ಲಿ ಆಧುನಿಕತೆ ತಂದ ಮಾರ್ಪಾಡುಗಳು ಎಲ್ಲವನ್ನು ತನಗೆ ಇಷ್ಟವಾದ ಪ್ರಬಂಧ, ಸಣ್ಣ ಕಥೆ, ಕವನಗಳ ರೂಪದಲ್ಲಿ ತಮ್ಮ ಮುಂದಿಟ್ಟಿದ್ದಾನೆ.

ನಮ್ಮ ಬರಹಗಾರರಲ್ಲಿ ಕೆಲವರು ಐದು ದಶಕಗಳ ಹಿಂದೆಯೇ ವಲಸೆ ಬಂದವರಾದರೆ, ಇನ್ನು ಹಲವರು ಕಳೆದ ಒಂದೆರಡು ದಶಕಗಳಲ್ಲಿ ಬಂದವರು. ಹುಟ್ಟಿದ ನೆಲದಲ್ಲಿ ಅವರು ಬದುಕಿದ ಪರಿಸರವೂ ಭಿನ್ನವೇ. ದೇಶಕಾಲಗಳ ನೆಲೆಯಲ್ಲಿ ಪ್ರತಿ ವಲಸೆಗಾರನ ಅನುಭವವೂ ಅನನ್ಯ. ತಮ್ಮ ಇಲ್ಲಿನ ಜೀವನದಲ್ಲಿ ಆದ ಬದಲಾವಣೆಗಳ ಜೊತೆಗೆ, ತಮ್ಮ ಹುಟ್ಟಿದೂರಿನ ಭೇಟಿಯಲ್ಲಿ ಕಂಡ ಬದಲಾವಣೆಯ ಕುರಿತ ವಿಸ್ಮಯವೂ ಅವರ ಅನುಭವಕ್ಕೆ ಹೊಸ ಆಯಾಮ ಕೊಡುತ್ತದೆ. ಅಮೆರಿಕೆ–ಭಾರತಗಳಲ್ಲಿನ ಬದಲಾವಣೆಗಳನ್ನು ಸ್ವಲ್ಪ ದೂರ ನಿಂತು ದೂರುವ, ಮರುಗುವ, ಬೆರಗಾಗುವ ವಿಶಿಷ್ಟ ಅವಕಾಶ ಅನಿವಾಸಿಗಳ ಪಾಲಿಗೆ. ಅದು ಇಲ್ಲಿಯ ಲೇಖನಗಳ ವೈವಿಧ್ಯತೆಯಲ್ಲಿ ವ್ಯಕ್ತವಾಗಿದೆ ಕೂಡ.

ಬದಲಾವಣೆಗಳ ಕುರಿತು ಬೆರಗು, ಕಳೆದುಕೊಳ್ಳುತ್ತಿರುವದರ ಕುರಿತು ಕೊರಗು ("ಜನಪದ ಕಲೆಯ ಮೇಲೆ ಸುಧಾರಣೆಯ ಪರಿಣಾಮ"), ಒಪ್ಪಿಕೊಳ್ಳಬೇಕಾದ ಅನಿವಾರ್ಯತೆ ("ಬಪ್ಪುದೇ ಒಪ್ಪುದು", "ಆಸೆಯೇ ಜೀವಜಲ"), ಸಾಕಷ್ಟು ಆಗಲಿಲ್ಲವೆಂಬ ಅತೃಪ್ತಿ, ಕಳಕಳಿ ("ಭಾರತ ಬದಲಾಗುತ್ತಿದೆ", "ಭಾರತದಲ್ಲಿ ವಿಜ್ಞಾನ ಅಂದು ಇಂದು"), ಹೆಣ್ಣಿನ ಬದುಕಿನಲ್ಲಾದ ಬದಲಾವಣೆಯ ಬಗ್ಗೆ ಹೆಮ್ಮೆ ("ಹೆಡೆಯೆತ್ತಿ ಬುಸುಗುಟ್ಟಿದಳು ಹೆಣ್ಣು", "ಪರಿವರ್ತನೆ"), ಅದಕ್ಕಾಗಿ ಬಲಿತೆತ್ತವರ ಬಗೆಗಿನ ಶ್ರದ್ಧಾಂಜಲಿ ("ಚಿರಜೀವಿನೀ"), ಬದಲಾವಣೆಗೆ ಹರಿಕಾರರಾದವರ ಬಗೆಗಿನ ಕೃತಜ್ಞತೆ ("ಜನನೀ ಜನ್ಮಭೂಮಿಶ್ಚ"), ಬದಲಾಗುತ್ತಿರುವ ಸಂಬಂಧಗಳು ("ವಾವೆ ವರಸೆಗಳ ಭಾವ ಸರಸಗಳು, ಮನೆ-ಮನಗಳು ಬದಲಾವಣೆ ಕಂಡಾಗ"), ಎಲ್ಲ ಬದಲಾವಣೆಗಳ ನಡುವೆಯೂ ಮೌಲ್ಯಗಳನ್ನು ಕಾದುಕೊಂಡಿದ್ದರ ಬಗೆಗಿನ ಧನ್ಯತೆ ("ಮೂರು ತಲೆಮಾರುಗಳ ಮೂಲಭೂತ ಮೌಲ್ಯಗಳು"), ಬದಲಾಗುವ ಮನೋಭಾವ ("ಲೋಲ", "ಜಗದ ನಿಯಮ", "ನಿತ್ಯದಾಟ", "ಬದುಕು, ಬದಲಾವಣೆ, ವಲಸೆ ಜೀವನ", "ಕಾಣದ ಕಡಲಿಗೆ ಹಂಬಲಿಸುತಿದೆ ಮನ"), ಬದಲಾವಣೆಗಳ ನಡುವೆ ಕಾಡುವ ನೆನಪುಗಳು ("ಎತ್ತಣ ಮಾಮರ, ಎತ್ತಣ ಕೋಗಿಲೆ", "ನೆನಪುಗಳೇ ನೀವ್ಯಾಕೆ ಮರೆಯುವುದಿಲ್ಲ", "ಕಾಲಾಯ ತಸ್ಮೈ ನಮಃ"), ನೆನಪು ಗ್ರಹಿಕೆಯನ್ನು ಬದಲಾಯಿಸುವ ಪರಿಯ ಕುರಿತು ಅಚ್ಚರಿ ("ಕೂಪರ್ಟಿನೋ"), ಬದಲಾವಣೆಯ ಪ್ರವಾಹದಲ್ಲಿ ನೆನಪಿನ ಶಕ್ತಿಯೇ ಕಳೆದುಹೋದೀತೆಂಬ ಭಯ ("ಮುಕ್ತಾ"), ಎಷ್ಟೊಂದು ಭಾವಗಳು. ಅಂದು ಇಂದಿನದನ್ನು ಒಂದರ ಪಕ್ಕ ಒಂದನ್ನು ನೋಡುವ ತವಕ ("ಪಿತೃಕಾಮೇಷ್ಟಿ", "ಜಡೆಬಿಲ್ಲೆ", "ಗಾಜಿನ ಗೋಡೆ", "ಮಾತೃಭೂಮಿ ಶಾಪಿಂಗ್ ಮಾಲ್ ಆದಾಗ", "ನಾ ಕಂಡಂತೆ ನ್ಯೂ ಜರ್ಸಿ –ಅಂದು ಇಂದು", "ಹೇಗಿತ್ತು, ಹೇಗಾಯ್ತು"), ಭವಿಷ್ಯ ಏನಾದೀತೋ ಎಂಬ ಕಾಳಜಿ, ಕುತೂಹಲ ("ಬದಲಾವಣೆಯೇ ಪ್ರಗತಿ", "ಬದಲಾವಣೆಯೆಂಬ ಸಹಜಾವಸ್ಥೆ") ನಮ್ಮ ಲೇಖಕರನ್ನು ತಟ್ಟಿದೆ.

ಬದಲಾವಣೆಗಳನ್ನು ಭಾವಪರಿಧಿಯ ಹೊರಗೆ ನಿಂತು ತುಲನಾತ್ಮಕವಾಗಿ ಅಧ್ಯಯನ ಮಾಡುವ ಲೇಖನಗಳು ("ಐದು ದಶಕಗಳ ಐತಿಹ್ಯ", "ಬದಲಾಗುತ್ತಿರುವ ಸಮೂಹ ಮಾಧ್ಯಮ", "ಅದಲು ಅಮೇರಿಕ, ಬದಲು ಭಾರತ", "ಇಪ್ಪತ್ತನೆಯ ಶತಮಾನದ ರಾಜಕೀಯ ಸ್ಥಿತಿ-ಗತಿ") ಈ ಪುಸ್ತಕಕ್ಕೆ ಹೊಸ ಆಯಾಮವನ್ನು ತಂದಿವೆ. ಐದು ದಶಕಗಳ ಹಿಂದೆ ಪ್ರಕಟವಾದ ಕಥೆ "ಹೂವಿನ ಪೂಜೆ"ಯನ್ನು ಈ ಸಂಕಲನದಲ್ಲಿ ಒಳಗೂಡಿಸುವುದರ ಮೂಲಕ ಸಾಹಿತ್ಯದ ವಸ್ತು-ಪರಿಕರಗಳಲ್ಲಿನ ಬದಲಾವಣೆಯನ್ನು ಓದುಗರ ಮುಂದಿಡುವ ಮೂಲಕ ಸಾಹಿತ್ಯ ಬೆಳೆದುಬಂದ ಬಗೆಯನ್ನು ನೆನಪಿಸುವ ಪ್ರಯತ್ನ ಮಾಡಿದ್ದೇವೆ.

ಇಲ್ಲಿನ ಲೇಖನಗಳನ್ನು ಇನ್ನೂ ಹಲವು ನೆಲೆಗಳಲ್ಲಿ ವಿಂಗಡಿಸಬಹುದು, ಅಥವಾ ಬಿಡಿಬಿಡಿಯಾಗಿ ಓದಿ ಆನಂದಿಸಬಹುದು. ಬದಲಾವಣೆಯ ಜಗತ್ತು ಹೀಗೆಯೇ ಎಂದು ವಿವರಿಸಲಾಗದ ಒಗಟು. ಆ ಒಗಟಿನ ಚೂರುಗಳನ್ನು, ಬದಲಾವಣೆಯ ಬಹುಮುಖಗಳನ್ನು

ನಿಮ್ಮೆದುರು ಬಿಚ್ಚಿಡುವ ಈ ಚಿತ್ರಸಂಪುಟಕ್ಕೆ ನಿಮ್ಮ ಅನುಭವದ ಸೆಲ್ಫಿಯೂ ಸೇರಿ, ಬದಲಾವಣೆಯ ಬಗ್ಗೆ ಹೊಸ ಒಳನೋಟಗಳನ್ನು ಒದಗಿಸಲು ಸಫಲವಾದೀತೆಂದು ನಮ್ಮ ಆಶಯ.

ಮೊದಲನೆಯದಾಗಿ ನಮಗೆ ಈ ಸಂಕಲನವನ್ನು ಸಂಪಾದಿಸುವ ಅವಕಾಶವನ್ನು ಒದಗಿಸಿಕೊಟ್ಟ ಕನ್ನಡ ಸಾಹಿತ್ಯ ರಂಗದ ಕಾರ್ಯಕಾರಿ ಸಮಿತಿಯ ಅಧ್ಯಕ್ಷ ಶ್ರೀ ಮೈ. ಶ್ರೀ. ನಟರಾಜ ಅವರಿಗೂ, ಸಂಪಾದನೆಯ ಕಾರ್ಯದಲ್ಲಿ ಕಾಲಕಾಲಕ್ಕೆ ಸೂಕ್ತ ಸಲಹೆಗಳನ್ನಿತ್ತು ಸಹಾಯ ಮಾಡಿದ ಸಲಹಾ ಸಮಿತಿಯ ಎಲ್ಲ ಸದಸ್ಯರಿಗೂ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳು. ಎಲ್ಲ ಲೇಖನಗಳನ್ನು ಕೂಲಂಕಷವಾಗಿ ಓದಿ, ತಿದ್ದಿದ ಸಂಪಾದಕ ಮಂಡಳಿಗೂ ನಾವು ಆಭಾರಿಯಾಗಿದ್ದೇವೆ.

ನಾವು ಲೇಖನವೊಂದಕ್ಕೆ ಆಹ್ವಾನಿಸಿದಾಗ, ಈ ಪುಸ್ತಕವನ್ನು ಪ್ರಾಯೋಜಿಸುವ ಹೊಣೆಯನ್ನು ತಾವಾಗಿಯೇ ಮುಂದೆ ಬಂದು ವಹಿಸಿಕೊಂಡ ಶ್ರೀ ವತ್ಸಕುಮಾರ್ ಅವರಿಗೆ ನಮ್ಮ ಮನಃಪೂರ್ವಕ ಕೃತಜ್ಞತೆಗಳನ್ನು ಅರ್ಪಿಸುತ್ತೇವೆ.

ತಮ್ಮ ಉಪನ್ಯಾಸದ ಸಾರಾಂಶವನ್ನು ಸಕಾಲದಲ್ಲಿ ಬರೆದು ಕಳಿಸಿದ ಸಮ್ಮೇಳನದ ಮುಖ್ಯ ಅತಿಥಿಗಳಾದ ಶ್ರೀ ವಸುಧೇಂದ್ರ ಅವರಿಗೆ ನಮ್ಮ ವಂದನೆಗಳು. ಅದರಂತೆಯೇ ಪುಸ್ತಕಕ್ಕೆ ಲೇಖನಗಳನ್ನು ಬರೆದು ಒದಗಿಸಿದ ಎಲ್ಲಾ ಅಮೆರಿಕನ್ನಡ ಬರಹಗಾರರಿಗೂ ನಾವು ಆಭಾರಿಯಾಗಿದ್ದೇವೆ.

ಹಿಂದಿನಂತೆ ಕನ್ನಡ ಸಾಹಿತ್ಯ ರಂಗದ ಈ ಪುಸ್ತಕ ಪ್ರಕಟನೆ ಮತ್ತು ಪ್ರಸಾರದ ಎಲ್ಲ ಜವಾಬ್ದಾರಿಯನ್ನು ಹೊತ್ತು ದಕ್ಷತೆಯಿಂದ ನಿಭಾಯಿಸಿದ 'ಅಭಿನವ'ದ ರವಿಕುಮಾರ್ ಮತ್ತು ಬಳಗಕ್ಕೆ ಸಾಹಿತ್ಯ ರಂಗದ ಪರವಾಗಿ ನಮ್ಮ ಧನ್ಯವಾದಗಳನ್ನು ಅರ್ಪಿಸುತ್ತೇವೆ. ಪುಸ್ತಕಕ್ಕೆ ಸೂಕ್ತ ಮುಖಪುಟವನ್ನು ವಿನ್ಯಾಸಿಸಿದ ಶ್ರೀ ಸುಜಯ ರಾಮಯ್ಯ ಅವರಿಗೂ, ವಿನ್ಯಾಸಗೊಳಿಸಿದ ಎಂ ಆರ್ ಗುರುಪ್ರಸಾದ್ ಅವರಿಗೂ, ಕರಡು ತಿದ್ದಿದ ಇಂದ್ರಕುಮಾರ್ ಅವರಿಗೂ, ಅಂದವಾಗಿ ಮುದ್ರಿಸಿದ ಲಕ್ಷ್ಮೀ ಮುದ್ರಣಾಲಯದ ಮಾಲೀಕರು ಮತ್ತು ಸಿಬ್ಬಂದಿ ವರ್ಗಕ್ಕೂ ನಮ್ಮ ಧನ್ಯವಾದಗಳು.

ಕನ್ನಡ ಸಾಹಿತ್ಯ ರಂಗದ ಹಿಂದಿನ ಪ್ರಕಟನೆಗಳಂತೆಯೇ ಈ ಪುಸ್ತಕವನ್ನೂ, ಓದುಗರು ಆದರದಿಂದ ಬರಮಾಡಿಕೊಂಡು, ಓದಿ ತಮ್ಮ ಪ್ರತಿಕ್ರಿಯೆಗಳನ್ನು ಹಂಚಿಕೊಳ್ಳುವರೆಂದು ಆಶಿಸುತ್ತೇವೆ.

**– ಪ್ರಕಾಶ್ ನಾಯಕ್**
**– ಶಂಕರ ಹೆಗಡೆ**

# ಕಾಲದ ಹರಿವು

■ ವಸುಧೇಂದ್ರ, ಬೆಂಗಳೂರು

ಹದಿನೈದನೇ ಶತಮಾನದ ಅಂತ್ಯದಲ್ಲಿ ಯುರೋಪಿಯನ್ನರು ಭಾರತಕ್ಕೆ ದಾರಿಯನ್ನು ಹುಡುಕುವ ಇತಿಹಾಸ ನನಗೆ ಬಹಳ ಮುಖ್ಯವೆನ್ನಿಸುತ್ತದೆ. ಭಾರತಕ್ಕೆ ಬರುವ ಭೂಮಾರ್ಗ ಬಳಸಲು ಅವರಿಗೆ ಅಡ್ಡಿ-ಆತಂಕಗಳಿದ್ದವು. ಮೆಡಿಟರೇನಿಯನ್ ಮತ್ತು ಕೆಂಪು ಸಮುದ್ರವನ್ನು ಬಳಸಲು ಅರಬ್ಬ ದೇಶದ ಮುಸಲ್ಮಾನರು ಬಿಡುತ್ತಿರಲಿಲ್ಲ. ಜನಸಾಮಾನ್ಯರಲ್ಲಿ ಭಾರತದ ಮಸಾಲೆ ಪದಾರ್ಥಗಳಿಗೆ ಇನ್ನಿಲ್ಲದ ಬೇಡಿಕೆ ಏರ್ಪಟ್ಟಿತ್ತು. ವೆನಿಸ್‌ನ ವ್ಯಾಪಾರಿಗಳು ಮಸಾಲೆ ಪದಾರ್ಥಗಳನ್ನು ಒಂದಕ್ಕೆ ಹತ್ತು ಪಟ್ಟು ಅಧಿಕ ಲಾಭದಲ್ಲಿ ಮಾರುತ್ತಿದ್ದರು. ಈ ಹೊತ್ತಿನಲ್ಲಿ ವಾಸ್ಕೊ-ಡ-ಗಾಮಾ ಮತ್ತು ಕ್ರಿಸ್ಟೋಫರ್ ಕೊಲಂಬಸ್‌ರವರ ಸಾಹಸದ ಸಮುದ್ರಮಾರ್ಗ ಶೋಧ ನಿಜಕ್ಕೂ ಮೈನವಿರೇಳಿಸುತ್ತದೆ. ಸುಮಾರು ೩೦೫ ದಿನಗಳ ಕಾಲ ಅತ್ಯಂತ ದುರ್ಗಮವಾದ ಅಟ್ಲಾಂಟಿಕ್ ಮತ್ತು ಹಿಂದೂ ಮಹಾಸಾಗರಗಳನ್ನು ದಾಟಿ ವಾಸ್ಕೋ-ಡ-ಗಾಮಾ ಕಲ್ಲಿಕೋಟೆಗೆ ಬಂದಿದ್ದು ಮೈನವಿರೇಳಿಸುವ ಸಾಹಸ ಕಥನವಾಗಿದೆ. ಅವನು ಹಿಂತಿರುಗಿ ಬಂದಾಗ ಸಂತೋಷ-ಸಂಭ್ರಮಗಳು ಮೇರೆ ಮೀರಿದ್ದವು. ಪೋರ್ಚುಗಲ್ಲಿನ ರಾಜ ಮಾನ್ಯುಯಲ್ ಇವನ ಪ್ರಯಾಣದ ಖರ್ಚುವೆಚ್ಚ ನೋಡಿಕೊಂಡಿದ್ದ. ಅದು ಅವನಿಗೆ ಅರವತ್ತು ಪಟ್ಟು ಅಧಿಕ ಲಾಭವನ್ನು ತಂದು ಕೊಟ್ಟಿತ್ತು. ಸಹಜವಾಗಿಯೇ ವಾಸ್ಕೋ-ಡ-ಗಾಮಾನನ್ನು ಶತಮಾನದ ಸಾಹಸಿ ಎಂದು ಕೊಂಡಾಡಲಾಯಿತು.

ಆದರೆ ಭಾರತಕ್ಕೆ ದಾರಿ ಹುಡುಕಲು ಹೋಗಿ ಅಮೆರಿಕಾವನ್ನು ಕಂಡುಹಿಡಿದ ಕ್ರಿಸ್ಟೋಫರ್ ಕೊಲಂಬಸ್ ಮಾತ್ರ ಜನರ ನಗೆಚಾಟಿಕೆಗೆ ವಸ್ತುವಾಗಿ ಹೋಗಿದ್ದ. ಅವನ ಸಾಹಸದ ಯಾತ್ರೆಗೆ ಹಣವನ್ನು ಹೂಡಿದ್ದವಳು ಸ್ಪೇನಿನ ರಾಣಿ ಇಸಾಬೆಲ್ಲಾ. ಅದಕ್ಕೆ ಪ್ರತಿಯಾಗಿ ಅವಳಿಗೆ ಯಾವ ಲಾಭವೂ ದಕ್ಕಿರಲಿಲ್ಲ. ಅಮೆರಿಕಾದಲ್ಲಿ ಕೆಲವು ತಿಂಗಳುಗಳ ಕಾಲ ಕಳೆದ ಕೊಲಂಬಸ್‌ಗೆ ಯಾವ ಮಸಾಲೆ ಪದಾರ್ಥಗಳೂ ಸಿಕ್ಕಿರಲಿಲ್ಲ. ಕೇವಲ ಒಂದಿಷ್ಟು ಗುಲಾಮರನ್ನು ತನ್ನೊಡನೆ ಕರೆದುಕೊಂಡು ಹುಳ್ಳನಂತೆ ಮರಳಿದ್ದ. ಅವನು

ವಾಪಾಸು ಯುರೋಪಿಗೆ ಬಂದಿಳಿದಿದ್ದು ಪೋರ್ಚ್‌ಗಲ್ ದೇಶಕ್ಕೇ ಆಗಿತ್ತು. ರಾಜ ಮಾನ್ಯುಯಲ್‌ಗೆ ಅವನನ್ನು ಕಂಡರೆ ಆಗುತ್ತಿರಲಿಲ್ಲ. ಬರೀ ಬಾಯಿಬಡುಕ ಎಂದು ಅವನನ್ನು ದೂರವಿಟ್ಟಿದ್ದ. ಈಗಂತೂ ಅವನನ್ನು ಕೊಲೆ ಮಾಡಲು ತನ್ನ ಜನರಿಗೆ ಆಜ್ಞೆ ಕೊಟ್ಟುಬಿಟ್ಟ. ಅದು ಹೇಗೋ ಕೊಲಂಬಸ್ ತಲೆಮರೆಸಿಕೊಂಡು ಸ್ಪೇನ್ ದೇಶಕ್ಕೆ ಓಡಿ ಹೋದ. ಆ ಹೊತ್ತಿನಲ್ಲಿ ಕೊಲಂಬಸ್ ಸಾಹಸಿಯೆಂದು ಯಾರಿಗೂ ಅನ್ನಿಸಿರಲಿಲ್ಲ.

ಐದು ಶತಮಾನಗಳು ಕಳೆದ ನಂತರ ಈಗ ಈ ಸಂಶೋಧನೆಗಳ ಪ್ರಸ್ತುತಿಯನ್ನು ಗಮನಿಸಿದರೆ ನನಗೆ ಅಚ್ಚರಿಯಾಗುತ್ತದೆ. ಮಸಾಲೆ ಪದಾರ್ಥಗಳನ್ನು ಮೊಬೈಲ್‌ನಲ್ಲಿ ಆರ್ಡರ್ ಮಾಡಬಹುದಾದ ಹೊತ್ತಿನಲ್ಲಿ ವಾಸ್ಕೋ–ಡ–ಗಾಮಾನ ಸಂಶೋಧನೆ ಅರ್ಥಹೀನ ಎನ್ನಿಸುತ್ತದೆ. ವಿಶೇಷವೆಂದರೆ ಕೊಲಂಬಸ್ ಮಹತ್ವದ ವ್ಯಕ್ತಿಯಾಗಿ ಕಾಣುತ್ತಾನೆ. ಇಡೀ ಜಗತ್ತು ನೆಟ್ಟಗಣ್ಣಿಂದ ನೋಡುವಂತಹ ರಾಷ್ಟ್ರವನ್ನು ಕಂಡುಹಿಡಿದುಬಿಟ್ಟ ಸಾಹಸಿಯಾಗಿ ಅವನ ಸಾಧನೆ ಜಗತ್ತಿನಲ್ಲಿ ಮೆರೆಯುತ್ತಿದೆ. ಭಾರತಕ್ಕೆ ದಾರಿ ಕಂಡುಹಿಡಿಯುವ ಮಾತಂತಿರಲಿ, ಅಮೆರಿಕಾಕ್ಕೆ ಹೋಗಲು ಭಾರತೀಯರೇ ಒಂಟಿಕಾಲಲ್ಲಿ ನಿಂತಿರುವ ಹೊತ್ತಿದು. ಮಸಾಲೆ ಪದಾರ್ಥಗಳು ಮಹತ್ವ ಕಳೆದುಕೊಂಡು, ಕಚ್ಚಾ ತೈಲಕ್ಕೆ ಪ್ರಾಮುಖ್ಯತೆ ಹೆಚ್ಚಾದ ಕಾಲ. ಭಾರತಕ್ಕೆ ವ್ಯಾಪಾರ ಮಾಡಲು ದುರ್ಗಮ ಸಮುದ್ರಯಾನ ಮಾಡಿ ಬರುತ್ತಿದ್ದ ಅರಬ್ ಮತ್ತು ಪರ್ಶಿಯನ್ನರ ನಾಡಿಗೆ, ಇಡೀ ಪ್ರಪಂಚವೇ ತೈಲದ ವ್ಯಾಪಾರಕ್ಕೆ ಎಡೆತಾಕುತ್ತಿರುವ ಕಾಲವಿದು.

ಕಾಲದ ಹರಿವು ಹೇಗೆ ಎಲ್ಲ ಸಂಗತಿಗಳನ್ನೂ ಬದಲಾಯಿಸಿಬಿಡುತ್ತದೆ ಎಂದು ನನಗೆ ಅಚ್ಚರಿಯಾಗುತ್ತದೆ. ಕ್ಷುಲ್ಲಕವನ್ನು ಶ್ರೇಷ್ಠವಾಗಿಸುವ, ಶ್ರೇಷ್ಠವನ್ನು ಕ್ಷುಲ್ಲಕವಾಗಿಸುವ ಅದರ ಜಾದೂ ನನ್ನನ್ನು ಮಂತ್ರಮುಗ್ಧನಾಗಿಸುತ್ತದೆ. ಯಾವುದೇ ಬದಲಾವಣೆಗಳನ್ನು, ಸಂಶೋಧನೆಗಳನ್ನು ಗಮನಿಸುವಾಗ ಈ ಸಂಗತಿ ನನ್ನನ್ನು ಎಚ್ಚರಿಸುತ್ತಲೇ ಇರುತ್ತದೆ. ಯಾವ ಸದ್ಯವೂ ಶಾಶ್ವತವಲ್ಲ ಎಂಬ ಅರಿವು ನಮ್ಮಲ್ಲಿದ್ದರೆ, ಬದಲಾವಣೆಗಳನ್ನು ಗಮನಿಸುವುದು ಸುಲಭವಾಗುತ್ತದೆ. "ಆದದ್ದೆಲ್ಲಾ ಒಳಿತೇ ಆಯಿತು" ಎಂಬ ದಾಸವಾಣಿಯ ಸದಾಶಯ ಇದೇ ಆಗಿರಬೇಕು.

ಬಾಲ್ಯದ ಒಂದು ಘಟನೆ ನನಗೆ ನೆನಪಾಗುತ್ತದೆ. ನಮ್ಮೂರಿನ ಹುಡುಗನೊಬ್ಬ ಅದು ಹೇಗೋ ಕೊಲ್ಲಿ ರಾಷ್ಟ್ರಗಳಿಗೆ ಹೋಗಿಬಿಟ್ಟಿದ್ದ. ಸುಮಾರು ಮೂರು ವರ್ಷಗಳ ನಂತರ ವಾಪಾಸಾದಾಗ ಅವನನ್ನು ನಾವೆಲ್ಲಾ ಬಿಟ್ಟಗಣ್ಣಿಂದ ನೋಡಿದ್ದೆವು. ಅವನು ಆ ದೇಶದ ವಿಶೇಷ ಸಂಗತಿಗಳನ್ನು ನಮಗೆ ಹೇಳುತ್ತಿದ್ದ. ಅದರಲ್ಲಿ ನಮ್ಮನ್ನು ಬಹುವಾಗಿ ಕಾಡಿದ ಒಂದು ಸಂಗತಿಯೆಂದರೆ, ಅರಬ್ ದೇಶಗಳಲ್ಲಿ ಕುಡಿಯುವ ನೀರನ್ನು ಹಣ ಕೊಟ್ಟು ಕೊಳ್ಳಬೇಕು ಎಂಬುದಾಗಿತ್ತು. ಆ ವಿಷಯವನ್ನು ಕೇಳಿದ ನಮ್ಮಮ್ಮ "ಎಷ್ಟೇ ಶ್ರೀಮಂತ ದೇಶವಾದರೇನು ಬಂತು. ಕುಡಿಯುವ ನೀರನ್ನು ಹಣ ಕೊಟ್ಟು ಕೊಳ್ಳುವ ದೇಶ ಸುಡುಗಾಡು ದೇಶವೇ ಸರಿ. ಅದಕ್ಕೇ ನಮ್ಮ ದೇಶವನ್ನ ಪವಿತ್ರಭೂಮಿ ಅನ್ನೋದು" ಎಂದು ಭಾರತದ ಬಗ್ಗೆ ಬಡಾಯಿ ಕೊಚ್ಚಿದ್ದಳು. ಆದರೆ ಸದ್ಯದ ಪರಿಸ್ಥಿತಿಯನ್ನು ಗಮನಿಸಿ.

ಎಲ್ಲರೂ ಕುಡಿಯುವ ನೀರನ್ನು ಹಣ ಕೊಟ್ಟು ಕೊಳ್ಳುತ್ತಿದ್ದೇವೆ. ಬಾಟಲಿಯ ನೀರು ಬಡವ–ಬಲ್ಲಿದರೆಲ್ಲರಿಗೂ ಸಹಜವಾಗಿ ಹೋಗಿದೆ. ಯಾವ ಗರ್ವಗಳೂ ಶಾಶ್ವತವಲ್ಲ ಎನ್ನುವ ಮತ್ತೊಂದು ಅರಿವು ಇದು ನನ್ನಲ್ಲಿ ಮೂಡಿಸಿದೆ.

* * *

ಪಂಪನಿಂದ ಪ್ರಾರಂಭವಾದ ನಮ್ಮ ಕನ್ನಡದ ಸಾಹಿತ್ಯ ಚರಿತ್ರೆ ವಿಶಾಲ ಆಲದ ಮರದಂತೆ ಹರಡಿಕೊಂಡಿದೆ. ಅದೆಷ್ಟು ಶಾಖೆಗಳು, ಅದೆಷ್ಟು ಬಿಳಲುಗಳು, ಅದೆಷ್ಟು ಬೇರುಗಳು, ಎಲೆ, ಪಕ್ಷಿ ಸಂಕುಲಗಳು – ಏನೆಲ್ಲಾ ಇಲ್ಲಿ ಸಂಭವಿಸಿದೆ. ಹಳೆ ಎಲೆಗಳು ಉದುರಿಹೋಗಿ ಹೊಸವು ಮೂಡಿವೆ. ಬಿಳಿಲುಗಳು ಮುಪ್ಪಡರಿ ಎಳೆಯವು ಬಲಿತಿವೆ. ಪಕ್ಷಿಗಳ ಸಂತತಿ ಮುಂದುವರೆಯುತ್ತಲೇ ಹೋಗಿದೆ. ಜಗತ್ತಿನ ಸಾಹಿತ್ಯ ಚರಿತ್ರೆಯಲ್ಲಿ ನಮ್ಮ ಭಾಷೆಯ ಪಾತ್ರದ ಬಗ್ಗೆ ಹೆಮ್ಮೆಪಡುವಂತಹ ಬರವಣಿಗೆಯನ್ನು ನಮ್ಮ ಕನ್ನಡ ಸಾಹಿತ್ಯ ಪರಂಪರೆ ನೀಡಿದೆ.

ಸಾಹಿತ್ಯವೆಲ್ಲರಿಗಲ್ಲ ಎಂದು ಹಿರಿಯರು ಈ ಹಿಂದೆಯೇ ಹೇಳಿದ್ದಾರೆ. ಎಲ್ಲ ಕಾಲಕ್ಕೂ ಸಾಹಿತ್ಯದ ಬಳಗ ಚಿಕ್ಕದೇ ಆಗಿತ್ತು. ಆದ್ದರಿಂದ ಅದರ ಪ್ರಭಾವ, ಬದಲಾವಣೆ, ತರ್ಕಗಳೆಲ್ಲವೂ ಆ ಸೀಮಿತ ವಲಯಕ್ಕೆ ಮಾತ್ರ ಸೇರಿದ್ದಾಗಿರುತ್ತದೆ. ಎಲ್ಲೋ ಕೆಲವೊಮ್ಮೆ ವಿವಾದಗಳಾದಾಗ ಇಡೀ ಸಮಾಜ ಅದರಲ್ಲಿ ಭಾಗವಹಿಸಿದ್ದನ್ನು ಕಂಡಿದ್ದೇವೆ. ಸಮಾರಂಭವೊಂದರಲ್ಲಿ ಟಿ. ವಿ. ವೆಂಕಟಾಚಲ ಶಾಸ್ತ್ರಿಗಳು ಒಂದು ಮಾತನ್ನು ಹೇಳಿದ್ದರು. "ಪಂಪ ಬರೆದ ಭಾಷೆಯಲ್ಲಿಯೇ ಆ ಕಾಲದ ಜನರು ಮಾತನಾಡುತ್ತಿದ್ದರು ಎಂದು ಊಹಿಸುವುದು ತಪ್ಪಾಗುತ್ತದೆ. ಆಗಿನ ಜನಜೀವನದ ಕನ್ನಡ ಈವತ್ತಿನದಕ್ಕಿಂತಲೂ ಅಷ್ಟೇನೂ ಬೇರೆಯಾಗಿರಲಿಲ್ಲ" ಎಂದು ಅನುಮಾನಿಸಿದ್ದರು. ಬಹುಶಃ ಅದನ್ನೇ ಈಗಲೂ ಮಹಾದೇವರ ಕುಸುಮಬಾಲೆ ಕೃತಿಯ ಬಗ್ಗೆ ಹೇಳಬಹುದೇನೋ! ಅಷ್ಟಕ್ಕೂ ಇಡೀ ಕನ್ನಡನಾಡಿಗೇ ಸೀಮಿತವಾದ ಯಾವ ಕನ್ನಡ ನುಡಿಗಟ್ಟೂ ನಮ್ಮಲ್ಲಿಲ್ಲ. ಆದ್ದರಿಂದ ಎಲ್ಲ ಸಾಹಿತ್ಯ, ಕನ್ನಡಗಳನ್ನೂ ಗೌರವಿಸುವುದು ನಮ್ಮ ಆಶಯವಾಗಿರಬೇಕು. ಕಾಲಘಟ್ಟದ ಆಡುನುಡಿಯ ಸತ್ಯಾಸತ್ಯತೆಗಳು ಅಕಾಡೆಮಿಕ್ ಆಸಕ್ತಿಗಳು ಮಾತ್ರ.

ಬದಲಾವಣೆಯೆನ್ನುವುದು ಸಮಾಜದ ಆರೋಗ್ಯದ ನಾಡಿಮಿಡಿತ; ನದಿಯ ನೀರಿನ ಹರಿವು. ನಡೆದ ಬದಲಾವಣೆಯ ಗುಣಾಗುಣದ ಚಿಂತೆಗಿಂತಲೂ ನಡೆಯದ ಸ್ಥಾವರ ಸ್ಥಿತಿಗೆ ಅಂಜಬೇಕು. ಆದ್ದರಿಂದ ಎಲ್ಲ ಬಗೆಯ ಬದಲಾವಣೆಗಳೂ ಒಂದರ್ಥದಲ್ಲಿ ಸ್ವಾಗತಾರ್ಹಗಳೇ ಆಗಿರುತ್ತವೆ. ಅನಂತರ ಅದನ್ನು ಸ್ವೀಕರಿಸುವ, ನಿರಾಕರಿಸುವ ನಿರ್ಧಾರವನ್ನು ಆರೋಗ್ಯವಂತ ಸಮಾಜ ಸರಿಯಾಗಿಯೇ ನಿರ್ಧರಿಸುತ್ತದೆ. ನಮ್ಮ ಮೂಲ ಧ್ಯೇಯ ಸಮಾಜದ ಆರೋಗ್ಯವನ್ನು ಸರಿಯಾಗಿ ಇಟ್ಟುಕೊಳ್ಳುವುದರ ಕಡೆಗೆ ಇದ್ದರೆ ಅಂಜುವ ಅವಶ್ಯಕತೆ ಇರುವುದಿಲ್ಲ ಅನ್ನಿಸುತ್ತದೆ.

"ಪಿತೃಹತ್ಯೆ ಪ್ರಗತಿಗೆ ದಾರಿ" ಎಂಬ ವಾಕ್ಯವನ್ನು ವಿಶೇಷ ಅರ್ಥದಲ್ಲಿ ಕನ್ನಡ ಸಾಹಿತ್ಯದಲ್ಲಿ ಬಳಸುತ್ತಾರೆ. ಅಂದರೆ ಸದ್ಯದಲ್ಲಿ ಯಶಸ್ವಿಯಾದ ಸಾಹಿತ್ಯ ಪ್ರಕಾರವನ್ನು

ಒಡೆದು, ಹೊಸದನ್ನು ಕಟ್ಟುವುದು ಪ್ರಗತಿಯ ಲಕ್ಷಣವಾಗಿರುತ್ತದೆ. ನಮ್ಮ ಬಹುತೇಕ ಚಳುವಳಿಗಳು ಅದನ್ನು ಮಾಡುತ್ತಲೇ ಬಂದಿವೆ. ಪ್ರಗತಿಶೀಲರು ನವೋದಯವನ್ನು ಜರಿದರೆ, ನವ್ಯರೂ ಎರಡನ್ನೂ ತಮ್ಮದಲ್ಲವೆಂದು ಸಾರಿದರು. ಅನಂತರ ಬಂದ ಬಂಡಾಯ, ದಲಿತ ಚಳವಳಿಗಳು ಹಿಂದಿನ ಹೆದ್ದಾರಿಯನ್ನು ತೊರೆದು ತಮ್ಮ ದಾರಿಯನ್ನು ಕಂಡುಕೊಂಡರು. ಇವುಗಳ ನಡುವೆ ಮಹಿಳೆಯರು ತಮ್ಮ ಶೋಷಣೆಯನ್ನು ಸಾರಿ, ಹೊಸ ಸಾಹಿತ್ಯ ಪ್ರಕಾರವನ್ನೇ ಹುಟ್ಟುಹಾಕಿದರು. ಆದರೆ ಈ ಕಾಲಘಟ್ಟದಲ್ಲಿ ನಿಂತು ನೋಡಿದರೆ ಎಲ್ಲ ಚಳವಳಿಯಲ್ಲಿಯೂ ಉತ್ತಮವಾದದ್ದು ಮತ್ತು ಕಳಪೆಯಾದದ್ದು ಸೃಷ್ಟಿಯಾಗಿದೆ ಎನ್ನಿಸುತ್ತದೆ. ಶಿವರಾಮ ಕಾರಂತರು ತಮ್ಮ ನವೋದಯದಲ್ಲಿಯೇ ದಲಿತ ಪರ ದನಿಯನ್ನು ಎತ್ತಿದ್ದರು. ಮಾಸ್ತಿಯವರ ಸ್ತ್ರೀಪಾತ್ರಗಳು ಎಲ್ಲ ಕಾಲಕ್ಕೂ ಸೆಟೆದು ನಿಲ್ಲುವಷ್ಟು ಶಕ್ತಿಯುತವಾಗಿದ್ದವು. ದಲಿತ ಸಾಹಿತ್ಯದಲ್ಲಿಯೂ ವೈಯಕ್ತಿಕ ಸ್ವಾತಂತ್ರ್ಯದ ನವ್ಯಧ್ವನಿ ಕಂಡಿದೆ. ಪ್ರಗತಿಶೀಲರೂ ಬಂಡಾಯದ ಕನಸನ್ನು ಕಂಡಿದ್ದಾರೆ. ಶ್ರೇಷ್ಠವಾದ ಕೃತಿಯೊಂದು ಕಾಲಪ್ರವಾಹದಲ್ಲಿ ಗಟ್ಟಿಯಾಗಿ ನಿಂತುಬಿಡುತ್ತದೆ. ಅದಕ್ಕೆ ಚಳವಳಿ, ದೇಶ-ಕಾಲಗಳ ಮಿತಿಗಳು ಇರುವುದಿಲ್ಲ.

ನಾನಂತೂ ಕನ್ನಡ ಆಧುನಿಕ ಸಾಹಿತ್ಯದ ನಾಲ್ಕೈದನೇ ತಲೆಮಾರಿನವನು. ಸ್ವಲ್ಪ ಮಟ್ಟಿಗೆ ನಮ್ಮ 'ಪಿತೃ ಸಾಹಿತಿ'ಗಳ ಕುರಿತು ಅಸಮಾಧಾನವಿರಬಹುದು. ಆದರೆ ಮೊದಲ ತಲೆಮಾರಿನ ನವೋದಯ ಲೇಖಕರಂತೂ ನನಗೆ ತಾತ-ಅಜ್ಜಿಯರ ಸಮಾನ. ಮೊಮ್ಮಕ್ಕಳಿಗೆ ಯಾವತ್ತೂ ಅಜ್ಜಿ-ತಾತರ ಜೊತೆ ಸಮಸ್ಯೆ ಮೂಡುವುದಿಲ್ಲ. ಆ ಕಾರಣಕ್ಕಾಗಿಯೋ ಏನೋ, ನವೋದಯ ಸಾಹಿತ್ಯ ನನ್ನನ್ನು ಮತ್ತೆ ಮತ್ತೆ ಆಕರ್ಷಿಸುತ್ತದೆ. ಕುವೆಂಪು, ಕಾರಂತ, ಮಾಸ್ತಿಯವರ ಅಕ್ಷರಧಾರೆ ನನ್ನನ್ನು ಕಾಡುವ ಪರಿಗೆ ಅಚ್ಚರಿಯಾಗುತ್ತದೆ. ಮುಂದಿನ ತಲೆಮಾರಿಗೆ ನಮ್ಮ ಮನೋಭಾವದಲ್ಲಿಯೂ ಸಮಸ್ಯೆ ಕಾಣಬಹುದೇನೋ. ಅದರಲ್ಲೇನೂ ತಪ್ಪಿಲ್ಲ. 'ಪಿತೃಹತ್ಯೆ'ಗೆ ಅವನಿಗೆ ಹಕ್ಕಿದೆಯಲ್ಲವೆ?

ಎಷ್ಟೋ ಸಾಹಿತಿಗಳು ಬಯಸುವ ಬದಲಾವಣೆಗಳು ಅವರ ವೈಯಕ್ತಿಕ ಹಿನ್ನೆಲೆಯ ಮೇಲೆ ಅವಲಂಬಿತವಾಗಿರುತ್ತವೆ. ಅದಕ್ಕೆ ಉದಾಹರಣೆಯಾಗಿ ಒಂದೇ ಕಾಲಘಟ್ಟದಲ್ಲಿ ಬರೆದ ಅನಂತಮೂರ್ತಿ ಮತ್ತು ಶ್ರೀಕೃಷ್ಣ ಆಲನಹಳ್ಳಿಯವರ ಕೃತಿಗಳ ವಿವರಗಳ ಮೂಲಕ ನೋಡಬಹುದು. ಸಂಸ್ಕಾರ ಕೃತಿಯಲ್ಲಿ ಅನಂತಮೂರ್ತಿಯವರು ಮತ್ತೆ ಮತ್ತೆ ಬ್ರಾಹ್ಮಣ ಹೆಂಗಸರ ರೂಪದ ಕುರಿತು ಅವಹೇಳನ ಮಾಡುತ್ತಾರೆ. ಅಗ್ರಹಾರದ ಯಾವ ಹೆಣ್ಣುಗಳೂ ಪ್ರೇಮಿಸುವುದಕ್ಕೆ ಯೋಗ್ಯವಲ್ಲ ಎಂದು ಹೇಳುತ್ತಾರೆ. ಆ ಕಾರಣಕ್ಕಾಗಿಯೇ ಕಾದಂಬರಿಯ ಪ್ರತಿಗಾಮಿ ನಾಯಕ ನಾರಾಯಣಪ್ಪ ಶೂದ್ರ ಮತ್ತು ದಲಿತ ಹೆಣ್ಣುಗಳನ್ನು ಹುಡುಕಿಕೊಂಡು ಹೋಗುತ್ತಾನೆ. ಅದೇ ಸುಖದ ಸರಿದಾರಿ ಎನ್ನುವ ಅಭಿಪ್ರಾಯ ಈ ಕಾದಂಬರಿಯಲ್ಲಿ ವ್ಯಕ್ತವಾಗುತ್ತದೆ. ವಿಶೇಷವೆಂದರೆ ಶ್ರೀಕೃಷ್ಣ ಆಲನಹಳ್ಳಿ ತಮ್ಮ ಬಹುತೇಕ ಕತೆಗಳಲ್ಲಿ ಮೈಸೂರಿನ ಬ್ರಾಹ್ಮಣ ಹುಡುಗಿಯರ ಕುರಿತು ವಿಶೇಷ ಆಕರ್ಷಣೆಯಿಂದ ಬರೆಯುತ್ತಾರೆ. ಅವರ

ಕಥಾನಾಯಕ ಸಾಮಾನ್ಯವಾಗಿ ತನ್ನ ಹಳ್ಳಿಯ ಮನೆಯಲ್ಲಿ ಅವ್ವ ತೋರಿದ ಹುಡುಗಿಯನ್ನು ನಿರಾಕರಿಸಿ, ನಗರದ ಈ ವಿದ್ಯಾವಂತ ಹುಡುಗಿಗಾಗಿ ಹಪಹಪಿಸುತ್ತಾನೆ. ಒಂದು ಕಾಲಘಟ್ಟದ ಈ ಎರಡು ಭಿನ್ನ ಅಭಿಪ್ರಾಯಗಳನ್ನು ಗಮನಿಸುವಾಗ ಬದಲಾವಣೆಯ ಬಯಕೆಯು ಅತ್ಯಂತ ಸಾಪೇಕ್ಷವಾದದ್ದು ಎನ್ನಿಸುತ್ತದೆ. ಆ ಕಾರಣದಿಂದಲೇ ಪ್ರತಿ ಸಾಹಿತ್ಯ ಕೃತಿಯು ಅನನ್ಯವಾದದ್ದು. ಸಾರ್ವತ್ರೀಕರಣ ಸತ್ಯವನ್ನು ಹೇಳುವುದಿಲ್ಲ. ಕೃತಿಯೊಂದರಲ್ಲಿ ಪ್ರಾಮಾಣಿಕತೆ ಮತ್ತು ಸೃಜನಶೀಲತೆ ಇದೆಯೋ ಇಲ್ಲವೋ ಎನ್ನುವುದಷ್ಟೇ ಮುಖ್ಯವಾಗುತ್ತದೆ. ಆ ದೃಷ್ಟಿಯಿಂದಲೇ ಅನಂತಮೂರ್ತಿಯವರ 'ಸಂಸ್ಕಾರ'ವೂ, ಆಲನಹಳ್ಳಿಯವರ ಕತೆಗಳೂ ನಮಗೆ ಮಹತ್ವದ್ದಾಗುವುದು.

* * *

ಸುಮಾರು ಹದಿನೈದು ವರ್ಷಗಳಿಂದ ಪುಸ್ತಕೋದ್ಯಮದಲ್ಲಿ ತೊಡಗಿಕೊಂಡಿರುವ ನನಗೆ ಸಾಹಿತ್ಯದ ಮುಂದಿನ ದಿನಗಳ ಕುರಿತು ಆತಂಕವಿದೆ. ಡಿಜಿಟಲ್ ಕ್ರಾಂತಿಯಿಂದಾಗಿ ಪುಸ್ತಕಗಳ ಹೊರರೂಪದ ಗುಣಮಟ್ಟ ಇಂದು ಸಾಕಷ್ಟು ಉನ್ನತವಾಗಿದೆ. ಬರವಣಿಗೆ ಮುಗಿದ ಒಂದು ವಾರದಲ್ಲಿ ಅಚ್ಚುಕಟ್ಟಾದ ಪುಸ್ತಕವನ್ನು ಹೊರತರುವ ಮುದ್ರಣ ತಂತ್ರಜ್ಞಾನವೂ ನಮ್ಮಲ್ಲಿದೆ. ಸಾಕಷ್ಟು ಹೊಸ ಲೇಖಕರೂ ಕಾಣಿಸಿಕೊಳ್ಳುತ್ತಿದ್ದಾರೆ. ದೇಶದ ಆರ್ಥಿಕ ಸ್ಥಿತಿಗಳು ಸುಧಾರಿಸಿವೆಯಾದ್ದರಿಂದ, ಮಧ್ಯಮ ವರ್ಗದ ಕನ್ನಡಿಗರು ಹಿಂದುಮುಂದೆ ನೋಡದೆ ಪುಸ್ತಕ ಖರೀದಿಸುತ್ತಾರೆ. ಒಂದು ಮಾಲ್‌ನಲ್ಲಿ ಸಿನಿಮಾ ನೋಡುವುದಕ್ಕೆ ಮಾಡುವ ಖರ್ಚಿಗೆ ಹೋಲಿಸಿದರೆ ಕನ್ನಡ ಪುಸ್ತಕವೊಂದರ ಬೆಲೆ ತುಂಬಾ ಕಡಿಮೆಯೇ ಆಗಿದೆ. ಆದ್ದರಿಂದ ಇದೊಂದು ರೀತಿಯಲ್ಲಿ ಪುಸ್ತಕೋದ್ಯಮ ಹಿಂದಿಗಿಂತಲೂ ಹೆಚ್ಚು ಅಭಿವೃದ್ಧಿ ಹೊಂದಿದಂತೆ ಅಂಕಿ-ಅಂಶಗಳು ಕಾಣಿಸುತ್ತಿವೆ. ಆದರೆ ಇದು ಜಲಪಾತದ ಹಿಂದಿನ ನೀರಿನ ರಭಸವಾಗಿದೆ. ಸ್ವಲ್ಪ ದಿನದಲ್ಲಿ ನೀರು ಆಳಕ್ಕೆ ಬೀಳುವ ಅಪಾಯವು ನನಗೆ ಅದರಲ್ಲಿ ಕಾಣಿಸುತ್ತಿದೆ. ಸದ್ಯಕ್ಕೆ ಮಧ್ಯವಯಸ್ಸು ದಾಟಿದವರನ್ನು ಹೊರತುಪಡಿಸಿದರೆ ಬೇರೆ ಯಾರಿಗೂ ಕನ್ನಡ ಸಾಹಿತ್ಯದ ಕಡೆಗೆ ಆಸಕ್ತಿಯಿಲ್ಲ. ಮಕ್ಕಳಂತೂ ನಮ್ಮ ಕಡೆಗೂ ಹಾಯುವುದಿಲ್ಲ. ಇನ್ನೂ ಇಪ್ಪತ್ತು ವರ್ಷ ಕಳೆದರೆ ಪರಿಸ್ಥಿತಿ ಹೇಗಿರಬಹುದು ಎಂದು ಯೋಚಿಸಿದರೆ ಭಯವಾಗುತ್ತದೆ. ಎರಡು ಸಾವಿರ ವರ್ಷ ಇತಿಹಾಸವಿರುವ ಕನ್ನಡ ಭಾಷೆಯು ಆಡುಭಾಷೆಯಾಗಿ ನಾಡಿನಲ್ಲಿ ಉಳಿಯುವುದಕ್ಕೆ ಯಾವ ಆತಂಕಗಳೂ ಇಲ್ಲ. ಆದರಿಲ್ಲಿ ನನ್ನ ಕಳಕಳಿಯಿರುವುದು ಕನ್ನಡ ಸಾಹಿತ್ಯದ ಕುರಿತದ್ದಾಗಿದೆ, ಆಡುಭಾಷೆಯದಲ್ಲ. ಸಾಹಿತ್ಯ ಕಟ್ಟುವ, ಪೋಷಿಸುವ, ಆಶ್ರಯಿಸಲು ಬೇಕಾಗುವ ಭಾಷೆಯ ಪರಿಣಿತಿ, ಪರಿಶ್ರಮ, ಬದ್ಧತೆ ಬೇರೆಯದೇ ಮಜಲಿನದಾಗಿರುತ್ತವೆ.

ಸ್ಪಷ್ಟವಾಗಿಯೇ ಸಮಸ್ಯೆಯ ಮೂಲವಿರುವುದು ನಮ್ಮ ಶಾಲೆಗಳಲ್ಲಿ ಕನ್ನಡ ಅಥವಾ ಭಾಷೆಯ ಕುರಿತು ಇರುವ ಅಸಡ್ಡೆಯಲ್ಲಿ. ಖಾಸಗಿ ಶಾಲೆಗಳಂತೂ ಮಕ್ಕಳು ಒಳ್ಳೆಯ ಉದ್ಯೋಗ ಗಳಿಸಿ ಹಣ ಗಳಿಸುವುದನ್ನೇ ತಮ್ಮ ಉದ್ದೇಶವಾಗಿಸಿಕೊಂಡು ವಿದ್ಯಾಭ್ಯಾಸ ಮಾಡಿಸುತ್ತಿವೆ.

ಆದ್ದರಿಂದ ಉದ್ಯೋಗಕ್ಕೆ ಅನುಕೂಲವಾಗುವ ವಿಜ್ಞಾನ, ಗಣಿತ, ತಂತ್ರಜ್ಞಾನ, ಇಂಗ್ಲಿಷ್ ಭಾಷೆಗಳಿಗೆ ಹೆಚ್ಚಿನ ಮಹತ್ವವನ್ನು ಕೊಡುತ್ತಿವೆ. ಕನ್ನಡ ಭಾಷೆಗಿಂತಲೂ ಯುರೋಪ್ ದೇಶದ ಭಾಷೆಯೊಂದನ್ನು ಕಲಿಯುವುದು ಹೆಚ್ಚು ಪ್ರಯೋಜನಕಾರಿ ಎಂದು ಕನ್ನಡದ ತಂದೆ–ತಾಯಿಗಳೇ ಯೋಚಿಸುವ ಪರಿಸ್ಥಿತಿ ಸದ್ಯಕ್ಕಿದೆ. ಆದರೆ ಖಾಸಗಿ ಶಾಲೆಗಳು ಯಾರ ಮಾತನ್ನೂ ಕೇಳದಷ್ಟು ಬಲಿತುಹೋಗಿವೆ. ಭ್ರಷ್ಟತೆಯಲ್ಲಿಯೇ ಮುಳುಗುವ ನಮ್ಮ ರಾಜಕಾರಣಿಗಳು ಅವುಗಳ ಕತ್ತಿನ ಪಟ್ಟು ಹಿಡಿದು ಪ್ರಶ್ನಿಸುವ ನೈತಿಕತೆಯನ್ನು ಎಂದೋ ಕಳೆದುಕೊಂಡಿದ್ದಾರೆ. ಕೊನೆಗೆ ತಬ್ಬಲಿಗಳಾದ ಸರಕಾರಿ ಶಾಲೆಗಳ ಕುರಿತು ನಾವು ಮಾತಾಡತೊಡಗಿದ್ದೇವೆ. ಅಲ್ಲಿ ಕನ್ನಡ ಮಾಧ್ಯಮ ಕಡ್ಡಾಯವಾಗಿ ಇರಬೇಕು ಎಂದು ಕೆಲವರು, ಇಂಗ್ಲಿಷ್ ಮಾಧ್ಯಮ ಬೇಕೆಂದು ಇನ್ನಿತರರು ಒತ್ತಾಯಪಡಿಸುತ್ತಿದ್ದೇವೆ. ಮಾತೃಭಾಷೆಯನ್ನು ಕಲಿಯುವುದಕ್ಕೆ ನಿಜವಾದ ಸಮಸ್ಯೆಯಿರುವುದು ಮಾಧ್ಯಮದ ಭಾಷೆ ಅಲ್ಲವೇ ಅಲ್ಲ. ಅದಕ್ಕೆ ಬದಲು ಕನ್ನಡ ಭಾಷೆಯನ್ನು ಎಷ್ಟು ಅಚ್ಚುಕಟ್ಟಾಗಿ ಕಲಿಸುತ್ತಿದ್ದೀರಿ ಎನ್ನುವುದಾಗಿದೆ. ಇಂಗ್ಲಿಷ್ ಮಾಧ್ಯಮದಲ್ಲಿಯೂ ಕನ್ನಡವನ್ನು ಅಚ್ಚುಕಟ್ಟಾಗಿ ಕಲಿಸಬಹುದು. ಆದರೆ ಸದ್ಯದ ಸಾಕಷ್ಟು ಸರಕಾರಿ ಶಾಲೆಗಳಲ್ಲಿ ಒಳ್ಳೆಯ ಗುಣಮಟ್ಟದ ಶಿಕ್ಷಣವಿಲ್ಲ. ಆದ್ದರಿಂದ ಲಕ್ಷಾಂತರ ಮಕ್ಕಳು ಆ ಶಾಲೆಗಳಲ್ಲಿ ಓದುತ್ತಿದ್ದರೂ ಕನ್ನಡ ಪುಸ್ತಕಗಳನ್ನು ಓದುವ, ಬರೆಯುವ ಶಕ್ತಿಯುಳ್ಳವರಾಗಿಲ್ಲ. ವಿಜ್ಞಾನ–ಗಣಿತ–ತಂತ್ರಜ್ಞಾನಗಳು ನಮಗೆ ಉದ್ಯೋಗವನ್ನು ಸೃಷ್ಟಿಸಿಕೊಡಬಹುದು. ಆದರೆ ಭಾಷೆ ಮಾತ್ರ ನಮಗೆ ಬದುಕಿನ ಮೌಲ್ಯಗಳನ್ನು ಕಲಿಸಿಕೊಡಲು ಸಾಧ್ಯ. ಈ ಮೌಲ್ಯಗಳು ಸಮಾಜದಲ್ಲಿ ಕಡಿಮೆಯಾಗುತ್ತಿರುವುದು ತಕ್ಷಣ ಗೊತ್ತಾಗುವುದಿಲ್ಲ; ಚಾಪೆಯಡೆಗೆ ಹರಿದ ನೀರಿನಂತೆ ಅದು ಹಿನ್ನೆಲೆಯಲ್ಲಿರುತ್ತದೆ. ತಳವೆಲ್ಲಾ ಒದ್ದೆಯಾಗಿ ಅರಿವಿಗೆ ಬಂದಾಗ ಹಟಾತ್ತನೆ ಎದ್ದು ನಿಲ್ಲಬೇಕಾಗುತ್ತದೆ. ಮತ್ತೆ ಹಿಂತಿರುಗುವುದು ಕಷ್ಟವಾಗಿರುತ್ತದೆ.

ವಿಶೇಷವೆಂದರೆ ಕನ್ನಡ ಭಾಷೆಯ ಸಮಸ್ಯೆ ಸಿನಿಮಾ, ರಂಜನೆ ಮತ್ತು ಸಂಗೀತದ ಕ್ಷೇತ್ರಕ್ಕೆ ಅಷ್ಟಾಗಿ ಬಾಧಿಸುವುದಿಲ್ಲ. ಅಲ್ಲಿನ ಯಶಸ್ಸಿಗೆ ಬೇಕಾದ ಕನ್ನಡವು ಸಾಹಿತ್ಯದಷ್ಟು ಹರಿತವಾದದ್ದು ಖಂಡಿತಾ ಅಲ್ಲ. ಆಡುಭಾಷೆಯಾಗಿ ಕನ್ನಡ ಗೊತ್ತಿದ್ದರೆ ಸಾಕು. ಬಹುತೇಕ ಕನ್ನಡ ಸಿನಿಮಾಗಳಿಗೆ ಇಂಗ್ಲಿಷ್ ಭಾಷೆಯಲ್ಲಿಯೇ ಚಿತ್ರಕತೆ ಬರೆದುಕೊಂಡು ಅನಂತರ ಅದನ್ನು ಅನುವಾದ ಮಾಡಿಸುತ್ತಾರೆ. ರಸಮಂಜರಿ ಕಾರ್ಯಕ್ರಮಗಳಲ್ಲಿ ಕನ್ನಡ ಹಾಡುಗಳನ್ನು ಇಂಗ್ಲೀಷಿನಲ್ಲಿ ಬರೆದುಕೊಂಡಿರುತ್ತಾರೆ. ನಾಟಕದ ಸಂಭಾಷಣೆಗಳು ಬಹುತೇಕ ಇಂಗ್ಲಿಷಿನಲ್ಲಿಯೇ ಇರುತ್ತವೆ. ಆದ್ದರಿಂದ ಈಗಲೂ ಈ ಕ್ಷೇತ್ರಗಳಲ್ಲಿ ಸಾಕಷ್ಟು ಇಂಗ್ಲಿಷ್ ಮಾಧ್ಯಮದಲ್ಲಿ ಓದಿದ ಹುಡುಗರು ಕಂಡುಬರುತ್ತಾರೆ. ಕನ್ನಡ ಸಿನಿಮಾಕ್ಕಂತೂ ಇನ್ನಿಲ್ಲದಷ್ಟು ಯುವಚೇತನಗಳು ನುಗ್ಗಿ ಬರುತ್ತಿವೆ. ಕನ್ನಡದ ಹಾಡುಗಳನ್ನು ಸೋನು ನಿಗಮ್ ಮತ್ತು ಶ್ರೇಯಾ ಗೋಶಾಲ್ ಹಾಡಿಬಿಡುತ್ತಾರೆ. (ಹಾಡು ಬರೆಯುವವರ ಸಮಸ್ಯೆ ಕಾಣಿಸಬಹುದೇನೋ!) ರಂಜನೆ, ಸಂಗೀತ ಕ್ಷೇತ್ರಗಳಿಗೆ ಭಾಷೆಯ ಅಳಿವಿನ ಆತಂಕವಿಲ್ಲ. ಈಗಲೂ ಎಷ್ಟೋ ಜನರಿಗೆ ಕನ್ನಡದ ಅಭಿಮಾನವೆಂದರೆ ಕನ್ನಡ ಸಿನಿಮಾಗಳು, ಕನ್ನಡ ಹಾಡುಗಳು ಮತ್ತು ಕನ್ನಡ ಹಾಸ್ಯೋತ್ಸವಗಳೇ

ಆಗಿರುತ್ತವೆ. ಅವರಲ್ಲಿ ಬಹುತೇಕರಿಗೆ ಸಾಹಿತ್ಯ ವರ್ಜ್ಯ. ಅದು ತಪ್ಪೆಂದೇನೂ ಅಲ್ಲ. ಆದರೆ ಸಾಹಿತ್ಯದ ಕಾಳಜಿಯನ್ನು ಒಡಲಲ್ಲಿ ಇಟ್ಟುಕೊಂಡ ನನ್ನಂತಹವರಿಗೆ ಕನ್ನಡ ಭಾಷೆಯ ಆತಂಕ ಬೇರೆಯದೇ ರೂಪದ್ದೆಂದು ಮಾತ್ರ ಹೇಳಬಲ್ಲೆ.

ಬಾಲ್ಯದಲ್ಲಿ ನಿಜಕ್ಕೂ ನಮ್ಮ ಬದುಕಿಗೆ ಉಪಕಾರ ಮಾಡಿದ್ದು ಸರಕಾರಿ ಶಾಲೆ ಮತ್ತು ಸರಕಾರಿ ಆಸ್ಪತ್ರೆಗಳು. ಅತ್ಯಂತ ಸುಸ್ಥಿತಿಯಲ್ಲಿದ್ದ ಅವುಗಳು ದೇಶದ ಅಭಿವೃದ್ಧಿಯ ಸಂಕೇತಗಳಾಗಿದ್ದವು. ಜಗತ್ತಿನೊಡನೆ ಸ್ಪರ್ಧಿಸುವಂತೆ ನಮ್ಮನ್ನು ತಯಾರಿ ಮಾಡಿದ್ದು ಈ ಸರಕಾರಿ ಶಾಲೆಗಳೇ. ನಾನು, ನನ್ನ ಅಕ್ಕಂದಿರು, ಅಕ್ಕನ ಮೊದಲ ಮಗಳು – ಎಲ್ಲರೂ ಹುಟ್ಟಿದ್ದು ಸರಕಾರಿ ಆಸ್ಪತ್ರೆಗಳಲ್ಲಿಯೇ! ಯಾರಿಗೂ ಸರಕಾರಿ ಆಸ್ಪತ್ರೆಗೆ ಹೋಗಲು ಆಗ ಹಿಂಜರಿಕೆಯಿರಲಿಲ್ಲ. ಆದರೀಗ ಎಲ್ಲವೂ ಖಾಸಗಿ ಪಾಲಾಗಿಹೋಗಿದೆ. ಶಾಲೆ ಮತ್ತು ಆಸ್ಪತ್ರೆಗಳು ಹಣ ಮಾಡುವ ದಂಧೆಗಳಾಗುತ್ತಿವೆ. ಸಮಾಜಸೇವೆ ಅನ್ನುವ ಪದಕ್ಕೆ ಅಲ್ಲಿ ಅರ್ಥವೇ ಇಲ್ಲ. ಅದಕ್ಕೆ ಬದಲಾಗಿ ಹೊಸದಾದ ಮೊಬೈಲ್‌ಗಳು, ಟಿವಿಗಳು, ಸೊಗಸಾದ ರಸ್ತೆಗಳು, ಐಷಾರಾಮಿ ಕಾರುಗಳು – ಏನೆಲ್ಲಾ ಬದಲಾವಣೆಗಳು ಬಂದುಬಿಟ್ಟಿವೆ. ಆದರೆ ಇವು ಯಾವವೂ ಶಾಲೆ ಮತ್ತು ಆಸ್ಪತ್ರೆಗಳಿಲ್ಲದ ಶೂನ್ಯವನ್ನು ತುಂಬಲಾರವು. ಯಾವತ್ತೂ ಪ್ರಥಮ ಆದ್ಯತೆಗಳಾಗಲಾರವು. ಬಹುತೇಕ ಮುಂದುವರೆದ ದೇಶಗಳಲ್ಲಿ ಆರೋಗ್ಯ ಮತ್ತು ಪ್ರಾಥಮಿಕ ಶಿಕ್ಷಣವನ್ನು ಉಚಿತವಾಗಿ ಒದಗಿಸುತ್ತಾರೆ ಎನ್ನುವುದನ್ನು ನಾವು ಮರೆಯದಿರೋಣ.

* * *

ಈಗ ಮೂವತ್ತು ವರ್ಷಗಳ ಹಿಂದೆ ನನ್ನ ಶಾಲೆಯಲ್ಲಿ ಯಾವಾಗಲೂ "ಕಂಪ್ಯೂಟರ್ ಭಾರತಕ್ಕೆ ಬೇಕೆ, ಬೇಡವೆ" ಎಂಬ ವಿಷಯದ ಕುರಿತು ಚರ್ಚಾಸ್ಪರ್ಧೆಯನ್ನು ಏರ್ಪಡಿಸುತ್ತಿದ್ದರು. ಇದರಲ್ಲಿ ಎಲ್ಲಾ ಮಕ್ಕಳು "ಬೇಡ" ಎಂದೇ ವಾದಿಸುತ್ತಿದ್ದರು. "ಬೇಕು" ಎಂದು ವಾದಿಸಿ ಬಹುಮಾನ ಪಡೆಯುವುದು ಕಷ್ಟವಿತ್ತು. ಏಕೆಂದರೆ "ಒಂದು ಕಂಪ್ಯೂಟರ್ ಸಾವಿರ ಜನರ ಕೆಲಸ ಮಾಡುತ್ತದೆ. ಆದ್ದರಿಂದ ಸಾವಿರ ಜನರ ಊಟವನ್ನು ಅದು ಕಸಿದುಕೊಳ್ಳುತ್ತದೆ" ಎನ್ನುವ ಬ್ರಹ್ಮಾಸ್ತ್ರ ವಿರೋಧಿಗಳಿಗಿರುತ್ತಿತ್ತು. ಆದ್ದರಿಂದ ಅವರಿಗೆ ಖಚಿತವಾಗಿಯೂ ಬಹುಮಾನ ಬರುತ್ತಿತ್ತು.

ಅಂತಹ ಕಂಪ್ಯೂಟರ್ ವಿರೋಧಿ ಮನೋಭಾವ ಆ ಎಳೆಯ ಮನಸ್ಸಿನಲ್ಲಿ ಹೇಗೆ ಬಂತು? ಎಂದು ಯೋಚಿಸುತ್ತೇನೆ. ಅದಕ್ಕೆ ಆ ಕಾಲದ ಪತ್ರಿಕೆಗಳೇ ಕಾರಣವೆನ್ನಿಸುತ್ತದೆ. ಕನ್ನಡದ ಬಹುತೇಕ ಲೇಖಕರು ಕಂಪ್ಯೂಟರ್ ವಿರೋಧಿಗಳಾಗಿದ್ದರು. ಅವರು ನಮ್ಮ ಎಳೆಯ ತಲೆಯಲ್ಲಿ ತುಂಬಿಸುತ್ತಿದ್ದ ಸತ್ಯಗಳೇ ಪುಟ್ಟಮಕ್ಕಳ ಸತ್ಯಗಳೂ ಆಗಿರುತ್ತಿದ್ದವು. ನಾವು ಯಾರೂ ಕಂಪ್ಯೂಟರನ್ನು ಕಣ್ಣಿಂದ ನೋಡಿರಲೂ ಸಾಧ್ಯವಿಲ್ಲದ ಹೊತ್ತಲ್ಲಿ, ಹೊರಗಿನಿಂದ ಬಂದ ಅಭಿಪ್ರಾಯಗಳೇ ನಮ್ಮವೂ ಆಗಿಬಿಟ್ಟಿದ್ದು ಸಹಜವಾಗಿತ್ತು.

೨೦೧೨ರ ರಾಯಚೂರಿನಲ್ಲಿ ಸಾಹಿತ್ಯ ಸಮ್ಮೇಳನದಲ್ಲಿ, ಬಂಡಾಯ ಸಾಹಿತ್ಯದ ರೂವಾರಿ ಬರಗೂರು ರಾಮಚಂದ್ರಪ್ಪ ಅವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ "ಸರಕಾರವು

ಕನ್ನಡದ ಕಂಪ್ಯೂಟರಿಕರಣದತ್ತ ಹೆಚ್ಚು ಗಮನ ನೀಡಬೇಕು" ಎಂದು ಕರೆಕೊಟ್ಟರು. ತಮ್ಮ ಭಾಷಣವೊಂದರಲ್ಲಿ ಯು. ಆರ್. ಅನಂತಮೂರ್ತಿಯವರು "ಗಾಂಧೀಜಿ ಬದುಕಿದ್ದರೆ ಕಂಪ್ಯೂಟರ್ ಬಳಸುತ್ತಿದ್ದರು" ಎಂದು ಹೇಳಿದ್ದರು. ಇದು ನಿಸ್ಸಂಶಯವಾಗಿ ಕಳೆದ ದಶಕಗಳಲ್ಲಿ ನಡೆದ ಸ್ಥಿತ್ಯಂತರವೇ ಆಗಿದೆ. ಡಿಜಿಟಲ್ ಫೋಬಿಯಾ ಕಡಿಮೆಯಾಗಲು ನಾವು ಸುದೀರ್ಘ ಕಾಲವನ್ನೇ ತೆಗೆದುಕೊಂಡಿದ್ದೇವೆ.

ಕಾಲಕಾಲಕ್ಕೆ ವಿಜ್ಞಾನವು ಹೊಸ ತಂತ್ರಜ್ಞಾನಗಳನ್ನು ಸೃಷ್ಟಿಸುತ್ತಲೇ ಹೋಗಿದೆ. ಅವುಗಳು ಯಾವವೂ ಸಾಹಿತ್ಯಕ್ಕೆಂದೇ ಮಾಡಿದ ಸಂಶೋಧನೆಗಳೇನೂ ಅಲ್ಲ. ಆದರೆ ಅವನ್ನು ಸಾಹಿತಿಗಳು ತಮ್ಮ ಅನುಕೂಲಕ್ಕೆ ಬಳಸಿಕೊಳ್ಳುತ್ತಾ ಹೋಗಿದ್ದಾರೆ. ಕಾಗದ, ಲೇಖನಿ, ಮುದ್ರಣ ಯಂತ್ರ, ಕಂಪ್ಯೂಟರ್, ಮತ್ತೀಗ ಸಾಮಾಜಿಕ ಜಾಲತಾಣಗಳು. ಆದರೆ ವಿಜ್ಞಾನಕ್ಕೆ ಸಾಹಿತ್ಯದ ಮೇಲೆ ಅಂತಹ ವಿಶೇಷ ಕಳಕಳಿಯೇನೂ ಇಲ್ಲದ ಕಾರಣ, ಅದರದು ಕುಂಡಿ ಚಿವುಟಿ ತೊಟ್ಟಿಲು ತೂಗುವ ಪ್ರೀತಿಯಾಗಿದೆ. ಹಲವು ಆವಿಷ್ಕಾರಗಳಿಂದ ಸಾಹಿತ್ಯಪ್ರೇಮಿಗಳಿಗೆ ಅನುಕೂಲ ಮಾಡಿಕೊಟ್ಟರೆ, ಮತ್ತೆ ಕೆಲವುಗಳಿಂದ ಅವರನ್ನು ದೂರಕ್ಕೂ ತೆಗೆದುಕೊಂಡು ಹೋಗಿದೆ. ರೇಡಿಯೋ, ಸಿನಿಮಾ, ಟಿವಿ, ಅಂತರ್ಜಾಲ, ಸಾಮಾಜಿಕ ಜಾಲತಾಣಗಳು – ನಿಧಾನಕ್ಕೆ ಓದುಗರನ್ನು ದೂರ ಒಯ್ದಿವೆ.

ಹಾಗೆ ನೋಡಿದರೆ ವಿಜ್ಞಾನದ ಆವಿಷ್ಕಾರಗಳೆಲ್ಲವೂ ಸಾಹಿತ್ಯದ ಕಾರಕೂನಿಕೆಗೆ ಸಲಕರಣೆಗಳೇ ಹೊರತು ಅವುಗಳ ಲಭ್ಯದಿಂದಲೇ ಉತ್ತಮ ಸಾಹಿತ್ಯ ಹುಟ್ಟಲು ಸಾಧ್ಯವಿಲ್ಲ. ಸಾಹಿತ್ಯ ಸೃಷ್ಟಿಯ ಸವಾಲುಗಳು ಪಂಪ, ಕುಮಾರವ್ಯಾಸ, ಕುವೆಂಪು ಮತ್ತು ನನಗೂ ಒಂದೇ! ಕುಮಾರವ್ಯಾಸ, ಪಂಪರು ತಾಳೆಪತ್ರ–ಲೇಖನಿ ಬಳಸಿದರೆ, ಕುವೆಂಪು ಕಾಗದ–ಪೆನ್ನು ಹಿಡಿದರು. ನಾನೀಗ ಕೀಬೋರ್ಡ್ ಬಳಸುತ್ತಿದ್ದೇನೆ. ಸಲಕರಣೆಯ ಕಾರಣದಿಂದಲೇ ಯಾರ ಸಾಹಿತ್ಯದ ಮೌಲ್ಯದಲ್ಲಿಯೂ ಬದಲಾವಣೆಯಾಗುವುದಿಲ್ಲ.

ಸಾಮಾಜಿಕ ಜಾಲತಾಣಗಳು ನನಗೆ ಹಳ್ಳಿಯ ಅರಳಿಕಟ್ಟೆಗಳಂತೆ ಗೋಚರಿಸುತ್ತದೆ. ಸಾಹಿತ್ಯಪ್ರೀತಿ ಉಳ್ಳವರು ಒಟ್ಟಾಗಿ ಅಲ್ಲಿ ಹರಟೆ ಹೊಡೆಯುವುದೋ, ಜಗಳ ಕಾಯುವುದೋ, ಹೊಸ ಯೋಜನೆಗಳಿಗೆ ಬುನಾದಿ ಹಾಕುವುದೋ – ಮಾಡಬಹುದಾಗಿದೆ. ಆದರೆ ಈ ಸಾಮಾಜಿಕ ಜಾಲತಾಣಗಳೇ ಮಹತ್ವದ ಸಾಹಿತ್ಯವನ್ನು ಹುಟ್ಟಿಸುತ್ತದೆ ಎಂಬ ನಂಬಿಕೆ ನನಗಿಲ್ಲ. ಕೊನೆಗೂ ಸಾಹಿತ್ಯವೆನ್ನುವುದು ಏಕಾಂತದಲ್ಲಿ ನಡೆವ ಸಂಗತಿಯಾಗಿದೆ. ಆದರೆ ಸೃಷ್ಟಿಯಾದ ಸಾಹಿತ್ಯದ ಪ್ರದರ್ಶನಕ್ಕೆ ನಮಗೆ ಸಾರ್ವಜನಿಕ ವೇದಿಕೆಗಳು ಬೇಕಿದ್ದವು. ಆ ಕೆಲಸವನ್ನು ಸಾಮಾಜಿಕ ಜಾಲತಾಣಗಳು ಸೊಗಸಾಗಿಯೇ ಮಾಡಿವೆ. ಹೊಸದಾಗಿ ಬರೆಯುವವರೆಲ್ಲರೂ ಹೆಚ್ಚಿನ ಖರ್ಚಿಲ್ಲದೆ ತಮ್ಮ ರಚನೆಗಳನ್ನು ಓದುಗರ ಮುಂದಿಡುವುದಕ್ಕೆ ಸಹಾಯ ಮಾಡುವೆ. ದಶಕದ ಹಿಂದೆ ನಮ್ಮದೊಂದು ಕತೆ–ಕವನ–ಲೇಖನವನ್ನು ಪತ್ರಿಕೆಯಲ್ಲಿ ಕಾಣಿಸಲು ಹೇಗೆಲ್ಲಾ ಒದ್ದಾಡಬೇಕಿತ್ತು ಎಂಬುದನ್ನು ನಾವಿಲ್ಲಿ ನೆನಪಿಸಿಕೊಳ್ಳಬೇಕು. ಆ ಅರ್ಥದಲ್ಲಿ ಸಾಮಾಜಿಕ ಜಾಲತಾಣಗಳು ಪ್ರಜಾಪ್ರಭುತ್ವದ ಶಕ್ತಿಯುತ ಆಯುಧಗಳೇ ಆಗಿವೆ.

ಆದರೆ ಎಲ್ಲ ಸವಲತ್ತುಗಳಿಗೂ ಎರಡು ಮುಖಗಳಿರುತ್ತವೆ. ಪ್ರಕಟಣೆ ಸುಲಭವಾದಂತೆ, ಸೃಷ್ಟಿಕ್ರಿಯೆಯಲ್ಲಿ ಧ್ಯಾನ ಕಡಿಮೆಯಾಗುತ್ತಿದೆ. ಬರಹದ ಬಹಿರಂಗದ ಅಂದ–ಚೆಂದಕ್ಕೆ ತೋರುವ ಉತ್ಸಾಹ, ಅದರ ಅಂತರಂಗದ ಅಲಂಕಾರಕ್ಕೆ ನಾವು ತೋರುತ್ತಿಲ್ಲ. ಬರೆದಿದ್ದೆಲ್ಲವೂ ಪ್ರಕಟಗೊಳ್ಳಬೇಕೆಂಬ ಹಪಾಹಪಿ ಸಾಹಿತ್ಯ ಲೋಕದಲ್ಲಿ ಹೆಚ್ಚು ಕಾಣಿಸುತ್ತಿದೆ. ಇದು ಜೊಳ್ಳನ್ನು ಹುಟ್ಟಿಸುವ ಕಾಲ. ಗಂಭೀರವಾದ ಮತ್ತು ಮೌಲ್ಯಯುತವಾದ ಬರವಣಿಗೆ ಎಲ್ಲ ಕಾಲಕ್ಕೂ ಕಡಿಮೆಯೇ! ಆದರೆ ಜೊಳ್ಳು ಹೆಚ್ಚಾದಷ್ಟು ಗಟ್ಟಿಯಾದ್ದನ್ನು ಹುಡುಕುವ ಕೆಲಸ ಕಷ್ಟವಾಗುತ್ತದೆ. ಎಷ್ಟೋ ಸಂದರ್ಭದಲ್ಲಿ ಕಸದ ಮಧ್ಯೆ ರಸವು ಕಾಣಿಸದೇ ಹೋಗುವ ಸಾಧ್ಯತೆಯಿರುತ್ತದೆ. ಅದು ನನ್ನ ಸದ್ಯದ ಆತಂಕ.

ಆದರೆ ಕನ್ನಡವೇ ಮಾಯವಾಗುತ್ತಿದೆ ಎನ್ನುವ ಹೊತ್ತಿನಲ್ಲಿ, ನಮ್ಮ ಸಾಮಾಜಿಕ ಜಾಲತಾಣಗಳಲ್ಲಿ ವಿಪರೀತವಾಗಿ ಕನ್ನಡದ ಅಕ್ಷರಗಳು ಕಾಣಿಸುತ್ತಿರುವುದು ನನಗೆ ಸಮಾಧಾನ ಕೊಡುತ್ತದೆ. ಫೇಸ್ ಬುಕ್ ಇರಲಿ, ವಾಟ್ಸಾಪ್ ಆಗಿರಲಿ – ಎಲ್ಲೆಲ್ಲಿಯೂ ಕನ್ನಡದ ಸಂದೇಶಗಳೇ ನನಗೆ ಬರುತ್ತವೆ. ಬೇರೆ ಭಾಷೆಯ ಪೋಸ್ಟ್‌ಗಳು ಬಹಳ ಅಪರೂಪ. ಆದರೆ ಇಲ್ಲಿಯೂ ಸಮಾಜದ ಮತ್ತೊಂದು ಸಮಸ್ಯೆಯನ್ನು ಸ್ಪಷ್ಟವಾಗಿ ಗಮನಿಸಬಹುದು. ನಾವು ಜನಪ್ರಿಯವಾಗಿ ಬಳಸುವ ಸಾಮಾಜಿಕ ಜಾಲತಾಣಗಳಲ್ಲಿ ನಮ್ಮ ಮಕ್ಕಳು, ಮೊಮ್ಮಕ್ಕಳು ಇಲ್ಲ! ಅವರು ಬೇರೆಯದೇ ಹೊಸ ಮಿಥ್ಯಾಲೋಕವನ್ನು ಕಟ್ಟಿಕೊಂಡು ವ್ಯವಹರಿಸುತ್ತಾರೆ. ಅವರ ಆ ಮಿಥ್ಯಾಲೋಕದಲ್ಲಿ ಸಹಜವಾಗಿಯೇ 'ಕನ್ನಡ'ಕ್ಕೆ ಪ್ರವೇಶವಿಲ್ಲ. ಅದು ಸಂಪೂರ್ಣವಾಗಿ ಇಂಗ್ಲಿಷ್‌ಮಯ!

* * *

ಮೊನ್ನೆ ಜಯಪುರದಲ್ಲಿ ನಡೆಯಿತೆಂದು ವರದಿಯಾದ ಘಟನೆಯೊಂದು ನನ್ನನ್ನು ಬಹುವಾಗಿ ಕಾಡಿತು. ಸರಕಾರಿ ಆಸ್ಪತ್ರೆಯಲ್ಲಿ ಇಬ್ಬರು ದಾದಿಯರಿಗೆ ಒಬ್ಬರನ್ನು ಕಂಡರೆ ಮತ್ತೊಬ್ಬರಿಗೆ ಆಗುತ್ತಿರಲಿಲ್ಲವಂತೆ. ಒಂದು ಹಡವಣಿಗೆಯ ಸಮಯದಲ್ಲಿ ಅವರಿಬ್ಬರೂ ತಾವೇ ನಾಯಕತ್ವ ವಹಿಸಬೇಕೆಂದು ಜಿದ್ದು ಹಿಡಿದರಂತೆ. ಮಗುವಿನ ಬಲಗಾಲನ್ನು ಒಬ್ಬಳು, ಎಡಗಾಲನ್ನು ಮತ್ತೊಬ್ಬಳು ಹಿಡಿದು ಹೊರಕ್ಕೆ ಎಳೆಯುವದಕ್ಕೆ ಮುಂದಾದರಂತೆ. ಅವರು ತಾವೇ ಗೆಲ್ಲಬೇಕು ಎನ್ನುವ ಹಠದಲ್ಲಿ ಮಗುವನ್ನು ಎಷ್ಟು ಜೋರಾಗಿ ಎಳೆದರೆಂದರೆ, ಮಗುವಿನ ದೇಹ ಎರಡು ತುಂಡಾಯಿತಂತೆ. ರುಂಡ ತಾಯಿಯ ದೇಹದಲ್ಲಿಯೇ ಉಳಿದು, ಮುಂಡ ಮಾತ್ರ ಹೊರಕ್ಕೆ ಬಂದಿತಂತೆ.

ಸಾಹಿತ್ಯ ರಂಗದಲ್ಲಿ ಎಡ ಮತ್ತು ಬಲವೆಂಬ ಪಂಥಗಳ ವಿಪರೀತ ಧೋರಣೆ ನನಗೆ ಸಾಹಿತ್ಯಶಿಶುವನ್ನು ಕೊಂದುಬಿಡುತ್ತವೆಯೇನೋ ಎಂಬ ಕಳವಳವನ್ನು ಮೂಡಿಸುತ್ತದೆ. ಸಿದ್ಧಾಂತಗಳ ಬಳಗ ಎಷ್ಟು ಉಗ್ರವಾಗುತ್ತಿದೆಯೆಂದರೆ ಇದು ಮತ್ತೊಬ್ಬರನ್ನು ದ್ವೇಷಿಸುವ, ಬಹಿಷ್ಕಾರ ಹಾಕುವ ಅಸಹಿಷ್ಣುತೆಯನ್ನು ತೋರುತ್ತಿವೆ. ಯಾವ ಸಾಹಿತ್ಯ ಸಮಾರಂಭಗಳಿಗೆ ಹೋಗಬಹುದು, ಯಾವುದಕ್ಕೆ ಹೋಗಬಾರದು, ಯಾವ ಪತ್ರಿಕೆಗೆ ಬರೆಯಬೇಕು, ಎಲ್ಲಿ

ಬರೆಯಬಾರದು, ಯಾರನ್ನು ಸಮಾರಂಭಕ್ಕೆ ಕರೆಯಬೇಕು, ಯಾರನ್ನು ಕರೆಯಬಾರದು, ಯಾರಿಗೆ ಮುನ್ನುಡಿ ಬರೆಯಬೇಕು, ಯಾರಿಗೆ ಬರೆಯಕೂಡದು ಎಲ್ಲವನ್ನೂ ಢಾಳಾಢಂಗುರವಾಗಿ ಲಜ್ಜೆಯಿಲ್ಲದೆ ಚರ್ಚಿಸಲಾಗುತ್ತಿದೆ. ಮತ್ತೊಂದು ಪಂಥದವರ ಮಾತುಗಳನ್ನು ಕೇಳಿಸಿಕೊಳ್ಳುವ, ಅದನ್ನು ಆರೋಗ್ಯಕರವಾಗಿ ಖಂಡಿಸುವ ಅಥವಾ ಅರ್ಹವಾದ್ದನ್ನು ಮೆಚ್ಚುವ ವಾತಾವರಣ ಸದ್ಯಕ್ಕಂತೂ ಕಾಣುತ್ತಿಲ್ಲ. ಇದು ತಮ್ಮ ಗುಂಪಿನ ನಗಣ್ಯತನವನ್ನೂ ಮೆಚ್ಚುವ, ಮತ್ತೊಂದು ಗುಂಪಿನ ಶ್ರೇಷ್ಠತೆಯನ್ನು ಕಡೆಗಣಿಸುವ ಮತ್ತೊಂದು ಧೂರ್ತತನಕ್ಕೆ ಎಡೆಮಾಡಿಕೊಡುತ್ತಿದೆ.

ಸಾಹಿತ್ಯದಲ್ಲಿ ಸಿದ್ಧಾಂತ, ಪಂಥಗಳು ಇರಬೇಕು; ಅದು ತಪ್ಪೆಂದು ನನಗೆ ಅನಿಸುವುದಿಲ್ಲ. ನಮ್ಮ ಬಹುತೇಕ ಸಾಹಿತ್ಯಿಕ ಚಳುವಳಿಗಳು ತಮ್ಮ ಸಿದ್ಧಾಂತಗಳಿಗೆ ಹೋರಾಡಿಯೇ ಬೆಳೆದಿವೆ. ಆದರೆ ಸಾಹಿತ್ಯದ ಗುಂಪೊಂದು ಗುಂಪುಗಾರಿಕೆ ಮಾಡಲು ಹೊರಟಾಗ ಆತಂಕವಾಗುತ್ತದೆ. ಅದು ಅಸಹನೆ, ಅಸಹಿಷ್ಣುತೆ ಬೆಳೆಸಿಕೊಳ್ಳಲು ಪ್ರಾರಂಭಿಸಿದಾಗ ಖೇದವಾಗುತ್ತದೆ. ಸಾಹಿತ್ಯದಲ್ಲಿ ಪ್ರೀತಿಯನ್ನು ಹುಡುಕುವ ನನ್ನಂತಹವರಿಗೆ ಗೊಂದಲವಾಗುತ್ತದೆ. ನಾನು ಮತ್ತು ನನ್ನಂತಹವರು ಎಲ್ಲಿ ಸೇರಿದ್ದೇವೋ ಗೊತ್ತಿಲ್ಲ. ಅದನ್ನು ಗುರುತಿಸಿಕೊಳ್ಳುವ ಉತ್ಸಾಹವೂ ನನಗಿಲ್ಲ. ನನ್ನ ಕತೆಯ ಪಾತ್ರಗಳು ತಮ್ಮ ಸೂತ್ರದ ಮೂಲಕ ನನ್ನನ್ನು ಕುಣಿಸುತ್ತವೆ. ಒಮ್ಮೆ ಅವಕ್ಕೆ ರೂಪರೇಷೆಗಳನ್ನು ಕೊಟ್ಟ ನಂತರ ಅವು ಸ್ವಚ್ಛಂದವಾಗಿ ಕುಣಿದಂತೆ ಲೇಖನಿ ಆಡಿಸುವವನು ನಾನು. ಅಂತಹ ಹೊತ್ತಿನಲ್ಲಿ ಯಾವ ಪಂಥ–ಸಿದ್ಧಾಂತಗಳ ಸಂಗತಿಗಳೂ ನನ್ನನ್ನು ಕಾಡುವುದಿಲ್ಲ. ಹಾಗೆ ಮಾಡಲು ಹೋದರೆ ಪಾತ್ರಗಳು ಶಾಪ ಕೊಡುತ್ತವೆಂಬ ಅಂಜಿಕೆ ನನಗಿದೆ.

೨೦೧೯ರ ಜನವರಿಯ ಧಾರವಾಡ ಸಾಹಿತ್ಯ ಸಮ್ಮೇಳನದಲ್ಲಿ ಇದಕ್ಕೆ ಕುರುಹಾಗಿ ಕೆಲವು ಸಂಗತಿಗಳನ್ನು ನಾವು ಗಮನಿಸಬಹುದಾಗಿತ್ತು. ಇಡೀ ಸಮ್ಮೇಳನದ ಆಯೋಜನೆಯಲ್ಲಿ ಅವ್ಯವಸ್ಥೆ ತಾಂಡವವಾಡುತ್ತಿತ್ತು. ಎಲ್ಲಿ ನೋಡಿದರೂ ಧೂಳು, ಎಲ್ಲಿ ಹೋದರೂ ನೂಕುನುಗ್ಗಲು, ಗದ್ದಲ, ನೆಟ್‌ವರ್ಕ್ ಸಿಗದ ಮೊಬೈಲುಗಳು, ಕಾರ್ಯಕ್ರಮಕ್ಕೆ ಬರಲು ಸುಲಭವಾಗಿ ಸಿಗದ ವಾಹನ ಸೌಲಭ್ಯ ಒಂದೇ ಎರಡೆ. ಮಕ್ಕಳು, ಹಿರಿಯರು, ಹೆಂಗಸರು ನೆಮ್ಮದಿಯಿಂದ ಸಮ್ಮೇಳನಕ್ಕೆ ಬರುವುದಕ್ಕೆ ಸಾಧ್ಯವೇ ಇರದ ವಾತಾವರಣವಿತ್ತು. ಕೋಟ್ಯಂತರ ರೂಪಾಯಿ ಸುರಿದು ಮಾಡಿದ ಕನ್ನಡ ಜಾತ್ರೆಯಲ್ಲಿ ಸಾರ್ವಜನಿಕರಿಗೆ ಭಾಗವಹಿಸಲು ಈ ಪರಿ ಕಷ್ಟವಾಗುತ್ತದೆಯಲ್ಲ ಎಂದು ದುಃಖವಾಗುತ್ತಿತ್ತು. ವಿಶೇಷವೆಂದರೆ ಈ ಸಮಸ್ಯೆಗಳು ಬಹುತೇಕ ಸಾಹಿತಿಗಳನ್ನು ಕಾಡಲಿಲ್ಲ ಎನ್ನುವುದು. ಯಾಕೆಂದರೆ ಈ ಸಮಸ್ಯೆಗಳು ಯಾವ ಪಂಥ ಮತ್ತು ಸಿದ್ಧಾಂತಗಳಿಗೂ ಸವಾಲಾಗಿರಲಿಲ್ಲ. ಆದ್ದರಿಂದ ಇದನ್ನು ಗಟ್ಟಿಯಾಗಿ ಯಾರೂ ವೇದಿಕೆಯಲ್ಲಿ ವಿರೋಧಿಸಲಿಲ್ಲ. ಆದರೆ ಸಮ್ಮೇಳನದ ಅಧ್ಯಕ್ಷರ ಮೆರವಣಿಗೆಯಲ್ಲಿ ಪೂರ್ಣಕುಂಭ ಹೊತ್ತ ಹೆಣ್ಣುಮಕ್ಕಳು, ಕನ್ನಡ ಬಾವುಟದ ದಿರಿಸನ್ನು ಹಾಕಿಕೊಂಡು ನಡೆದರು. ಪರಿಷತ್ತಿನ ಅಧ್ಯಕ್ಷರು ಹೆಣ್ಣು–ಗಂಡು ಎಂಬ ಭೇದವಿಲ್ಲದೆ, ತೃತೀಯ ಲಿಂಗಿಗಳೂ

ಈ ಮೆರವಣಿಗೆಯಲ್ಲಿ ಭಾಗವಹಿಸಬಹುದು ಎಂದು ಹೇಳಿದ್ದರು. ಆದರೂ ಈ ಸಂಗತಿ ದೊಡ್ಡದಾಗಿಹೋಯ್ತು. ಅದನ್ನು ವಿರೋಧಿಸಿ ಕವನ ಓದುವುದು, ಗೌರವಧನ ತಿರಸ್ಕರಿಸುವುದು ನಡೆದವು. ವೃತ್ತಪತ್ರಿಕೆಗಳಲ್ಲೂ ಬರೀ ಇದೇ ಸುದ್ದಿ. ಎಲ್ಲೋ ಒಂದು ಹಂತದಲ್ಲಿ ನನಗೆ ಇದು ಮೂಲ ಸಮಸ್ಯೆಗಳನ್ನು ಮರೆತು, ಬೇರೊಂದಕ್ಕೆ ಅಂಟಿಕೊಂಡ ಭಾವವನ್ನು ಮೂಡಿಸಿತು. ಪೂರ್ಣಕುಂಭ ಮೆರವಣಿಗೆ ವಿರೋಧಿಸುವುದರಲ್ಲಿ ತಪ್ಪಿರಲಿಲ್ಲ. ಆದರೆ ಜೀವಕ್ಕೇ ಬೆದರಿಕೆ ಒಡ್ಡುವಂತಹ ಅವ್ಯವಸ್ಥೆಯನ್ನು ನಿರ್ಲಕ್ಷಿಸಿ, ಸಿದ್ಧಾಂತಕ್ಕೆ ಸಂಬಂಧಪಟ್ಟ ಸಂಗತಿ ನಮ್ಮ ಪ್ರಮುಖ ಆದ್ಯತೆಯಾಗುತ್ತದಲ್ಲಾ ಎಂದು ಕಸಿವಿಸಿಯಾಯಿತು. ಒಂದು ಬಗೆಯ ಸಿದ್ಧಾಂತಗಳಿಗೆ ನಮ್ಮನ್ನು ಅರ್ಪಿಸಿಕೊಂಡುಬಿಟ್ಟರೆ ನಮ್ಮ ಆದ್ಯತೆಗಳೂ ತಾಳತಪ್ಪುವ ಸಾಧ್ಯತೆಗಳಿರುತ್ತವೆ.

* * *

ಕನ್ನಡದ ಹಿರಿಯ ಕತೆಗಾರ ವಿವೇಕ ಶಾನಭಾಗರ 'ಘಾಚರ್ ಘೋಚರ್' ಕೃತಿಯ ಅನುವಾದ, ಜಗತ್ತಿನಾದ್ಯಂತ ಸುದ್ದಿ ಮಾಡಿ ಓದುಗರನ್ನು ಗಳಿಸಿದ್ದು ನನ್ನ ಗಮನ ಸೆಳೆದಿದೆ. ಅದೇ ರೀತಿ ಜಯಂತ ಕಾಯ್ಕಿಣಿಯವರ ಕತೆಗಳ ಗುಚ್ಛ 'ನೊ ಪ್ರೆಸೆಂಟ್ಸ್ ಪ್ಲೀಜ್' ಪ್ರತಿಷ್ಠಿತ ಡಿಎಸ್‌ಸಿ ಬಹುಮಾನ ಗಳಿಸಿರುವುದು ನನಗೆ ಹೆಮ್ಮೆ ಮೂಡಿಸಿದೆ. ಇದೊಂದು ಹೊಸದಾರಿಯಾಗಿ ತೋರುತ್ತಿದೆ. ಕನ್ನಡದಲ್ಲಿ ದಿನದಿನಕ್ಕೆ ಕಡಿಮೆಯಾಗುತ್ತಿರುವ ಓದುಗರು, ಅನ್ಯಭಾಷೆಗಳಲ್ಲಿ – ವಿಶೇಷವಾಗಿ ಇಂಗ್ಲೀಷಿನಲ್ಲಿ – ಹೆಚ್ಚುತ್ತಿರುವ ಓದುವ ವರ್ಗ ನನ್ನ ಈ ಕುತೂಹಲಕ್ಕೆ ಕಾರಣವಾಗಿದೆ. ಕನ್ನಡದ ಓದುಗರು ನಮಗೆ ಮೊದಲ ಆದ್ಯತೆ, ಅದರಲ್ಲಿ ಅನುಮಾನವಿಲ್ಲ. ಆದರೆ ಉಳಿದ ಓದುಗರು ನನ್ನವರಾಗುವ ಸಾಧ್ಯತೆಗಳನ್ನು ನಾನು ನಿರಾಕರಿಸಲಾರೆ. ದೂರದ ಸ್ಪಾನಿಷ್, ಟರ್ಕಿ, ರಷ್ಯಾ, ಜಪಾನಿ ಭಾಷೆಯ ಲೇಖಕರ ಪುಸ್ತಕಗಳನ್ನು ನಮ್ಮ ಕನ್ನಡ ಭಾಷೆಯಲ್ಲಿ ನಾಡಿನ ಮೂಲೆಯಲ್ಲಿ ಕುಳಿತ ಹಳ್ಳಿಗರೊಬ್ಬರು ಓದಿ ಪ್ರಭಾವಕ್ಕೊಳಗಾಗುತ್ತಾರೆ. ಅಂದ ಮೇಲೆ ಅದೇ ರೀತಿಯಲ್ಲಿ ಕನ್ನಡ ಪುಸ್ತಕಗಳನ್ನು ಬೇರೆ ಭಾಷಿಕರು ಓದಬೇಕೆನ್ನುವ ಬಯಕೆ ಅತ್ಯಂತ ಸಹಜವಾದದ್ದು ಮತ್ತು ಸಾಧುವಾದದ್ದು. ಜಗತ್ತು ಬೆರಗಾಗುವಂತಹ ಸೃಜನಶೀಲ ಸಾಹಿತ್ಯ ಕನ್ನಡದಲ್ಲಿದೆ ಎಂದು ನಂಬುವವನು ನಾನು.

ಭಾರತದ ಇತರ ಭಾಷೆಗಳಲ್ಲಿ ಅನುವಾದವಾದ ಕೃತಿಗಳಿಗಿಂತಲೂ, ಇಂಗ್ಲಿಷಿಗೆ ಅನುವಾದಗೊಂಡ ಕೃತಿಗಳು ಓದುಗರ ಗಮನವನ್ನು ಹೆಚ್ಚಾಗಿ ಸೆಳೆಯುತ್ತಿರುವುದು ಸದ್ಯದ ಪರಿಸ್ಥಿತಿ. ಇದು ಸಂಕಟದ ಸಂಗತಿಯಾದರೂ ಸತ್ಯದ ಸಂಗತಿಯಾಗಿದೆ. ಇಂಗ್ಲಿಷ್ ಭಾಷೆ ಭಾರತದ ಇತರ ದೇಶೀ ಭಾಷೆಗಳಿಗೆ ಸೇತುವೆಯಾಗುತ್ತಿದೆ. ಇಂಗ್ಲಿಷ್‌ನಲ್ಲಿ ಕೃತಿ ಬಂದ ಕಾರಣದಿಂದಲೇ ಅದು ಭಾರತದ ಇತರ ಭಾಷೆಗಳಿಗೆ ಅನುವಾದಗೊಳ್ಳುವ ಸಾಧ್ಯತೆಯನ್ನು ನಾವು ಹೆಚ್ಚಾಗಿ ಕಾಣುತ್ತಿದ್ದೇವೆ.

ಕನ್ನಡ ಕೃತಿಗಳ ಇಂಗ್ಲಿಷ್ ಅನುವಾದಕ್ಕೆ ನನಗೆ ಮತ್ತೊಂದು ಕಾರಣವೂ ಮುಖ್ಯವೆನ್ನಿಸುತ್ತದೆ. ನಮ್ಮ ಮಕ್ಕಳು, ಮೊಮ್ಮಕ್ಕಳು ಬಹುತೇಕ ಇಂಗ್ಲಿಷ್‌ನ ಪುಸ್ತಕಗಳನ್ನು

ಓದುತ್ತಿದ್ದಾರೆ. ಕನ್ನಡದ ಪುಸ್ತಕಗಳನ್ನು ಓದುವ ವಿದ್ಯಾಭ್ಯಾಸ ಅವರಿಗೆ ಸಿಗುತ್ತಿಲ್ಲ. ಅದು ನಮ್ಮ ದುರ್ದೈವವೋ, ಅವರದೋ ಗೊತ್ತಿಲ್ಲ. ಬಹುಶಃ ಇಬ್ಬರದೂ ಇರಬೇಕು. ಆದರೆ ಮಕ್ಕಳೆಲ್ಲರೂ ಕನ್ನಡದ ಬಗ್ಗೆ, ತಮ್ಮ ತಲೆಮಾರಿನ ಬಗ್ಗೆ ಖಂಡಿತವಾಗಿಯೂ ಹೆಮ್ಮೆಯನ್ನು ಇಟ್ಟುಕೊಂಡಿರುತ್ತಾರೆ. ತಮ್ಮ ಹಿರಿಯರ ಕತೆಗಳನ್ನು ಓದುವ, ಅವರು ಬೆಳೆದು ಬಾಳಿದ ಪರಿಸರವನ್ನು ಅಕ್ಷರಗಳಲ್ಲಿ ಕಾಣುವ ಉತ್ಸಾಹ ಅವರಿಗಂತೂ ಇದ್ದೇ ಇರುತ್ತದೆ. ನಮ್ಮ ಮುಂದಿನ ತಲೆಮಾರಿಗಾಗಿಯಾದರೂ ನಾವು ಈ ಕೆಲಸವನ್ನು ಮಾಡುವ ಅವಶ್ಯಕತೆ ಇದೆ. ಇಲ್ಲದಿದ್ದರೆ ತಲೆಮಾರುಗಳ ನಡುವಿನ ಅಂತರ ಬೆಸೆಯಲಾರದಷ್ಟು ದೊಡ್ಡದಾಗಿಬಿಡುತ್ತದೆ.

ಆದರೆ ಕನ್ನಡದಲ್ಲಿ ಇಂಗ್ಲೀಷಿಗೆ ಕೃತಿಗಳನ್ನು ಯಶಸ್ವಿಯಾಗಿ ಅನುವಾದ ಮಾಡುವ ಜನರು ಹೆಚ್ಚಿಲ್ಲ. ಇದ್ದರೂ ಅವರ ಇಂಗ್ಲಿಷ್ ಭಾಷೆಯ ಪ್ರೌಢಿಮೆಗೆ ಅನುವಾದಕ್ಕಿಂತಲೂ ಬೇರೆ ಕೆಲಸದಲ್ಲಿ ಹೆಚ್ಚಿನ ಹಣ ಸಿಗುತ್ತದೆ. ಈ ಕಾರಣದಿಂದಾಗಿಯೇ ನಮ್ಮ ಬಹುತೇಕ ಶ್ರೇಷ್ಠ ಕನ್ನಡ ಕೃತಿಗಳ ಅನುವಾದಗಳು ಜಾಗತಿಕ ಮಟ್ಟದಲ್ಲಿ ಯಶಸ್ವಿಯಾಗಿಲ್ಲ. ಅನಂತಮೂರ್ತಿ, ಗಿರೀಶ ಕಾರ್ನಾಡ, ಭೈರಪ್ಪನವರ ಕೃತಿಗಳು ಅಲ್ಪಮಟ್ಟಿನ ಯಶಸ್ಸನ್ನು ಗಳಿಸಿದ್ದರೂ, ಅದು ತನ್ನ ಸಾಮರ್ಥ್ಯಕ್ಕೆ ತಕ್ಕ ಓದುಗರನ್ನು ದಕ್ಕಿಸಿಕೊಂಡಿಲ್ಲ. ಬಹುತೇಕ ಆಂಗ್ಲ ಓದುಗರು ಅನುವಾದದ ಗುಣಮಟ್ಟದ ಕುರಿತು ಅಸಮಾಧಾನವನ್ನು ವ್ಯಕ್ತಪಡಿಸುತ್ತಾರೆ. ಈ ಕಾರಣದಿಂದಾಗಿಯೇ ವಿವೇಕ ಶಾನಭಾಗರ 'ಘಾಚರ್ ಘೋಚರ್' ಕೃತಿಯ ಯಶಸ್ಸು ನನಗೆ ಮುಖ್ಯವೆನ್ನಿಸುತ್ತದೆ.

ಸರಕಾರವು ಕನ್ನಡದ ಕೃತಿಗಳನ್ನು ಯಶಸ್ವಿಯಾಗಿ ಜಗತ್ತಿಗೆ ತಲುಪಿಸುವಲ್ಲಿ ಸಹಕಾರ ನೀಡಬೇಕು. ಅದಕ್ಕಾಗಿಯೇ ಕುವೆಂಪು ಭಾಷಾಭಾರತಿ ಎನ್ನುವ ಅಕಾಡೆಮಿಯನ್ನು ಸ್ಥಾಪಿಸಿದೆ. ಆದರೆ ಈ ಸಂಸ್ಥೆಯು ಇತರ ಭಾಷೆಯಿಂದ ಕನ್ನಡಕ್ಕೆ ಕೃತಿಗಳನ್ನು ತರುವಲ್ಲಿ ತೋರಿಸುವ ಉತ್ಸಾಹವನ್ನು ಕನ್ನಡದ ಕೃತಿಗಳು ಅನ್ಯಭಾಷೆಗೆ ಅನುವಾದವಾಗುವುದರಲ್ಲಿ ತೋರಿಸುತ್ತಿಲ್ಲ. ಜೊತೆಗೆ ಈ ಸಂಸ್ಥೆಗೆ ಕರ್ನಾಟಕದ ಹೊರಗೆ ವ್ಯವಸ್ಥಿತವಾದ ಮಾರಾಟ ಜಾಲವಿಲ್ಲ. ಆದ್ದರಿಂದ ಅವರು ಬೇರೆ ಭಾಷೆಗೆ ಪುಸ್ತಕಗಳನ್ನು ಅನುವಾದಿಸಿದರೂ, ಪುಸ್ತಕಗಳನ್ನು ಪ್ರಕಟಿಸುವುದಕ್ಕೆ ವೃತ್ತಿಪರರ ಜೊತೆಗೆ ಕೈಜೋಡಿಸುವ ಅವಶ್ಯಕತೆ ಇರುತ್ತದೆ.

* * *

೨೦೧೯ರ ಧಾರವಾಡ ಸಾಹಿತ್ಯ ಸಂಭ್ರಮದಲ್ಲಿ ನಡೆದ ಒಂದು ದಾಂಧಲೆ ನಮ್ಮ ಭಾರತೀಯ ಸಾಹಿತ್ಯಲೋಕ ಸದ್ಯಕ್ಕೆ ಎದುರಿಸುತ್ತಿರುವ ಸವಾಲಾಗಿ ಕಾಣುತ್ತದೆ. ಸಂಪನ್ಮೂಲ ವ್ಯಕ್ತಿಯಾಗಿ ಆಗಮಿಸಿದ್ದ ಶಿವ ವಿಶ್ವನಾಥನ್ ಅವರು ಭಾರತದ ಈಶಾನ್ಯ ರಾಜ್ಯಗಳಲ್ಲಿ ನಮ್ಮ ಸೈನಿಕರು ಅತ್ಯಾಚಾರ ಮಾಡುತ್ತಿರುವ ವಿಷಯವನ್ನು ಪ್ರಸ್ತಾಪಿಸಿದರು. ಈ ಹಿಂದೆಯೂ ಈಶಾನ್ಯ ರಾಜ್ಯದ ಮಹಿಳೆಯರು ತಮ್ಮ ಮೇಲೆ ನಡೆಯುತ್ತಿರುವ ಅತ್ಯಾಚಾರವನ್ನು ವಿರೋಧಿಸಿ ಬೆತ್ತಲೆ ಪ್ರತಿಭಟನೆ ನಡೆಸಿದ್ದರು. ಇರೋಮ್ ಶರ್ಮಿಳಾಳ ಸತ್ಯಾಗ್ರಹದ

ವಿವರಗಳು ನಮಗೆ ತಿಳಿದೇ ಇವೆ. ಇರಲಿ. ವಿಷಯದ ಸತ್ಯಾಸತ್ಯತೆಯನ್ನು ಮಾತಿನಲ್ಲಿ ಪ್ರಶ್ನಿಸಬಹುದಿತ್ತು ಹಾಗೂ ಬೇರೊಂದು ಸತ್ಯವನ್ನು ಅಷ್ಟೇ ಪ್ರಖರವಾದ ಅಂಕಿ-ಅಂಶಗಳಿಂದ ಸಭೆಯ ಮುಂದಿಡುವ ಅವಕಾಶವೂ ಅಲ್ಲಿತ್ತು. ಆದರೆ ನಡೆದ ಘಟನೆಯೇ ಬೇರೆ. ವೇದಿಕೆಯ ಮೇಲಿನ ಮೈಕು, ಕುರ್ಚಿಯನ್ನು ಕಿತ್ತೆಸೆದು ದಾಂಧಲೆ ಮಾಡಲಾಯಿತು. ರಾಜಕೀಯ ಪಕ್ಷಕ್ಕೆ ಸೇರಿದವರೊಬ್ಬರು "ಧಾರವಾಡದ ಸಾಹಿತ್ಯ ಸಂಭ್ರಮದ ಚಟುವಟಿಕೆಯನ್ನು ಸಾಹಿತ್ಯಕ್ಕೆ ಸೀಮಿತಗೊಳಿಸದಿದ್ದರೆ ಸಂಭ್ರಮವೂ ಇರುವುದಿಲ್ಲ, ಸಾಹಿತಿಗಳೂ ಇರುವುದಿಲ್ಲ" ಎಂದು ಜೀವ ಬೆದರಿಕೆ ಹಾಕಿ ಹೋದರು. ಈ ಮಾತನ್ನು ಅವರ ಪಕ್ಷದ ಯಾವುದೇ ಪ್ರಮುಖರೂ ಅನಂತರ ಖಂಡಿಸಲಿಲ್ಲ. ಬಹುತೇಕ ರಾಜಕೀಯ ನಾಯಕರ ನಿಲುವುಗಳು – ಪಕ್ಷಾತೀತವಾಗಿ – ಇವೇ ಆಗಿವೆ. ಹಿಂದೊಮ್ಮೆ ನಮ್ಮ ಮುಖ್ಯಮಂತ್ರಿಗಳು "ಯಾರ್ರೀ ಅದು ಅನಂತಮೂರ್ತಿ?" ಎಂದದ್ದನ್ನು ನಾವುಗಳು ಯಾರೂ ಮರೆಯುವುದು ಬೇಕಿಲ್ಲ. ಮಾಜಿ ಪ್ರಧಾನಿಗಳು ತುರ್ತು ಪರಿಸ್ಥಿತಿ ಘೋಷಿಸಿ ಸಾಹಿತಿಗಳನ್ನು ಕಂಬಿ ಎಣಿಸುವಂತೆ ಮಾಡಿದ್ದನ್ನು ನಾನಿಲ್ಲಿ ನೆನಪಿಸುವ ಅವಶ್ಯಕತೆ ಇಲ್ಲ. ಒಟ್ಟಾರೆ ಸಾಹಿತಿಗಳ ಕುರಿತು ಯಾವ ರಾಜಕೀಯ ಪಕ್ಷದಲ್ಲೂ ಅಂತಹ ಗೌರವವಿಲ್ಲ ಎನ್ನುವುದು ತಿಳಿಯುತ್ತದೆ. ನಮ್ಮ ಪಾಡಿಗೆ ನಾವು ಯಾವುದೋ ಮಕ್ಕಳಾಟದಂತೆ ಸಾಹಿತ್ಯಲೋಕದಲ್ಲಿ ಇದ್ದರೆ, ಅವರು ಸುಮ್ಮನಿರುತ್ತಾರೆ. ಅವರ ತಪ್ಪುಗಳನ್ನು ತೋರಿಸಲು ಹೊರಟೆವೋ, ದೈಹಿಕವಾಗಿಯೇ ನಮ್ಮ ಮೇಲೆ ಆಕ್ರಮಣ ಮಾಡಿ ಸುಮ್ಮನಾಗಿಸುತ್ತಾರೆ.

ಎಷ್ಟೋ ಬಾರಿ ಸಾಹಿತ್ಯಕ್ಕೆ ರಾಜಾಶ್ರಯ ಬೇಕು ಎಂದು ಹಲವರು ಹೇಳುತ್ತಾರೆ. ಆದರೆ ರಾಜಾಶ್ರಯವೆಂದರೆ ರಾಜನ ಎಲ್ಲಾ ತಪ್ಪುಗಳನ್ನು ನುಂಗಿ ಸುಮ್ಮನಿರುವುದಲ್ಲವೆ? ಸದ್ಯಕ್ಕೆ ಆಗುತ್ತಿರುವುದು ಅದೇ ಆಗಿದೆ. ನಮ್ಮೆಲ್ಲಾ ಸಾಹಿತ್ಯದ ಸಮಾರಂಭಗಳಿಗೆ ಸರಕಾರದ ಹಣವನ್ನು ವಿನಿಯೋಗಿಸುತ್ತೇವೆ. ಅದು ಜನರದೇ ಹಣವಾದರೂ ರಾಜಕೀಯದವರು ತಮ್ಮ ಕೈಯಾರೆ ಕೊಟ್ಟಂತೆ ಭಾವಿಸುತ್ತಾರೆ. ಆ ಕಾರಣಕ್ಕಾಗಿಯೇ ಸಮಾರಂಭದ ಎಲ್ಲಾ ಪ್ರಮುಖ ಗೌರವಾದರಗಳೂ ಸಾಹಿತ್ಯದ ಗಂಧ-ಗಾಳಿ ಇಲ್ಲದ ಅವರಿಗೇ ಸಲ್ಲುತ್ತವೆ. ಸಾಹಿತಿಗಳಿಗೆ ವ್ಯವಸ್ಥೆಯ ವಿರುದ್ಧ ಧ್ವನಿ ಎತ್ತಲು ಸಾಧ್ಯವಿಲ್ಲದ ಪರಿಸ್ಥಿತಿ ಅಲ್ಲಿ ಮೂಡಿರುತ್ತದೆ. ವಿರೋಧಿಸುವ ಸಂಗತಿ ಅಂತಿರಲಿ, ಅವರನ್ನು ಹೊಗಳಿ ಕಳುಹಿಸುವ ದೈನ್ಯತೆ ನಮ್ಮದಾಗಿಬಿಡುತ್ತದೆ.

ವಿಚಿತ್ರವೆಂದರೆ ಇಂತಹ ವಿವಾದಗಳೇ ಕೆಲವೊಮ್ಮೆ ಲೇಖಕರನ್ನು ಮುನ್ನೆಲೆಗೆ ತಂದುಬಿಡುತ್ತವೆ. ದಶಕದ ಹಿಂದೆ ನಮಗೆ ತಮಿಳು ಲೇಖಕ ಪೆರುಮಾಳ್ ಮುರುಗನ್ ಯಾರೆಂಬುದೇ ತಿಳಿದಿರಲಿಲ್ಲ. ಅವರಾಗಲೇ ಮೂರು ದಶಕಗಳಿಂದ ತಮಿಳಿನಲ್ಲಿ ಸಾಹಿತ್ಯ ರಚಿಸುತ್ತಿದ್ದಾರೆ. ಯಾವುದೋ ಸಂದರ್ಭದಲ್ಲಿ ಅವರು ಸಾಮಾಜಿಕ ಜಾಲತಾಣದಲ್ಲಿ ಹಾಕಿದ ಸಂದೇಶವೊಂದು ದೊಡ್ಡ ವಿವಾದವಾಗಿ ಇದ್ದಕ್ಕಿದ್ದಂತೆಯೇ ಅವರ ಪುಸ್ತಕಗಳು ಹಾಗೂ ಅವರು ಜನಪ್ರಿಯರಾಗಿಬಿಟ್ಟರು. ಅವರ ಅನುವಾದಿತ ಪುಸ್ತಕಗಳನ್ನು ನಾನು ಓದಿದ್ದೇನೆ. ಅವರ ಕತೆಗಾರಿಕೆಯಂತೂ ನನಗೆ ಪ್ರಾಮಾಣಿಕವಾಗಿಯೂ, ಅನನ್ಯವಾಗಿಯೂ

ಮತ್ತು ತೀಕ್ಷ್ಣವಾಗಿಯೂ ಕಂಡಿದೆ. ದುರಂತವೆಂದರೆ ಮೇಲಿನ ವಿವಾದವಾಗದಿದ್ದರೆ ಅವರ ಪುಸ್ತಕಗಳನ್ನು ನಾನು ಓದುತ್ತಲೇ ಇರಲಿಲ್ಲವೇನೋ! ಒಳ್ಳೆಯ ಸಾಹಿತಿಯ ಪುಸ್ತಕಗಳು ಓದುಗರಿಗೆ ತಲುಪಲೂ ವಿವಾದಗಳಾಗಬೇಕು ಎನ್ನುವುದು ಸಂಕಟದ ಸಂಗತಿಯೇ ಆಗಿದೆ. ಇದು ಸಾಹಿತ್ಯಪ್ರೇಮಿಗಳಿರುವ ಸಮಾಜದ ಲಕ್ಷಣವಲ್ಲ. ನಮ್ಮ ವಿವೇಕ ಶಾನಭಾಗರ ಕಾದಂಬರಿ ಮತ್ತು ಜಯಂತರ ಕಥಾಸಂಕಲನ ಅಂತಹ ಯಾವ ವಿವಾದಗಳಿಲ್ಲದೆಯೂ ಜನಪ್ರಿಯವಾಯಿತೆನ್ನುವುದು ಸದ್ಯಕ್ಕೆ ನಮಗೆ ಸಿಗುವ ನೆಮ್ಮದಿಯ ಸಂಗತಿಯಾಗಿದೆ.

ಹಲವು ವಿರೋಧಗಳು ಸಾಹಿತ್ಯಲೋಕದಿಂದ ಕೇಳಿಬರುತ್ತವೆ. ಆದರೆ ಇವೆಲ್ಲವೂ ಬಹುತೇಕ ಏಕಪಕ್ಷವಾಗಿರುತ್ತವೆ. ಬಹುತೇಕರು ಒಂದು ರಾಷ್ಟ್ರೀಯ ಪಕ್ಷದ ಪರವಾಗಿ ಇರುತ್ತಾರೆ. ಆದ್ದರಿಂದ ಮತ್ತೊಂದು ಪಕ್ಷದಿಂದ ತಪ್ಪಾದಾಗ ಮಾತ್ರ ಇವರು ಧ್ವನಿ ಎತ್ತುತ್ತಾರೆ. ಉಳಿದಂತೆ ಮೌನಕ್ಕೆ ಶರಣಾಗುತ್ತಾರೆ. ಎರಡೂ ಪಂಥೀಯರಲ್ಲೂ ಇದು ಗಾಢವಾಗಿ ಕಾಣುತ್ತದೆ. ಪಕ್ಷಾತೀತವಾಗಿ ಮಾತಾಡುವ ಜೀವಗಳೇ ನಮ್ಮ ಕಣ್ಣೆದುರು ಹೆಚ್ಚಾಗಿ ಕಾಣಿಸುತ್ತಿಲ್ಲ.

ಈ ಸಂದಿಗ್ಧದ ಹೊತ್ತಿನಲ್ಲಿ ನನ್ನಂತಹ ಕತೆಗಾರನ ಸ್ಥಿತಿ ಬಹಳ ಕಷ್ಟಕರವಾಗಿದೆ. ಕಥನಕ್ರಿಯೆ ಮೌನದಲ್ಲಿ ನಡೆವ ಸಂಗತಿ. ನಾವು ಮಾತಿನ ಚಟಕ್ಕೆ ಸಿಕ್ಕುಬಿದ್ದರೆ ತೀರಿತು, ಕಥನ ಮುನಿಯುತ್ತದೆ. ಕತೆಗಾರ ಒಂದು ರೀತಿಯಲ್ಲಿ ಜಗತ್ತಿನ ಸಾಕ್ಷಿಪ್ರಜ್ಞೆ, ಸುತ್ತಲಿನ ಎಲ್ಲ ಸಂಗತಿಗಳನ್ನೂ ಪೂರ್ವಾಗ್ರಹವಿಲ್ಲದೆ ಮೌನದಲ್ಲಿ ಗಮನಿಸುತ್ತಿರಬೇಕಾಗುತ್ತದೆ. ಅನಂತರ ಅದರ ಪರಿಣಾಮದಿಂದಾಗಿ ಕತೆ–ಕವನ–ಕಾದಂಬರಿಗಳು ಮೂಡಬೇಕು. ಅದಕ್ಕೆ ಬದಲು ಅವನೇ ಚಳುವಳಿಗಾರನಾಗಿ ವ್ಯವಸ್ಥೆ ಸರಿಪಡಿಸಲು ನಿಂತುಬಿಟ್ಟರೆ, ಕತೆ ಅವನಿಂದ ದೂರ ಹೋಗುತ್ತದೆ. ಹಿಂದೊಮ್ಮೆ ಕಾದಂಬರಿಕಾರ ಭೈರಪ್ಪನವರು ಅಣ್ಣಾ ಹಜಾರೆಯವರನ್ನು ಮಾತಾಡಿಸಿ, ಅವರ ಉಪವಾಸ ಸತ್ಯಾಗ್ರಹಕ್ಕೆ ತಮ್ಮ ಬೆಂಬಲವನ್ನು ಸೂಚಿಸಲು ಹೋಗಿದ್ದರು. ಆಗ ಪತ್ರಕರ್ತನೊಬ್ಬ "ನೀವೂ ಏಕೆ ಅಣ್ಣಾ ಹಜಾರೆಯವರಂತೆ ಚಳುವಳಿ ಮಾಡಬಾರದು?" ಎಂದು ಪ್ರಶ್ನಿಸಿದ್ದ. ಅದಕ್ಕವರು "ನಾನು ಚಳುವಳಿ ಮಾಡುತ್ತಾ ಕುಳಿತರೆ, ಅಣ್ಣಾ ಹಜಾರೆಯವರು ಕನ್ನಡ ಕಾದಂಬರಿ ಬರೀತಾರೇನ್ರಿ?" ಎಂದು ಸಿಡುಕಿ ಕೇಳಿದ್ದರು. ಇದು ಎಲ್ಲಾ ಸೃಜನಶೀಲ ಲೇಖಕರು ಕೇಳಿಕೊಳ್ಳಬೇಕಾದ ಪ್ರಶ್ನೆ.

ಚಳುವಳಿಗಾರ ಮತ್ತು ಸೃಜನಶೀಲ ಸಾಹಿತಿ – ಇಬ್ಬರೂ ಸಮಾಜಕ್ಕೆ ಬಹುಮುಖ್ಯ ಕಾಣಿಕೆಯನ್ನು ಕೊಡುತ್ತಾರೆ. ಆರೋಗ್ಯಕರ ಸಮಾಜಕ್ಕೆ ಇಬ್ಬರೂ ಅವಶ್ಯಕವಾಗಿದ್ದಾರೆ. ಆದರೆ ನಾವು ಇವರಿಬ್ಬರಲ್ಲಿ ತಾರತಮ್ಯ ಮಾಡಿ ಯಾರು ಹೆಚ್ಚು ಮುಖ್ಯ ಎಂದು ನಿರ್ಧರಿಸಲು ಹೊರಟರೆ ಸಮಸ್ಯೆಯಾಗುತ್ತದೆ. ಅವರಿಬ್ಬರೂ ನಡೆಯುವ ಮಾರ್ಗಗಳು ಬೇರೆಯೇ ಆಗಿರುತ್ತವೆ. ಇಬ್ಬರೂ ಒಬ್ಬರ ಮೇಲೊಬ್ಬರು ಗೌರವ ಇಟ್ಟುಕೊಂಡು ಬದುಕಬೇಕಾಗುತ್ತದೆ. ಚಳುವಳಿಗಾರನೊಬ್ಬ ತನ್ನ ಸಾಧನೆಗೆ ಬರವಣಿಗೆಯನ್ನು ಆಯುಧವಾಗಿ ಬಳಸಿಕೊಳ್ಳಬಹುದು. ಅದೇ ರೀತಿ ಸಾಹಿತಿಯೊಬ್ಬ ತನ್ನ ಪುಸ್ತಕಗಳ ಮೂಲಕ

ಬದಲಾವಣೆಯ ಬೀಜಗಳನ್ನು ಬಿತ್ತಬಹುದು. ಆದರೆ ಇಬ್ಬರ ಬದುಕಿನ ಪಥ, ಚಲನೆಯ ಗತಿ ಬೇರೆಯೇ ಆಗಿರುತ್ತವೆ.

* * *

ಬದಲಾವಣೆಯ ಅಗ್ನಿದಿವ್ಯವೇ ಮನುಷ್ಯನೊಬ್ಬ ವಲಸೆ ಹೋಗುವ ಕ್ರಿಯೆಯಾಗಿದೆ. ತಾನು ಹುಟ್ಟಿ ಬೆಳೆದ ನೆಲವನ್ನು ಬಿಟ್ಟು, ಮತ್ತೊಂದೆಡೆ ಬದುಕಿಗಾಗಿ ಹೋಗುವ ಪರಿ ಅನನ್ಯವಾದದ್ದು. ಇತಿಹಾಸದುದ್ದಕ್ಕೂ ಈ ಪ್ರಕ್ರಿಯೆ ನಿರಂತರವಾಗಿ ನಡೆದಿದೆ. ತನ್ನದಲ್ಲದ್ದನ್ನು ಒಪ್ಪಿಕೊಳ್ಳಲು ತೆರೆದ ಮನಸ್ಸು ಇರಬೇಕಾಗುತ್ತದೆ. ಯಾವುದೇ ಸಿನಿಕತನ, ಆತ್ಮಪ್ರಶಂಸೆಯಲ್ಲಿದ್ದವರು ವಲಸೆಯಂತಹ ಕಷ್ಟದ ಕೆಲಸವನ್ನು ಮಾಡಲಾರರು. ನಮ್ಮೂರಿನ ಶ್ರೇಷ್ಠತೆಯ ಮಾನದಂಡವನ್ನೆಲ್ಲಾ ಹಿನ್ನೆಲೆಗೆ ಸರಿಸಿ, ಮತ್ತೆ ಹೊಸ ಪ್ರಮಾಣಗಳನ್ನು ಕಲಿತು ಬದುಕು ಪ್ರಾರಂಭಿಸಬೇಕಾಗುತ್ತದೆ. ನಮ್ಮ ಶಕ್ತಿ ಮತ್ತು ದೌರ್ಬಲ್ಯಗಳೆರಡೂ ತಿಳಿಯುವುದು ಈ ಗಳಿಗೆಯಲ್ಲಿಯೇ! ಇಲ್ಲಿ ಗೆದ್ದವನು ಎಲ್ಲಿಯೂ ಗೆಲ್ಲಬಲ್ಲ. ಈ ನಿಟ್ಟಿನಲ್ಲಿ ಭಾರತದಿಂದ ವಲಸೆ ಬಂದು ಈ ದೂರದ ಅಮೆರಿಕಾದಲ್ಲಿ ಸುಂದರವಾದ ಬದುಕನ್ನು ಕಟ್ಟಿಕೊಂಡ ನೀವೆಲ್ಲರೂ ನನಗೆ ಅಗ್ನಿದಿವ್ಯದಲ್ಲಿ ಜಯಗಳಿಸಿದವರಾಗಿಯೇ ಕಾಣುತ್ತಿರುವಿರಿ.

ಹಿಂದಿನ ಕನ್ನಡ ಸಾಹಿತ್ಯ ರಂಗದ ಸಮ್ಮೇಳನದಲ್ಲಿ ಬರಗೂರು ರಾಮಚಂದ್ರಪ್ಪನವರು "ಭಾರತ ನಿಮ್ಮ ಚರಿತ್ರೆ, ಅಮೆರಿಕಾ ನಿಮ್ಮ ವರ್ತಮಾನ" ಎಂದು ಹೇಳಿದ್ದಾರೆ. ಆದರೆ ನನಗೆ ನೀವು ಭಾರತವನ್ನೂ ನಿಮ್ಮ ವರ್ತಮಾನದಲ್ಲಿ ಸೇರಿಸಿಕೊಂಡಿರುವಂತೆಯೇ ಭಾಸವಾಗುತ್ತದೆ. ಅದಿಲ್ಲದಿದ್ದರೆ ತಾಯ್ನುಡಿಯ ಇಂತಹ ಮುಖ್ಯ ಸಮಾರಂಭ ನಡೆಸುವ ಶಕ್ತಿ ಇರುತ್ತಿರಲಿಲ್ಲ. ಇದೊಂದು ರೀತಿಯಲ್ಲಿ ಗರ್ಭಿಣಿ ಹೆಣ್ಣುಮಗಳು ತನ್ನ ಮೊದಲ ಮಗುವನ್ನು ಸೊಂಟದಲ್ಲಿ ಇಟ್ಟುಕೊಂಡು ನಡೆಯುತ್ತಿರುವಂತೆ ನನಗೆ ಕಾಣುತ್ತದೆ. ಸೊಂಟದ ಮೇಲಿನ ಭಾರತವೂ ಮುಖ್ಯ, ಉದರ ಸೇರಿದ ಅಮೆರಿಕಾವೂ ಮುಖ್ಯ. ಎರಡನ್ನೂ ಸಂಭಾಳಿಸಿಕೊಂಡು ಮುನ್ನಡೆಯುವ ನಿಮಗೆಲ್ಲರಿಗೂ ಅಭಿನಂದನೆಗಳನ್ನು ಅರ್ಪಿಸುತ್ತೇನೆ.

೨೬ನೆಯ ಜನವರಿ ೨೦೧೯

ಐ-೦೦೪, ಮಂತ್ರಿ ಪ್ಯಾರಡೈಸ್
ಬನ್ನೇರುಘಟ್ಟ ರಸ್ತೆ
ಬೆಂಗಳೂರು – ೫೬೦೦೭೬
ದೂ. ೯೮೪೪೪ ೨೨೭೮೨

# ಬದುಕು – ಬದಲಾವಣೆ – ವಲಸೆ ಜೀವನ

■ **ಆಹಿತಾನಲ (ನಾಗ ಐತಾಳ),** Arcadia, CA.

**ಸರ್ವಸಾಮಾನ್ಯ ಬದುಕಿನಲ್ಲಿ ಬದಲಾವಣೆಗಳಾಗುತ್ತಲೇ ಅದಕ್ಕೆ ನವಚೈತನ್ಯ ತುಂಬುತ್ತವೆ:**

'ಬದಲಾವಣೆ' ನಮ್ಮ ಬದುಕಿಗೆ ಅಂಟಿಕೊಂಡು ಬಂದ ಒಂದು ವಿದ್ಯಮಾನ. ಅದು ಜೀವನದ ನೀರಸತೆಯನ್ನು ಹೋಗಲಾಡಿಸುತ್ತದೆ. ಬಸವಣ್ಣನವರು ಈ ಹಿಂದೆಯೇ ಹೇಳಿದ್ದರು: 'ಸ್ಥಾವರಕ್ಕಳಿವುಂಟು; ಜಂಗಮಕ್ಕಳಿವಿಲ್ಲ' ಎಂದು. ಇಲ್ಲಿ 'ಸ್ಥಾವರ'ವೆಂದರೆ, ಬದಲಾಗದೆ ನಿಂತಲ್ಲಿಯೇ ನಿಂತ ಸಮಾಜದ ವ್ಯವಸ್ಥೆ ಎಂದೂ, 'ಜಂಗಮ'ವನ್ನು 'ಬದಲಾವಣೆ' ಎಂದೂ ವ್ಯಾಖ್ಯಾನಿಸಿದಲ್ಲಿ, ಸಮಾಜದ ಮೇಲೆ ಬಸವಣ್ಣನವರ ಈ ವಚನದ ಮಹತ್ವದ ಪರಿಣಾಮ ವ್ಯಕ್ತವಾಗುತ್ತದೆ. ಕಾಲನ ಮುಂದೋಟದಲ್ಲಿ, ನೂತನ 'ಮಾರ್ಗ'ಗಳು ಅನಾವರಣವಾಗುತ್ತಿರುತ್ತವೆ. ಕಾಲ ತೋರಿಸಿದ ಇಂತಹ 'ಬದಲಾವಣೆ'ಗಳನ್ನು ಅನುಸರಿಸಿದರೆ, ಬಾಳು ಚಿರನೂತನವಾಗುತ್ತದೆ. ಪ್ರಕೃತಿ, ಕಾಲನ ಜೊತೆ ಹೊಂದಾಣಿಕೆ ಮಾಡಿಕೊಂಡೇ ಸಾಗುತ್ತದೆ. ಹಗಲು–ರಾತ್ರಿ ಎಂಬ ದಿನ ಚಕ್ರ, ವಿವಿಧ ಋತುಮಾನಗಳ ಬದಲಾವಣೆ, ಎಲ್ಲವೂ ಕಾಲನ ಕೈವಾಡದ ಪರಿಣಾಮಗಳೇ! ಬೇಂದ್ರೆಯವರ 'ಯುಗಾದಿ' ಕವನದ ತುಣುಕೊಂದನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು. ಅವರು ಯುಗಾದಿ ತಂದ ಬದಲಾವಣೆಗಳನ್ನು ಸ್ಮರಿಸುತ್ತ, '...ಹೊಸ ವರುಷಕೆ ಹೊಸ ಹರುಷವ ಹೊಸತು ಹೊಸತು ತರುತಿದೆ...' ಎಂದು ಹೇಳಿದ್ದಾರೆ. ಹೀಗೆ, ಹೊಸ ವರ್ಷಕ್ಕೆ 'ಹೊಸತು ಹೊಸತು' ಹರ್ಷ ತಂದಾಗ, ನಮ್ಮ ಬಾಳಿಗೆ 'ಹೊಸ ನೆಲೆ' ಸಿಗುತ್ತದೆ. ಈ ಹೊಸ ನೆಲೆಯೇ ಬಾಳಮೇಲಿನ ಕುತೂಹಲವನ್ನು ಕೆರಳಿಸಿ, ಅದನ್ನು ಚಿರ ನೂತನವಾಗಿರುವಂತೆ ಬದಲಿಸುತ್ತದೆ.

ಬದಲಾವಣೆಗಳಿಂದ ಗಮನಿಸಬೇಕಾದ ಒಂದು ಮುಖ್ಯ ಅಂಶವೆಂದರೆ, 'ಹೊಂದಾಣಿಕೆ' ಎಂಬ ಮನೋವೃತ್ತಿ ಬೆಳೆದುಬಂದುದು. ಅದು ನಮ್ಮಲ್ಲಾಗುವ ಒಂದು ಮಹತ್ತ್ವದ ಮಾರ್ಪಾಟು! ನಮ್ಮ ಭಾರತೀಯ ಸಂಪ್ರದಾಯಗಳನ್ನು ಉಳಿಸಿಕೊಂಡೇ, ಅಮೆರಿಕದ ಸಂಸ್ಕೃತಿಯೊಡನೆ ಬೆರೆಯುವ, ಅದನ್ನು ಗೌರವಿಸುವ, ಹಾಗೂ ಅದರೊಡನೆ

ಹೊಂದಾಣಿಕೆ ಮಾಡಿಕೊಳ್ಳುವ ಮನೋಭಾವ ನಮ್ಮಲ್ಲಿ ಮೂಡಿ ಬಂದುದು, ಎಲ್ಲಕ್ಕಿಂತಲೂ ಮುಖ್ಯವಾದ ಬದಲಾವಣೆ ಎಂಬ ಅನಿಸಿಕೆ ನನ್ನದು. ನಾವು ವಲಸೆ ಬಂದುದರ ಪರಿಣಾಮವಾಗಿ, ಅಮೆರಿಕ ನಮ್ಮನ್ನು ಬೇರೆಯೇ ಸಂಸ್ಕೃತಿಗೆ expose ಮಾಡಿದೆ. ಈ ಬದಲಾವಣೆ ಒಳ್ಳೆಯದನ್ನೇ ಮಾಡಿದೆ ಎಂದೇ ನಂಬಿದ್ದೇನೆ. ಸಮಾಜಶಾಸ್ತ್ರದಲ್ಲಿ ನುರಿತ ತಜ್ಞರು ಈ ರೀತಿಯ ಬೆರೆಯುವಿಕೆಯನ್ನು melting potನಲ್ಲಿ ಬೆರೆಯುವುದು ಎಂದು ಹೇಳುತ್ತಾರೆ. ಆದರೆ, ಈ ರೀತಿ melting potನಲ್ಲಿ ಬೆರೆಯುವುದೆಂದರೆ, ನಮ್ಮ ಸ್ವಂತಿಕೆಯನ್ನು ಕಳೆದುಕೊಳ್ಳುವ ಸಂದರ್ಭ ಸೃಷ್ಟಿಸುತ್ತದೆ ಎಂದು ನನ್ನ ಅಭಿಪ್ರಾಯ. ಬದಲಿಗೆ ಒಂದು fruit bowlನಲ್ಲಿ ಬೆರೆಯುವುದು ಎಂದು ಹೇಳುವುದೇ ಸೂಕ್ತ. ಯಾಕೆಂದರೆ, ಆ fruit bowlನಲ್ಲಿ ಹಲವು ಹಣ್ಣುಗಳು ಮಿಶ್ರವಾಗಿದ್ದು, ಪ್ರತಿ ಹಣ್ಣಿನ ತುಣುಕೂ ತನ್ನ ಮೂಲ ರುಚಿ ಮತ್ತು ಸ್ವಭಾವಗಳನ್ನು ಕಳೆದುಕೊಳ್ಳದೇ ತನ್ನ ಸ್ವಂತಿಕೆಯನ್ನು ಉಳಿಸಿಕೊಳ್ಳುತ್ತದೆ. ಆದರೆ, ಇತರ ಹಣ್ಣುಗಳೊಡನೆ ಬೆರೆತು ಬೇರೆಯೇ ರುಚಿಯನ್ನು ಪಡೆಯುತ್ತದೆ. ಹಾಗೆಯೇ, ನಮ್ಮ ಭಾರತೀಯ ಮೌಲ್ಯಗಳನ್ನು ಉಳಿಸಿಕೊಂಡೇ, ಇಲ್ಲಿಯ ಮೌಲ್ಯಗಳನ್ನೂ ಗೌರವಿಸಿ ಬೆರೆಯುವುದು ಒಂದು ಅನನ್ಯ ಅನುಭವ. ಅದು ಅಮೆರಿಕಕ್ಕೆ ವಲಸೆ ಬಂದುದರ ಪರಿಣಾಮವಾಗಿ ಪಡೆದ ವಿಶಿಷ್ಟ ಅನುಭವ.

'ಕಾಲ'ನ ಮೂಲ ತಿಳಿದವರಿಲ್ಲ; ಆದಿ–ಅಂತ್ಯವಿಲ್ಲ. ಇಂಗ್ಲಿಷಿನಲ್ಲಿ infinity ಎಂದು ಹೇಳುವಂತೆ ಅದು ಅನಂತವಾದುದು! ಅಂದರೆ, 'ಅನಂತ' ಮತ್ತು 'ಕಾಲ' ಇವೆರಡೂ ಪರ್ಯಾಯ ಶಬ್ದಗಳೆಂದು ಹೇಳಬಹುದೇನೋ! ಹೀಗಿದ್ದರೂ 'ಕಾಲ'ದಲ್ಲಿ ವೈವಿಧ್ಯ ಅಡಗಿದೆ. ಇಲ್ಲದಿದ್ದಲ್ಲಿ ಬದುಕು ವಿವಿಧತೆ ಇಲ್ಲದೆ ನೀರಸವಾಗಿರುತ್ತಿತ್ತು. ಆದರೆ, ಬದುಕು ಉತ್ಸಾಹಭರಿತವಾದುದು! ಬದುಕು 'ಜೀವಂತ'ವಾಗಿರಲು, ಉತ್ಸಾಹಪೂರಿತವಾಗಿರಲು, ವೈವಿಧ್ಯ ಅಗತ್ಯ. ಆಂಗ್ಲ ಕವಿ ಟೆನಿಸನ್‌ನ ನುಡಿಯೊಂದನ್ನು ಈ ನಿಟ್ಟಿನಲ್ಲಿ ಜ್ಞಾಪಿಸಿಕೊಳ್ಳಬಹುದು: 'Old order changeth yielding place new; God fulfills himself in many ways lest one good custom should corrupt the world.' ಅಂದರೆ, ಬದಲಾವಣೆಗಳೇ ಬದುಕಿಗೆ ಜೀವಕಳೆ ತುಂಬುತ್ತವೆ. ಇಲ್ಲಿ, 'God' ಎಂಬ ಶಬ್ದ ಗಮನಾರ್ಹವಾದುದು. ನಾನು ಅದಕ್ಕೆ 'ಕಾಲ'ವೆಂದೇ ಅರ್ಥೈಸಬಯಸುತ್ತೇನೆ. ಆಗ ಮೇಲಿನ ಉಲ್ಲೇಖವನ್ನು – ಕಾಲನ ಮಹಿಮೆಯಿಂದ ಸರ್ವಸಾಮಾನ್ಯ ಬದುಕಿನಲ್ಲಿ ಆಗಾಗ ಬದಲಾವಣೆಯಾಗುತ್ತ, ಬದುಕನ್ನು ನೀರಸತೆಯಿಂದ ಪಾರುಮಾಡುತ್ತದೆ – ಎಂದು ವ್ಯಾಖ್ಯಾನಿಸಬಹುದು. ಇಲ್ಲದಿದ್ದಲ್ಲಿ ಬಾಳು ನಿಂತಲ್ಲೆ ನಿಂತ ಕೊಳಚೆ ನೀರಿನಂತೆ ತನ್ನ ಹರಿಯುವ ಕ್ರಿಯಾಶೀಲತೆಯನ್ನು ಕಳೆದುಕೊಂಡು, ಜಡವಾಗುತ್ತದೆ. ಯಾವುದೇ ವ್ಯವಸ್ಥೆ ಎಷ್ಟೇ ಆದರ್ಶವಾಗಿದ್ದರೂ, ಬಹಳ ಸಮಯ ಬದಲಾಗದೇ ಉಳಿದಲ್ಲಿ ಕಾಲ ಕಳೆದಂತೆ corrupt (ಭ್ರಷ್ಟ) ಆಗುವ ಸಾಧ್ಯತೆಯನ್ನು ಕಲ್ಪಿಸುತ್ತದೆ. ಪಾಯಸ ಅಥವಾ ಇನ್ನಿತರ ಪ್ರಿಯವಾದ ಭಕ್ಷ್ಯಗಳನ್ನು ದಿನವೂ ತಿನ್ನುತ್ತಿದ್ದರೆ, ಅವುಗಳ ಮೇಲಿನ ಆಸಕ್ತಿಯನ್ನೇ

ಕಳೆದುಕೊಂಡಂತೆ, ಯಾವುದೇ ಕಟ್ಟಳೆ/ಸಂಪ್ರದಾಯ, ಎಷ್ಟೇ ಉಪಯುಕ್ತವಾಗಿರಲಿ, ಬಹುಕಾಲ ಮುಂದುವರಿಯುತ್ತ ಬಂದಲ್ಲಿ, ಸಮಾಜ ತನ್ನ ಚುರುಕುತನವನ್ನು ಕಳೆದುಕೊಳ್ಳುತ್ತದೆ. ಹೀಗೆ 'ಬದಲಾವಣೆ' ನಮ್ಮ ಬದುಕನ್ನು ಜಡತ್ವದಿಂದ ಪಾರುಮಾಡಿ, ಚುರುಕುಗೊಳಿಸಿ, ಹೊಸ ದಿಕ್ಕಿನಲ್ಲಿ ಸಾಗಲು ದಾರಿ ಮಾಡಿ, ಹೊಸ ಉತ್ಸಾಹ ತುಂಬಲು ಕಾರಣವಾಗುತ್ತದೆ.

ತಲೆಮಾರಿನಿಂದ ತಲೆಮಾರಿಗೆ ಜೀವನಕ್ರಮ, ಸಂಪ್ರದಾಯ, ನಂಬಿಕೆಗಳು ಬದಲಾಗುತ್ತಲೇ ಇರುತ್ತವೆ. ನಮ್ಮ ಅಜ್ಜ–ತಾತಂದಿರ ತಲೆಮಾರಿನ ಜೀವನಕ್ರಮಗಳನ್ನು ನಮ್ಮದರೊಡನೆ ಹೋಲಿಸಿದಾಗ, ಅಜಗಜಾಂತರವನ್ನು ಗಮನಿಸಬಹುದು. ನಮ್ಮ ತಲೆಮಾರಿನವರಿಗೆ, ಹಿಂದಿನ ತಲೆಮಾರಿನ ಕ್ರಮಗಳು out of date ಎಂದೆನಿಸಿದರೆ ಆಶ್ಚರ್ಯವಿಲ್ಲ. ಹಾಗೆಯೇ ನಮ್ಮ ಮುಂದಿನ ತಲೆಮಾರಿನವರು ನಮ್ಮದನ್ನು out of date ಎಂದೆಣಿಸಿದರೂ ಆಶ್ಚರ್ಯವಿಲ್ಲ. ಕಾಲ ಕಳೆದಂತೆ ಬದಲಾವಣೆ ತೋರುವುದು, ಹಿಂದೆ ತಿಳಿಸಿದಂತೆ, ಸ್ವಾಭಾವಿಕ. ಇಲ್ಲಿ ಗಮನಿಸಬೇಕಾದ ವಿಷಯವೆಂದರೆ, ತಲೆಮಾರಿಂದ ತಲೆಮಾರಿಗೆ ಕಾಲ ಬದಲಾವಣೆ ತಂದು, ಬದುಕಿನ ಕ್ರಮಗಳನ್ನು ಬದಲಿಸಿ, ಅದಕ್ಕೆ ನವ ಚೈತನ್ಯವನ್ನು ಕೊಡುತ್ತದೆ – ಎಂಬುದು. ಅಂದರೆ, ಹೊಸ ತಲೆಮಾರು ನಮ್ಮ ಬದುಕಿಗೆ ಹೊಸ ಹೊಸ ಶಕ್ತಿ ಕೊಟ್ಟು ಬದುಕು ಸಾಗುವ ದಿಕ್ಕನ್ನೇ ಬದಲಿಸುತ್ತದೆ. ಬೇಂದ್ರೆಯವರ ಕವನದ, '...ಹೊಸ ವರುಷಕೆ ಹೊಸ ಹರುಷವ ಹೊಸತು ಹೊಸತು ತರುತಿದೆ...' ಸಾಲನ್ನು ಇಲ್ಲಿ ಪುನಃ ನೆನೆಯಬಹುದು.

**ವಲಸೆ ತಂದ ಬದಲಾವಣೆ :**

ಈ ನನ್ನ ಲೇಖನದಲ್ಲಿ, ನಾನು ಅಮೆರಿಕಕ್ಕೆ ವಲಸೆ ಬಂದು, ನನ್ನಲ್ಲಾದ ಕೆಲವು ಬದಲಾವಣೆಗಳನ್ನು ನಿಮ್ಮೊಡನೆ ಸಂಕ್ಷಿಪ್ತವಾಗಿ ಹಂಚಿಕೊಳ್ಳಬಯಸುತ್ತೇನೆ. ಕಳೆದ ಶತಮಾನದ ೬೦ರ ದಶಕದಲ್ಲಿ ನಾನು ಅಮೆರಿಕಕ್ಕೆ ವಲಸೆ ಬಂದೆ. ಹಾಗೆ ಮಾಡುತ್ತ ನಾನು ಬೆಳೆದು ಬಂದ ಕನ್ನಡ ಪರಿಸರದಿಂದ, ನನ್ನ ಅನೇಕ ಸ್ನೇಹಿತರು ಮತ್ತು ಬಂಧುಗಳಿಂದಲೂ, ಭಾರತೀಯ ಸಂಸ್ಕೃತಿಯಿಂದಲೂ ದೂರ ಸರಿದೆ ಎಂಬ ಭಾವನೆ ನನ್ನಲ್ಲಿ ಮೂಡಿ ಬಂದಿತ್ತು. ಬಂದ ಮೊದಲ ದಿನಗಳಲ್ಲಿ ಕೈಗೊಂಡ ಈ ಕಾರ್ಯ ನನ್ನನ್ನು ಕಾಡುತ್ತಿದ್ದು, ನನ್ನಲ್ಲೇ ಒಂದು ಪಾಪಪ್ರಜ್ಞೆ ಮೂಡಿಸಿತ್ತು. ಇದಕ್ಕೆ ಪ್ರಾಯಶಃ ನಮ್ಮ ಮೌಲ್ಯಗಳಿಗೂ, ಬಂದು ಸೇರಿದ ಅಮೆರಿಕನ್ ಮೌಲ್ಯಗಳಿಗೂ ವ್ಯತ್ಯಾಸವಿರುವುದೇ ಕಾರಣವಿರಬೇಕು. ಆದರೆ, ನಮ್ಮ ಮಕ್ಕಳಿಗೆ (ನಮಗಿಂತ ಮುಂದಿನ ಪೀಳಿಗೆ) ಅಂಥ ಬದಲಾವಣೆಗಳು ಅಷ್ಟೊಂದು ಸಮಸ್ಯೆಯಾಗಿರಲಿಲ್ಲ. ಅವರ ಬದಲಾದ ಈ ಧೋರಣೆ ನಮ್ಮಲ್ಲಿನ ಘರ್ಷಣೆಯನ್ನು ಇನ್ನಷ್ಟು ಹೆಚ್ಚಿಸಿತ್ತು. ಇಲ್ಲಿ ಪ್ರಾಯಶಃ ನಾವು ಎಣಿಸಿದ ಬದಲಾವಣೆ ನಮ್ಮ ಮುಂದಿನ ಪೀಳಿಗೆಯವರಿಗೆ ಘರ್ಷಣೆಯಾಗಿಯೇ ಇರಲಿಲ್ಲವೆಂದು ಕಾಣಿಸುತ್ತದೆ. ಕಾಲ ಕಳೆದಂತೆ, ನಮ್ಮ ಮಕ್ಕಳಲ್ಲಿ ಆದ ಬದಲಾವಣೆಗಳನ್ನು ನಾವೂ ಒಪ್ಪಿಕೊಳ್ಳುವ

ಮನೋಧರ್ಮವನ್ನು ತಾಳಿದೆವು. ಈ ರೀತಿ ಅಮೆರಿಕದ ಸಂಸ್ಕೃತಿಯೊಡನೆ ಹೊಂದಾಣಿಕೆ ಮಾಡಿಕೊಳ್ಳುವ ಪ್ರಜ್ಞೆ ನಮ್ಮಲ್ಲಿ ಮೂಡಿ ಬಂದು, ನಮ್ಮ ಮನಸ್ಸಿನ ತಿಕ್ಕಾಟಗಳನ್ನು ಸಾಕಷ್ಟು ಶಮನಗೊಳಿಸಿತು.

ನಾನು ಹುಟ್ಟಿದುದು ಕರ್ನಾಟಕದ ಉಡುಪಿ ಜಿಲ್ಲೆಯ ಕರಾವಳಿಯ ಕೋಟದ ಅಂಗವಾದ ಹರ್ತಟ್ಟು (ಗಿಳಿಯಾರು) ಎಂಬ ಹಳ್ಳಿಯಲ್ಲಿ. ಅಲ್ಲಿ ನನ್ನ ಬಾಲ್ಯವನ್ನು ಪ್ರಾಥಮಿಕ ವಿದ್ಯಾಭ್ಯಾಸ ಮುಗಿಯುವವರೆಗೆ ಕಳೆದೆ. ಅದೊಂದು ಅವಿಸ್ಮರಣೀಯ ಅನುಭವ! ಬದುಕಿನ ಆ ಹಂತವನ್ನು ನೆನೆಸಿದಷ್ಟೂ ನನ್ನ ಮನಸ್ಸು ತುಂಬಿ ಬರುತ್ತದೆ. ಎಲ್ಲರಿಗೂ ಒಂದೇ ಬಾಲ್ಯ – ಎಂಬ ಅರಿವಿದ್ದರೂ, ಆ ನನ್ನ ಬಾಲ್ಯದ ಬದುಕು ಪುನಃ ಮರಳಿ ಬರಬಾರದೇ ಎಂದು ಇಂದಿಗೂ ಹಂಬಲಿಸುತ್ತಲೇ ಇದ್ದೇನೆ. ಆ ಕಾಲದಲ್ಲಿ ನನ್ನ ಅನುಭವ ಭಂಡಾರ ಹೆಚ್ಚಲು ಬುನಾದಿ ಹಾಕಿದವರು ನನ್ನ ತಾಯಿ–ತಂದೆಯರು, ವಿದ್ಯೆ ಹೇಳಿಕೊಟ್ಟ ನನ್ನ ಗುರುಗಳು, ನನ್ನ ಹಲವಾರು ಗೆಳೆಯರು, ಅಂದಿನ ನಮ್ಮ ಹಳ್ಳಿಯ ಬಂಧುಗಳು, ಅಂದಿನ ಸಮಾಜದ ಸಂಪ್ರದಾಯಗಳು. ಆ ಅನುಭವಗಳಿಗೆ ಕಾರಣರಾದ ಎಲ್ಲರಿಗೂ ನನ್ನ ತುಂಬು ಹೃದಯದ ಕೃತಜ್ಞತೆಗಳನ್ನು ಸಲ್ಲಿಸಲು ತುಂಬಾ ಹೆಮ್ಮೆಯಾಗುತ್ತಿದೆ!

ಮುಂದೆ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ (ಹೈಸ್ಕೂಲು, ಕಾಲೇಜು) ಹಳ್ಳಿಯಿಂದ ಬೆಂಗಳೂರಿಗೆ ಬಂದೆ. ಅಂದಿನ ಬೆಂಗಳೂರಿನ ನಾಗರಿಕತೆ, ಹಳ್ಳಿಯಲ್ಲಿ ಬೆಳೆದ ನನ್ನನ್ನು ದಿಗ್ಭ್ರಮೆಗೊಳಿಸಿತ್ತು. ಆದರೆ, ಕ್ರಮೇಣ ಬೆಂಗಳೂರಿನ ಬದುಕಿಗೆ ಹೊಂದಿಕೊಳ್ಳಲು ಸಾಧ್ಯವಾಗಿತ್ತು. ಅಲ್ಲಿ ಹಲವಾರು ಸ್ನೇಹಿತರ, ಗುರುಗಳ ಒಡನಾಟದ ಅನುಭವ ನನಗೆ ಬಹಳಷ್ಟು ಹಿತ ನೀಡಿತ್ತು. ಹೈಸ್ಕೂಲು ಮುಗಿಸಿ, ಬೆಂಗಳೂರಿನ ಸೈಂಟ್ ಜೋಸೆಫ್ಸ್ ಕಾಲೇಜಿನಲ್ಲಿ ವಿದ್ಯಾಭ್ಯಾಸ ಮುಂದುವರಿಸಿದೆ. B. Sc. ಡಿಗ್ರಿ ಪಡೆದಮೇಲೆ, ಬನಾರಸ್‌ನಲ್ಲಿ (Benaras Hindu University) ಮೂರು ವರ್ಷ ಕಳೆದು, B. Pharm. ಡಿಗ್ರಿ ಪಡೆದು, ಪುನಃ ಬೆಂಗಳೂರಿಗೆ ಮರಳಿದೆ. ನಂತರ Indian Institute of Scienceನಲ್ಲಿ ವಿದ್ಯಾಭ್ಯಾಸ ಮುಂದುವರಿಸಿ, M. Sc. (pharmacology) ಮತ್ತು Ph. D. (Biochemistry) ಡಿಗ್ರಿಗಳನ್ನು ಪಡೆದೆ. ಅಲ್ಲಿ ಪಡೆದ ಅನುಭವಗಳನ್ನು ನಾನು ಮರೆಯಲಾರೆ. Indian Institute of Scienceನ ಬಯೋಕೆಮಿಸ್ಟ್ರಿ ಡಿಪಾರ್ಟ್‌ಮೆಂಟ್ ಸೇರಿದುದು ನನ್ನ ವೈಜ್ಞಾನಿಕ ಉದ್ಯೋಗದಲ್ಲಿ ಮಹತ್ತ್ವದ ಬದಲಾವಣೆಗೆ ಕಾರಣವಾಯ್ತು. ಅಲ್ಲಿ ನನ್ನ mentor ಆದ, ಡಾ. ರಾಮಶರ್ಮರನ್ನು ನಾನು ಎಷ್ಟೊಂದು ಅಭಿನಂದಿಸಿದರೂ ಕಡಿಮೆಯೇ! ಅಲ್ಲಿ ಪಡೆದ Ph. D. ಡಿಗ್ರಿಯೇ ನಾನು ಅಮೆರಿಕಕ್ಕೆ ವಲಸೆ ಬರಲು ಕಾರಣ.

ಹೀಗೆ ಹಳ್ಳಿಯೊಂದರಲ್ಲಿ ಹುಟ್ಟಿ, ಪಟ್ಟಣದಲ್ಲಿ ಬೆಳೆದು, ವಲಸೆಯ ಪರಿಣಾಮವಾಗಿ ಅಮೆರಿಕದಲ್ಲಿ ನೆಲೆಸಿ, ಅಲ್ಲಿ ನನ್ನ ವೃತ್ತಿಪರ ಕಾರ್ಯಕ್ಷೇತ್ರಗಳನ್ನು ಅನುಸರಿಸಿಕೊಂಡು ಬಂದ ನನ್ನ ಬದುಕಿನಲ್ಲಿ ಪರಿಣಮಿಸಿದ ಬದಲಾವಣೆಗಳು ಮುಂದೆಲ್ಲಿ ನನ್ನನ್ನು ಕೊಂಡೊಯ್ಯುತ್ತವೆಂಬುದನ್ನು ಕಾದು ನೋಡಬೇಕಷ್ಟೆ!

ಇಲ್ಲಿ, ಭಾರತದಲ್ಲಿನ ನನ್ನ ಬದುಕಿನ ಸಂಕ್ಷಿಪ್ತ ವಿವರಣೆ, ನನ್ನ ಅಮೆರಿಕದ ವಲಸೆ ಜೀವನಕ್ಕೆ ಒಂದು ಬಗೆಯ ಮುನ್ನುಡಿಯೆಂದೇ ನಾನು ತಿಳಿದಿದ್ದೇನೆ.

**ವಲಸೆ ಬರಲು ಕಾರಣ:**

**'ದೋಣಿ ಸಾಗಲಿ, ಮುಂದೆ ಹೋಗಲಿ**
**ದೂರ ತೀರವ ಸೇರಲಿ**
**ಬೀಸು ಗಾಳಿಗೆ ಬೀಳುತೇಳುವ**
**ತೆರೆಯ ಮೇಗಡೆ ಹಾರಲಿ...'**

ಕುವೆಂಪು ಅವರ ಈ ಕವನದ ಸಾಲುಗಳು ನನ್ನ (ಹಾಗೂ ನಮ್ಮೆಲ್ಲರ) ವಲಸೆ ಜೀವನದ ಮೇಲೆ ಒಂದಲ್ಲ ಒಂದು ರೀತಿಯಲ್ಲಿ ಬೆಳಕು ಚೆಲ್ಲುತ್ತದೆ ಎಂದೇ ನನ್ನ ಅನಿಸಿಕೆ. 'ವಲಸೆ' ಎಂಬ ವಿದ್ಯಮಾನ ಮಾನವನ ಚಲನಶೀಲತೆಯನ್ನು ವ್ಯಕ್ತಪಡಿಸುತ್ತದೆ. ಮಾನವ, ಕುಂತಲ್ಲೆ ಕುಳಿತಿರಲಾರ, ನಿಂತಲ್ಲೆ ನಿಂತಿರಲಾರ! ನಮಗೆ ತಿಳಿಯದಂತೆ ಅದ್ಯಾವುದೋ ಪ್ರೇರಣೆ ನಮ್ಮನ್ನು 'ದೂರ ತೀರ'ದ ಅಮೆರಿಕಕ್ಕೆ ಕರೆತಂದಿದೆ. ಬದುಕಿನ ಈ ಪಯಣದಲ್ಲಿ ಹಲವು ಏರಿಳಿತಗಳಿರುವುದರ ಅರಿವು ಮಾನವನಿಗಿದೆ, ಅವುಗಳನ್ನು ಎದುರಿಸುವ ಸ್ಥೈರ್ಯವೂ ಅವನಲ್ಲಿದೆ, ಪಯಣ ಸುಗಮವಾಗಲೆಂಬ ಆಶಯವನ್ನೂ ಅವನು ಹೊತ್ತಿರುತ್ತಾನೆ. ಬಸವಣ್ಣನವರ 'ಸ್ಥಾವರಕ್ಕಳಿವುಂಟು; ಜಂಗಮಕ್ಕಳಿವಿಲ್ಲ' ಎಂಬ ಮಾತನ್ನು ನಿಜಪಡಿಸಲೆಂದೋ ಏನೋ, 'ದೂರ ತೀರ'ದ ಅಮೆರಿಕಕ್ಕೆ, 'ಬೀಸು ಗಾಳಿಗೆ ಬೀಳುತೇಳುವ ತೆರೆಯ' ಮೇಲಿನ ಅನನ್ಯ ಅನುಭವ ಪಡೆಯುತ್ತ, ಕಳೆದ ಶತಮಾನದ ಅರವತ್ತರ ದಶಕದಲ್ಲಿ ನಾನು, ಹೆಂಡತಿ, ಇಬ್ಬರು ಮಕ್ಕಳ ಸಮೇತ ವಲಸೆ ಬಂದೆ. ಬಯೋಕೆಮಿಸ್ಟ್ರಿಯಲ್ಲಿ ಹೆಚ್ಚಿನ ತರಬೇತಿ ಪಡೆಯಲು ನಾನು ವಲಸೆ ಬಂದುದು ಎಂದು ನಾನೀಗ ಹೇಳಿಕೊಳ್ಳುತ್ತಿದ್ದೇನೆ. ಆದರೆ, ದೂರದ ಬೆಟ್ಟ ಕಣ್ಣಿಗೆ ನುಣ್ಣಗೆ, ಅಲ್ಲಿ ಹೊಸ-ಹೊಸ ಅನುಭವಗಳು ನನ್ನ ಬದುಕನ್ನು ಇನ್ನಷ್ಟು ಸಫಲಗೊಳಿಸಬಹುದೆಂಬ ನಿರೀಕ್ಷೆಯೂ ಹಾಗೆ ವಲಸೆ ಬರುವ ತೀರ್ಮಾನಕ್ಕೆ ಕಾರಣವಿದ್ದಿರಲೂಬಹುದೆಂದು ಒಪ್ಪಿಕೊಳ್ಳುತ್ತೇನೆ. ಈ ತೀರ್ಮಾನ, ನನ್ನ ಜೀವನದಲ್ಲಿ ಹಲವಾರು 'ಬದಲಾವಣೆ'ಗಳನ್ನು ತಂದಿದೆ. ಬೇರೆಯೇ ಸಂಸ್ಕೃತಿ, ಮೌಲ್ಯಗಳು ನನ್ನನ್ನು ಮೊದಲಿಗೆ ದಿಗ್ಭ್ರಮೆಗೊಳಿಸಿದ್ದವು! ಈ ರೀತಿಯ ದಿಗ್ಭ್ರಮೆ ನನ್ನಂತೆ ಅರವತ್ತರ ದಶಕದಲ್ಲಿ ಬಂದ ಎಲ್ಲ ವಲಸೆಗಾರರನ್ನೂ ಕಾಡಿರಬಹುದು. ಆದರೆ ಅವುಗಳನ್ನೆಲ್ಲ ಎದುರಿಸಿ, ಇಲ್ಲಿಯ ಸಮಾಜದೊಡನೆ 'ಹೊಂದಾಣಿಕೆ' ಮಾಡಿಕೊಂಡ ನಿಲುವನ್ನು ನಾವು ಗುರುತಿಸಲೇಬೇಕಾದುದು. ನಮ್ಮ ಹಲವು ಜೀವನ ಕ್ರಮಗಳಲ್ಲಿ ದಿನೇ ದಿನೇ ಮಾರ್ಪಾಡಾಗುತ್ತಿದ್ದುದನ್ನೂ ನಾವು ಗಮನಿಸಲೇಬೇಕಾದ ವಿಷಯವೇ! ಇಲ್ಲಿನ ಸಮಾಜದೊಡನೆ ಸಾಕಷ್ಟು ಬೆರೆಯಲು ನಮ್ಮಲ್ಲಾದ ಭಾರತೀಯ ಉಚ್ಚಾರಣೆಯಲ್ಲಿ ಸುಧಾರಣೆ ಹೊಂದಿದುದೂ ಗಮನಾರ್ಹವಾದುದು. ಇಲ್ಲೊಂದು ಚಿಕ್ಕ ಉದಾಹರಣೆ: ನಾನು ಕೆಲಸಕ್ಕೆ ಬಂದು ಸೇರಿದ, USC School of Medicineನ ಬಯೋಕೆಮಿಸ್ಟ್ರಿ

ವಿಭಾಗದ ಪ್ರೊಫೆಸರರ ಸೆಕ್ರೆಟರಿ, Faye ಎಂಬವಳ ಹೆಸರಿನ ಉಚ್ಚಾರಣೆ, 'ಫೇ' ಎಂಬುದು ಗೊತ್ತಿಲ್ಲದೆ, ಅವಳನ್ನು 'ಫಾಯೆ' ಎಂದು ಕರೆದು, ಮುಜುಗರಕ್ಕೆ ಒಳಗಾಗಿದ್ದೆ. ಅಮೆರಿಕನ್ನರೊಡನೆ ನಡೆಸಿದ ಸಂಭಾಷಣೆಗಳಿಂದಾಗಿ ಅಮೆರಿಕದ ಹಲವು ನುಡಿಗಟ್ಟುಗಳನ್ನೂ ಕಲಿತು, ಅವುಗಳನ್ನು ನಮ್ಮ ನಿತ್ಯ ಬದುಕಿನಲ್ಲಿ ಬಳಸಿಕೊಂಡೆವು. ಇದಕ್ಕೊಂದು ಸಣ್ಣ ಉದಾಹರಣೆಯನ್ನು ಕೊಡಲಿಚ್ಛಿಸುತ್ತೇನೆ: ಒಮ್ಮೆ ಶಾಪಿಂಗಿಗೆ ಹೋದಾಗ, ಒಂದು ಡಝನ್ ಡೋನಟ್ (Donut) ಬೆಲೆ ಒಂದು ಡಾಲರ್, ಹತ್ತು ಸೆಂಟ್ಸ್ ($೧.೧೦) ಇದ್ದಿತ್ತು. ಅದರ ಮೇಲೆ ಅಂಟಿಸಿದ್ದ ಬೆಲೆಯ ಚೀಟಿ ಉದುರಿಹೋಗಿದ್ದು, ಅದನ್ನು ಸೇಲ್ಸ್‌ಗರ್ಲ್ ಬಳಿ ತಂದಾಗ ಅವಳು, 'Dollar Ten...' ಎಂದು ಹಣಕ್ಕಾಗಿ ಕೈಚಾಚಿದಾಗ ನನ್ನ ಎದೆ ದಸಕ್ ಎಂದಿತ್ತು. ಕಾರಣ, ಭಾರತದಲ್ಲಿ 'Rupees Ten...' ಎಂದರೆ, ಹತ್ತು ರೂಪಾಯಿಯಲ್ಲವೇ? ಅಂತೆಯೇ 'Dollar Ten...' ಎಂದರೆ ಹತ್ತು ಡಾಲರ್ ಎಂದೆಣಿಸಿದ್ದೆ. ನನ್ನ ಜೇಬಿನಲ್ಲಿದ್ದುದು ಕೇವಲ ಹತ್ತು ಡಾಲರಿನ ಬಿಲ್ ಮಾತ್ರ. ಆ ಹತ್ತು ಡಾಲರ್ ಬಿಲ್ಲನ್ನು ಅವಳಿಗೆ ಕೊಟ್ಟು ನಾನು ಮನೆ ಕಡೆ ನಡೆಯುವುದರಲ್ಲಿದ್ದೆ. ಆದರೆ, ಆ ಸೇಲ್ಸ್‌ಗರ್ಲ್ ನನಗೆ ಎಂಟು ಡಾಲರ್ ತೊಂಬತ್ತು ಸೆಂಟ್ಸ್‌ಗಳನ್ನು ಕೊಟ್ಟಾಗ ಆಶ್ಚರ್ಯವಾಗಿತ್ತು. ಆಮೇಲೆ ತಿಳಿಯಿತೆನ್ನಿ, 'Dollar Ten... ಎಂದರೆ, ಒಂದು ಡಾಲರ್ ಮೇಲೆ ಹತ್ತು ಸೆಂಟ್ಸ್‌ಗಳೆಂದು! ಈ ಶಾಪಿಂಗ್ ಅನುಭವ, ಹಾಗೂ ಅಮೆರಿಕನ್‌ರೊಡನೆ ನಡೆಸಿದ ಇತರ ಸಂಭಾಷಣೆಗಳೂ, ನನಗೆ ಅಮೆರಿಕದ ಹೊಸ ನುಡಿಗಟ್ಟನ್ನು ಕಲಿಸಿಕೊಟ್ಟಿತು. ಕ್ರೆಡಿಟ್ ಕಾರ್ಡ್ ಉಪಯೋಗಿಸಿ ಶಾಪಿಂಗ್ ಮಾಡುವ ವಿಧಾನ, ನಮ್ಮಲ್ಲಾದ (ಆಗಿನ ಕಾಲದಲ್ಲಿ) ಒಂದು ಮುಖ್ಯ ಬದಲಾವಣೆ ಎಂಬುದನ್ನು ನಾನೀಗ ಗುರುತಿಸುತ್ತಿದ್ದೇನೆ. (ಆದರೆ, ಈಗ ಭಾರತದಲ್ಲೂ ಈ ಕ್ರಮ ಚಾಲ್ತಿಯಲ್ಲಿದೆಯೆನ್ನಿ!) ಅಲ್ಲದೆ, ಮಧ್ಯಾಹ್ನ ಲಂಚ್‌ಗೆ ಅನ್ನ-ಸಾರು ಬಳಸದೆ, ಸ್ಯಾಂಡ್ವಿಚ್ ತಿನ್ನತೊಡಗಿದೆವು. ಈಗ ಎಣಿಸಿದಾಗ, ಇವೆಲ್ಲ ಸಣ್ಣ-ಪುಟ್ಟ ವಿಷಯ, ಹಾಗೂ silly ಎಂದು ತೋರಿದರೂ, ಅವು ನಮ್ಮ ಅಮೆರಿಕದ ಬದುಕಿನ ಮೇಲೆ ಸಾಕಷ್ಟು ಪರಿಣಾಮಗಳನ್ನುಂಟುಮಾಡಿ, ನಮ್ಮ ಜೀವನಕ್ರಮಗಳನ್ನು ನಮಗೆ ತಿಳಿಯದಂತೆ ಬದಲಿಸಿದೆ ಎಂಬುದನ್ನು ಗುರುತಿಸುತ್ತಿದ್ದೇನೆ.

ಹೀಗೆಯೇ ನನ್ನಲ್ಲಾದ ಬದಲಾವಣೆಯ ಬಗ್ಗೆ ಹೇಳುತ್ತಿದ್ದರೆ, ಪುಟಗಟ್ಟಲೆ ಬರೆಯುತ್ತ ಹೋಗಬಹುದು. ಆದರೆ, ಅವುಗಳಲ್ಲಿ ಕೆಲವು ಪ್ರಮುಖವಾದ ಬದಲಾವಣೆಗಳ ಪರಿಣಾಮಗಳನ್ನು ಇಲ್ಲಿ ನಿಮ್ಮೊಡನೆ ಹಂಚಿಕೊಳ್ಳಬಯಸುತ್ತೇನೆ:

ನಮ್ಮ ಮಗ, ಅರವಿಂದ, ಪ್ರಾಪ್ತ ವಯಸ್ಸಿಗೆ ಬಂದಾಗ, ಫಾರ್ಸಿ ಮಾತನಾಡುವ ಒಬ್ಬ ಇರಾನಿ ತರುಣಿಯನ್ನು ಪ್ರೀತಿಸಿ, ಅವಳನ್ನು ಮದುವೆಯಾಗುವ ಹಂಬಲವನ್ನು ತಿಳಿಸಿದ. ಆಗ ನನ್ನಲ್ಲಾದ ಪ್ರತಿಕ್ರಿಯೆ, ಹಾಗೂ ಆ ಸಮಸ್ಯೆಯನ್ನು ಸ್ಪಂದಿಸಿದ ಬಗೆಯನ್ನು ಈಗ ಎಣಿಸಿಕೊಂಡಾಗ, ಆಶ್ಚರ್ಯಪಡುತ್ತಿದ್ದೇನೆ. ಹಿಂದುಗಳಾದ ನಾವು ಅನ್ಯಮತೀಯ ತರುಣಿ, ಸೆಪಿಡ್ಡೆಯನ್ನು ಸೊಸೆಯಾಗಿ ಸ್ವೀಕರಿಸಿಕೊಂಡ ಬಗೆ ನಿಜಕ್ಕೂ ಆಶ್ಚರ್ಯ

ತರುವಂಥದೇ! ಮೊದಲಿಗೆ ಒಂದು ರೀತಿಯ ಕಳವಳ ನನ್ನನ್ನು ಬಾಧಿಸಿದರೂ, ನಮ್ಮ ವಲಸೆ ಜೀವನ, ಹಾಗೂ ಪಾಶ್ಚಾತ್ಯ ಮೌಲ್ಯಗಳೊಂದಿಗಿನ ಹೊಂದಾಣಿಕೆಯ ಫಲವಾಗಿ, ನಾವು ಆ ಸಂಬಂಧವನ್ನು ಒಪ್ಪಿಕೊಂಡೆವು. ಫಲವಾಗಿ, ಹಿಂದೂ ಸಾಂಪ್ರದಾಯಿಕ ವಿವಾಹದ ಮೂಲಕ ನಾವು ಆ ತರುಣಿಯನ್ನು ಮಗಳಂತೆ ನಮ್ಮ ಕುಟುಂಬದೊಡನೆ ಸೇರಿಸಿಕೊಂಡೆವು. ಅಲೆಕ್ಸಾಂಡರ್ ಕೃಷ್ಣ & ಕ್ಯಾಮರಾನ್ ಕವಿನ್ ಎಂಬಿಬ್ಬರು ಮೊಮ್ಮಕ್ಕಳು ಈಗ ನಮ್ಮ ಬದುಕಿಗೆ ಜೇನು ಸವಿಗೂಡಿಸಿದ್ದಾರೆಂಬುದು ಒಂದು ಹೆಮ್ಮೆಯ ವಿಷಯ! ನನ್ನವಳು ಈ ಅಂತರ್ಮತೀಯ ವಿವಾಹದ ವಿಚಾರದಲ್ಲಿ ನನ್ನನ್ನು ಸಿದ್ಧಗೊಳಿಸುತ್ತಲೇ ಬಂದಿದ್ದಳೆಂಬುದನ್ನು, ನಾನಿಲ್ಲಿ ಕೃತಜ್ಞತೆಯಿಂದ ನೆನಪಿಸಿಕೊಳ್ಳುತ್ತಿದ್ದೇನೆ. ವೈಯಕ್ತಿಕವಾಗಿ ಈ ನಮ್ಮ ನಡತೆ, ನಾವಿಲ್ಲಿಗೆ ವಲಸೆ ಬಂದುದರ ಪರಿಣಾಮವೆಂದು ನಾನೀಗ ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದೇನೆ. ಇದು ವಲಸೆ ನಮ್ಮ ಬದುಕಿಗೆ ತಂದ ಒಂದು ಮುಖ್ಯ ಬದಲಾವಣೆ ಎಂದು ಅತ್ಯಭಿಮಾನದಿಂದ ಒಪ್ಪಿಕೊಳ್ಳುತ್ತಿದ್ದೇನೆ!

ಬದುಕು, ಸುಖ–ದುಃಖ, ಸಿಹಿ–ಕಹಿಗಳ ಸಮ್ಮಿಶ್ರ! ದುಃಖದ ಸಂದರ್ಭಗಳು ನಮ್ಮನ್ನು ಹತಾಶರಾಗುವಂತೆ ಮಾಡದೆ, ಅವನ್ನು ಸ್ಥೈರ್ಯದಿಂದ ಎದುರಿಸುವ ಶಕ್ತಿ ಪಡೆಯಬೇಕು. ಈ ಮಹತ್ತ್ವದ ಪಾಠವನ್ನು ನನಗೆ ವಲಸೆ ಜೀವನ ಹೇಳಿಕೊಟ್ಟಿದೆ. ೧೯೭೦ರ ಅಂತ್ಯ, ನನ್ನವಳು ಕ್ಯಾನ್ಸರ್ ರೋಗಕ್ಕೆ ತುತ್ತಾಗಿ ಬಹಳಷ್ಟು ಕಷ್ಟ ಅನುಭವಿಸಬೇಕಾಗಿ ಬಂತು. ಆ ಸಂದರ್ಭದಲ್ಲಿ ನಾನು ಧೈರ್ಯವನ್ನು ಕಳೆದುಕೊಂಡಿದ್ದೆ. ಕ್ಯಾನ್ಸರ್ ಒಂದು ಮಾರಕ ರೋಗವಾಗಿದ್ದು, ನಾನು ನನ್ನವಳನ್ನು ಕಳೆದುಕೊಳ್ಳುವೆನೆಂದೇ ನಂಬಿ, ತೀರ ಹತಾಶನಾಗಿದ್ದೆ. ಆಗ ನನ್ನ ಮಕ್ಕಳು, ಅನುರಾಧಾ ಮತ್ತು ಅರವಿಂದರು ಚಿಕ್ಕ ವಯಸ್ಸಿನವರಾಗಿದ್ದರು. ಅವರಿಗೆ ಸಮಾಧಾನ ಹೇಳುವ ಸಾಮರ್ಥ್ಯವನ್ನೂ ಆ ಸ್ಥಿತಿಯಲ್ಲಿ ಕಳೆದುಕೊಂಡಿದ್ದೆ. ಒಮ್ಮೆ ಮಕ್ಕಳೊಡನೆ ಶಾಪಿಂಗ್‌ಗೆ ಹೋದಾಗ, ನನ್ನವಳ ಸ್ಥಿತಿಯನ್ನು ಎಣಿಸಿಕೊಂಡು ಅಲ್ಲೇ ಗೋಳೋ ಎಂದು ಅತ್ತಿದ್ದೆ. ಆಗ ನನಗೆ ಸಾಂತ್ವನವನ್ನು ನೀಡಿದವರು ನನ್ನ ಮಕ್ಕಳು. ಅವರು ತಾಯಿಯ ಆ ಸ್ಥಿತಿಯನ್ನು ಎದುರಿಸಿದ ಬಗೆ ನಿಜಕ್ಕೂ ಅಸಾಮಾನ್ಯ! ಆ ನನ್ನ ಕಷ್ಟ ಕಾಲದಲ್ಲಿ, ನನ್ನಲ್ಲಿ ಧೈರ್ಯ ತುಂಬಿದ ಅನೇಕ ಬಂಧು–ಮಿತ್ರರ ಸೌಹಾರ್ದತೆಯನ್ನು ನೆನೆದಾಗ ನನ್ನ ಮನಸ್ಸು ಕೃತಜ್ಞತೆಯಿಂದ ತುಂಬಿ ಬರುತ್ತದೆ. ನಮ್ಮ ಹತ್ತಿರದ ಬಂಧುಗಳು ಇಲ್ಲಿಲ್ಲದೆ ದೂರವಿದ್ದಾಗ, ಅಮೆರಿಕದ ಮಿತ್ರರು ನನ್ನಲ್ಲಿ ಧೈರ್ಯ ತುಂಬುವುದರಲ್ಲಿ ಸಹಾಯಕರಾಗಿದ್ದರು. ಮಾನವನ ಬದುಕಲ್ಲಿ ಕಷ್ಟ ತೋರುವುದು ಸ್ವಾಭಾವಿಕ! ಆದರೆ, ಅಂತಹ ಕಾಲದಲ್ಲಿ ಬೇರೆಯವರು ತೋರಿದ ಅನುಕಂಪ ಮತ್ತು ನೀಡಿದ ಸಮಾಧಾನಗಳಿಂದಾಗಿ ಅದನ್ನು ಎದುರಿಸುವ ಸಾಮರ್ಥ್ಯವನ್ನು ನಾವು ಪಡೆಯುತ್ತೇವೆ. ಇದು, ನಾವು ಬದುಕನ್ನು ನೋಡುವ ಕ್ರಮದಲ್ಲಿ ಬದಲಾವಣೆಗೆ ಕಾರಣವಾಗುತ್ತದೆ. ಬದುಕಿನಲ್ಲಿ ತಲೆದೋರುವ ಕಷ್ಟ–ಕಾರ್ಪಣ್ಯಗಳೊಡನೆ ರಾಜಿ ಮಾಡಿಕೊಳ್ಳುವ ಇಂಥ ನಿಲುವು, ಜೀವನದಲ್ಲಾಗುವ ಒಂದು ಪ್ರಮುಖ, ಸ್ವಾಗತಾರ್ಹ

ಬದಲಾವಣೆ. ಅದು ಜೀವನವನ್ನು ನಕಾರಾತ್ಮಕವಾಗಿ ಕಾಣದೆ, ಸಕಾರಾತ್ಮವಾಗಿ ಕಾಣುವ ದೃಷ್ಟಿಕೋನವನ್ನು ನನಗೆ ಕಲಿಸಿಕೊಟ್ಟಿದೆ.

ಇನ್ನೊಂದು ಸಂದರ್ಭ ನನ್ನ ಮೇಲೆ ಮಾಡಿದ ಪರಿಣಾಮವೆಂದರೆ, ನಾನು ಅಮೆರಿಕನ್ ಪೌರತ್ವವನ್ನು ಸ್ವೀಕರಿಸಿದಾಗ. ಗ್ರೀನ್ ಕಾರ್ಡ್ ಪಡೆದು ಹಲವು ವರ್ಷಗಳಾಗಿದ್ದರೂ, ಕಾನೂನು ಪ್ರಕಾರ ನಾನು ಅಮೆರಿಕನ್ ಪೌರತ್ವವನ್ನು ಸ್ವೀಕರಿಸಲು ಅರ್ಹನಾಗಿದ್ದರೂ, ನನ್ನ ಭಾರತೀಯ ಪೌರತ್ವವನ್ನು ಬಿಟ್ಟಿರಲಿಲ್ಲ. ಕಾರಣ, ನನ್ನ ಭಾರತೀಯ ಭಾವಬಂಧ ಬಹಳಷ್ಟು ಭದ್ರವಾಗಿತ್ತು. ಆದರೆ, ಕ್ರಮೇಣ ಇಲ್ಲಿಯ ನಿತ್ಯಜೀವನ, ರಾಜಕೀಯದಲ್ಲಿ ಭಾಗವಹಿಸುವ ಪ್ರಸಂಗಗಳು ಬಂದಾಗ ನನ್ನ ಮನಸ್ಸನ್ನು ಬದಲಿಸಬೇಕಾಗಿ ಬಂತು. ಕೊನೆಗೂ ನಾನು ಅಮೆರಿಕನ್ ಪೌರತ್ವವನ್ನು ಸ್ವೀಕರಿಸುವಾಗ ನನ್ನಲ್ಲಿ ಅಲ್ಲೋಲ ಕಲ್ಲೋಲಗಳಾಗಿದ್ದುವು. ನನ್ನ ಜನ್ಮಭೂಮಿಯಲ್ಲದ ಅಮೆರಿಕದ ರಾಜನಿಷ್ಠೆಯನ್ನು ಒಪ್ಪಿ ಪ್ರಮಾಣ ಮಾಡಿ ಸ್ವೀಕರಿಸಿದಾಗ, ಬೇರೆ ದೇಶವನ್ನು ನನ್ನದಾಗಿ ಮಾಡಿಕೊಳ್ಳುತ್ತಿದ್ದೇನೆ – ಎಂಬ ಒಂದು ಬಗೆಯ ಪಾಪಪ್ರಜ್ಞೆ ಕಾಡಿತ್ತು. ವ್ಯಾವಹಾರಿಕವಾಗಿ ನಾನು ಭಾರತೀಯ ಪೌರತ್ವವನ್ನು 'ಬಿಟ್ಟ'ರೂ, ಮಾನಸಿಕವಾಗಿ, ನನಗೆ ಜನ್ಮವಿತ್ತು, ಆಶ್ರಯಕೊಟ್ಟ ಮಾತೃ ಭೂಮಿಯ ಮೇಲಿನ ಮಮತೆ ಅಳಿಯದೆ, ನನ್ನಲ್ಲಿ ಸದಾ ಇರುವುದಂತೂ ನಿಜ! ನಾನು ಭಾರತವನ್ನು 'ಬಿಟ್ಟ'ರೂ ಭಾರತೀಯ ಭಾವನೆ ನನ್ನನ್ನು ಬಿಡಲಾರದು! ಮದುವೆಯಾಗಿ ಬಂದ ತರುಣಿಯರು ಬಂದು ಸೇರಿದ ಗಂಡನ ಮನೆಯನ್ನು ತನ್ನದಾಗಿ ಮಾಡಿಕೊಂಡು, ತವರ ಮೇಲಿನ ಅಭಿಮಾನವನ್ನು ಅಭಿವೃದ್ಧಿಗೊಳಿಸಿಕೊಂಡಂತೆ, ನಾನೂ ನನ್ನ ಮಾತೃ ಭೂಮಿಯ ಮೇಲಿನ ಅಭಿಮಾನವನ್ನು ಹೆಚ್ಚಿಸಿಕೊಳ್ಳಬಹುದೆಂಬ ಭಾವನೆ ಮೂಡಿ, ಆ ಬಗ್ಗೆ ಉಪಶಮನ ಹೇಳಿಕೊಂಡು, ಸಮಾಧಾನ ತಂದುಕೊಂಡೆ. ಇದು ವಲಸೆ ನನ್ನಲ್ಲಿ ಹುಟ್ಟಿಸಿದ ಅನನ್ಯ ಅನುಭವ! ಕುವೆಂಪುರವರ

**'ಎಲ್ಲಾದರು ಇರು, ಎಂತಾದರೂ ಇರು**
**ಎಂದೆಂದಿಗೂ ನೀ ಕನ್ನಡವಾಗಿರು**
**.............................................**
**ಎಲ್ಲಿದ್ದರೆ ಏನ್? ಎಂತಿದ್ದರೆ ಏನ್?**
**.............................................**
**ನೀಮೆಟ್ಟಿದ ನೆಲ ಅದೆ ಕರ್ನಾಟಕ...'**

ಮೇಲಿನ ಕವನದ ಸಾಲುಗಳನ್ನು ಇಲ್ಲಿ ನೆನೆಯಬಹುದು. ಇಲ್ಲಿ ನಾನು ಹೇಳಬೇಕಾದ ಮುಖ್ಯ ಅಂಶವೆಂದರೆ, ಅಮೆರಿಕದ ಪೌರತ್ವ ಸ್ವೀಕರಿಸಿದಾಗ, ಅದು ನನ್ನ ಮಾತೃಭೂಮಿಯ ಅಭಿಮಾನವನ್ನು ಕೊಂಚವೂ ಕೆಡಿಸಲಿಲ್ಲ; ಬದಲಿಗೆ ಹೆಚ್ಚಿಸಿದೆ – ಎಂಬುದನ್ನು. ವಲಸೆ ತಂದ ಈ ಬದಲಾವಣೆಯ ವಿಶಿಷ್ಟ ಅನುಭವ, ನನ್ನನ್ನು ಈಗಲೂ ಅಚ್ಚರಿಗೊಳಿಸುತ್ತಿದೆ.

**ಬರವಣಿಗೆ ನನ್ನಲ್ಲಿ ತಂದ ಬದಲಾವಣೆ:**

ಹೇಳಿ ಕೇಳಿ ನಾನೊಬ್ಬ ಜೀವರಸಾಯನಶಾಸ್ತ್ರದ ಸಂಶೋಧನಾ ವಿದ್ಯಾರ್ಥಿ. ಸುಮಾರು ೧೯೫೭ರಿಂದ ೨೦೦೦ದವರೆಗೂ ಆ ವೃತ್ತಿ ನನಗೆ ಪ್ರಿಯವಾಗಿದ್ದು, ಅದನ್ನೇ ಅನುಸರಿಸಿಕೊಂಡು ಬಂದಿದ್ದೇನೆ. ಸಾಹಿತ್ಯದ ಮೇಲೆ ಆಸಕ್ತಿ ಇದ್ದರೂ, ಬರವಣಿಗೆಯಲ್ಲಿ ತೊಡಗಿಸಿಕೊಂಡಿರಲಿಲ್ಲ. ಬರೆಯುವ ಧೈರ್ಯ ಹಾಗೂ ಶಕ್ತಿಯೂ ಇರಲಿಲ್ಲವೆನ್ನಿ! ಕಾರಣ, ಕರ್ನಾಟಕದ ಅನೇಕ ಸಾಹಿತ್ಯ ದಿಗ್ಗಜರ ಮುಂದೆ ನಾನೊಬ್ಬ ಅಣು – ಎಂಬ ಪ್ರಜ್ಞೆ ನನ್ನದಾಗಿತ್ತು. ಆದರೆ, ಸುಮಾರು ೧೯೯೯ರಲ್ಲಿ ಅದ್ಯಾವುದೋ ಪ್ರಚೋದನೆ ನನ್ನಲ್ಲಿ ಬರವಣಿಗೆಯಲ್ಲಿ ತೊಡಗಿಸಿಕೊಳ್ಳಲು ಪ್ರೇರೇಪಿಸಿತು. ಇದಕ್ಕೆ ಪ್ರೋತ್ಸಾಹ ಕೊಟ್ಟವರು, ಕರ್ನಾಟಕದಿಂದ ಅಮೆರಿಕಕ್ಕೆ ಭೇಟಿಕೊಟ್ಟ ಅನೇಕ ಸಾಹಿತಿಗಳೆಂದು (ಶ್ರೀಯುತರುಗಳಾದ ಜಿ. ಎಸ್. ಶಿವರುದ್ರಪ್ಪ, ಯು. ಆರ್. ಅನಂತಮೂರ್ತಿ, ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ, ಪ್ರಭುಶಂಕರ, ಡಿ. ಆರ್. ನಾಗರಾಜ್, ವೈದೇಹಿ ಮುಂತಾದವರು) ನಮ್ರತೆಯಿಂದ ನೆನೆಸಿಕೊಳ್ಳುತ್ತಿದ್ದೇನೆ. ಶಿವರಾಮ ಕಾರಂತರು ನಿಧನರಾದ ಸ್ವಲ್ಪ ಸಮಯದಲ್ಲೆ, ಅವರ ಸಾಹಿತ್ಯದ ಮೇಲೊಂದು ವಿಚಾರ ಸಂಕಿರಣ ಏರ್ಪಡಿಸುವಂತೆ, ದಿ. ಡಿ. ಆರ್. ನಾಗರಾಜ್ ನನಗೆ ಪ್ರೋತ್ಸಾಹಿಸಿದ್ದರು. ಆ ಸಂಕಿರಣದ ಫಲವಾಗಿ, ಶ್ರೀ ಅನಂತಮೂರ್ತಿಯವರ ಪ್ರೋತ್ಸಾಹದಿಂದಾಗಿ, ೨೦೦೦ದಲ್ಲಿ 'ಕಾರಂತ ಚಿಂತನ – ಕಡಲಾಚೆಯ ಕನ್ನಡಿಗರಿಂದ' ಎಂಬ ಗ್ರಂಥವನ್ನು ಸಂಪಾದಿಸುವ ಅವಕಾಶ ನನಗೆ ಒದಗಿ ಬಂತು. ಈ ಗ್ರಂಥ, ಹಾಗೂ ಅಮೆರಿಕನ್ನಡಿಗರ ಸಹಕಾರ, ನನ್ನನ್ನು ಮುಂದೆ ಕೆಲವು ಗ್ರಂಥಗಳನ್ನು ಸಂಪಾದಿಸಿ, ಪ್ರಕಟಿಸಲು ದಾರಿ ಮಾಡಿಕೊಟ್ಟಿತು. ಸಾಹಿತ್ಯಕ್ಕೆಂದೇ ಮೀಸಲಾದ 'ಕನ್ನಡ ಸಾಹಿತ್ಯ ರಂಗ'ದ ಆಶ್ರಯದಲ್ಲಿ, ಶಿವರುದ್ರಪ್ಪನವರ ಆಶೀರ್ವಾದದೊಡನೆ ೨೦೦೪ರಲ್ಲಿ ಪ್ರಕಟವಾದ 'ಕುವೆಂಪು ಸಾಹಿತ್ಯ ಸಮೀಕ್ಷೆ' ಗ್ರಂಥದ ಪ್ರಧಾನ ಸಂಪಾದಕನಾಗುವ ಅವಕಾಶ ಸಿಕ್ಕಿದ್ದುದು ನನ್ನ ಅದೃಷ್ಟವೆಂದೇ ಭಾವಿಸುತ್ತೇನೆ. ಇದಲ್ಲದೆ, ಹಲವು ಸಾಹಿತಿಗಳ ಮೇಲಿನ – ಮಾಸ್ತಿ, ಪು. ತಿ. ನ., ಅನಂತಮೂರ್ತಿ, ರಾಜರತ್ನಂ, ಬೇಂದ್ರೆ, ಶಿವರುದ್ರಪ್ಪ – ಗ್ರಂಥಗಳನ್ನು ಸಂಪಾದಿಸುವ ಅವಕಾಶ ನನಗೆ ಸಿಕ್ಕಿದೆ. ಇವುಗಳಿಗೆಲ್ಲ ಅಮೆರಿಕನ್ನಡಿಗರು ಲೇಖನಗಳನ್ನು ಬರೆದುಕೊಟ್ಟಿದ್ದಾರೆ. ಆ ಮೂಲಕ ಅಮೆರಿಕನ್ನಡಿಗರಲ್ಲಿ ಸುಪ್ತವಾಗಿದ್ದ ಸಾಹಿತ್ಯಾಸಕ್ತಿಗೆ ಅಭಿವ್ಯಕ್ತಿ ಮೂಡಿ ಬಂದುದು ಒಂದು ಶುಭ ಲಕ್ಷಣ. ಸಂಪಾದಿತ ಗ್ರಂಥಗಳ ಜೊತೆಗೆ, ಕೆಲವು ಕೃತಿಗಳನ್ನೂ – ಪ್ರಬಂಧ ಸಂಕಲನ, ಕಥಾಸಂಕಲನ, ಕಾದಂಬರಿ, ವೈಜ್ಞಾನಿಕ ಗ್ರಂಥ – ಪ್ರಕಟಿಸುವ ಅವಕಾಶವನ್ನು ನನ್ನ ವಲಸೆ ಜೀವನ ಒದಗಿಸಿಕೊಟ್ಟಿದೆ. ವಲಸೆಯಿಂದಾಗಿ ನನ್ನ ಬದುಕಿನಲ್ಲಾದ ಈ ಬದಲಾವಣೆ ನನಗೆ ಸಾಕಷ್ಟು ಹಿತವನ್ನೇ ಕೊಟ್ಟಿದೆ.

ಕಾಲಕ್ಕೆ ಹೊಂದಿಕೊಂಡಂತೆ ನಮ್ಮಲ್ಲಾದ ಬದಲಾವಣೆಗಳು ನಮ್ಮ ಅನುಭವ ಭಂಡಾರವನ್ನು ತುಂಬುತ್ತವೆ ಎಂದು ತಿಳಿದವರು ಹೇಳುತ್ತಾರೆ. ಮಾನವನ ಚಲನಶೀಲತೆ, ಅವನ ಅನುಭವಗಳನ್ನು ಹೆಚ್ಚಿಸಿ, ಬದುಕನ್ನು ಹದಗೊಳಿಸಿ, ಅದಕ್ಕೊಂದು ಅರ್ಥ

ಸಿಗುವಂತೆ ಮಾಡಿದೆ ಎಂಬುದೂ ನಿಜ! ಬಾಳ ಪಯಣದಲ್ಲಿ ಹಲವು ಬದಲಾವಣೆಗಳು ನಡೆದಿದ್ದು, ಇಂಥ ಬದಲಾವಣೆಗಳಿಂದ ಪಡೆದ ಅನುಭವಗಳೇ ನಮ್ಮ ಬದುಕಿಗೆ ದಾರಿ ದೀಪವಾಗಿದ್ದು, ಅದಕ್ಕೆ ಒಂದು ಅರ್ಥಪೂರ್ಣ ರೂಪು ಕೊಡುತ್ತದೆ ಎಂದು ನಂಬಿದವರಲ್ಲಿ ನಾನೊಬ್ಬ. ಮೊದಲಿಗೆ, ದೇಶ ಬಿಟ್ಟುಬಂದೆನೆಂಬ ಅಪರಾಧೀ ಪ್ರಜ್ಞೆ ನನ್ನನ್ನು ಕಾಡಿದ್ದರೂ, ಪಡೆದ ವಿವಿಧ ಅನುಭವಗಳು ನನ್ನೀ ಕೊರಗನ್ನು ಸಾಕಷ್ಟು ಶಮನಗೊಳಿಸಿವೆ. ಇದು ವಲಸೆ ನೀಡಿದ ಸಮಾಧಾನವೆಂದು ನನ್ನ ನಂಬಿಕೆ. ಪರಿಚಯವಿಲ್ಲದ ವಲಸೆ ಬಂದ ಈ ನಾಡಿನ ಜೀವನಕ್ರಮಗಳು ಭಿನ್ನವಾಗಿದ್ದು, ನಮ್ಮವರು ಎಂದು ಹೇಳಿಕೊಳ್ಳುವವರ್‍ಯಾರೂ ಇಲ್ಲದೆ, ಮಾನಸಿಕ ಸಮಾಧಾನ ಪಡೆಯಲು ಅವಕಾಶವಿಲ್ಲದೆ, ಹಿಂದೆ ತಿಳಿಸಿದಂತೆ, ನಾನು ಚಡಪಡಿಸುತ್ತಿದ್ದೆ. ಆದರೆ, ಅಮೆರಿಕದ ವಲಸೆ, ನನ್ನ ಬದುಕಿನ ದಿಕ್ಕನ್ನು ಬದಲಿಸಿ, ನನ್ನಲ್ಲಿ ಪಾಸಿಟಿವ್ ಥಿಂಕಿಂಗ್ (ವಿಚಾರಶೀಲತೆ)ನ್ನು ಮೂಡಿಸಿದೆಯೆಂದೇ ನಾನು ನಂಬಿರುತ್ತೇನೆ. ಅಲ್ಲದೆ ವಲಸೆ ಜೀವನದ ಫಲವಾಗಿ ನಮ್ಮಲ್ಲಾದ ಬದಲಾವಣೆಯೊಡನೆ ಹೊಂದಾಣಿಕೆ ಮಾಡಿಕೊಳ್ಳುವ ಅವಕಾಶಕ್ಕಾಗಿ ನಾನು ತೃಪ್ತಿಪಡುತ್ತಿದ್ದೇನೆ. ಇವೆಲ್ಲವೂ ಪ್ರಾರಂಭದಲ್ಲಾದ ನನ್ನ ಕಳವಳವನ್ನು ಶಾಂತಗೊಳಿಸಲು ಕಾರಣವಾಗಿವೆ.

ಒಟ್ಟಿನಲ್ಲಿ, ಅಮೆರಿಕದಲ್ಲಿನ ವಲಸೆ ಜೀವನ, ನನ್ನ ಬದುಕಿನಲ್ಲಿ ಅಪಾರ ಬದಲಾವಣೆಗಳನ್ನು ತಂದು ನನ್ನ ಜೀವನದ ದಿಕ್ಕನ್ನು ಸಾಕಷ್ಟು ಬದಲಿಸಿ, ಅದಕ್ಕೊಂದು ಹೊಸ ರೂಪ ಕೊಟ್ಟಿದೆ ಎಂದು ಧನ್ಯತಾ ಭಾವನೆಯಿಂದ ನೆನೆಯುತ್ತಿದ್ದೇನೆ.

*

---

ವಿ.ಸೂ.: ಈ ಲೇಖನ ಬರೆಯುವಲ್ಲಿ ನನ್ನ 'ಅಮೆರಿಕದಲ್ಲಿ ಕಂಡ ಕನಸು, ಕಟ್ಟಿದ ನೆನಪು' (ಪ್ರ: ಅಭಿನವ, ಬೆಂಗಳೂರು, ೨೦೧೫) ಗ್ರಂಥವನ್ನು ಸಾಕಷ್ಟು ಬಳಸಿಕೊಂಡಿರುವೆ.

# ಪರಿವರ್ತನೆ

■ **ಸಂಧ್ಯಾ ರವೀಂದ್ರನಾಥ್,** Milpitas, CA.

ಸವಿತಾಳಿಗೆ ಖುಷಿಯೋ ಖುಷಿ. ಎಷ್ಟೋ ವರುಷಗಳಿಂದ ನೋಡಿರದ ಸ್ನೇಹಿತೆಯನ್ನು ಈಗ ಭೇಟಿ ಮಾಡುವ ಅವಕಾಶ ಸಿಕ್ಕಿದೆ. ಈ ವಿದ್ಯಾ ಹೇಗೆ ಕಂಡುಹಿಡಿದಳೋ. ಬರೀ ಹೆಸರು ಹೇಳಿದ್ದಕ್ಕೆ ಆ ಕಂಪ್ಯೂಟರಿನ ಕೀಲಿಮಣೆಯಲ್ಲಿ ಅದೇನೋ ಒಂದೆರಡು ಬಾರಿ ಕುಕ್ಕಿ, "ತೊಗೋ, ನಿನ್ನ ಸ್ನೇಹಿತೆ ಗೌರಿ ಕಿಕ್ಕೇರಿಯ ಫೋನ್ ನಂಬರ್" ಅಂತ ಚೀಟಿಯಲ್ಲಿ ಬರೆದು ತಂದುಕೊಟ್ಟಳು. ಎಷ್ಟೇ ಆದರೂ ಮಗಳು ಎಂಜಿನೀಯರ್ ಅಲ್ಲವೇ! ಅದರಲ್ಲೂ ಸಾಫ್ಟ್‌ವೇರ್ ಎಂಜಿನೀಯರ್. ಮಗಳ ಬಗ್ಗೆ ಹೆಮ್ಮೆಪಟ್ಟುಕೊಂಡಳು ಸವಿತಾ.

ಸವಿತಾ ಸ್ಯಾಂಟಾ ಕ್ಲಾರಾಗೆ ಬಂದಿರೋದು ಮಗಳಿಗೆ ಬಾಣಂತನ ಮಾಡುವುದಕ್ಕೆ. ವಿದ್ಯಾ ಒಬ್ಬಳೇ ಮಗಳು. ಈಗ ತಾಯಿಯಾಗುತ್ತಿದ್ದಾಳೆ, ಅದೂ ವಿದೇಶದಲ್ಲಿ. ಸವಿತಾ ಮತ್ತು ರಮೇಶ್ ಇಬ್ಬರೂ ಮಗಳು ವಿದ್ಯಾಳನ್ನು ಅಂಗೈಯಲ್ಲಿ ಇಟ್ಟು ಮುಂಗೈಯಿಂದ ಮುಚ್ಚಿ ಬೆಳೆಸಿದ್ದರು. ಸಂಗೀತ, ಓದು, ಆಟಪಾಠ ಎಲ್ಲದರಲ್ಲೂ ಮುಂದೆ ಇದ್ದ ವಿದ್ಯಾ ಎಂಜಿನೀಯರ್ ಆಗ್ತೀನಿ ಎಂದು ಹೇಳಿದಾಗ ಸವಿತಾನ ಹಿಡಿಯೋರೆ ಇರಲಿಲ್ಲ. ತಾನು ತುಂಬ ಓದಿ ಕೆಲಸ ಮಾಡಬೇಕು ಅನ್ನುವುದು ಅವಳ ಚಿಕ್ಕಂದಿನ ಆಸೆ. ಆದರೆ ಚಿಕ್ಕ ಊರಿನಲ್ಲಿ ಹುಟ್ಟಿ ಬೆಳೆದ ಸವಿತಾಳಿಗೆ ಆ ಅವಕಾಶ ದೊರಕಿರಲಿಲ್ಲ. ಅವರ ಊರು ಕಿಕ್ಕೇರಿಯಲ್ಲಿ ಹೈಸ್ಕೂಲು ಮಾತ್ರ ಇದ್ದುದರಿಂದ, ಮುಂದೆ ಓದಬೇಕಾದರೆ ಮೈಸೂರು ಅಥವಾ ಬೆಂಗಳೂರಿಗೆ ಹೋಗಬೇಕಾಗಿತ್ತು. ಅದಕ್ಕೆ ಅವರ ತಂದೆ ಒಪ್ಪಿರಲಿಲ್ಲ. ಹಾಸ್ಟೆಲ್ಲಿನಲ್ಲಿ ಅವಳನ್ನು ಬಿಟ್ಟು ಓದಿಸುವಷ್ಟು ಹಣ ಅವರಲ್ಲಿ ಇರಲಿಲ್ಲ ಎನ್ನುವುದು ಸವಿತಾಳಿಗೂ ಅರ್ಥವಾಗಿತ್ತು. ಮೇಲಾಗಿ ಶಿಸ್ತಿನಲ್ಲಿ ಬೆಳೆಸಿರುವ ಮಗಳನ್ನು ಹಾಸ್ಟೆಲ್ಲಿನಲ್ಲಿ ಬಿಡುವುದು ಅವರಿಗೆ ಸರಿಯೆನಿಸಿರಲಿಲ್ಲ. ಈಗ ತನ್ನ ಮಗಳಿಗೆ ಎಂಜಿನೀಯರ್ ಆಗುವ ಅವಕಾಶ ಸಿಕ್ಕಿತಲ್ಲಾ ಎಂದು ಸವಿತಾಳಿಗೆ ಸಂತೋಷವಾಗಿತ್ತು.

ಇದೆಲ್ಲ ೪೦ ವರ್ಷ ಹಿಂದಿನ ಮಾತು. ಇದೇ ಸಮಯದಲ್ಲಿ ಅವಳ ಅಂತರಂಗದ ಗೆಳತಿ ಗೌರಿಯ ಮದುವೆ ಗೊತ್ತಾಗಿದ್ದು. ಅವಳೂ ಹೈಸ್ಕೂಲು ಮುಗಿಸಿ, ಮುಂದೆ ಓದಲು ಸಾಧ್ಯವಿಲ್ಲದೇ ಇವಳಂತೆಯೇ ಮನೆಯಲ್ಲಿದ್ದಳು. ಇವಳಂತೆಯೇ ಕಿಕ್ಕೇರಿಯಲ್ಲಿ ಹುಟ್ಟಿ ಬೆಳೆದವಳು. ತುಂಬ ಓದಬೇಕು ಎನ್ನುವ ಆಸೆ ಆಕಾಂಕ್ಷೆಗಳನ್ನು ಇಟ್ಟುಕೊಂಡಿದ್ದವಳು. ಆದರೆ ಅದೆಲ್ಲ ಕೈಗೆಟುಕದ ಕನಸುಗಳು ಎಂದು ಇವಳಂತೆಯೇ ಅರಿತಿದ್ದವಳು. ಇದ್ದಕ್ಕಿದ್ದಂತೆ ಅವಳ ಮದುವೆ ಗೊತ್ತಾಗಿತ್ತು. ಯಾರೋ ಅವಳ ತಂದೆಯ ಪರಿಚಯದವರ ಮಗನಂತೆ. ಹುಡುಗ ಅಮೇರಿಕಾದ ಕ್ಯಾಲಿಫೋರ್ನಿಯಾದಲ್ಲಿ ಇದ್ದಾನೆ. ಈಗ ಬೆಂಗಳೂರಿಗೆ ಬರ್ತಾ ಇದ್ದಾನೆ. ಎರಡೇ ವಾರ ಅಂತೆ ಅವನಗೆ ರಜಾ ಇರೋದು.

ಸವಿತಾ ಮತ್ತು ಅವಳ ಮನೆಯವರನ್ನು ಗೌರಿಯ ಮದುವೆಗೆ ಕರೆದಿದ್ದರು. ಆದರೆ ಮದುವೆ ನಡೀತಾ ಇದ್ದದು ಬೆಂಗಳೂರಿನಲ್ಲಿ. ಮದುವೆಗೆ ಹೋಗುವುದಕ್ಕೆ ಅವಳಿಗೇನೋ ಆಸೆ ಇತ್ತು; ಬೆಂಗಳೂರಿಗೆ ಹೋಗಿ ಬರುವ ಖರ್ಚು, ಉಡಲು ಬಟ್ಟೆ-ಬರೆ, ಬರಿಗೈಯಲ್ಲಿ ಹೋಗೋಕೆ ಆಗಲ್ಲ, ಉಡುಗೊರೆ ತೊಗೊಂಡು ಹೋಗಬೇಕು. ಅದಕ್ಕೆ ದುಡ್ಡು. ಇದೆಲ್ಲ ಆಗಿಹೋಗದ ಮಾತು. ಸವಿತಾ ಮದುವೆಗೆ ಹೋಗಲಿಲ್ಲ. ಮದುವೆಯಾದ ಮೇಲೆ ಗೆಳತಿಯನ್ನು ನೋಡುವುದೂ ಸಾಧ್ಯವಾಗಿರಲಿಲ್ಲ. ಅವಳು ಕ್ಯಾಲಿಫೋರ್ನಿಯಾಗೆ ಹೊರಟಳು ಅಂತ ಅವಳು ಹೊರಟ ಮೇಲೆ ತಿಳಿಯಿತು. ಅವರ ಊರಿನಿಂದ ಅಮೇರಿಕಾಗೆ ಹೋಗಿದ್ದವರಲ್ಲಿ ಗೌರಿಯೇ ಮೊದಲು. ಆಗ ಮದುವೆ ಆಗಿ ಹೋದ ಗೌರಿಯನ್ನು ಈಗ ಅಮೇರಿಕಾದಲ್ಲೇ ನೋಡ್ತಾ ಇದ್ದಾಳೆ. ೪೦ ವರ್ಷಗಳ ನಂತರ. ಗೆಳತಿಯ ಬರವನ್ನೇ ಕಾತರದಿಂದ ಕಾಯುತ್ತಿದ್ದಳು ಸವಿತಾ.

ಬಾಗಿಲು ಬೆಲ್ ಆಯಿತು. ಬಾಗಿಲ ಆಚೆ ನಿಂತಿದ್ದವಳು ಗೌರಿ. ೪೦ ವರ್ಷಗಳಲ್ಲಿ ಅಂತಹದ್ದೇನು ಬದಲಾವಣೆ ಇರಲಿಲ್ಲ. ಸ್ವಲ್ಪ ಮೈಕೈ ತುಂಬಿಕೊಂಡಿದ್ದಳು. ಉದ್ದ ಜಡೆ ಹೋಗಿ ಬಾಬ್ ಕಟ್ ಮಾಡಿದ ಕೂದಲು. ಪ್ಯಾಂಟ್ ಶರ್ಟ್ ಹಾಕಿಕೊಂಡಿದ್ದಳು.

"ಗೌರಿ, ಎಷ್ಟೊಂದು ದಿವಸ ಆಗಿತ್ತು. ನೀನು ಏನೂ ಬದಲಾಯಿಸೇ ಇಲ್ಲ. ಇದ್ದ ಹಾಗೇ ಇದ್ದೀಯ. ತುಂಬಾ ಸ್ಮಾರ್ಟ್ ಆಗಿ ಕಾಣಿಸ್ತಾ ಇದ್ದೀಯ!"

"ನೀನೂ ಅಷ್ಟೆ ಸವಿತಾ. ಸೀರೆಯಲ್ಲಿ ಎಷ್ಟು ಲಕ್ಷಣವಾಗಿ ಕಾಣಿಸ್ತಿ. ಈ ದೇಶದಲ್ಲಿ ನಿನ್ನ ನೋಡ್ತೀನಿ ಅಂತ ಅಂದ್ಕೊಂಡೇ ಇರಲಿಲ್ಲ. ತುಂಬ ಸಂತೋಷ."

"ಹೇಗಿದ್ದೀಯ? ನಿನ್ನ ಬಗ್ಗೆ ನನಗೆ ಎಷ್ಟು ಹೆಮ್ಮೆ ಗೊತ್ತಾ? ನಮ್ಮೂರ ಹುಡುಗಿ ಅಮೇರಿಕಾದಲ್ಲಿ ಇದ್ದಾಳೆ. ನನ್ನ ಆತ್ಮೀಯ ಗೆಳತಿ ಅಂತ ನಾನು ಎಲ್ಲರಿಗೂ ಹೇಳ್ತಾ ಇರ್ತೀನಿ. ಎಷ್ಟು ಅದೃಷ್ಟವಂತೆ ನೀನು. ನಿಮ್ಮ ಮನೆಯವರೆಲ್ಲಾ ಚೆನ್ನಾಗಿದ್ದಾರ?"

ಇವಳಿಗೆ ಎಷ್ಟು ಮಕ್ಕಳು ಇದ್ದಾರೋ ಗೊತ್ತಿಲ್ಲ. ಈಗ ಬೆಳೆದು ದೊಡ್ಡವರಾಗಿರಬೇಕು. ನಮ್ಮ ವಿದ್ಯಾ ವಯಸ್ಸಿನವರೇ ಏನೋ ಎಂದುಕೊಂಡು ಸವಿತಾ ಗೆಳತಿಗೆ ಕಾಫಿ, ತಾನು ಊರಿನಿಂದ ತಂದಿದ್ದ ಚಕ್ಕುಲಿ, ಕೋಡುಬಳೆ ಕೊಟ್ಟಳು.

"ತೊಗೋ, ನಿನಗೆ ಈ ತಿಂಡಿಗಳೆಲ್ಲ ಅಪರೂಪ ಅಲ್ಲವಾ?"

"ನಲವತ್ತು ವರ್ಷಗಳ ಹಿಂದೆ ಅಪರೂಪ ಆಗಿತ್ತು ಸವಿತಾ. ತಿಂಡಿಗಳನ್ನು ತಿನ್ನಬೇಕು ಎನಿಸಿದರೆ, ನಾನೇ ಎಲ್ಲ ಮಾಡಿಕೋಬೇಕಾಗಿತ್ತು. ಆಗ ಚಕ್ಕುಲಿ ಕೋಡುಬಳೆ ಇರಲಿ, ತೊಗರಿಬೇಳೆ, ಕೊತ್ತಂಬರೀ ಸೊಪ್ಪು ಮೊದಲುಗೊಂಡು ಎಲ್ಲವೂ ಅಪರೂಪ ಆಗಿತ್ತು. ಸಾರಿಗೆ ಬೇಳೆಯ ಬದಲು ಲೆಂಟಿಲ್ಸ್ ಅಥವಾ ಹಳದಿ ಸ್ಪ್ಲಿಟ್ ಪೀಸ್ ಉಪಯೋಗಿಸಬೇಕಾಗಿತ್ತು. ಕೊತ್ತಂಬರೀ ಸೊಪ್ಪು ಅಂತೂ, ಚಿನ್ನದ ಹಾಗೆ! ಅದು ಸಿಕ್ಕಾಗ ಫ್ರೀಜ಼ರಲ್ಲಿ ಜೋಪಾನವಾಗಿ ಇಟ್ಟುಕೊಳ್ಳುವವರೂ ಇದ್ದರು!" ನಕ್ಕಳು ಗೌರಿ.

"ಈಗ ಬಿಡು, ಹಪ್ಪಳ, ಸಂಡಿಗೆಯಿಂದ ಹಿಡಿದು ಎಲ್ಲಾ ಇಲ್ಲೇ ಸಿಗುತ್ತೆ! ಆದರೂ, ಮನೆಯಲ್ಲಿ ಮಾಡಿದ್ದು ಸಿಗೋದು ಅಪರೂಪ. ತಿಂಡಿ ತುಂಬ ಚೆನ್ನಾಗಿದೆ."

"ಬಾ, ನಮ್ಮ ಮನೆಗೆ ಹೋಗೋಣ. ನಾನೇ ಕರ್ಕೊಂಡು ಹೋಗ್ತೀನಿ. ಒಟ್ಟಿಗೆ ಊಟ ಮಾಡೋಣ. ಆಮೇಲೆ, ನಾನೇ ನಿನ್ನನ್ನು ವಾಪಸ್ ಕರ್ಕೊಂಡು ಬರ್ತೀನಿ." ಸಂತೋಷದಿಂದ ಒಪ್ಪಿಕೊಂಡಳು ಸವಿತಾ.

"ಖಂಡಿತ, ನಿಮ್ಮ ಮನೆ ಹೇಗಿದೆ, ನೀನು ಹೇಗೆ ಇಲ್ಲಿ ಬಾಳ್ತಾ ಇದ್ದೀಯ ಎಲ್ಲ ನೋಡಬೇಕು. ನಿಮ್ಮ ಮನೆ, ಗಂಡ, ಮಕ್ಕಳು..."

ಕಾರು ಡ್ರೈವ್ ಮಾಡ್ತಾ ಇದ್ದ ಗೌರಿ ಅವಳನ್ನು ಅರ್ಧದಲ್ಲೇ ತಡೆದು, "೪೦ ವರ್ಷಗಳ ಹಿಂದೆ ಈ ಜಾಗ ಹೇಗೆ ಇತ್ತು ಗೊತ್ತಾ? ಇಲ್ಲೆಲ್ಲ ಬಾದಾಮಿ, ಏಪ್ರಿಕಾಟ್ ಹಣ್ಣುಗಳ ತೋಟ ಇತ್ತು. ನಾವು ಈಗ ಹೋಗ್ತಾ ಇದ್ದೀವಲ್ಲ, ಈ ಫ್ರೀ ವೇ, ಇದು ಇರಲೇ ಇಲ್ಲ. ಇಲ್ಲಿಗೆ ಬಂದರೆ ಎಲ್ಲೋ ಊರಾಚೆ, ದೂರ ಹೋಗ್ತಾ ಇದ್ದೀವೇನೋ ಅನ್ನಿಸ್ತಾ ಇತ್ತು! ಈಗ ನೋಡು, ಆ ತೋಟಗಳೆಲ್ಲ ಹೋಗಿ ಎಷ್ಟೊಂದು ಕಟ್ಟಡಗಳು ಬಂದಿವೆ. ಎಲ್ಲ ಸಾಫ್ಟ್‌ವೇರ್ ಕಂಪನಿಗಳು. ಫ್ರೀ ವೇ ತುಂಬ ಕಾರುಗಳು. ಎಷ್ಟು ಟ್ರಾಫಿಕ್. ದಿನೇ ದಿನೇ ಹೆಚ್ಚಾಗ್ತಾ ಇದೆ. ಸುತ್ತ ನೋಡು. ಎಲ್ಲ ಕಾರುಗಳಲ್ಲೂ ನಮ್ಮ ದೇಶದವರೇ! ಆಗ ಹುಡುಕಿದರೂ ಒಬ್ಬರು ಸಿಗೋದೂ ಕಷ್ಟ ಆಗಿತ್ತು. ಎಲ್ಲಾ ಕಡೆ ಈಗ ಅವರೇ ಕಾಣಿಸ್ತಾರೆ. ಆಗ ನಾನು ಕೆಲಸ ಮಾಡ್ತಾ ಇದ್ದೆನಲ್ಲ, ಆ ಆಫೀಸಿನಲ್ಲಂತೂ ನಮ್ಮ ದೇಶದವರೇ ಇರಲಿಲ್ಲ. ಅದರಲ್ಲೂ ಹೆಂಗಸರಂತೂ ಇರಲೇ ಇಲ್ಲ. ಎಲ್ಲರ ಮಧ್ಯೆ ನಾನೊಬ್ಬಳೇ ಭಾರತೀಯಳು! ಈಗ ಇಲ್ಲಿ ಎಷ್ಟೊಂದು ದೇವಸ್ಥಾನಗಳು ಆಗಿವೆ ಗೊತ್ತಾ? ಇಂಡಿಯನ್ ಗ್ರೋಸರಿ ಸ್ಟೋರ್ಗಳು, ರೆಸ್ಟೋರಾಂಟ್ಗಳು ಅಂತು ಎಲ್ಲ ಕಡೆ ಇವೆ. ಆಗ ಇದ್ದಿದ್ದು ಒಂದೋ ಎರಡು ರೆಸ್ಟೋರಾಂಟ್ಗಳು, ದೋಸೆ ತಿನ್ನಬೇಕು ಅನ್ನಿಸಿದರೆ, ೩೦–೪೦ ಮೈಲಿ ದೂರದ ಬರ್ಕ್ಲಿಗೆ ಹೋಗಬೇಕಾಗಿತ್ತು."

ನಾನು ಮಕ್ಕಳ ವಿಷಯ ಕೇಳಿದರೆ, ಏನೋ ಲೋಕಾರೂಢಿ ಮಾತಾಡ್ತಾ ಇದ್ದಾಳಲ್ಲ ಎನಿಸಿತು. ಆದರೂ ಆಗಿನ ಕಾಲದ ಇಲ್ಲಿಯ ಜೀವನವನ್ನು ವಿವರಿಸ್ತಾ ಇರೋದು ಕೇಳೋಕೆ ಚೆನ್ನಾಗೇ ಇದೆ ಎನ್ನಿಸಿತು. ಎಷ್ಟೊಂದು ಬದಲಾವಣೆಗಳು!

"ನೀನು ಬಂದ ಕೂಡಲೇ ಕೆಲಸಕ್ಕೆ ಸೇರಿಕೊಂಡೆಯಾ? ಮಕ್ಕಳನ್ನು ಯಾರು ನೋಡಿಕೊಂಡರು?"

"ಬರೀ, ನನ್ನ ಕಥೆಯೇ ಆಯಿತು. ನಿನ್ನ ವಿಷಯ ಹೇಳು. ನಾನು ಮದುವೆ ಆದಮೇಲೆ, ಕಿಕ್ಕೇರಿಗೆ ಬರೋಕೇ ಆಗಲಿಲ್ಲ. ನಿನ್ನ ನೋಡೋಕೆ ಆಗಲಿಲ್ಲ. ಅತ್ತೆ ಮನೆಗೆ ಹೋಗಿ, ಬರೋದು. ಪ್ಯಾಸ್ಪೋರ್ಟ್, ವೀಸಾ ಎಲ್ಲ ಮಾಡಿಸಿಕೊಳ್ಳೋಕೆ ಮದ್ರಾಸಿಗೆ ಹೋಗಿ ಬರೋದು ಇದರಲ್ಲೇ ಆಗಿಹೋಯಿತು. ಈಗೆಲ್ಲ ಮದ್ರಾಸಿಗೆ, ಅಲ್ಲ ಆ ಊರಿನ ಹೆಸರನ್ನು ಬದಲಾಯಿಸಿದರಲ್ಲ, ಚೆನ್ನೈಗೆ ಹೋಗುವುದೇನು ಬೇಡ. ನೀನೇನು, ವಿಸಿಟರ್ ವೀಸಾದಲ್ಲಿ ಬಂದಿದ್ದೀಯ? ನಿನ್ನ ಮಗಳು, ಅಳಿಯ ಎಷ್ಟು ದಿವಸದಿಂದ ಇಲ್ಲಿ ಇದ್ದಾರೆ? ಬೇ ಏರಿಯಾಗೆ ಯಾವಾಗ ಬಂದರು? ನಿನ್ನ ಕಥೆ ಹೇಳು."

ಸವಿತಾ ತನ್ನ ಕಥೆ ಹೇಳಿಕೊಂಡಳು. ಅವಳ ಮದುವೆ ಕಿಕ್ಕೇರಿಯಲ್ಲೇ ಆಗಿತ್ತು. ಗಂಡ ರಮೇಶ್ ಬೆಂಗಳೂರಿನ ಕಾಲೇಜ್ ಒಂದರಲ್ಲಿ ಲೆಕ್ಚರರ್. ಮದುವೆ ಆದಮೇಲೆ ಬೆಂಗಳೂರಿನಲ್ಲಿ ಜೀವನ. ವಿದ್ಯಾ ಒಬ್ಬಳೇ ಮಗಳು. ಅವಳನ್ನು ಬೆಳೆಸುವುದರಲ್ಲಿ, ಮನೆ ಕೆಲಸ ಮಾಡುವುದರಲ್ಲಿ ಅವಳ ದಿನಗಳು ಕಳೆಯುತ್ತಿದ್ದವು. ಮಗಳು ವಿದ್ಯಾ ಬಿ.ಇ. ಮುಗಿಸಿ, ಎಂಜಿನೀರ್ ಆಗಿ ಬೆಂಗಳೂರಿನ ಒಂದು ಸಾಫ್ಟ್‌ವೇರ್ ಕಂಪನಿಯಲ್ಲಿ ಕೆಲಸ ಮಾಡುತ್ತಿದ್ದಳು. ಆಗಲೇ ಅಲ್ಲೇ ಕೆಲಸ ಮಾಡುತ್ತಿದ್ದ ವಿನೋದ್ ಜೊತೆ ಸ್ನೇಹ ಬೆಳೆದು, ಮುಂದೆ ಅದು ಪ್ರೀತಿಗೆ ತಿರುಗಿ, ಇಬ್ಬರೂ ಮದುವೆಯಾಗಲು ತೀರ್ಮಾನಿಸಿದ್ದರು. ಸವಿತಾ ಮತ್ತು ರಮೇಶ್‌ಗೆ ಈ ಮದುವೆ ಮುಂಚೆ ಇಷ್ಟ ಇರಲಿಲ್ಲ. ತಾವು ಹುಡುಕಿ ತಂದ ವರ ಆಗಿದ್ದಿದ್ದರೆ ಚೆನ್ನಾಗಿತ್ತು ಅಂತ. ಯಾಕೆ ಈ ಮರಾಠಿ ಹುಡುಗನ್ನ ಮಾಡಿಕೊಳ್ಳಬೇಕು? ಆದರೆ ಮಗಳ ಇಚ್ಛೆಗೆ ಮಣಿಯಬೇಕಾಯಿತು. "ವಿನೋದ್ ಒಳ್ಳೆಯ ಹುಡುಗ. ಅದು ಆಮೇಲೆ ನಮಗೇ ಅರ್ಥ ಆಯಿತು. ವಿದ್ಯಾ ಪುಣ್ಯವಂತೆ, ಒಳ್ಳೆಯ ಗಂಡನನ್ನೇ ಆರಿಸಿಕೊಂಡಳು ಅಂತ. ದೇವರ ದಯ. ಎಲ್ಲ ಸರಿಹೋಯಿತು. ಅವರಿಬ್ಬರೂ ಇಲ್ಲಿಗೆ ಬಂದು ೨-೩ ವರ್ಷ ಆಯಿತು. ಇಬ್ಬರಿಗೂ ಸಾಫ್ಟ್‌ವೇರ್ ಕಂಪೆನಿಗಳಲ್ಲಿ ಕೆಲಸ. ಮೊದಲು ವಿದ್ಯಾಗೆ ಇಲ್ಲಿ ಕೆಲಸ ಸಿಕ್ಕಿತು. ಅವಳೇ ಮೊದಲು ಬೇ ಏರಿಯಾಗೆ ಬಂದಳು. ಆಮೇಲೆ ವಿನೋದ್‌ಗೆ ಕೆಲಸ ಸಿಕ್ಕಿದ ಮೇಲೆ ಅವನು ಬಂದ. ಇಬ್ಬರೂ ಅವರವರ ಕಂಪೆನಿಯವರು ಸ್ಪಾನ್ಸರ್ ಮಾಡಿರುವ ಗ್ರೀನ್ ಕಾರ್ಡ್ಗೋಸ್ಕರ ಕಾಯ್ತಾ ಇದ್ದಾರೆ.

ಈಗ ವಿದ್ಯಾ ಗರ್ಭಿಣಿ. ಇನ್ನೊಂದು ತಿಂಗಳಿಗೆ ಮಗು ಆಗುತ್ತೆ. ನಾನು ಅಜ್ಜಿ ಆಗ್ತೀನಿ, ಗೌರಿ! ಆದರೂ ನಮ್ಮ ಮದುವೆಗೂ ಈಗಿನವರ ಮದುವೆಗೂ ಎಷ್ಟು ವ್ಯತ್ಯಾಸ ಅಲ್ಲವಾ? ನಾವು ಅಪ್ಪ, ಅಮ್ಮ ಹೇಳಿದ ಹುಡುಗನ್ನ ಮದುವೆ ಮಾಡಿಕೊಂಡೆವು. ಎಷ್ಟು ಸಿಂಪಲ್ ಆಗಿದ್ದೆವು ಅಲ್ಲವಾ? ನಾವೆಲ್ಲ ತುಂಬಾ ಗಂಭೀರ. ಹಾಗೆ ನಾವೇ ಮುಂದುವರೆದುಕೊಂಡು ಹೋಗಿ ಹುಡುಗರನ್ನು ಮಾತಾಡಿಸ್ತಾನೂ ಇರಲಿಲ್ಲ. ಮಾತಾಡೋದು ಇರಲಿ, ಅವರ ಕಡೆ ನೋಡ್ತಾನೂ ಇರಲಿಲ್ಲ. ಅದು ಏನೋ ಮಹಾಪರಾಧ

ಅನ್ನುವ ಹಾಗೆ. ಈ ಪ್ರೀತಿ, ಪ್ರೇಮ, ಲವ್ ಮ್ಯಾರೇಜ್ ಎಲ್ಲ ಒಂಥರಾ ಒಳ್ಳೆ ಮನೆತನದ ಹುಡುಗಿಯರಿಗಲ್ಲ ಅನ್ನೋ ಭಾವನೆ."

"ಹೌದು, ನಾವು ಬೆಳೆದ ರೀತೀನೇ ಅದು. ಆಗಿನ ಕಾಲದಲ್ಲಿ ಲವ್ ಮ್ಯಾರೇಜ್ ಮಾಡಿಕೊಂಡಳು ಅಂದರೆ ಊರೊಳಗೆಲ್ಲ ಗಾಸಿಪ್ ಹರಡಿಬಿಡ್ತಾ ಇತ್ತು. ನಿನಗೆ ನೆನಪಿಲ್ಲವಾ? ನಮ್ಮ ಜೊತೆ ಓದ್ತಾ ಇದ್ದ ಆ ನಂದಿನಿ ಮದುವೆ ಮಾಡಿಕೊಂಡಿದ್ದು ಪೇಪರಲ್ಲಿ ಬಂದುಬಿಟ್ಟಿತ್ತು. ಅವಳು ಯಾರೋ ಹುಡುಗನ ಜೊತೆ ಓಡಿಹೋಗಿ ದೇವಸ್ಥಾನದಲ್ಲಿ ಮದುವೆ ಮಾಡಿಕೊಂಡಳು ಅಂತ ಅವರ ಅಪ್ಪ ಅಮ್ಮ ಎಷ್ಟು ನೊಂದುಕೊಂಡಿದ್ದರು. ಊರಿನವರಿಗೆ ಮುಖ ತೋರಿಸಲಾಗದಷ್ಟು ಅವಮಾನವಾಗಿಬಿಟ್ಟಿತ್ತು ಅವರಿಗೆ. ತಮ್ಮ ಮಗಳು ಈ ರೀತಿ ಮಾಡಿದಳಲ್ಲಾ ಅಂತ. ಯಾರನ್ನೂ ಮಾತಾಡಿಸದೆ, ಕಡೆಗೆ ಊರು ಬಿಟ್ಟು ಯಾವುದೋ ಅವರ ಹಳ್ಳಿಗೆ ಹೊರಟುಹೋದರು." ಗೌರಿ ಹಿಂದಿನದನ್ನು ಜ್ಞಾಪಿಸಿಕೊಂಡಳು.

"ಹೌದು, ಚಿಕ್ಕ ಊರಿನಲ್ಲಂತೂ ಇಂತಹ ಸುದ್ದಿ ತುಂಬ ದೊಡ್ಡ ಗಾಸಿಪ್ ಆಗಿಬಿಡುತ್ತೆ. ಎಲ್ಲರ ಮನೆ ವಿಷಯ ಎಲ್ಲರಿಗೂ ಗೊತ್ತಿರುತ್ತೆ. ಗೌರಿ, ನೀನು ಮದುವೆ ಮಾಡಿಕೊಂಡು ಅಮೇರಿಕಾಗೆ ಬಂದಾಗ ನಿನಗೇನು ಅನ್ನಿಸ್ತು? ಅಪ್ಪ, ಅಮ್ಮ, ನಮ್ಮ ಊರು, ಜನ ಎಲ್ಲ ಬಿಟ್ಟು ಬಂದಿದ್ದು ಬೇಜಾರಾಯಿತಾ?"

ಇವಳ ಗಂಡನ ಹೆಸರು ಏನು, ಮರೆತೇಹೋಯಿತಲ್ಲಾ, ಮದುವೆಯಾದ ಮೇಲೆ ಗಂಡನ ಹೆಸರು ಇಟ್ಕೋಬೇಕಾಗಿತ್ತಲ್ಲಾ. ಲಾಸ್ಟ್ ನೇಮ್ ಏಕೆ ಬದಲಾಯಿಸಿಕೊಂಡಿಲ್ಲಾ? ಗೌರಿ ಕಿಕ್ಕೇರಿ ಅಂತಾನೆ ಇಟ್ಕೊಂಡಿದಾಳೆ.

"ಅಮೇರಿಕಾದಲ್ಲಿ ನಿನ್ನ ಜೀವನ, ೪೦ ವರ್ಷದಿಂದ ಏನಾಯ್ತು ಹೇಳು. ನಿನ್ನ ಕಥೆ ಹೇಳು ಈಗ."

"ಓ ಇನ್ನೇನು ಮನೆ ಬಂದೇ ಬಿಡ್ತು. ನಮ್ಮ ಎಕ್ಸಿಟ್ ಬಂತು. ಇನ್ನೆರಡು ನಿಮಿಷದಲ್ಲಿ ಮನೇಲಿ ಇರ್ತೀವಿ."

ಕಾರಿನ ವೇಗ ಕಡಿಮೆ ಮಾಡಿ ಮನೆಯ ಕಡೆಗೆ ತಿರುಗಿಸಿದಳು. ಯಾಕೆ ತನ್ನ ಮನೆಯವರ ವಿಷಯ ಹೇಳುತ್ತಿಲ್ಲ ಇವಳು? ನಾನು ಎರಡು ಮೂರು ಸಲ ಕೇಳಿದರೂ ಅವರ ವಿಷಯ ಬದಲಾಯಿಸಿ ಇನ್ನೇನೋ ಹೇಳ್ತಾ ಇದ್ದಾಳೆ.

ಗೌರಿ ಕಾರನ್ನು ಡ್ರೈವೇಯಲ್ಲಿ ನಿಲ್ಲಿಸಿ, ಗೆಳತಿಯನ್ನು ಮನೆಯೊಳಗೆ ಕರೆದೊಯ್ದಳು. ಸುಂದರವಾದ ಸುಸಜ್ಜಿತವಾದ ಮನೆ. ಮನೆ ನಿಶ್ಶಬ್ದವಾಗಿತ್ತು. ಮನೆಯಲ್ಲಿ ಬೇರೆ ಯಾರೂ ಇದ್ದಂತಿರಲಿಲ್ಲ. ಅಷ್ಟರಲ್ಲಿ ಒಂದು ಪುಟಾಣಿ ನಾಯಿಮರಿ ಬಾಲ ಅಲ್ಲಾಡಿಸಿಕೊಂಡು ಓಡಿ ಬಂದು ಸ್ವಾಗತಿಸಿತು. ಕಂದು ಬಿಳಿ ಮಿಶ್ರಿತ ಪಾಮೊರೇನಿಯನ್. "ನಿನಗೆ ನಾಯಿ ಕಂಡರೆ ಹೆದರಿಕೆ ಇಲ್ಲಾ ತಾನೆ. ಇವನ ಹೆಸರು ಮುದ್ದು. ನಿಜವಾಗಿಯೂ ಮುದ್ದಿನ ಮರಿ. ಎಲ್ಲರನ್ನೂ ಬೇಗ ಫ್ರೆಂಡ್ ಮಾಡಿಕೊಂಡುಬಿಡ್ತಾನೆ! ನನ್ನ ಬೆಸ್ಟ್ ಫ್ರೆಂಡ್!"

"ಹೆದರಿಕೆ ಏನೂ ಇಲ್ಲ. ಮುದ್ದು ಹೆಸರಿಗೆ ತಕ್ಕ ಹಾಗೆ ತುಂಬ ಮುದ್ದಾಗಿದ್ದಾನೆ. ನಿಮ್ಮ ಮನೆ ತುಂಬ ಚೆನ್ನಾಗಿದೆ, ಗೌರಿ. ಎಷ್ಟು ಚೆನ್ನಾಗಿ ಇಟ್ಟಿದ್ದೀ. ನೀನು ಮೊದಲಿನಿಂದ ಹಾಗೆ, ತುಂಬ ನಾಜೂಕು, ಅಚ್ಚುಕಟ್ಟು. ಈ ಮನೆಗೆ ಯಾವಾಗ ಬಂದಿರಿ? ನೀನು ಮೊಟ್ಟ ಮೊದಲು ಬಂದಿದ್ದು ಈ ಮನೆಗೇನಾ?"

"ಮನೆ ನೋಡುವಿಯಂತೆ. ಚಿಕ್ಕ ಮನೆ. ಮೇಲೆ ೨ ಬೆಡ್ ರೂಮ್ ಇದೆ. ನೀನು ಏನು ತೊಗೋತಿ? ಕಾಫಿ, ಜ್ಯೂಸ್?" ಗೌರಿ ಅಡುಗೆಮನೆ ಕಡೆ ಹೊರಟಳು.

"ಏನೂ ಬೇಡ. ಬಾ ಇಲ್ಲಿ. ಕೂತುಕೋ. ನಾನು ಆಗಿಂದ ಕೇಳ್ತಾನೇ ಇದ್ದೀನಿ. ನಿನ್ನ ವಿಷಯ ಹೇಳು. ಬಂದಾಗಿನಿಂದ ಏನಾಯಿತು, ಏನೇನು ಮಾಡಿದೆ, ಹೇಳು ಅಂತ. ನೀನು ಮಾತು ಬದಲಾಯಿಸ್ತಾನೇ ಇದ್ದೀಯ. ನಿನ್ನ ಕಥೆ ಹೇಳು, ಎಲ್ಲಿ ನಿನ್ನ ಗಂಡ, ಮಕ್ಕಳು? ಹೊರಗೆ ಹೋಗಿದ್ದಾರ? ನಿನಗೆ ಎಷ್ಟು ಜನ ಮಕ್ಕಳು? ಏನು ಮಾಡ್ತಾ ಇದ್ದಾರೆ?" ಸವಿತಾ ಸ್ನೇಹಿತೆಯೆಂಬ ಸಲಿಗೆಯಿಂದ ಸ್ವಲ್ಪ ಜೋರಾಗೇ ಈ ಸಲ ಪ್ರಶ್ನೆ ಮಾಡಿದಳು.

"ನನ್ನ ಕಥೆಯನ್ನ ಏನು ಅಂತ ಹೇಳಲಿ. ನೀವೆಲ್ಲ ಬೆಂಗಳೂರಿನಲ್ಲಿ ತಿಳಿದಂತೆ ಸುಖದ ಸುಪ್ಪತ್ತಿಗೆ ಆಗಿರಲಿಲ್ಲ ನನ್ನ ಜೀವನ. ಎಲ್ಲರ ಜೀವನದಲ್ಲೂ ನಡೆಯುವಂತೆ ಮದುವೆ ಏನೋ ನಡೆಯಿತು. ಸತೀಶನನ್ನು ಮದುವೆ ಮಾಡಿಕೊಂಡು ಅಮೇರಿಕಾಗೆ ಬರೋಕೆ ನಾನು ಎಷ್ಟು ಪುಣ್ಯ ಮಾಡಿದ್ದೆ ಅಂತಾನೇ ತಿಳ್ಕೊಂಡು ನಾನೂ ಬಂದಿದ್ದೆ. ಆದರೆ ಇಲ್ಲಿ ಆಗಿದ್ದೇ ಬೇರೆ. ಕೂತುಕೋ. ನನ್ನ ಕಥೆ ಹೇಳ್ತೀನಿ."

ನಾನು ಅಮೇರಿಕಾಗೆ ನನ್ನ ಗ್ರೀನ್ ಕಾರ್ಡ್ ದೊರೆತ ಮೇಲೆ ಬಂದೆ. ಬಂದ ದಿನದಿಂದ ಸತೀಶ್ ನನ್ನನ್ನು ಹೆಚ್ಚು ಮಾತಾಡಿಸುತ್ತಿರಲಿಲ್ಲ. ಎಷ್ಟು ಬೇಕೋ ಅಷ್ಟು. ನಾನು ೧೦ ಪ್ರಶ್ನೆ ಕೇಳಿದರೆ, ಒಂದು ಉತ್ತರ ಬರುತ್ತಿತ್ತು. ನನಗೋ ಇಲ್ಲಿ ಎಲ್ಲ ಹೊಸತು. ಎಲ್ಲ ನೋಡಬೇಕು ಎಲ್ಲ ತಿಳ್ಕೋಬೇಕು ಅಂತ ಕುತೂಹಲ. ನೂರಾರು ಪ್ರಶ್ನೆಗಳು. ಹೊಸ ದೇಶ, ಹೊಸ ವಾತಾವರಣ, ಹೊಸ ಸಂಸಾರ, ಹೊಸ ಗಂಡ. ನನ್ನ ಸಂಭ್ರಮಕ್ಕೆ ಎಣೆಯೇ ಇಲ್ಲ. ಸತೀಶನಿಗೆ ಯಾಕೆ ಈ ಉತ್ಸಾಹ, ಸಡಗರ ಇಲ್ಲ ಎಂದು ಯೋಚಿಸುತ್ತಿದ್ದೆ. ಅವನಿಗೆ ಹೊಸ ಹೆಂಡತಿಯೆಂಬ ಆಸೆಯಾಗಲೀ, ಆಸಕ್ತಿಯಾಗಲೀ ಇರಲಿಲ್ಲ. ಹೆಚ್ಚುಗಾರಿಕೆಯಂತೂ ಇರಲೇ ಇಲ್ಲ. ನನ್ನದೇ ಏನಾದರೂ ತಪ್ಪಿದೆಯಾ, ನನ್ನ ನಡವಳಿಕೆಯೇ ಸರಿ ಇಲ್ಲವೇನೋ ಅಂತ ಆಗಾಗ ಯೋಚನೆ ಆಗ್ತಾ ಇತ್ತು. ತಪ್ಪೇನಾದರೂ ಇದ್ದರೆ ಹೇಳಿ, ನಾನು ತಿದ್ದಿಕೋತೀನಿ, ನಿಮಗೆ ಬೇಕಾದ ರೀತಿ ಇರ್ತೀನಿ ಅಂತಾನೂ ಹೇಳ್ತಾ ಇದ್ದೆ. ನನ್ನ ಯಾವ ಮಾತಿಗೂ ಉತ್ತರ ಸಿಗುತ್ತಿರಲಿಲ್ಲ. ನನ್ನ ಮಾತುಗಳನ್ನು ಕೇಳಿಯೂ ಕೇಳದಂತೆ ಹೊರಟುಹೋಗ್ತಾ ಇದ್ದರು. ನಾನೆಷ್ಟು ಕೇಳಿದರೂ ಮಾರುತ್ತರವಿಲ್ಲ. ನನಗೆ ಮೈ ಪರಚಿಕೊಳ್ಳುವಷ್ಟು ಸಿಟ್ಟು ಬರ್ತಾ ಇತ್ತು.

ನನಗೆ ಅಪ್ಪ, ಅಮ್ಮ, ಎಲ್ಲರನ್ನೂ ಬಿಟ್ಟು ಬಂದಿರುವ ಬೇಸರ ಬೇರೆ. ಅಳು ಬರುತ್ತಿತ್ತು. ಎಷ್ಟೋ ಬಾರಿ ಒಬ್ಬಳೇ ಕುಳಿತು ಮನಸ್ಪೂರ್ತಿ ಅತ್ತುಬಿಡುತ್ತಿದ್ದೆ. ಹೊರ ದೇಶದಲ್ಲಿ, ಮನೆಯ ನಾಲ್ಕು ಗೋಡೆಗಳ ಮಧ್ಯದಲ್ಲಿ ನನ್ನವರಾರೂ ಇರದ ಆ ಜೀವನ ಉಸಿರುಗಟ್ಟಿಸುವಂತಿತ್ತು. ಸತೀಶ್ ಬೆಳಗ್ಗೆ ಕೆಲಸಕ್ಕೆ ಹೋದರೆ, ಸಾಯಂಕಾಲ ವಾಪಸ್ ಬರ್ತಾ ಇದ್ದರು. ನಾನು ಒಬ್ಬಳೇ ಮನೆಯಲ್ಲಿ. ಯಾರೂ ಮನೆಗೆ ಬರ್ತಾ ಇರಲಿಲ್ಲ. ಯಾರು ಬರ್ತಾರೆ? ಪಕ್ಕದ ಮನೆಯಲ್ಲಿ ಯಾರು ಇದ್ದಾರೆ ಅಂತಾನೂ ನನಗೆ ಗೊತ್ತಿರಲಿಲ್ಲ. ಭಾರತದಲ್ಲಿ ಆದರೆ ಅಕ್ಕಪಕ್ಕದ ಮನೆಯವರು ಅಂದರೆ ಒಂದೇ ಮನೆಯವರ ತರಹ ಆಗಿಬಿಡ್ತಾರೆ. ಕಷ್ಟ ಸುಖಕ್ಕೆ ಆಗ್ತಾರೆ. ಮನೆಗೆ ಹೋಗಿ ಬಂದು ಮಾಡ್ತಾರೆ. ಇಲ್ಲಿ ಯಾರೂ ಬರೋಲ್ಲ. ನಾನೂ ಹೊರಗೆ ಹೋಗ್ತಾ ಇರಲಿಲ್ಲ. ಕಿಕ್ಕೇರಿಯ ಮನೆಯಲ್ಲಿರದ ಎಲ್ಲ ಸುಖಸೌಲಭ್ಯಗಳೂ ಮನೆಯಲ್ಲಿ ಇದ್ದವು. ಆದರೆ ಯಾವುದೂ ಮನಸ್ಸಿಗೆ ಮುದ ತರುತ್ತಿರಲಿಲ್ಲ. ಟಿ.ವಿ.ಯಲ್ಲಿ ಬರ್ತಾ ಇದ್ದ ಶೋಗಳು ಇಷ್ಟ ಆಗ್ತಾ ಇರಲಿಲ್ಲ. ಅರ್ಥಾನೂ ಆಗ್ತಾ ಇರಲಿಲ್ಲ. ದಿನದ ಒಂದೊಂದು ನಿಮಿಷ ಕಳೆಯುವುದೂ ಕಷ್ಟವಾಗಿತ್ತು. ಎಲ್ಲ ದಿನಗಳೂ ಒಂದೇ ರೀತಿ. ಈ ಏಕತಾನತೆಯಿಂದ ನನಗೆ ಹುಚ್ಚು ಹಿಡಿದಂತೆ ಆಗಿತ್ತು. ಹೀಗೆ ಸ್ವಲ್ಪ ದಿನಗಳು ಕಳೆದವು.

ಒಂದು ದಿನ ಸತೀಶ್ ಮನೆಗೆ ಬಂದವರೇ "ಬಾ ಇಲ್ಲಿ, ನಿನ್ನ ಜೊತೆ ಮಾತನಾಡಬೇಕು" ಅಂದರು. ನನಗದೆಷ್ಟು ಸಂತೋಷ ಆಯಿತು, ನನ್ನ ಜೊತೆ ತಾವಾಗೆ ಮಾತಾಡ್ತಾ ಇದ್ದಾರಲ್ಲಾ ಅಂತ. ಗಂಡ ಹೆಂಡತಿಯೊಡನೆ ಮಾತಾಡುವುದು ತುಂಬ ಸಹಜವಾದ ಸಂಗತಿ. ಆದರೆ ಅದು ಇಷ್ಟು ದಿವಸ ಇಲ್ಲದೇ, ಈಗ ಅವರು ನನಗೆ ಕೊಡುತ್ತಿದ್ದ ಆ ಅಲ್ಪ ಗಮನವೇ ಅಗಾಧವಾಗಿ ಕಂಡಿತ್ತು. ಹಿಂದೆಯೇ ಅನುಮಾನ, ಆಶ್ಚರ್ಯ. ಮುಂದೆ ಅವರು ಹೇಳಿದ ಮಾತುಗಳನ್ನು ಕೇಳಿ ಸಿಡಿಲು ಬಡಿದಂತಾಯಿತು. "ನನ್ನ ತಂದೆತಾಯಿಯ ಬಲವಂತದಿಂದ ನಿನ್ನನ್ನು ಮದುವೆ ಆದೆ. ನನಗೆ ಭಾರತದಲ್ಲಿ ಮದುವೆಯಾಗುವ ಯೋಚನೆಯೇ ಇರಲಿಲ್ಲ. ನಾನು ನನ್ನ ಆಫೀಸಿನಲ್ಲಿ ಕೆಲಸ ಮಾಡುವವಳೊಬ್ಬಳನ್ನು ಪ್ರೀತಿಸುತ್ತೀನಿ. ಅದನ್ನು ಅಪ್ಪ ಅಮ್ಮನಿಗೆ ಹೇಳುವುದಕ್ಕೆ ಅಂತಾನೆ ಭಾರತಕ್ಕೆ ಬಂದಿದ್ದೆ. ಅವರು ನೀನು ಇಲ್ಲಿಯ ಹುಡುಗಿಯನ್ನು ಮದುವೆಯಾಗು, ನಮಗೆ ಬಿಳಿಯ ಸೊಸೆ ಬೇಡ. ಅವಳನ್ನು ಮರೆತುಬಿಡು ಅಂತ ಹಟ ಹಿಡಿದರು. ಅಮ್ಮ ಅಂತೂ ನೀನು ಇಲ್ಲಿಯ ಹುಡುಗಿಯನ್ನು ಮದುವೆಯಾಗದಿದ್ದರೆ, ನಾನು ಪ್ರಾಣ ಬಿಡ್ತೀನಿ ಅಂದರು. ನನಗೆ ಬೇರೆ ಏನೂ ದಾರಿ ಕಾಣದೆ ನಿನ್ನನ್ನು ಮದುವೆಯಾದೆ. ನಿನ್ನನ್ನು ಮದುವೆಯಾಗಿ ಬಂದಮೇಲೆ, ನಿನ್ನ ಒಡನಾಟದಿಂದ ನನ್ನ ಮನಸ್ಸು ಬದಲಾಯಿಸಬಹುದು, ಅವಳ ಬಗ್ಗೆ ನನ್ನ ಭಾವನೆಗಳು ಬೇರೆಯಾಗಬಹುದು ಅಂತ ತಿಳ್ಕೊಂಡಿದ್ದೆ. ಆದರೆ ಹಾಗೆ ಆಗಲಿಲ್ಲ. ಅವಳ ಮೇಲಿನ ಪ್ರೀತಿ ಗಾಢವಾಯಿತು. ನಿನ್ನ ಮೇಲೆ ಪ್ರೀತಿ ಹುಟ್ಟಲಿಲ್ಲ." ಅವರ ಮುಂದಿನ ಮಾತುಗಳು ನನ್ನ ಕಿವಿಯ ಮೇಲೆ

ಬಿದ್ದರೂ, ಮನಸ್ಸಿಗೆ ತಟ್ಟುತ್ತಿರಲಿಲ್ಲ, ಬುದ್ಧಿಗೆ ಅರ್ಥವಾಗುತ್ತಿರಲಿಲ್ಲ. ಎಲ್ಲೋ ದೂರದಿಂದ ಅವರ ಧ್ವನಿ ಬರುತ್ತಿರುವಂತೆ ಭಾಸವಾಗುತ್ತಿತ್ತು. ತಲೆ ತಿರುಗಿ ಬೀಳುವಂತಾಯಿತು.

ಮುಂದೆ ಕೆಲವೇ ದಿನಗಳಲ್ಲಿ ನಮ್ಮ ಡೈವೋರ್ಸ್ ಆಯಿತು. ಈ ಪರದೇಶದಲ್ಲಿ ನಾನು ಈಗ ನಿಜವಾಗಿಯೂ ಒಂಟಿಯಾದೆ. ಭಾರತಕ್ಕೆ ಮರಳಿ ಹೋಗಲೇ ಅಂತ ಯೋಚಿಸಿದೆ. ಹೋಗಿ ಏನು ಪ್ರಯೋಜನ? ಗಂಡ ಬಿಟ್ಟು ಬಂದವಳು ಎಂಬ ಪಟ್ಟಿಯನ್ನು ಹಣೆಗೆ ಅಂಟಿಸಿ, ಎಲ್ಲರೂ ಆಡಿಕೋತಾರೆ. ಅಪ್ಪ, ಅಮ್ಮನಿಗೆ ಮಗಳ ಮದುವೆ ಈ ರೀತಿ ಕೊನೆಗೊಂಡಿತಲ್ಲಾ ಎನ್ನುವ ದುಃಖದ ಜೊತೆಗೆ ಊರಿನ ಜನರ ಕೊಂಕು ಮಾತುಗಳನ್ನು ಬೇರೆ ಎದುರಿಸಬೇಕಾಗುತ್ತೆ. ಅವರು ತಲೆ ಎತ್ತಿ ನಡೆಯದಂತಾಗುತ್ತದೆ. ಆ ನಂದಿನಿಯ ತಂದೆತಾಯಿಗೆ ಆಗಿತ್ತಲ್ಲ, ಹಾಗೆ.

ಅಂದಿನ ನಮ್ಮ ಸಮಾಜದ ರೀತಿನೀತಿ ಜುಗುಪ್ಸೆ ತಂದಿತು. ಹೆಣ್ಣು ಮಕ್ಕಳಿಗೆ ಯಾಕೆ ಈ ಕಟ್ಟು ಕಟ್ಟಳೆ? ಅವಳಿಗಿರುವುದು ಒಂದೇ ದಾರಿಯೇ – ಗಂಡಿನ ಮೇಲೆ ಅವಲಂಬಿಸಿಯೇ ಅವಳ ಜೀವನ ನಡೆಯಬೇಕೆ? ಗಂಡು ಅವನ ಕರ್ತವ್ಯ ಪೂರೈಸದಿದ್ದರೆ? ಅವಳ ಗತಿ ಏನು? ಮದುವೆಯಾಗುವ ತನಕ ತಂದೆ ತಾಯಿಯ ಪಾಲನೆ, ಪೋಷಣೆ, ಆಮೇಲೆ ಗಂಡನ ರಕ್ಷಣೆ, ಕೊನೆಯಲ್ಲಿ ಅವಳು ಮಗನ ಜವಾಬ್ದಾರಿ. ಎಂದೋ ಕೇಳಿದ್ದ, ಎಲ್ಲೋ ಓದಿದ್ದ ಮನುಧರ್ಮದ ಈ ಸೂತ್ರ ನೆನಪಾಯಿತು. ಹೆಣ್ಣಿಗೆ ಗಂಡಿನ ರಕ್ಷಣೆ ಸದಾ ಇರಲಿ ಎನ್ನುವ ಉದ್ದೇಶದಿಂದ ಬರೆದಿದ್ದ ಆ ಸೂತ್ರ ಈಗಿನ ನಮ್ಮ ಸಮಾಜಕ್ಕೆ ಸರಿಯಿಲ್ಲ ಎನಿಸಿತು. ನನಗಾದಂತೆ ಗಂಡ ತನ್ನ ಕರ್ತವ್ಯವನ್ನು ಮರೆತು, ಹೆಂಡತಿಗೆ ರಕ್ಷಣೆ ನೀಡದಿದ್ದರೆ? ಹೆಣ್ಣು ಮಕ್ಕಳನ್ನೂ ಓದಿಸಿ ಸ್ವತಂತ್ರವಾಗಿರುವ ಅವಕಾಶ ಅವರಿಗೆ ಯಾಕೆ ಕಲ್ಪಿಸಬಾರದು? ಈ ಬದಲಾವಣೆ ಈಗ ಭಾರತದಲ್ಲಿ ಆಗಿದೆ, ಆಗುತ್ತಿದೆ ನಿಜ. ನಿನ್ನ ಮಗಳೇ ಇದಕ್ಕೆ ಸಾಕ್ಷಿ. ನೀನು ಮತ್ತು ನಿನ್ನ ಗಂಡ ರಮೇಶ್ ಇಬ್ಬರಿಗೂ ಸಾವಿರ ನಮಸ್ಕಾರ. ನೀವು ಅವಳನ್ನು ಓದಿಸಿದ್ದರಿಂದ, ಅವಳಿಗೆ ಇಲ್ಲಿಗೆ ಬರುವ ಸದವಕಾಶ ದೊರಕಿತು. ಆದರೆ, ೪೦ ವರ್ಷದ ಹಿಂದೆ, ನಮಗೆ ಈ ಅವಕಾಶ ಇರಲಿಲ್ಲವಲ್ಲ.

ಅಮೇರಿಕಾದ ಗಂಡು ಎಂದು ಹೆಚ್ಚುಗಾರಿಕೆಯಿಂದ ಸತೀಶನಿಗೆ ನನ್ನನ್ನು ಮದುವೆ ಮಾಡಿಕೊಟ್ಟಿದ್ದ ನನ್ನ ತಂದೆತಾಯಿಯರ ಮೇಲೆ ಸಿಟ್ಟು ಬರುತ್ತಿತ್ತು. ತನ್ನ ತಂದೆತಾಯಿಯರ ಮಾತನ್ನು ಮೀರಲಾಗದೆ, ಅವರನ್ನು ಸಂತೋಷಪಡಿಸಲು ನನ್ನನ್ನು ಮದುವೆಯಾಗಿ, ಪರದೇಶಕ್ಕೆ ಕರೆತಂದು, ನಡುನೀರಿನಲ್ಲಿ ಕೈಬಿಟ್ಟ ಸತೀಶನ ಮೇಲೆ ರೇಗುತ್ತಿತ್ತು.

ಮುಂದೆ ಓದಿಸದೆ ಹೋದ ತಂದೆಯ ಮೇಲೆ ಸಿಟ್ಟು ಬರುತ್ತಿತ್ತು. ನಾನು ಹುಡುಗ ಆಗಿದ್ದಿದ್ದರೆ ಹೇಗೋ ಕಷ್ಟಪಟ್ಟು ಓದಿಸುತ್ತಿರಲಿಲ್ಲವೇ? ನಾನು ಕಾಲೇಜಿಗೆ ಹೋಗಿ ಎಂಜಿನೀಯರ್ ಅಥವಾ ಡಾಕ್ಟರ್ ಆಗಿದ್ದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು. ಹೋಗಲಿ, ಒಂದು ಬಿ.ಎ.ನಾದರೂ ಮಾಡಿದ್ದಿದ್ದರೆ, ಸುಲಭವಾಗಿ ಕೆಲಸ ಸಿಗುತ್ತಿತ್ತೇನೋ. ಈಗ ಹೊರಗೆ ಹೋಗಿ ಈ ಪರದೇಶದಲ್ಲಿ ನಾನೇ ಸ್ವತಂತ್ರವಾಗಿರ್ತೀನಿ ಎನ್ನುವ ಧೈರ್ಯ,

ಭರವಸೆ ಕೂಡ ನನ್ನಲ್ಲಿರಲಿಲ್ಲ. ಕೋಶದಲ್ಲಿ ಸಿಕ್ಕಿಕೊಂಡಂತೆ, ಗೋಡೆಗಳು ಒತ್ತಿಕೊಂಡು ಬಂದು, ಸೆರೆಯಲ್ಲಿ ಬಂಧಿಸಿದಂತೆ ಮುಂದೆ ದಾರಿ ತೋರದಂತಾಗಿತ್ತು. ಈ ಬಂಧನದಿಂದ ಹೊರಬರುವುದೆಂತು? ಮುಂದಿನ ದಾರಿ ಸ್ಪಷ್ಟವಾಗದೆ ವಿಲವಿಲನೆ ಒದ್ದಾಡುವ ಪರಿಸ್ಥಿತಿ.

ಒಂದು ದಿನ ನಾನೇ ನಿರ್ಧಾರ ಮಾಡಿದೆ. ಹೀಗೆ ಸಮಾಜವನ್ನು, ತಂದೆ ತಾಯಿಯನ್ನು, ಸತೀಶನನ್ನು ಹಳಿದು ಪ್ರಯೋಜನವಿಲ್ಲ. ಹಿಂದಿನ ಜೀವನ ಹಿಂದಿನದಾಯಿತು. ಈಗ ನಾನಿರುವುದು ಬೇರೆಯ ದೇಶ, ಬೇರೆ ಸಮಾಜ, ಬೇರೆ ಪರಿಸರ. ಅದೂ ಅವಕಾಶಗಳ ಅಮರಾವತಿ ಎನ್ನಿಸಿರುವ ಅಮೇರಿಕಾದಲ್ಲಿ. ಈಗ ನನ್ನ ಜೀವನ ನಾನು ನಡೆಸಬೇಕು. ಯಾರನ್ನೂ ಅವಲಂಬಿಸುವಂತಿಲ್ಲ. ನನ್ನ ಬಾಳಿನ ಕಡಿವಾಣ ನನ್ನ ಕೈಲಿರಬೇಕು. ಆಗಿದ್ದಾಯಿತು. ಈಗ ಹಿಂದಿನದನ್ನು ಯೋಚಿಸಿ ಏನು ಪ್ರಯೋಜನ? ಮುಂದೆ ನಡೆಯಬೇಕು. ಈ ಜಗತ್ತಿನಲ್ಲಿ ಹುಟ್ಟಿ ಬರುವಾಗ ನಾವು ಒಬ್ಬರೇ, ಜಗತ್ತನ್ನು ಬಿಟ್ಟು ಹೋಗುವಾಗ ಒಬ್ಬರೇ. ಈ ಮಧ್ಯದಲ್ಲಿ ಒಂದಷ್ಟು ದಿವಸ ಅಪ್ಪ, ಅಮ್ಮ, ಗಂಡ, ಹೆಂಡತಿ, ನಮ್ಮ ಸಂಬಂಧ, ಬಾಂಧವ್ಯ ಎಲ್ಲ. ನಿಜ, ಎಲ್ಲರ ಜೀವನದಂತೆ ಮದುವೆ, ಅದಾದ ೨ ವರ್ಷದಲ್ಲಿ ಒಂದು ಮಗು, ಆಮೇಲೆ ಇನ್ನೊಂದು ಮಗು; ಹೀಗೆ ಎಲ್ಲರ ಕನಸಿನ ಸುಖೀ ಸಂಸಾರ ಎಂಬಂತೆ ನನ್ನ ಜೀವನ ರೂಪುಗೊಳ್ಳಲಿಲ್ಲ. ಗಂಡ, ಮಕ್ಕಳು, ಸಂಸಾರ ನನ್ನ ಭಾಗ್ಯದಲ್ಲಿ ಇಲ್ಲದಿದ್ದರೆ ಬೇಡ. ನನ್ನ ಜೀವನ ಬೇರೆಯದೇ ಆಗಲಿ. ಈಗ ಆಗಿರುವುದನ್ನು ಬದಲಾಯಿಸಲಾಗುವುದಿಲ್ಲ. ಜೀವನದಲ್ಲಿ ಆಗಿರುವ ಈ ಬದಲಾವಣೆಗೆ ನಾನು ಹೊಂದಿಕೊಳ್ಳಬೇಕು. ಈ ಬದಲಾವಣೆಯನ್ನೇ ನಾನು ಸದವಕಾಶವನ್ನಾಗಿ ಮಾರ್ಪಾಡುಗೊಳಿಸಬೇಕು. ನನ್ನ ನಡವಳಿಕೆ ಬದಲಾಗಬೇಕು. ನನ್ನ ಪರಿವರ್ತನೆಯಾಗಬೇಕು.

ನಾನು ಮೊದಲು ಒಂದು ಕೆಲಸ ಹುಡುಕಬೇಕು. ಸತೀಶ ಕೊಡುವ ಹಣ ಎಷ್ಟು ದಿವಸ ಬಂದೀತು. ಈಗಿನ ಹೈಟೆಕ್ ಕಾಲದಲ್ಲಿ ಕೆಲಸ ಹುಡುಕಬೇಕಾದರೆ ಮನೆಯಲ್ಲೇ ಕುಳಿತು, ಕಂಪ್ಯೂಟರ್ ಅಥವಾ ಅವರ ಫೋನನ್ನೇ ಉಪಯೋಗಿಸಿ, ನಮಗೆ ಬೇಕಾದಂತಹ ಕೆಲಸ ಯಾವುದು, ಎಲ್ಲಿದೆ ಎಂದು ತಿಳ್ಕೋಬಹುದು. ನಿನ್ನ ಮಗಳು, ಅಳಿಯ, ಇಲ್ಲಿಗೆ ಬರುವ ಮುನ್ನ, ಭಾರತದಲ್ಲೇ ಕುಳಿತು, ಇಲ್ಲಿಯ ಕಂಪೆನಿಗಳ ಬಗ್ಗೆ, ಕೆಲಸದ ಬಗ್ಗೆ ಈ ರೀತಿ ತಿಳಿದುಕೊಂಡಿರ್ತಾರೆ. ಅದೂ ಅಲ್ಲದೆ, ಅವರ ಸ್ನೇಹಿತರು, ಅವರಿಗೆ ತಿಳಿದವರ ನೆಟ್‌ವರ್ಕ್ ದೊಡ್ಡದಿರುತ್ತದೆ. ಅವರ ಸಹಾಯ ಪಡೆಯಬಹುದು. ಈಗಿನವರು ಭಾರತದಲ್ಲೇ ಕುಳಿತು ಅಮೇರಿಕಾದವರಾಗಿರ್ತಾರೆ. ನನಗೋ ಆಗ ತಿಳಿದವರು ಯಾರೂ ಇಲ್ಲ. ಮೇಲಾಗಿ ನಾನು ಓದಿಲ್ಲ. ಎಲ್ಲಿಂದ ಕೆಲಸ ಹುಡುಕಲು ಶುರುಮಾಡಬೇಕು ಅನ್ನೋದು ಗೊತ್ತಿರಲಿಲ್ಲ. ಒಂದು ದಿನ ಹೇಗೋ ಧೈರ್ಯ ಮಾಡಿ ನಮ್ಮ ಮನೆ ಹತ್ತಿರದಲ್ಲೇ ಇದ್ದ ಲೈಬ್ರರಿಗೆ ಹೋಗಿ ಅಲ್ಲಿ ಯಾರನ್ನಾದರೂ ಕೇಳುವುದು ಅಂತ ನಿರ್ಧರಿಸಿದೆ. ನಾನು ಬಸ್ ಹತ್ತಿ ಹೊರಟೆ. ಬಸ್ಸಿನಲ್ಲಿ ಕುಳಿತಿದ್ದವರೆಲ್ಲ ನನ್ನನ್ನೇ ನೋಡುತ್ತಿದ್ದಾರೇನೋ ಎನ್ನುವ ಭಾವನೆ. ನಾನು ಬಗ್ಗಿಸಿದ ತಲೆ ಎತ್ತಿರಲಿಲ್ಲ.

ಆ ಲೈಬ್ರೇರಿಯನ್, ಲಿಂಡಾ ಅಂತ ಅವಳ ಹೆಸರು, ಅವಳಿಗೆ ಎಷ್ಟು ನಮಸ್ಕಾರ ಹೇಳಿದರೂ ಸಾಲದು. ಅವಳು ನನ್ನ ರೆಸ್ಯೂಮೆ ಕೇಳಿದಳು. ಹಿಂದೆಂದೂ ಕೆಲಸ ಮಾಡಿಲ್ಲದ ನಾನು ಹಾಗಂದರೇನು ಎಂದೆ. "ನಿನ್ನ ಹೆಸರು, ವಿಳಾಸ ಮತ್ತು ಇತರ ವಿವರ, ನೀನು ಓದಿರೋದು, ಕೆಲಸ ಮಾಡಿದ್ದು ಎಲ್ಲ ಬರೆದಿರುವ ರೆಸ್ಯೂಮೆ ಇಲ್ಲವೇ? ಹೋಗಲಿ, ನನಗೇ ವಿವರವಾಗಿ ಹೇಳು" ಅಂದಳು. ನನ್ನ ಕಥೆಯೆಲ್ಲ ಕೇಳಿ, ನಿನಗೆ ನಾನು ಕೆಲಸ ಕೊಡುತ್ತೀನಿ. ಆದರೆ ಸಂಬಳ ಕೊಡಲಾಗುವುದಿಲ್ಲ. ಇಲ್ಲಿ ವಾಲಂಟೀಯರ್ ಆಗು. ಸ್ವಲ್ಪ ಅಭ್ಯಾಸ ಆಗಲಿ. ಆಮೇಲೆ ನೋಡೋಣ ಎಂದಳು. ಹಾಗೆ ಒಂದೆರಡು ತಿಂಗಳಾದ ಮೇಲೆ, ನನಗೆ ಅಲ್ಲೇ ಪಾರ್ಟ್ ಟೈಮ್ ಕೆಲಸ ಕೊಟ್ಟಳು. ನನ್ನ ಕೆಲಸ ಏನಂದರೆ, ಜನರು ಓದಿ ಹಿಂತಿರುಗಿಸಿದ ಪುಸ್ತಕಗಳನ್ನು ಅವುಗಳ ಸ್ವಸ್ಥಾನದಲ್ಲಿ ಜೋಡಿಸಿ ಇಡುವುದು. ನನಗೆ ಅದು 'ಕೆಲಸ' ಅಂತ ಅನ್ನಿಸ್ತಾನೇ ಇರಲಿಲ್ಲ! ಇಷ್ಟವಾದ ಕೆಲಸ. ಸಂತೋಷದಿಂದ ಮಾಡ್ತಾ ಇದ್ದೆ. ಮೊದಲಿಂದ ಓದುವ ಹುಚ್ಚು ಇತ್ತಲ್ಲ, ಬಿಡುವು ದೊರೆತಾಗಲೆಲ್ಲ ಅಲ್ಲಿರುವ ಪುಸ್ತಕಗಳನ್ನು ಓದ್ತಾ ಇದ್ದೆ. ಅದು ಕಂಪ್ಯೂಟರ್ ರೆವಲ್ಯೂಶನ್ ನಡೆಯುತ್ತಿದ್ದ ೮೦ರ ದಶಕ. ನಮ್ಮ ಲೈಬ್ರರಿಗೂ ಒಂದೆರಡು ಪರ್ಸನಲ್ ಕಂಪ್ಯೂಟರ್ ಕೊಟ್ಟಿದ್ದರು. ಎಲ್ಲರಿಗೂ ಅದು ಹೊಸದು. ಯಾರಿಗೂ ಉಪಯೋಗಿಸುವುದು ತಿಳಿದಿರಲಿಲ್ಲ. ಎಲ್ಲರೂ ಹೊಸದಾಗಿ ಕಲಿತುಕೊಳ್ಳಬೇಕಾಗಿತ್ತು. ಸ್ವಭಾವತಹ ಹೊಸ ವಿಷಯಗಳನ್ನು ಸುಲಭವಾಗಿ ಕಲಿಯಬಲ್ಲ ನನಗೆ ಕಂಪ್ಯೂಟರ್ ಬಳಕೆಯನ್ನು ಕಲಿಯಲು ಕಷ್ಟ ಏನೂ ಆಗಲಿಲ್ಲ. ಬೇಗ ಕಲಿತೆ. ಎಲ್ಲರಿಗೂ ನಾನೇ ಕಲಿಸುತ್ತಿದ್ದೆ ಕೂಡ.

ಮುಂದೆ ಕಮ್ಯೂನಿಟಿ ಕಾಲೇಜಿಗೆ ಸೇರಿಕೊಂಡೆ. ಕಲಿಯುತ್ತಿದ್ದ ವಿಷಯ ಕಂಪ್ಯೂಟರ್ ಸೈನ್ಸ್. ಕೆಲಸ ಮುಗಿಸಿ ಸಂಜೆ ಕಾಲೇಜಿಗೆ ಹೋಗುತ್ತಿದ್ದೆ. ರಾತ್ರಿ ೧೦-೧೧ ಗಂಟೆಗೆ ಮನೆಗೆ ಬರುತ್ತಿದ್ದೆ. ಈಗ ಎಲ್ಲ ಕಡೆ ಓಡಾಡಲು ಬಸ್ ಹಿಡಿದು ಹೋಗುವುದು ಕಷ್ಟವೆನಿಸುತ್ತಿತ್ತು. ದುಡ್ಡು ಉಳಿಸಿ ಒಂದು ಹಳೆಯ ಕಾರ್ ಕೊಂಡುಕೊಂಡೆ. ಡ್ರೈವಿಂಗ್ ಕಲಿತುಕೊಂಡೆ. ಮುಂದೆ ಲೈಬ್ರರಿಯ ಕೆಲಸ ಬಿಟ್ಟು, ದಿನಕ್ಕೊಂದರಂತೆ ಉದ್ಭವವಾಗುತ್ತಿದ್ದ ಹೈಟೆಕ್ ಕಂಪೆನಿಯೊಂದರಲ್ಲಿ ಕೆಲಸಕ್ಕೆ ಸೇರಿಕೊಂಡೆ. ಅಲ್ಲಿ ನನಗೆ ತುಂಬ ಒಳ್ಳೆಯ ಹೆಸರು ಬಂತು. ಒಳ್ಳೆಯ ಕೆಲಸಗಾರ್ತಿ ಅಂತ ಗುರುತಿಸಿ, ಬೇಗಬೇಗ ಪ್ರಮೋಶನ್ ಕೊಟ್ಟರು. ಮುಂದೆ ದುಡ್ಡು ಸಂಗ್ರಹಿಸಿ ಈ ಮನೆಯನ್ನೂ ಕೊಂಡುಕೊಂಡೆ.

ಹೀಗೆ ನಾನು ಒಂದೊಂದು ಘಟ್ಟ ದಾಟಿದಾಗಲೂ ನನಗೆ ಹೆಮ್ಮೆಯೊಂದೇ ಅಲ್ಲ, ಅದೇ ಮುಂದಿನ ಅಡಿಯಿಡಲು ಮೆಟ್ಟಿಲಾಗುತ್ತಿತ್ತು, ಪ್ರೋತ್ಸಾಹ ಕೊಡುತ್ತಿತ್ತು. ಈಗ ನನ್ನ ವಿಜಯಗಳೆಲ್ಲ ನನ್ನವೇ ಆಗಿದ್ದವು. ನಾನು ಅದನ್ನು ಯಾರೊಡನೆಯೂ ಹಂಚಿಕೊಳ್ಳುವ ಗೋಜಿಲ್ಲ. ಸೋಲು-ಗೆಲುವು ಎಲ್ಲದಕ್ಕೂ ನಾನೇ ಹೊಣೆ. ನನಗೆ ದೊರಕಿದ್ದ ಈ ಸ್ವಾತಂತ್ರ್ಯ ಮತ್ತೇರಿಸುವ ಸಂತೋಷವನ್ನು ತಂದಿತ್ತು! ಆ ಸ್ವಾತಂತ್ರ್ಯವನ್ನು ಹದ್ದು ಮೀರದಂತೆ ಸರಿಯಾಗಿ ಉಪಯೋಗಿಸಿಕೊಂಡು ಗುರಿಯನ್ನು ಮುಟ್ಟಬೇಕು ಎಂದು

ದೃಢ ನಿರ್ಧಾರ ಮಾಡಿದ್ದೆ. ಮತ್ತು ಹಾಗೆ ನಡೆಯಲು ಶ್ರಮಿಸುತ್ತಿದ್ದೆ. ಈ ಸ್ವಾತಂತ್ರ್ಯವನ್ನು, ಅವಕಾಶಗಳನ್ನು ಸರಿಯಾಗಿ ಉಪಯೋಗಿಸಿಕೊಳ್ಳಲು ನನ್ನಲ್ಲಿ ಶಿಸ್ತು, ವಿವೇಕ, ವಿವೇಚನೆ ಇದೆ ಎನಿಸಿತು. ಇವುಗಳನ್ನು ಚಿಕ್ಕಂದಿನಿಂದ ಕಲಿಸಿ, ಅಭಿವೃದ್ಧಿಗೊಳಿಸಿದ್ದ ತಂದೆತಾಯಿಯರ ಬಗ್ಗೆ ಪ್ರೀತಿ, ಗೌರವ ಹೆಚ್ಚಾಯಿತು.

ಅಮ್ಮ ಅಪ್ಪ ಇಬ್ಬರೂ ಬಂದಿದ್ದರು ಇಲ್ಲಿಗೆ. ನನ್ನ ಮನೆ, ಇಲ್ಲಿನ ನನ್ನ ಜೀವನ, ಕೆಲಸ, ನಾನು ಬಾಳುತ್ತಿರುವ ರೀತಿ, ನನ್ನ ಸಾಧನೆಗಳನ್ನು ಕೇಳಿ ಮೆಚ್ಚಿಕೊಂಡರು, ಹೆಮ್ಮೆಪಟ್ಟುಕೊಂಡರು. 'ನಾನು ನಿನ್ನನ್ನು ಓದಿಸದೆ, ತಪ್ಪಾಯಿತು. ನೀನು ಎಷ್ಟು ಕಷ್ಟಪಟ್ಟಿದ್ದೀ' ಎಂದು ಮರುಗಿದರು. 'ಹೋಗಲಿ ಬಿಡಿ, ಅಪ್ಪ. ನಾನು ಇಲ್ಲಿಗೆ ಬಂದ ಮೇಲೆ ಓದಿದೆನಲ್ಲ. ನೀವು ನನಗೆ ಚಿಕ್ಕಂದಿನಿಂದ ಒಳ್ಳೆಯ ನಡೆನುಡಿ ಕಲಿಸಿ, ಒಳ್ಳೆಯ ಹಾದಿಯಲ್ಲಿ ಬೆಳೆಸಿದಿರಲ್ಲ, ಅದೇ ನನಗೆ ನನ್ನ ಬಾಳನ್ನು ರೂಪಿಸಿಕೊಳ್ಳುವ ಶಕ್ತಿಯನ್ನು ಮತ್ತು ಎಷ್ಟೇ ಕಷ್ಟಬಂದರೂ ಎದೆಗುಂದದೆ ಮುಂದೆ ನಡೆಯುವ ಮನಸ್ಥೈರ್ಯವನ್ನು ಕೊಟ್ಟಿದೆ' ಎಂದೆ. ನಿಜವಾಗಿಯೂ ನನ್ನೊಳಗಿನ ಈ ಶಕ್ತಿಯೇ ನನಗೆ ಮುಂದುವರೆಯಲು ಪ್ರೇರಣೆ ನೀಡುತ್ತಿತ್ತು.

ನನಗೆ ಸತೀಶನ ಮೇಲೂ ಕೋಪವಿಲ್ಲ. ಹಾಗೆ ನೋಡಿದರೆ, ಈ ದೇಶಕ್ಕೆ ನನ್ನನ್ನು ಕರೆತಂದು ಅವರು ದೊಡ್ಡ ಉಪಕಾರ ಮಾಡಿದರು ಎನ್ನಬಹುದು. ನನ್ನ ದೃಷ್ಟಿಕೋನ ದೊಡ್ಡದಾಗುವುದಕ್ಕೆ, ಬದಲಾಗುವುದಕ್ಕೆ ಈ ದೇಶ ಕಾರಣ. ನನ್ನ ಈ ಸ್ವಾತಂತ್ರ್ಯಕ್ಕೆ, ಸಾಧನೆಗಳಿಗೆ ಕಾರಣವಾಗಿರುವುದು ಈ ದೇಶ, ಈ ಸಮಾಜ. ಆಗುವುದೆಲ್ಲ ಒಳ್ಳೆಯದಕ್ಕೆ.

ನೋಡಿದೆಯಾ, ನನ್ನ ಜೀವನದ ಕಥೆ ಕೇಳಬೇಕು ಅಂದೆಯಲ್ಲಾ, ಇದೇ ನನ್ನ ಕಥೆ. ಒಂದು ತರಹದಲ್ಲಿ ಇದು ಎಲ್ಲ ಇಮ್ಮಿಗ್ರೆಂಟ್ಸ್ ಕಥೆಯೂ ಕೂಡ. ಎಷ್ಟೋ ವರ್ಷಗಳಿಂದ ಯಾವ್ಯಾವುದೋ ದೇಶಗಳಿಂದ, ಎಷ್ಟೋ ಕನಸುಗಳನ್ನು ಕಟ್ಟಿಕೊಂಡು ಅಮೇರಿಕಾಗೆ ಇಮ್ಮಿಗ್ರೆಂಟ್ಸ್ ಆಗಿ ಬಂದು, ಇಲ್ಲಿನ ಪರಿಸರಕ್ಕೆ ಹೊಂದಿಕೊಂಡು, ಇಲ್ಲಿ ಯಶಸ್ವೀ ಜೀವನ ನಡೆಸುವವರ ಕಥೆ. ಅವರೆಲ್ಲರ ವಿಜಯಗಾಥೆ!

ಇದುವರೆಗೂ ಗೆಳತಿ ಹೇಳುತ್ತಿದ್ದ ಅವಳ ಕಥೆಯನ್ನು ಕಣ್ಣು ಮಿಟುಕಿಸದೆ ತಲ್ಲೀನಳಾಗಿ ಕೇಳುತ್ತಿದ್ದ ಸವಿತಾ, "ಅಬ್ಬ, ಎಷ್ಟೆಲ್ಲ ಒಬ್ಬಳೇ ಸಾಧಿಸಿದ್ದಿ, ಗೌರಿ. ನೀನು ಅಮೇರಿಕಾಗೆ ಬಂದೆ ಅಂತಾನೆ ನನಗೆ ಹೆಮ್ಮೆ ಎನಿಸಿತ್ತು. ಆದರೆ ಇಲ್ಲಿನ ನಿನ್ನ ಜೀವನ, ನಿನಗೊದಗಿದ ತೊಂದರೆಗಳನ್ನೆಲ್ಲ ನೀನು ಎದುರಿಸಿರುವ ರೀತಿ, ನಿನ್ನ ಸಾಧನೆಗಳು ಎಲ್ಲ ಕೇಳಿದ ಮೇಲೆ, ನನಗೆ ನಿನ್ನ ಮೇಲಿನ ಹೆಮ್ಮೆಯಿನ್ನೂ ಹೆಚ್ಚಾಗಿದೆ" ಎಂದು ಗೆಳತಿಯನ್ನು ತಬ್ಬಿಕೊಂಡಳು.

"ಬಾ, ಊಟ ಮಾಡೋಣ. ಹೊತ್ತಾಯಿತು. ಮುದ್ದೂಗೂ ಊಟ ಕೊಡಬೇಕು" ಎಂದು ಎದ್ದಳು ಗೌರಿ. ಮುದ್ದು 'ಬೌ' ಎನ್ನುತ್ತಾ ಅವರಿಬ್ಬರನ್ನೂ ಹಿಂಬಾಲಿಸಿತು.

*

# ಹೊಸ ದೇಶದಲ್ಲಿ ನೆಲೆಯಾಗುವ ರೀತಿ

■ **ಶ್ರೀನಾಥ್ ಭಲ್ಲೆ,** Glen Allen, VA.

ಒಂದು ಹೊಸ ಊರು ಅಥವಾ ದೇಶದಲ್ಲಿ ನೆಲೆಯಾಗುವುದು ಎಂದರೆ ಹೊಸ ಕಲಿಕೆಗಳನ್ನು ಅಳವಡಿಸಿಕೊಳ್ಳುತ್ತಾ ಸಾಗುವುದು ಎಂದೇ ಅರ್ಥ.

ಅದೊಂದು ದಿನ ಸಂಜೆ ಹೀಗೆ ಕುಳಿತಿರಲು, ಆನ್‌ಲೈನ್ ರೇಡಿಯೋದಲ್ಲಿ ಜಿಮ್ಮಿಗಲ್ಲು ಚಿತ್ರದ ಹಾಡು ಮೂಡಿಬರುತ್ತಿತ್ತು. "ಹರಿಯೋ ನದಿಯು ಒಂದೇ ಕಡೆ ನಿಲ್ಲೋಕ್ಕಾಗಲ್ಲಾ, ಹುಟ್ಟಿದ ಮನುಷ್ಯ ಒಂದೇ ಊರಲಿ ಬಾಳೋಕ್ಕಾಗಲ್ಲ" ಅಂತ. ಬಹುತೇಕ ಎಲ್ಲರ ಜೀವನದಲ್ಲೂ ಒಂದಲ್ಲಾ ಒಂದು ರೀತಿ ಹೀಗೆ ವಸತಿ ಬದಲಿಸಿರುವ ಸನ್ನಿವೇಶ ಖಂಡಿತ ಇರುತ್ತದೆ ಎಂದೇ ನನ್ನ ಅನಿಸಿಕೆ. ಹಲವೊಮ್ಮೆ ಒಂದೇ ದೇಶದಲ್ಲಿ ಊರು ಬದಲಾವಣೆ ಮಾಡದೇ ಒಮ್ಮೆಗೇ ವಿದೇಶ ಪ್ರಯಾಣ ಮಾಡಿದವರೂ ಇದ್ದಾರೆ.

ನಾನು ಸಂಸಾರ ಸಮೇತನಾಗಿ ಭಾರತ ಬಿಟ್ಟು ಅಮೆರಿಕಕ್ಕೆ ಬಂದಾಗಿನ ಕಾಲ, ಅತ್ತ ತೀರಾ ಅಂದಿನ ದಿನಗಳೂ ಅಲ್ಲ, ಇತ್ತ ತೀರಾ ಈಚೆಗಿನ ದಿನಗಳೂ ಅಲ್ಲ. ಬಹಳ ಹಿಂದೆ ಈ ದೇಶದಲ್ಲಿ ತಳವೂರಲು ಬಂದವರು ಭಾರತದ ಆಹಾರ ಸಾಮಾಗ್ರಿಗಳಿಗಾಗಿ ನೂರಾರು ಮೈಲಿ ಹೋಗಿ ಬರುತ್ತಿದ್ದರು. ಅದು ಅಂದಿನ ಕಾಲ. ಇತ್ತೀಚೆಗೆ ಬಂದವರ ಕಥೆಯೇ ಬೇರೆ. ಭಾರತದಲ್ಲಿದ್ದುಕೊಂಡೇ ಇಲ್ಲಿನ ಒಂದು ಅಪಾರ್ಟ್‌ಮೆಂಟ್ ಬಾಡಿಗೆ ಪಡೆದು ನೇರವಾಗಿ ಏರ್ಪೋರ್ಟ್‌ನಿಂದ ಬಂದು ಮನೆ ಸೇರಿಕೊಳ್ಳುತ್ತಾರೆ. ಅರ್ಥಾತ್ ಮತ್ತೊಂದು ದೇಶಕ್ಕೆ ಬಂದು ಬಲು ಬೇಗ ಹೊಂದಿಕೊಳ್ಳುವಷ್ಟು ಸೌಲಭ್ಯಗಳು ಇಂದಿಗಿವೆ. ನಾವು ಬಂದಿದ್ದು ಇವೆರಡು ಕಾಲಗಳ ಮಧ್ಯೆ.

ದಶಾವತಾರದ ಮತ್ಸ್ಯ ಅವತಾರದಲ್ಲಿನ ಕಥೆಯಲ್ಲಿ ಒಂದು ದೊಡ್ಡ ಕಲಿಕೆ ಇದೆ. ದಿನೇ ದಿನೇ ಬೆಳೆಯುತ್ತಿದ್ದ ಒಂದು ಮೀನನ್ನು ಒಂದು ಪಾತ್ರೆಯಿಂದ ಮತ್ತೊಂದು ಪಾತ್ರೆಗೆ ವರ್ಗಾಯಿಸುತ್ತಾ ಕೊನೆಗೆ ಅಷ್ಟು ದೊಡ್ಡ ಮೀನನ್ನು ಇಟ್ಟುಕೊಳ್ಳಲು ಜಾಗವಿಲ್ಲದೆ ಸಮುದ್ರದಲ್ಲಿ ಬಿಡುತ್ತಾರೆ ಮುನಿವರ್ಯ ಮನು. ಪ್ರತೀ ಬಾರಿಯೂ ಹೊಸ ಜಾಗಕ್ಕೆ

ಹೊಂದಿಕೊಂಡು ಬೆಳೆಯುತ್ತಾ ಸಾಗಿದಂತೆ ಸಾಗರಕ್ಕೆ ಹೊಂದಿಕೊಳ್ಳೋದು ಕಷ್ಟವಾಗುವುದಿಲ್ಲ ಎಂಬ ಕಲಿಕೆ. ನನ್ನ ಕಥೆ ಹೀಗಿರಲಿಲ್ಲ.

ಹುಟ್ಟಿನಿಂದ ಹಿಡಿದು, ನಾನೇ ಇನ್ನೊಬ್ಬನ ಹುಟ್ಟಿಗೆ ಕಾರಣವಾಗೋವರೆಗೂ ಅಪ್ಪ ಅಮ್ಮನ ಜೊತೆಯೇ ಇದ್ದ ನನಗೆ ಏಕ್‌ದಂ ದೇಶ ಬಿಟ್ಟು ಮತ್ತೊಂದು ದೇಶಕ್ಕೆ ಬರುವಂತಾದಾಗ ನೀರಿನಿಂದ ಹೊರಬಿದ್ದ ಮೀನಿನಂತೆ ಆಗಿದ್ದೆ. "ಮುಂದೆ ಬಂದರೆ ಹಾಯಬೇಡಿ..." ಎಂಬ ಅಳುಕಿನಿಂದಲೇ ಹೊಸ ದೇಶಕ್ಕೆ ಅಡಿಯಿರಿಸಿದ ನನಗೆ, ಜನರು 'ಹಾಯ್' ಎಂಬುದನ್ನು ಕಂಡಾಗ ನೆಲೆಯಾಗೋ ಹಾದಿ ಸುಗಮವಾಯ್ತು ಎನ್ನಿಸಿದ್ದು ಸುಳ್ಳಲ್ಲ.

ನಾನಿಳಿದ ಊರು ಪ್ರೇಕ್ಷಣೀಯ ಸ್ಥಳ ಅಲ್ಲವಾದ್ದರಿಂದ ಜನಜಂಗುಳಿ ಕಡಿಮೆ ಇತ್ತು. ಅಸಂಖ್ಯಾತ ಭಾರತೀಯ ಸಂಜಾತರು ಇಲ್ಲದೆ ತಕ್ಕ ಮಟ್ಟಿಗೆ ಮಿಶ್ರಣವಿತ್ತು. ಮೊದಲ ಕೆಲವು ದಿನ ಹೋಟಲ್ ಒಂದರಲ್ಲಿ ಉಳಿದುಕೊಂಡಿದ್ದು ನಂತರ ಸಹ ಕೆಲಸಗಾರನೊಬ್ಬನ ಸಹಾಯದಿಂದ ಆಫೀಸಿಗೆ ಹತ್ತಿರದಲ್ಲೇ ಒಂದು ಅಪಾರ್ಟ್‌ಮೆಂಟ್‌ಗೆ ಸೇರಿಕೊಂಡೆವು. ಮಾರ್ಚ್ ತಿಂಗಳಲ್ಲಿ ಮೊದಲ ಬಾರಿಗೆ ಮನೆಗೆ ಕಾಲಿಟ್ಟಾಗ ಹಾಸಿಕೊಳ್ಳಲು, ಹೊದ್ದುಕೊಳ್ಳಲು ಏನೂ ಇರಲಿಲ್ಲ. ಹೇಗಿದ್ದರೂ ಕಾರ್ಪೆಟ್ ಇತ್ತಲ್ಲ ಅಂತ ಎಂಟು ತಿಂಗಳ ಮಗನಿಗೆ ತಕ್ಕಮಟ್ಟಿಗೆ ವ್ಯವಸ್ಥೆ ಮಾಡಿ ನಾವು ಅಡ್ಡಾದೆವು.

ಏಸಿ ಆಗಲಿ, ಹೀಟರ್ ಆಗಲಿ ಬಳಸಿ ಗೊತ್ತಿಲ್ಲ. ಖಾಲಿ ಇದ್ದ ಮನೆಯಲ್ಲಿ ೬೦ ಡಿಗ್ರಿಗೆ ಸೆಟ್ ಮಾಡಿದ್ದರು ಅಂತ ನಮಗೇನು ಗೊತ್ತು. ಚಳಿಯಾಗ್ತಿದೆ ಅಂತ ಗೊತ್ತು, ಆದರೆ ಏನು ಮಾಡಬೇಕು ಅಂತ ಗೊತ್ತಿಲ್ಲ. ಸಾಮಾನ್ಯವಾಗಿ ಹೊದ್ದುಕೊಳ್ಳಲೂ ಒದ್ದಾಡುವ ಮಗನಿಗೆ ಮಾತ್ರ ಸ್ವರ್ಗದಂತಿತ್ತು ವಾತಾವರಣ. ಮರುದಿನ ಬೆಳಿಗ್ಗೆ ಹೊರಗೆ ಬಿಸಿಲು ಕಾಯಿಸಿಕೊಳ್ಳುವ ತನಕ ಮೈತಣ್ಣಗೇ ಇತ್ತು. ಆ ಸಮಯದಲ್ಲೇ ಪಕ್ಕದ ಮನೆಯವರ ಪರಿಚಯವಾಯ್ತು. ಅಲ್ಲಿಗೆ ರೈಡ್ ವ್ಯವಸ್ಥೆಯಾಗಿ ಮನೆಗೂ ಒಂದಷ್ಟು ನಿತ್ಯೋಪಯೋಗಿ ವಸ್ತುಗಳು ಬಂದವು. ಏಸಿ ಮತ್ತು ಹೀಟಿಂಗ್ ಕಲಿಕೆ ಅಂದೇ ಆಯಿತು.

ಚಿಕ್ಕ ಮಗು ಮನೆಯಲ್ಲಿ ಇದ್ದ ಮೇಲೆ ಕನಿಷ್ಠ ಎಂದರೂ ಎರಡು ದಿನಕ್ಕೊಮ್ಮೆ ಬಟ್ಟೆಗಳನ್ನು ಒಗೆಯಲೇಬೇಕು. ಅಂತೂ ವಾಶರ್, ಡ್ರೈಯರ್ ಉಪಯೋಗಿಸಿ ಬಟ್ಟೆ ಒಗೆದು ಒಣಗಿಸಲು ಕಲಿತದ್ದಾಯ್ತು. ಮೊದಲೆಲ್ಲಾ ಹಚ್ಚಗೆ ಬೆಚ್ಚಗೆ ಇರುತ್ತಿದ್ದ ಬಟ್ಟೆಗಳಲ್ಲಿ ಕ್ರಮೇಣ ತೇವ ಹಾಗೇ ಇದೆಯೇನೋ ಅನ್ನಿಸಹತ್ತಿತ್ತು. ಒಮ್ಮೆ ಜೀನ್ಸ್ ಪ್ಯಾಂಟು ಒಗೆದ ಮೇಲಂತೂ ಗ್ಯಾರಂಟಿಯಾಯ್ತು ಅದು ಕೆಟ್ಟಿದೆ ಅಂತ. ಅಪಾರ್ಟ್‌ಮೆಂಟ್ ಆಫೀಸಿಗೆ ಕರೆ ಮಾಡಿದಾಗ ಅವರು ಬಂದು ನೋಡಿ "ಫಿಲ್ಟರ್ ಕ್ಲೀನ್ ಮಾಡಿ" ಅಂತ ಹೇಳಿ ಹೋದರು. ನಮ್ಮ ಮನೆಗಳಲ್ಲಿ ಒಗೆಯುವ ಬಂಡೆ ಇದ್ದಿದ್ದು. ನಾವೇ ಒಗೆಯುತ್ತಿದ್ದೆವು ಅಥವಾ ಕೆಲಸದ ಲಚ್ಚಿ ಒಗೀತಿದ್ಲು. ವಾಶರ್ ಅಂಡ್ ಡ್ರೈಯರ್ ಬಗ್ಗೆ ಅರಿವೇ ಇರಲಿಲ್ಲ. ನೆಲೆಯಾಗೋ ಹಾದಿಯಲ್ಲಿ ಮತ್ತೊಂದು ಕಲಿಕೆ.

ವಾರಾಂತ್ಯದಲ್ಲಿ ಏನಾದರೂ ಬೇಕು ಎಂದಾಗ ಪಕ್ಕದ ಮನೆಯವರ ಜೊತೆ ಹೋಗುತ್ತಿದ್ದೆವು. ಒಮ್ಮೆ ಅವರು ವಾರಾಂತ್ಯ ಮನೆಯಲ್ಲಿ ಇರಲಿಲ್ಲ. ಮತ್ಯಾರನ್ನು ಕೇಳೋದು? ಕೆಲವು ಜನರು ಪರಿಚಯವಾಗಿದ್ದರೂ, ಅವರ ಮನೆಯ ಬಾಗಿಲು ತಟ್ಟಿ ಕೇಳೋದಕ್ಕೆ ಸಂಕೋಚ. ಇಲ್ಲಿಯವರೆಗೂ ಕಾರಿನಲ್ಲಿ ಓಡಾಡುವಾಗ ಯಾವ ದಿಕ್ಕಿನಲ್ಲಿ ಸಾಗಿದರೆ ಯಾವ ಅಂಗಡಿ ಸಿಗುತ್ತದೆ ಎಂದೆಲ್ಲಾ ಅರಿವಿತ್ತು. ಐದರಿಂದ ಹತ್ತು ನಿಮಿಷದ ದೂರದಲ್ಲೇ ಎಲ್ಲಾ ಇದ್ದಿದ್ದು ಅಂತಲೂ ಗೊತ್ತು. ಹಾಗಾಗಿ ಸ್ಟ್ರೋಲರ್ನಲ್ಲಿ ಮಗನನ್ನು ಕೂರಿಸಿಕೊಂಡು ಹೊರಟೇಬಿಟ್ಟೆವು. ಅಂದಾಜಿನ ವಿಷಯದಲ್ಲಿ ಎಡವಿದ್ದೇ ಇಲ್ಲಿ.

ಕಾರಿನಲ್ಲಿ ಐದರಿಂದ ಹತ್ತು ನಿಮಿಷ ದೂರದಲ್ಲಿ ಇರುವ ಅಂಗಡಿಗಳು ನಡೆದು ಹೋಗುತ್ತಿದ್ದ ನಮಗೆ ಅರ್ಧ-ಮುಕ್ಕಾಲು ಘಂಟೆಯಾದರೂ ಕಾಣಿಸಲೇ ಇಲ್ಲ. ಆಗಲೇ ಅರಿವಾಗಿದ್ದು ಕಾರಿಗೂ ಕಾಲಿಗೂ ವ್ಯತ್ಯಾಸ ಇದೆ ಅಂತ. ಒಂದು ಹಂತದಲ್ಲಿ ಅರ್ಥವಾಯ್ತು ನಾವು ಅರ್ಧ ದಾರಿ ಮಾತ್ರ ಬಂದಿದ್ದೇವೆ ಅಂತ. ಆಗಲೇ ಕೊಂಚ ಮೋಡ ಮುಸುಕಲೂ ತೊಡಗಿತ್ತು. ಬಂದ ದಾರಿಗೆ ಸುಂಕವಿಲ್ಲ ಅಂತ ವಾಪಸ್ ಹೊರಟೆವು. ಕೊಂಚ ಬೇಗ ಬೇಗ ಹೆಜ್ಜೆ ಹಾಕಿದರೂ ಮಳೆಗೆ ಸಿಕ್ಕಿಕೊಂಡೆವು. ಹಾಗೇ ಬೀದಿಯಲ್ಲಿ ಸ್ಟ್ರೋಲರ್ ಕೂಡ ನೂಕಿಕೊಂಡು ಓಡುತ್ತಿರಲು ಎದುರು ಮನೆಯವರು ಅದೇ ಹಾದಿಯಲ್ಲಿ ಕಾರಿನಲ್ಲಿ ಬರುತ್ತಿದ್ದು ನಮ್ಮನ್ನು ನೋಡಿ ನಿಲ್ಲಿಸಿ ಹತ್ತಿಸಿಕೊಂಡು ಹೋಗಿ ಮನೆಗೆ ಡ್ರಾಪ್ ಮಾಡಿದರು. ಸಂಕೋಚಪಟ್ಟುಕೊಂಡರೆ ಈ ದೇಶದಲ್ಲಿ ಕೆಲಸವಾಗುವುದಿಲ್ಲ ಎಂಬ ಮತ್ತೊಂದು ಕಲಿಕೆ. ಅದರೊಂದಿಗೆ ಟಿವಿಯಲ್ಲಿ ವೆದರ್ ನೋಡ್ಕೊಂಡು ನಿಮ್ಮ ದಿನ ಪ್ಲಾನ್ ಮಾಡಿ ಅಂತ ಅವರು ಸಲಹೆ ನೀಡಿದ್ದು ಮತ್ತೊಂದು ಕಲಿಕೆ.

ಹೀಗೆ ಆರಂಭದಲ್ಲಿ ಪ್ರತಿಯೊಂದೂ ಹೊಸತಾಗಿದ್ದು ಕಲಿಕೆಗಳನ್ನು ಆನಂದವಾಗಿ ಸ್ವೀಕರಿಸಿದ್ದರಿಂದಲೋ ಏನೋ ಆ ನೆನಪುಗಳು ಇನ್ನೂ ಹಸಿರಾಗೇ ಇವೆ.

ಈಗಿನಷ್ಟು ಕ್ರಾಂತಿಕಾರಿ ಯೋಚನೆಗಳು ಆಗಿನ್ನೂ ಇರಲಿಲ್ಲವಾಗಿ, ನಾನೊಮ್ಮೆ ಆಫೀಸಿಗೆ ಪಿಂಕ್ ಟಿ-ಷರಟು ಧರಿಸಿಕೊಂಡು ಹೋಗಿದ್ದಾಗ ನನ್ನ ಕಡೆಯೇ ನೋಡಿ ಮುಸಿಮುಸಿ ನಗುತ್ತಾ ಸಾಗುತ್ತಿದ್ದರು ಕೆಲವರು. ನನ್ನ ಸಹೋದ್ಯೋಗಿ "ಮಧ್ಯಾಹ್ನ ಊಟಕ್ಕೆ ಹೋದಾಗ ಷರಟು ಬದಲಿಸಿ ಬಾ" ಅಂದ.

ನಮ್ಮದೇ ಒಂದು ಪುಟ್ಟ ಟೀಮಿಗೆ ಒಂದು ಹೆಸರನ್ನು ಇಡಬೇಕು, ಸಲಹೆ ಟೀಡಿ ಎಂದರೊಮ್ಮೆ ನಮ್ಮ ಟೀಮಿನ ಮ್ಯಾನೇಜರ್. ಭಾರತೀಯ ಸ್ನೇಹಿತನೊಬ್ಬ ಎಲ್ಲೆಲ್ಲಿಂದಲೋ ಬಂದ ನಾವೆಲ್ಲಾ ಇಂದು ಒಂದೇ ಸೂರಿನಡಿ ಒಂದು ಕೆಲಸಕ್ಕಾಗಿ ಕೈ ಜೋಡಿಸಿದ್ದೇವೆ. ಹಾಗಾಗಿ ನಮ್ಮ ಟೀಮಿನ ಹೆಸರನ್ನು 'ರೇನ್‌ಬೋ' ಅಂತ ಇಡೋಣ ಎಂದ. ಎಲ್ಲೆಡೆ ಒಂದು ಕ್ಷಣ ನೀರವತೆ. ಮರುಕ್ಷಣ 'ನೋ' ಎಂದು ಒಕ್ಕೊರಳಿನಲ್ಲಿ ಹೇಳಿದಾಗ ಮತ್ತೊಮ್ಮೆ ಹೊಸ ಕಲಿಕೆ. ಸ್ನೇಹದ ಹೆಸರಿನಲ್ಲಿ ಬೈ-ಟು ಕಾಫಿ, ಒಂದು ಸ್ವೀಟ್ ತೆಗೆದುಕೊಂಡು ಇಬ್ಬರು ಹಂಚಿಕೊಳ್ಳುವುದು, ಹಸ್ತಲಾಘವದ ಹೊರತಾಗಿ ಮತ್ತೊಬ್ಬರ ಕೈಯನ್ನು ಸುಮ್ಮನೆ

ಹಿಡಿದುಕೊಳ್ಳುವುದು ಎಂಬುದಕ್ಕೆಲ್ಲಾ ಏನೇನೋ ಅರ್ಥ ಜೋಡಿಸಿರುವುದನ್ನು ನೋಡಿದಾಗ ಖೇದವಾಗುತ್ತಿತ್ತು.

ಸ್ನೇಹದ ವಿಷಯಕ್ಕೆ ಬಂದಾಗ ಒಂದು ಅನುಭವ ಹೇಳಲೇಬೇಕು. ಹೀಗೆ ಒಮ್ಮೆ ನಾವೊಂದು ನಾಲ್ಕು ಮಂದಿ ಕಾಫಿಗೆ ಕ್ಯಾಫೆಟೇರಿಯ ಕಡೆ ಹೋಗುವಾಗ ಮತ್ತೊಬ್ಬ ಆ ಕಡೆಯಿಂದ ಬಂದ ಎಂದು ನಮ್ಮಲ್ಲೊಬ್ಬ ಅವನ ಹೆಗಲಿನ ಮೇಲೆ ಕೈಹಾಕಿ 'ನಡಿ ಗುರೂ ಕಾಫಿಗೆ ಹೋಗೋಣ' ಅನ್ನೋ ರೀತಿಯಲ್ಲಿ ಹೇಳಿದ. ಆತ ತಕ್ಷಣವೇ ಅವನ ಕೈಯನ್ನು ತೆಗೆದು, ನಂತರ ಕ್ಯಾಫೆಟೇರಿಯದಲ್ಲಿ ಹತ್ತು ನಿಮಿಷ ಲೆಕ್ಚರ್ ಕೊಟ್ಟ.

ಪ್ರತಿ ದಿನವೂ ಏನೆಲ್ಲಾ ಕಲಿಕೆಗಳು. ಒಂದು ದೇಶದಿಂದ ಮತ್ತೊಂದು ದೇಶಕ್ಕೆ ಬಂದಾಗ ಈ ಸೂಕ್ಷ್ಮಗಳನ್ನು ಅರಿತು ಜನರೊಡನೆ ವ್ಯವಹರಿಸಬೇಕು ಎಂಬ ಕಲಿಕೆ ಬಹಳ ಮಹತ್ವ ಪಡೆಯುತ್ತದೆ.

ಬೆಂಗಳೂರಿನಲ್ಲಿ ಹುಟ್ಟಿ ಬೆಳೆದು ಕನ್ನಡಿಗರ ಜೊತೆಯಲ್ಲೇ ಬೆಳೆದಿದ್ದ ನನಗೆ ಹಿಂದಿ ಭಾಷೆ ಗೊತ್ತಿಲ್ಲ. ಮೊದಲಿಗೆ ಅಲ್ಲಿ ಕನ್ನಡೇತರ ಸ್ನೇಹಿತರೇ ಇರಲಿಲ್ಲ. ಹಿಂದಿ ಭಾಷೆಯ ಅರಿವು ಬರೀ ಟಿವಿ ಕಾರ್ಯಕ್ರಮಕ್ಕೆ ಸೀಮಿತವಾಗಿತ್ತು. ಕನ್ನಡೇತರ ಎಂದಾಗ ಈ ಘಟನೆ ಹೇಳಬೇಕು.

ನಮ್ಮಲ್ಲಿ "ಫೆಸ್ಟಿವಲ್ ಆಫ್ ಇಂಡಿಯಾ" ಅಂತ ವಾರ್ಷಿಕ ಕಾರ್ಯಕ್ರಮ ಮಾಡುತ್ತಾರೆ. ನಮ್ಮ ಅಪಾರ್ಟ್‌ಮೆಂಟ್'ನ ಒಂದಷ್ಟು ಸ್ನೇಹಿತರು ನಾವೂ ಒಂದು ಬೂತ್ / ಸ್ಟಾಲ್ ಇಡೋಣ ಎಂದರು. ರಗಡಾ ಪ್ಯಾಟೀಸ್ ಸಿದ್ಧ ಮಾಡಿ ಮಾರುವುದು. ಎಲ್ಲ ಹಣವೂ ಸ್ಥಳೀಯ ದೇವಸ್ಥಾನಕ್ಕೆ ಹೋಗುವುದರಿಂದ ವಾಲಂಟಿಯರ್ ಕೆಲಸ ಮಾಡುವ ಹುಮ್ಮಸ್ಸಿನಿಂದ ನಾನೂ ಸಿದ್ಧನಾದೆ. ನನ್ನ ಕೆಲಸ ಜನರೊಂದಿಗೆ ಮಾತನಾಡುವುದು, ತಟ್ಟೆಯಲ್ಲಿ ತಿಂಡಿ ಹಾಕಿಕೊಡುವುದು. ಇಡೀ ಎರಡು ದಿನ ಕೆಲಸ ಮಾಡಿದ್ದೆ. ಎರಡನೆಯ ದಿನದ ಕೊನೆಯಲ್ಲಿ ಯಾರೋ ಅಮೆರಿಕನ್ ಕಸ್ಟಮರ್ ಇವೆರಡೂ ಏನು ಅಂತ ಕುತೂಹಲದಿಂದ ಕೇಳಿದರು. ರಗಡ ಕಡೆ ತೋರಿಸಿ ಪ್ಯಾಟಿಸ್ ಎಂದೆ. ಪ್ಯಾಟಿಸ್ ಕಡೆ ತೋರಿಸಿ ರಗಡಾ ಎಂದೆ. ನನ್ನ ಹೆಂಡತಿಯಿಂದ ಹಿಡಿದು ಮಿಕ್ಕೆಲ್ಲರಿಗೂ ಶಾಕ್. ಈ ವಿಷಯವನ್ನು ಇಂದಿಗೂ ರೇಗಿಸುತ್ತಾರೆ.

ಬೇರೆ ದೇಶಕ್ಕೆ ಬಂದು ನಮ್ಮ ದೇಶದ ಹಲವಾರು ರಾಜ್ಯದವರ ಪರಿಚಯವೂ ಆಗುತ್ತಾ ಹೋಗಿದ್ದೇ ಅಲ್ಲದೆ ಹೊಸ ದೇಶದ ಹಲವಾರು ಹೊಸ ಆಹಾರ ಪದಾರ್ಥಗಳೂ ಉಣ್ಣಬಲ್ಲ ಲಿಸ್ಟ್‌ಗೆ ಸೇರುತ್ತಾ ಹೋದುವು.

ವಾತಾವರಣ ಭೀಕರತೆಯ ಅರಿವಾಗಿದ್ದೂ ಈ ದೇಶದಲ್ಲಿಯೇ. ಬೆಂಗಳೂರಿನ ಚಳಿ, ಮಳೆ, ಬಿಸಿಲಿಗೆ ಒಗ್ಗಿದ್ದ ದೇಹಕ್ಕೆ ಈ ದೇಶದ ಚಳಿ ವಿಶೇಷವಾಗೇ ಕಂಡಿತ್ತು. ಸಾಕ್ಸ್, ಶೂಸ್, ದಪ್ಪನೆಯ ಕೋಟು, ಮುಫ್ಲರ್ ಎಂದೆಲ್ಲಾ ಧರಿಸಿ ನಾಲ್ಕು ಮನೆಯಾಚೆಗಿನ ಮೇಲ್‌ಬಾಕ್ಸ್ ಕಡೆ ಹೋಗುವಾಗ ಅಥವಾ ಟ್ರಾಶ್ ಎಸೆಯಲು ಹೋಗುವಾಗ ಬಹಳ

ಸೋಜಿಗ ಎನ್ನಿಸುತ್ತಿತ್ತು. ಸ್ನೋ ಬಿದ್ದಾಗ ಬಿಳಿಯ ಬಣ್ಣದ ಮೆರುಗಿಗೆ ಮರುಳಾದರೂ ಅನಂತರ ಅದು ಸ್ಲೀಟ್ ಆಗಿ ಕಾಲು ಜಾರಿ ಬಿದ್ದಾಗ ಅಥವಾ ಗಡ್ಡೆ ಕಟ್ಟಿ ಕಪ್ಪಾಗಿ ಕೂತಾಗ ಮಾತ್ರ ಸ್ನೋ ಬೀಳೋದಾದ್ರೂ ಯಾಕೆ ಅನ್ನಿಸುತ್ತಿತ್ತು.

ಈ ದೇಶಕ್ಕೆ ಬಂದ ಮೇಲೇ ಅರಿವಿಗೆ ಬಂದಿದ್ದು ಹರಿಕೇನ್ ಎಂದರೆ ಏನು ಅಂತ. ಇದರ ಭೀಕರತೆಯನ್ನು ಟಿವಿಯಲ್ಲಿ ಬಿಟ್ಟಬಾಯಿ ಬಿಟ್ಟುಕೊಂಡು ನೋಡುತ್ತಾ ಇದ್ದ ದಿನಗಳಲ್ಲಿ ನಮ್ಮೂರಿಗೆ ಒಮ್ಮೆ ಅಪ್ಪಳಿಸಿದಾಗ ಅದರ ತೀವ್ರತೆಯ ಅರಿವಾಗಿತ್ತು. ಕಾಲಕ್ರಮೇಣ ಅನುಭವಗಳ ಸಾಲಿಗೆ ಇದೂ ಸೇರಿ ಪುರಾತನವಾಯ್ತು.

ಹೊರದೇಶಕ್ಕೆ ಬಂದು ತಳ ಊರುವುದು ಎನ್ನುವುದರ ಜೊತೆಜೊತೆಗೇ ಬರುವ ಉಡುಗೊರೆಗಳು ಹಲವಾರು. ಇವೆಲ್ಲವೂ ಪರದೇಶದಲ್ಲಿ ಹೊಂದಿಕೊಳ್ಳಲು ಸಹಾಯಕಾರಿಯಾಗುತ್ತವೆ.

ಮೊದಲಿಗೆ ಹೊಸ ದೇಶ ಎಂದಾಗ ಸುತ್ತಮುತ್ತಲಿನಲ್ಲಿ ಯಾವ ಪ್ರೇಕ್ಷಣೀಯ ಸ್ಥಳಗಳಿವೆ ನೋಡಿ ಬರೋಣ ಎಂಬ ಆಸಕ್ತಿ. ಭಾರತದಲ್ಲಿದ್ದಾಗ ಕರ್ನಾಟಕ ಬಿಟ್ಟು ದಾಟದ ಈ ದೇಹ ಇಲ್ಲಿಗೆ ಬಂದ ಮೇಲೆ ಡ್ರೈವಿಂಗ್ ಮಾಡಿಕೊಂಡು ಹೋಗಬಹುದು ಎನ್ನಬಹುದಾದ ಸುತ್ತಮುತ್ತಲಿನ ರಾಜ್ಯಗಳನ್ನೆಲ್ಲಾ ನೋಡಿ ಬಂದಿದ್ದು ಮನಸ್ಸು ಸ್ವಲ್ಪ ವಿಶಾಲವಾಗಲು ಅನುವು ಮಾಡಿಕೊಟ್ಟಿದೆ.

ಹೀಗೆ ಒಮ್ಮೆ ಬೇಸಿಗೆಯ ಸಮಯದಲ್ಲಿ ನ್ಯೂಯಾರ್ಕ್ ನೋಡಿಕೊಂಡು ಬರೋಣ ಎಂದು ಮನೆಯವರು ಹೇಳಿದಾಗ, ವರ್ಷಾಂತ್ಯದ ಕ್ರಿಸ್ಮಸ್ ಸಮಯದಲ್ಲಿ ಹೋದರೆ ಎಲ್ಲೆಲ್ಲೂ ಹಬ್ಬದ ವಾತಾವರಣ ಇರುತ್ತೆ ಎಂದು ನಾನೇ ಮುಂದೂಡಿದೆ. ಮನುಜರ ಜೀವಗಳು ಉದುರುತ್ತವೆ, ಮನೆಗಳು, ಮರಗಳು ಉದುರುತ್ತವೆ ಎಂದೆಲ್ಲಾ ಅರಿವಿದ್ದ ನನಗೆ ಎಷ್ಟೋ ವರುಷಗಳು ನಿಂತಿದ್ದ ಆ ಟ್ವಿನ್ ಟವರ್ ಸೊಬಗು ಸೆಪ್ಟೆಂಬರ್ ತಿಂಗಳಲ್ಲಿ ಉದುರಿಹೋಗುತ್ತದೆ ಎಂದು ಕನಸುಮನಸ್ಸಿನಲ್ಲೂ ಎಣಿಸಿರಲಿಲ್ಲ. ಈ ದೇಶದಲ್ಲಿ ಆ ಘಟನೆ ಎಷ್ಟರ ಮಟ್ಟಿಗೆ ಅರಾಜಕತೆ ಮೂಡಿಸಿತ್ತು ಎಂದು ಹೇಳಲೇ ಅಸಾಧ್ಯ. ದೇಶದ ಉದ್ದಗಲಕ್ಕೂ ಭೀತಿ ಆವರಿಸಿತ್ತು. ಅಲ್ಲಿಂದ ಹತ್ತು ದಿನಗಳಿಗೆ ನನ್ನ ಪತ್ನಿ ಮತ್ತು ಪುತ್ರ ಭಾರತಕ್ಕೆ ಹೊರಟಿದ್ದರು.

ದೇಶ ಬಿಟ್ಟು ಬಂದ ಮೇಲೆ ಮೊದಲ ಬಾರಿಗೆ, ಅದರಲ್ಲೂ ಇಂಥಾ ಪರಿಸ್ಥಿತಿಯಲ್ಲಿ ಅವರುಗಳು ಭಾರತಕ್ಕೆ ಭೇಟಿ ನೀಡಲು ಹೊರಟಿದ್ದು ತುಂಬಾ ಯೋಚಿಸುವ ಹಾಗಾಗಿತ್ತು. ಅವರುಗಳು ಅಲ್ಲಿಗೆ ಸೇರುವತನಕ ಆತಂಕ ಇದ್ದೇ ಇತ್ತು. ಆಗ ಅರಿತ ಮತ್ತೊಂದು ಕಲಿಕೆ ಎಂದರೆ "ಈ ಆತಂಕ ವಲಸೆ ಜೀವನದ ಅವಿಭಾಜ್ಯ ಅಂಗ" ಅಂತ. ಆದರೆ ಆ ಆತಂಕ ಅಲ್ಲಿಗೆ ಮುಗಿಯಲಿಲ್ಲ. ಹೊಟ್ಟೆಪಾಡಿಗೆ ದೇಶ ಬಿಟ್ಟು ಬಂದವನಿಗೆ ಹೊಟ್ಟೆಗೇ ಇಲ್ಲದಿದ್ದರೆ ಎಂಬೋ ಆತಂಕ. ಕೇವಲ ಮೂರು ತಿಂಗಳಿಗೆ ಅಂತ ನನ್ನೊಬ್ಬನನ್ನೇ ಬಿಟ್ಟು ಹೋದ ಮೇಲೆ ದಿನನಿತ್ಯದ ಹೊಟ್ಟೆಪಾಡಿಗೆ ಏನು ಮಾಡಬೇಕು? ಮೂರು ಹೊತ್ತೂ ನನಗ್ಯಾರು

ಊಟ ಹಾಕ್ತಾರೆ? ಊರಲ್ಲಿ ಉಣ್ಣೋದಕ್ಕೆ ಮಾತ್ರ ಅಡುಗೆಮನೆಗೆ ಕಾಲಿಡುತ್ತಿದ್ದ ನಾನು ಈಗ ಸೌಟು ಹಿಡಿಯಲು ಸಿದ್ಧನಾಗಿದ್ದೆ. ಅಂದು ಹಿಡಿದ ಸೌಟನ್ನು ಈಗಲೂ ಆಗಾಗ ಹಿಡಿಯುತ್ತೇನೆ ಎಂಬುದು ಸುಳ್ಳಲ್ಲ. ಕಲಿಕೆ ಎಂದ ಮೇಲೆ ಅದನ್ನು ಪ್ರಾಕ್ಟೀಸ್ ಮಾಡಲೇಬೇಕಲ್ಲವೇ?

ಹುಟ್ಟಿನಿಂದ ಕೇಳರಿಯದ ಪದ ಎಂದರೆ 'ರಿಸೆಶನ್'. ಮಾರುಕಟ್ಟೆ ಕುಸಿಯುತ್ತದೆ ಎಂಬ ವಿಷಯ ತಲೆಗೇ ಹೋಗುತ್ತಿರಲಿಲ್ಲ. ಮೇಲೆ ಹೋಗಿದ್ದು ಕೆಳಕ್ಕೆ ಬರಲೇಬೇಕು, ಇದೆಲ್ಲಾ ಒಂದು ಚಕ್ರದ ಹಾಗೆ ಎಂಬುದೆಲ್ಲಾ ವೇದಾಂತದ ಮಾತಿನ ರೀತಿ ಕೇಳುತ್ತಿತ್ತು. ಗ್ರೀನ್ ಕಾರ್ಡ್ ಪಡೆದುಕೊಂಡ ಮೇಲೆ ನಾ ಕೆಲಸ ಮಾಡುತ್ತಿದ್ದ ಕಂಪನಿಯಲ್ಲೇ ಫುಲ್‌ಟೈಮ್ ಕೆಲಸಕ್ಕೆ ಸೇರಿದಾಗ, ಕೆಲಸ ಪರ್ಮನೆಂಟ್ ಆಯ್ತು ಎಂದು ಕೆಲವರಲ್ಲಿ ಹೇಳಿದಾಗ ಅವರು ತುಟಿ ಅಂಚಿನಲ್ಲೇ ನಕ್ಕಿದ್ದರು. ಆಗ ಅರ್ಥವಾಗಿರಲಿಲ್ಲ.

ಮಾರುಕಟ್ಟೆ ಕುಸಿಯುತ್ತಾ ಬರುತ್ತಿದ್ದಂತೆ ನಮ್ಮ ಕಂಪನಿಯಲ್ಲೂ ಕೆಲಸದ ಕಡಿತ ಕಾಣಿಸಿಕೊಳ್ಳತೊಡಗಿತ್ತು. ಆದರೆ ಪ್ರತೀ ಬಾರಿಯೂ ಉಳಿದುಕೊಂಡವರಿಂದ ನಾನು ಒಂದು ರೀತಿ ತೀಕ್ಷ್ಣ ನೋಟ ಎದುರಿಸಬೇಕಿತ್ತು. ಅಲ್ಲಿಯವರೆಗೆ ನಸುನಗುತ್ತಾ ಮಾತನಾಡಿಸುತ್ತಿದ್ದ ಜನಗಳು, ತಮ್ಮ ಹೊಟ್ಟೆಪಾಡಿನ ಜೀವನಕ್ಕೆ ಹೊಡೆತ ಬಿದ್ದಾಗ, "ಪರದೇಶದಿಂದ ನೀವುಗಳು ಇಲ್ಲಿ ಬಂದು ಏನು ಮಾಡುತ್ತಿದ್ದೀರಿ ?" ಎಂದು ತೀಕ್ಷ್ಣನೋಟ ಬೀರುತ್ತಿದ್ದರು. ದಿನೇ ದಿನೇ ಕೆಲಸಗಾರರ ಸಂಖ್ಯೆ ಕ್ಷೀಣಿಸುತ್ತಾ ಸಾಗಿ ಕೊನೆಗೊಂದು ದಿನ ೬೦ ವರ್ಷಗಳ ಇತಿಹಾಸ ಹೊಂದಿದ್ದ ಕಂಪನಿಯನ್ನೇ ಮುಚ್ಚಿದರು ಎಂಬಲ್ಲಿಗೆ ಕಷ್ಟದ ಬಿಸಿ ತಟ್ಟಿತ್ತು.

ಬಂದದ್ದೆಲ್ಲಾ ಬರಲಿ, ಗೋವಿಂದನ ದಯೆ ಒಂದಿರಲಿ ಅಂತ ಆ ಸ್ಥಿತಿಯನ್ನೂ ಎದುರಿಸಿ ನಿಂತು ಜಯಿಸಿದೆವು. ಮುಂದಿನ ದಿನಗಳಲ್ಲಿ ಎಚ್ಚರಿಕೆಯಿಂದ ಇರಬೇಕು ಎಂಬ ಕಲಿಕೆ ಬೆಲೆಕಟ್ಟಲಾಗದ್ದು. ಆದರೂ ನಾಳೆಗೆಂದೇ ಬದುಕಿದರೆ ಇಂದು ಅನುಭವಿಸುವುದಾದರೂ ಏನು?

ಹೊರದೇಶಕ್ಕೆ ಬಂದ ಮೇಲೆ ತಳ ಊರಲು ಏನೆಲ್ಲಾ ಹೋರಾಟ ಮಾಡಿಕೊಂಡು ಮುಂದೆ ಸಾಗುತ್ತಿದ್ದರೂ, ಒಂದು ವಿಷಯ ಎದುರಿಸುವಾಗ ಮಾತ್ರ ಇಷ್ಟು ದೂರ ಬರಬಾರದಿತ್ತು ಎಂದು ಅನ್ನಿಸದೇ ಇರುವುದಿಲ್ಲ. ಅಪ್ಪ, ಅಮ್ಮ ನಮ್ಮನ್ನು ಬಿಟ್ಟು ಹೋದ ಆ ಸಮಯದಲ್ಲಿ ನಾವು ಅಲ್ಲಿರದೆ ಹೋದಾಗ ಮತ್ತು ಆ ಸಮಯಕ್ಕೆ ಹೋಗಲಾಗದೇ ಇರುವ ಪರಿಸ್ಥಿತಿಯೂ ಉಂಟಾದ ಪಾಪಪ್ರಜ್ಞೆ ಕಾಡುತ್ತದೆ. ದಶರಥನಿಗೆ ತಟ್ಟಿದ್ದ ಶಾಪ ಮನುಕುಲವನ್ನು ಈಗಲೂ ಕಾಡುತ್ತಿದೆ. ಯಾವ ಪುರುಷಾರ್ಥಕ್ಕಾಗಿ ಇಲ್ಲಿಗೆ ಬಂದೆವು ಎಂದು ಅನ್ನಿಸುತ್ತದೆ. 'ಎವೆರಿಥಿಂಗ್ ಕಮ್ಸ್ ವಿತ್ ಎ ಪ್ರೈಸ್' ಅಂತ ಅನ್ನಿಸೋದು ಈಗಲೇ.

ಆರಂಭದಲ್ಲಿ ನಾವು ಇಲ್ಲಿಯವರಲ್ಲ, ವಾಪಸ್ ಹೋಗಿಬಿಡ್ತೀವಿ ಅನ್ನೋ ಮನೋಭಾವದಲ್ಲಿ ಒಬ್ಬ ಯಾತ್ರಿಕನ ಹಾಗೆ ಹೆಚ್ಚಾಗಿ ಒಳಗೆ ನುಗ್ಗದೇ ಹೊರಗೆ ಇದ್ದು

ಆನಂದಿಸುತ್ತಾ ಸಾಗುತ್ತೇವೆ. ಅನಂತರ ಐದಾರು ವರ್ಷ ವೀಸಾ ಇದೆ, ಕೆಲಸವೂ ಚೆನ್ನಾಗಿ ನಡೆಯುತ್ತಿದೆ ಎಂದಾಗ ತಳ ಊರುವ ಆಶಯ ಗರಿಗೆದರುತ್ತದೆ. ಗ್ರೀನ್ ಕಾರ್ಡ್ ಬರುತ್ತಿದ್ದಂತೆ ಮನೆ ಏಕೆ ಮಾಡಿಕೊಳ್ಳಬಾರದು ಎನ್ನಿಸುವುದು ಸಹಜ.

ನಮಗೇ ಅರಿವಿಲ್ಲದೆ ಸಿಸ್ಟಮ್ನಲ್ಲಿ ಒಂದಾಗುತ್ತಾ ಸಾಗುತ್ತೇವೆ. ಈ ಮಧ್ಯೆ ಒಂದಷ್ಟು ಬಾರಿ ಭಾರತ ಯಾತ್ರೆಯೂ ಆದಾಗ ಎರಡು ವಾರ ಅಲ್ಲಿ ಕಳೆಯಲೇ ದುಸ್ತರವಾಗುತ್ತದೆ. ನಾವು ಹುಟ್ಟಿ ಬೆಳೆದ ಮನೆಯಲ್ಲೇ ಒಂದು ರೀತಿ ಅತಿಥಿಗಳ ಹಾಗೆ ಇದ್ದೀವೇನೋ ಎಂಬ ಭಾವ. ಕಾರಣ ಇಷ್ಟೇ, ನಾವಿಲ್ಲಿ ಹೊಂದಿಕೊಂಡು ಹೋಗುತ್ತಾ ಸಾಗಿದಂತೆ ಅಲ್ಲಿಯವರೂ ನಾವಿಲ್ಲದೆ ಇರುವ ಜೀವನಕ್ಕೆ ಹೊಂದಿಕೊಂಡು ಸಾಗುತ್ತ ಹೋಗಿರುತ್ತಾರೆ. ಇದರಲ್ಲಿ ತಪ್ಪು ಒಪ್ಪು ಎಂಬುದೇನಿಲ್ಲ. ಆಗ ಮತ್ತೊಂದು ನಗ್ನಸತ್ಯ ಗೋಚರವಾಗುತ್ತದೆ. ನಾವು ಇಲ್ಲಿಯವರಿಗೆ ಇಲ್ಲಿಯವರಲ್ಲಾ, ಅಲ್ಲಿನವರಿಗೆ ಅಲ್ಲಿನವರಲ್ಲ.

ಹೊಸ ದೇಶದಲ್ಲಿ ದಿನನಿತ್ಯದ ಜೀವನಕ್ಕೆ ಹೊಂದಿಕೊಳ್ಳುವ ಹಾದಿಯಲ್ಲೇ ನನ್ನಲ್ಲೊಬ್ಬ ಬರಹಗಾರ ಕೂಡ ನೆಲೆಯಾಗುತ್ತಾ ಸಾಗಿದ್ದಾನೆ. ಹಾಗಾಗಿ ನಿಮ್ಮೊಂದಿಗೆ ನಾಲ್ಕಕ್ಷರದಲ್ಲಿ ನನ್ನ ಅನುಭವ ಹಂಚಿಕೊಳ್ಳಲು ಸಾಧ್ಯವಾಗಿದೆ.

*

# ನಿತ್ಯದಾಟ

**ಕಾವ್ಯಾ ಕಡಮೆ ನಾಗರಕಟ್ಟೆ,** Bridgewater, NJ.

"ಯಾಕ ಒಂಥರಾ ಅದಿ ಅಲಾ?" ಎಂಬ ಒಂದೇ ಮಾತು ಸುಘೋಷನ ಬಾಯಿಂದ ಬರದೇ ಇರಲಿ ದೇವರೇ ಅಂತ ಪ್ರಾರ್ಥಿಸುತ್ತಾಳೆ ಮನು ಯಾವಾಗಲೂ. ಆ ಶಬ್ದಗಳು ಅವನ ಮನಸ್ಸಿನಲ್ಲೂ ಹುಟ್ಟಬಾರದು ಅಂತ ಶಕ್ತಿ ಮೀರಿ ಪ್ರಯತ್ನಿಸುತ್ತಾಳೆ. ಅವನು ಆ ಒಂದು ಮಾತು ಆಡಿದನೆಂದರೆ ಮನೆಯಲ್ಲಂದು ಅಕಾರಣವಾಗಿ ಏನೋ ಸ್ಫೋಟಗೊಳ್ಳುತ್ತದೆ ಮತ್ತು ಆ ಬಿಸಿ ಇಬ್ಬರನ್ನೂ ಸುಡುತ್ತ ಒಂದು ವಾರದವರೆಗೂ ಮುಂದುವರೆಯುತ್ತದೆ ಅಂತ ಮದುವೆಯಾದ ಈ ಮೂರು ವರ್ಷದ ಅನುಭವದಲ್ಲಿ ಅವಳಿಗೆ ಗೊತ್ತಿದೆ.

ಆದರೂ ಅವಳ ಕೈಮೀರಿ ಸುಘೋಷ ಆ ಮಾತನ್ನಾಡುವ ಘಳಿಗೆ ಎರಡು ತಿಂಗಳಿಗೊಮ್ಮೆಯಾದರೂ ಬಂದೇ ಬರುವುದು. ಅವರ ದೈನಿಕದಲ್ಲಿ ಪರಿಸ್ಥಿತಿ ಅವಳ ಅಣತಿ ದಾಟಿ ಹೋಗಿ ಇನ್ನೇನು ಅವನು ಆ ಮಾತನ್ನು ಹೇಳುತ್ತಾನೆ ಎಂಬುದಕ್ಕೆ ಎರಡೇ ಕ್ಷಣಗಳ ಮೊದಲು ಅವಳಿಗೆ ಗೊತ್ತಾಗಿಹೋಗುವುದು. ತಪ್ಪಿ ಹಾಕಿದ ಕೈಹೊಲಿಗೆಯನ್ನು ಹಿಂತೆಗೆದುಕೊಳ್ಳಲಾಗದ ಸಂಕಟದಲ್ಲಿ ಅವಳು ಆ ಹೊತ್ತು ವಿಕಾರಗೊಂಡ ಬಟ್ಟೆಯ ಇದಿರು ಮಂದ ದೃಷ್ಟಿಯ ದರ್ಜಿ ನಿಂತಂತೆ ಅಸಹಾಯಕಳಾಗಿ ನಿಲ್ಲುವಳು.

ತನ್ನಂತೆಯೇ ಸುಘೋಷನೂ ಆ ಒಂದು ಮಾತನ್ನು ಆಡಬಾರದೆಂದು ಬಹುತೇಕ ಸಂದರ್ಭಗಳಲ್ಲಿ ನಿಗ್ರಹಿಸಿಕೊಳ್ಳುತ್ತಾನೆ ಅಂತಲೂ ಮನುಗೆ ಅನ್ನಿಸಿದೆ, ತುಂಬಾ ಸಲ. ಆದರೆ ಎಲ್ಲಾ ಸಂಸಾರಗಳಲ್ಲೂ ಆಗುವ ಹಾಗೆ ನಿಗ್ರಹದ ಗಡಿ ದಾಟಿ ಏನಾದರೊಂದು ಜರುಗಿಯೇ ಬಿಡುವುದು. ಜಡೆ ಹೆಣೆದಂತೆ ಒಂದಕ್ಕೊಂದು ವಾದ ಸರಣಿ ಸೇರಿಕೊಳ್ಳುತ್ತ ಮುಚ್ಚಿಟ್ಟ ಕೆಂಡದ ಮೇಲೆ ತರಗೆಲೆ ಸುರಿದಂತೆ ಉರಿ ಒಳಗೊಳಗೆ ಭುಸುಗುಟ್ಟುವುದು. ನಂತರ ಆ ಕಿಡಿಯನ್ನು ತಕ್ಷಣ ಆರಿಸಲಿ ಇಲ್ಲಾ ಪೂರ್ತಿ ಉರಿಯಲು ಬಿಡಲಿ ಅದೆಷ್ಟೋ ದಿನಗಳವರೆಗೆ ಗಾಳಿಯಲ್ಲೇ ಆ ಒಣ ತರಗೆಲೆ ಅಗ್ನಿ ಸ್ಪರ್ಶಿಸಿದ ಹೊಗೆ ಸೇರಿಹೋದಂತೆ

ಮೂಗಿಗೆ ಹೊಡೆಯುತ್ತಿರುವುದು. ಹೊಗೆಯೆಲ್ಲ ಕ್ರಮೇಣ ಆವಿಯಾಗಿ ಹೋದರೂ ನಾಸಿಕದ ಹೊಳ್ಳೆಗಳಲ್ಲಿ ಆ ಕಮಟು ವಾಸನೆಯ ನೆನಪು ಹೊಸ ಚರ್ಮ ಹೊದ್ದಲ್ಲಿ ಮಾತ್ರ ಮೆತ್ತಗಿರುವ ಹಳೆಯ ಗಾಯದಂತೆ ಉಳಿದೇ ಹೋಗುವುದು.

ಆ 'ಒಂದು ಥರ' ಎಂದರೆ ಏನೆಂದು ವಿವರಿಸುವ ನಿಖರತೆಯನ್ನು ಮನುವಿಗೂ, ಸುಘೋಷನಿಗೂ ನಿಘಂಟಿನ ಯಾವ ಪದಗಳೂ ನೀಡಲಾರವೇನೋ. ಆ 'ಒಂಥರಾ' ಎನ್ನುವುದು ಮುಖದ ಮೇಲಿನ ಒಂದು ಭಾವವಾಗಿರದೇ ಇಬ್ಬರಲ್ಲಿ ಒಬ್ಬರಿಗೆ ಯಾವುದೋ ವಿಷಯಕ್ಕೆ ಕಿರಿಕಿರಿಯಾದಾಗ ವ್ಯಕ್ತವಾಗುವ ನಿಯಂತ್ರಿಸಲಾಗದ ಒಂದು ದೇಹ ಭಾಷೆಯಾಗಿರುತ್ತಿತ್ತು. ಕಾಲ ಸರಿದಂತೆ 'ಆ ಒಂಥರಾ'ದ ಅರ್ಥವೂ ಕ್ರಮೇಣ ಬದಲಾಗುತ್ತ, ಪ್ರತೀಬಾರಿಯೂ ಆ ಶಬ್ದಗಳು ಹೊಸದೇ ಅರ್ಥ ಸೂಸುತ್ತಿದ್ದುದೂ ಈವರೆಗೆ ಆ ಅರ್ಥದ ಗುಟ್ಟು ಒಡೆಯದಿರಲು ಕಾರಣವಿರಬಹುದೇನೋ.

ಆ ಭಾನುವಾರ ಆದದ್ದೂ ಅದೇ.

ವಾರಾಂತ್ಯದ ಎರಡು ದಿನಗಳಲ್ಲಾದರೂ ಬೆಳಿಗ್ಗೆ ಉಪಹಾರಕ್ಕೆ ಭಾರತದ ತಿನಿಸುಗಳನ್ನು ತಯಾರಿಸಿ ತಿನ್ನಬೇಕೆನ್ನುವುದು ಮನುವೂ ಸುಘೋಷನೂ ಮದುವೆಯಾದ ಈ ಮೂರು ವರ್ಷಗಳಲ್ಲಿ ನಡೆಸಿಕೊಂಡು ಬಂದ ಒಪ್ಪಂದ. ಸೋಮವಾರದಿಂದ ಶುಕ್ರವಾರದವರೆಗೆ, ಮುಂಜಾನೆ ಆರು ಘಂಟೆಯ ಅಲಾರಾಂ ಸದ್ದಿಗೆ ತೂಕಡಿಸುತ್ತಲೇ ಎದ್ದು ಗಡಿಬಿಡಿಯಲ್ಲಿ ಟೋಸ್ಟ್ ಮಾಡುವ ಬ್ರೆಡ್ಡಿಗೂ, ಅವಸರದಲ್ಲಿ ಹಾಲಿಗೆ ಸೇರಿಸಿ ಬಿಸಿಯಿದ್ದಾಗ ಮಾತ್ರ ತಿನ್ನಲು ಸಾಧ್ಯವಾಗುವ ಫ್ಲ್ಯಾಕ್ಸ್ ಸೀಡಿನ ಸಪ್ಪೆ ಸೀರಿಯಲ್ಲಿಗೂ, ಪುಟ್ಟ ಟೀ ಬ್ಯಾಗನ್ನು ಹಾಲಲ್ಲಿ ಅದ್ದಿ ಅರೆನಿಮಿಷದಲ್ಲಿ ತಯಾರಿಸಬಹುದಾದ 'ಬ್ರೇಕ್ ಫಾಸ್ಟ್ ಟೀ'ಗೂ ವಾರಾಂತ್ಯದ ಆ ಎರಡು ದಿನಗಳು ಸಂಪೂರ್ಣ ರಜಾ.

ಅಂದು ಏನಿದ್ದರೂ ಅಲಾರಾಮಿನ ಹಂಗಿಲ್ಲದೇ ಒಂಬತ್ತರ ನಂತರವೇ ಎದ್ದು ಸಣ್ಣ ಕುದಿಯಲ್ಲಿ ಟೀ ಸೊಪ್ಪು ಕುದಿಸಿ ಎರಡೆರಡು ಬಾರಿ ಧನ್ಯತೆಯಿಂದ ಚಹಾ ಕುಡಿಯಲಿಕ್ಕಾಗಬೇಕು ಮನು–ಸುಘೋಷರಿಗೆ. ನಂತರ ಮನು ಯೂಟ್ಯೂಬಿನಲ್ಲಿ ಆಸಕ್ತಿಯಿಂದ ನೋಡಿ ಕಲಿತ ಗರಿಗರಿ ಮಸಾಲಾ ದೋಸೆಯನ್ನೋ, ಮೆತ್ತನೆಯ ಇಡ್ಲಿಗಳನ್ನೋ, ಹುರಿಯಾದ ಗುಂಡಪೊಂಗಲ್ಲನ್ನೋ ಚಟ್ನಿ– ಸಾಂಬಾರು– ಬಟಾಟಾ ಸುಕ್ಕಾದ ಜೊತೆಗೆ ಪ್ರತ್ಯೇಕವಾಗಿ ಒಂದು ಘಂಟೆ ಜೊತೆಗೆ ಕುಳಿತು ತಿನ್ನಲಿಕ್ಕಾಗಬೇಕು. ಜೊತೆಗೆ ಮನುವಿನ ಮೂಡು ಸರಿ ಇದ್ದರೆ ಆ ಬೆಳಗಿನ ಮೆನುವಿನಲ್ಲಿ ಉದ್ದಿನ ವಡೆ, ಮೈಸೂರು ಬಜ್ಜಿಗಳೂ ಸೇರಿರುವವು. ಕೊನೆಯಲ್ಲಿ ಫ್ರಿಡ್ಜಿನಲ್ಲಿಟ್ಟಿದ್ದ 'ರಸಮಲೈ' ಮೆಲ್ಲುವ ಜೊತೆಗೆ ಅವರ ಈ ವೀಕೆಂಡ್ 'ಘನ ಉಪಹಾರ ಕಾರ್ಯಕ್ರಮ' ಮುಕ್ತಾಯಗೊಳ್ಳುವುದು.

* * *

ಅಂದು ಭಾನುವಾರವಾದುದರಿಂದ ದೋಸೆ, ಪುದೀನಾ ಚಟ್ನಿ ತಿಂದು ಮಧ್ಯಾಹ್ನ ತಯಾರಿಸಲಿದ್ದ ಚಿಕನ್ನನ್ನು ಫ್ರೀಜರ್ನಿಂದ ತೆಗೆದು ಒಂದು ಪಾತ್ರೆಯಲ್ಲಿ ನೀರು ತುಂಬಿಸಿ

'ಥಾ' ಮಾಡಲು ಮನು ಅದ್ದಿ ಇಡುತ್ತಿದ್ದುದಕ್ಕೂ, "ಅಡಗಿ ಶುರೂ ಮಾಡೋ ಮೊದಲ ಕಾರಿನ್ಯಾಗ ಒಂದು ರೌಂಡು ಹೋಗಿ ಬರೂಣೇನ?" ಅಂತ ಹೊರಕೋಣೆಯಿಂದ ಸುಘೋಷನ ಇನಿದನಿ ಕೇಳಿಸುವುದಕ್ಕೂ ಸರಿಯಾಯಿತು.

ಹುಬ್ಬಳ್ಳಿಯಲ್ಲಿದ್ದಾಗ ಆರಾಮಾಗಿ ದಾಜೀಬಾನ ಪೇಟೆಯಂಥ ಜನದಟ್ಟಣೆಯಲ್ಲೇ ಸ್ವತಂತ್ರವಾಗಿ ಕಾರು ಓಡಿಸಿ ಅನುಭವವಿದ್ದರೂ ಮನು ಅಮೇರಿಕೆಯ ಅಗಲಗಲ ರಸ್ತೆಗಳಿಗೆ, ಸಾಟಿಯಿಲ್ಲದ ವೇಗಕ್ಕೆ, ರಸ್ತೆಯ ಬಲ ಮಗ್ಗುಲಲ್ಲಿ ಮಾತ್ರ ಓಡಿಸುವ ನಿಯಮಗಳಿಗೆ ವಿಪರೀತ ಅಂಜುವಳು. ಅದು ನಿಜವಾದ ಅಂಜಿಕೆಯೋ ಅಥವಾ ಸುಘೋಷನಿಗೆ ಕಾರಿನ ಬಗ್ಗೆ ಇರುವ ಅತಿಮೋಹಕ್ಕೆ ಅವಳಲ್ಲಿ ಉಂಟಾದ ಕರಕರೆಯೋ ಅವಳು ಸ್ಪಷ್ಟವಾಗಿ ಹೇಳಲಾರಳು. ಇಪ್ಪತ್ತೈದು ಮೈಲಿ ವೇಗದಲ್ಲಿ ಓಡಿಸಬೇಕಾದ ರಸ್ತೆಯಲ್ಲಿ ಐದೇ ಮೈಲಿ ಹೆಚ್ಚು ಹೋದರೂ ನೂರಾರು ಡಾಲರುಗಳ 'ಟಿಕೆಟ್' ಅಂದರೆ ದಂಡ ಹಾಕುವ ಪೋಲೀಸರ ವಾಹನದ ಕೆಂಪು ನೀಲಿ ದೀಪಗಳು ಕಣ್ಣು ಕುಕ್ಕಿದಾಗಲಂತೂ ಇನ್ನೂ ಅಸ್ವಸ್ಥಳಾಗುವಳು.

ಸುಘೋಷ ನ್ಯೂಯಾರ್ಕಿನ ತನ್ನ ಕಛೇರಿಗೆ ಅವರಿರುವ ನ್ಯೂಜೆರ್ಸಿಯಿಂದ ವಾರದ ಐದೂ ದಿನಗಳು ಟ್ರೇನು ತೆಗೆದುಕೊಳ್ಳುವುದರಿಂದ ಮನೆಯ ಕಾರು ಆ ಐದೂ ದಿನಗಳೂ ಧೂಳಿನ ಒಂದೊಂದೇ ಚಾದರ ಹೊದ್ದುಕೊಳ್ಳುತ್ತಾ ಸುಮ್ಮನೇ ನಿಂತಿರುವುದು. ಶನಿವಾರ ಮುಂಜಾನೆ ಗಂಡ ಹೆಂಡತಿಯರಿಬ್ಬರೂ ತಡವಾಗಿ ಎದ್ದು ತಿಂಡಿ ತಿಂದು ರಜೆಯ ಅಮಲಿನಲ್ಲಿಯೇ ಓಲಾಡುತ್ತ ಕಾರಿನ ಬಳಿ ಬರುವಾಗ ಆಗಲೇ ಮಧ್ಯಾಹ್ನ ಹನ್ನೆರಡು ಹೊಡೆದಿರುವುದು. ನಂತರ ಸುಘೋಷ ಥಿಕ್ಕಿಯಲ್ಲಿದ್ದ ಹಳದಿ ಹತ್ತಿಯ ಬಟ್ಟೆಯಲ್ಲಿ ಭಕ್ತಿಯಿಂದ ಕಾರಿನ ಇಂಚಿಂಚೂ ಒರೆಸುವುದನ್ನು ಮನು ಪ್ರಸಾದಕ್ಕಾಗಿ ಮಂಕಾಗಿ ನಿಂತ ಬಡ ಭಕ್ತೆಯಂತೆ ದೂರದಲ್ಲೇ ನಿಂತು ನೋಡುವಳು. ಶನಿವಾರ ಮುಂಜಾನೆಯ ಆ ಕಾರು ಒರೆಸುವ ಪವಿತ್ರ ಕಾರ್ಯ ನೆರವೇರುತ್ತಲೇ ಸುಘೋಷ ಮನುವಿನ ಬಳಿ ತಿರುಗಿ ಹೌದೋ ಅಲ್ಲವೋ ಎಂಬಂತೆ ಸನ್ನೆ ಮಾಡುವ. ಅದಕ್ಕೇ ಕಾಯುತ್ತಿದ್ದಂತೆ ಮನು ಕುಪ್ಪಳಿಸುತ್ತ ಹೋಗಿ ಕಾರಿನ ಮುಂದಿನ ಸೀಟಿನ ಬಲಭಾಗದ ಬಾಗಿಲು ತೆರೆದು, ಸೀಟು ಬೆಲ್ಟು ಭದ್ರಪಡಿಸಿ ಗುಬ್ಬಚ್ಚಿಯಂತೆ ಕುಳಿತುಕೊಳ್ಳುವಳು.

ಬೆಳಿಗ್ಗೆ ತಿಂಡಿಗೆ ಮಾತ್ರ ಇಂಡಿಯನ್ ತಿನಿಸು ತಯಾರಿಸಬೇಕು ಎಂಬ ಒಂದು ನಿಯಮವನ್ನು ಹೊರತಾಗಿ ಈ ಶನಿವಾರ ಭಾನುವಾರಗಳ ವೀಕೆಂಡು ಯಾವ ನಿಯಮಗಳನ್ನೂ ಹೊತ್ತು ತರುವುದಿಲ್ಲ ಮನು– ಸುಘೋಷರಿಗೆ. ಹಾಗಾಗಿ ಆ ಎರಡೂ ದಿನಗಳು ಎಷ್ಟೊತ್ತಿಗೋ ಎದ್ದು, ಎಷ್ಟೊತ್ತಿಗೋ ಸ್ನಾನ ಮಾಡಿ– ಅಥವಾ ಮಾಡದೇ ತಿಂಡಿ ತಿಂದು, ಯಾವುದೋ ಹೋಟೇಲಿನಲ್ಲಿ ಊಟ ಮಾಡಿ, ಎಷ್ಟೊತ್ತಿಗೋ ಮುದ್ದಿಸಿ, ಟೀವಿಯಲ್ಲಿ ಬರುವ ಯಾವುದೋ ಶೋ ನೋಡುತ್ತ ಇನ್ನೆಷ್ಟೊತ್ತಿಗೋ ಮಲಗಿ– ಅಥವಾ ಮಲಗದೇ ಈ ಎರಡೂ ದಿನಗಳು ಚಿಟಿಕೆ ಹೊಡೆದಂತೆ ಕಳೆದುಹೋಗುತ್ತವೆ ಇಬ್ಬರಿಗೂ.

ಈ ದಿನಗಳಲ್ಲಿ ಮಾಡಲೇಬೇಕಾದ ಮುಖ್ಯ ಕೆಲಸವೆಂದರೆ ಬರುವ ವಾರಕ್ಕೆ ಬೇಕಾದ ಅಡುಗೆ ಸಾಮಗ್ರಿಗಳನ್ನೂ, ತರಕಾರಿಗಳನ್ನೂ ಇಂಡಿಯನ್ ಸ್ಟೋರಿನಿಂದ ಕೊಂಡುತರುವುದು. ತರಕಾರಿಗಳು ಫ್ರೆಶ್ಶ್ಯಾಗಿರುತ್ತವೆ ಅಂತ ಶನಿವಾರ ಮುಂಜಾನೆ ಹೋಗಬೇಕು ಅಂದುಕೊಳ್ಳುತ್ತಾರೆ ಇಬ್ಬರೂ. ಅದು ಕೆಲವೊಮ್ಮೆ ಮಾತ್ರ ಕೂಡಿ ಬರುತ್ತದೆ.

* * *

ತಂದೆ ತಾಯಿಗಳ ಮುಖವನ್ನು ಹುಟ್ಟಾ ನೋಡದೇ ಧಾರವಾಡದ ನಗರಕರ್ ಕಾಲನಿಯ ದೊಡ್ಡಪ್ಪನ ಮನೆಯಲ್ಲಿ ಬೆಳೆದ ಸುಘೋಷನಗೆ ಸ್ವಂತ ಕಾರು ಎನ್ನುವುದು ಹೇಗೆ ಬರೀ ಒಂದು ಕಾರು ಮಾತ್ರವಲ್ಲ ಅಂತ ಮನು ಮದುವೆಯಾದ ಹೊಸತರಲ್ಲೇ ಮನಗಂಡಿದ್ದಳು. ಅಚ್ಚ ಬಿಳಿ ಬಣ್ಣದ ಆ ಫೋರ್ಡ್ ಫಿಯೆಸ್ಟಾ ಕಾರು ಸುಘೋಷನಿಗೆ ನಾಲ್ಕು ಚಕ್ರಗಳ ಮೇಲೆ ಓಡಾಡುವ, ಇಂಧನ ಕುಡಿಯುವ, ಜಾಗಗಳ ನಡುವೆ ಸಂಪರ್ಕ ಸಾಧಿಸುವ ನಿರ್ಜೀವ ವಾಹನವಷ್ಟೇ ಆಗಿರಲಿಲ್ಲ. "ಆ ಕಾರನ್ನ ತನ್ನದ ಒಂದು ಬಾಡೀ ಪಾರ್ಟ್ ಅಂದುಕೊಂಡಾನ" ಅಂತ ಮನು ಹುಬ್ಬಳ್ಳಿಯಲ್ಲಿರುವ ತನ್ನ ತಾಯಿ ಹರ್ಷಮಣಿಗೆ ಫೋನಿನಲ್ಲಿ ಹೇಳುವಾಗ ಅದು ಖುಷಿಪಡಬೇಕಾದ ಸಂಗತಿ ಹೌದೋ ಅಲ್ಲವೋ ಎಂದು ಹರ್ಷಮಣಿಗೂ ಅಳುಕಾಗುತ್ತಿತ್ತು.

ಹಾಗೆ ನೋಡಿದರೆ ವಾರದ ಐದು ದಿನ ಸುಘೋಷ ಕೆಲಸ ಮಾಡುವ ನ್ಯೂಯಾರ್ಕಿನ 'ಸ್ಟ್ರಾಸನ್ ಸಾಫ್ಟವೇರ್ಸ್' ಕಛೇರಿಗೆ ಇವರಿರುವ ನ್ಯೂಜೆರ್ಸಿಯ ಎಡಿಸನ್ನಿನ 'ಪಾರ್ಕ್ ವ್ಯೂ ಅಪಾರ್ಟ್‌ಮೆಂಟ್ಸ್' ನಿಂದ ಕಾರಿನಲ್ಲಿ ಕೇವಲ ಒಂದು ಘಂಟೆಯ ದಾರಿ. ದಿನವೂ ನೂರಾರು ಮೈಲಿ ಕಾರಿನಲ್ಲೇ ಚಲಿಸುವ ಅಮೇರಿಕನ್ನರಿಗೆ ಈ ಒಂದು ಘಂಟೆಯ ಕಾರಿನ ಪ್ರಯಾಣ ಎಂದರೆ ನಡುಮನೆಯಿಂದ ಹಿತ್ತಿಲಿಗೆ ಹೋದಷ್ಟೇ ಸರಾಗ ಸಂಗತಿ. ಆದರೂ ಸುಘೋಷ ಹೋಗುವಾಗ ಎರಡು ಘಂಟೆ ಬರುವಾಗ ಎರಡು ಘಂಟೆ ಟ್ರೇನಿನಲ್ಲೇ ಸಂಚರಿಸಲು 'ಸುಮ್ಮನ ಡ್ರೈವ್ ಮಾಡುವಾಗ ಟೈಮು ದಂಡ' ಅಂತ ಕೊಡುವ ಕಾರಣವನ್ನು ಹೊರತಾಗಿ ಬೇರೆ ಕಾರಣವೂ ಇದೆ ಅಂತ ಗುಮಾನಿ ಮನುಗೆ. ಯಾವಾಗಲೋ ಇಬ್ಬರ ಮನಸ್ಸೂ ತಿಳಿಯಾಗಿದ್ದಾಗ, ಸಮಯ– ಸಂದರ್ಭ ನೋಡಿಕೊಂಡು "ಟಾಯರು ಸವೀತದಲ್ಲ ಪಾಪ" ಅಂತ ಅವನ ಈ ಅಸಹಜ ಸ್ವಭಾವಕ್ಕೆ ತನ್ನದೇ ಕಾರಣ ಕೊಟ್ಟು ಸುಘೋಷನನ್ನು ಮನಸಾರೆ ಮುದ್ದಿಸುವಳು.

ದಿನವೂ ಟ್ರೇನಿನಲ್ಲೇ ಸಂಚರಿಸಿದರೂ ಸುಘೋಷ ಬೆಳಿಗ್ಗೆಯೊಮ್ಮೆ ಸಂಜೆಯೊಮ್ಮೆ ತಪ್ಪದೇ ಕಾರಿಗೆ ಪ್ರದಕ್ಷಿಣೆ ಹಾಕಿ ಬರುವ. ಆ ಪ್ರದಕ್ಷಿಣೆಯಲ್ಲಿ ಕಾರಿನ ಇಂಚಿಂಚೂ ಚಾಚೂ ತಪ್ಪದೇ ತಪಾಸಣೆಗೊಳ್ಳುವುದು. ಅಪಾರ್ಟಮೆಂಟಿನ ಉಳಿದ ಮನೆಯವರೋ ಅವರ ಮಕ್ಕಳೋ ಮಾಡಿರಬಹುದಾದ ಕಂಡೂ ಕಾಣದ ಸಣ್ಣ ಗೀರೋ, ಪಕ್ಕದಲ್ಲಿ ನಿಲ್ಲಿಸಿದ್ದ ಕಾರಿನವರು ಅವಸರದಲ್ಲಿ ಬಾಗಿಲು ತೆಗೆದಾಗ ಆಗುವ ಡೆಂಟೋ ಸಿಗುವುದೋ

ಎಂದು ಮೈಯೆಲ್ಲ ಕಣ್ಣಾಗಿ ದಿನಕ್ಕೆರಡು ಬಾರಿ ಒದ್ದಾಡುವ. ಅವನ ತೀಕ್ಷ್ಣ ಕಣ್ಣುಗಳ ಈ ಸಂಕಟ ಕಂಡು ಮನುಗೆ ಒಮ್ಮೊಮ್ಮೆ ಎದೆಯಲ್ಲಿ ಅಕಾರಣ ನಡುಕವುಂಟಾಗುವುದು.

ಆ ನಡುಕವನ್ನೇ ಹೊದ್ದಂತೆ ಆ ಭಾನುವಾರ ಮನು "ಒಂದು ರೌಂಡು ಹಾಕಿ ಬರೂಣೇನು?" ಅಂತ ಕೇಳಿದ ಸುಘೋಷನ ಹಿಂದೆ ನಡೆದು ಕಾರಿನ ಡ್ರೈವರ್ ಸೀಟಿನ ಮೇಲೆ ಕುಳಿತು ಬಾಗಿಲೆಳೆದುಕೊಂಡಳು.

* * *

ಈ ಮೂರು ವರ್ಷಗಳಲ್ಲಿ ಇದೇ ಮೊದಲ ಬಾರಿ ಡ್ರೈವರ್ ಸೀಟಿನಲ್ಲಿ ಕುಳಿತಿದ್ದಳು. ಸುಘೋಷನದೂ ಅವಳದೂ ಐದು ಅಡಿ ನಾಲ್ಕು ಇಂಚಿನ ಒಂದೇ ಎತ್ತರವಾದ್ದರಿಂದ ಕಾರಿನ ಮೂರೂ ಕನ್ನಡಿಗಳ ಕೋನಗಳು ಸರಿಯಾಗಿದ್ದವು. ಈ ಕಾರು ಇಂಡಿಯಾದಲ್ಲಿ ಅವಳು ಓಡಿಸಿದ್ದ ಸೆಕೆಂಡ್ ಹ್ಯಾಂಡು ಮಾರುತಿ ಏಟ್-ಹಂಡ್ರೆಡ್‌ನ ಎರಡರಷ್ಟಿದ್ದುದು ಈಗಷ್ಟೇ ಪ್ರಾಪ್ತವಾದ ಈ ಹೊಸ ಆಯತದಲ್ಲಿ ಅವಳಿಗೆ ಇನ್ನೊಮ್ಮೆ ಗಮನಕ್ಕೆ ಬಂತು.

ಪಕ್ಕದಲ್ಲಿ ಕುಳಿತಿದ್ದ ಸುಘೋಷ "ಇದು ಎಕ್ಸಲೇಟರು, ಬ್ರೇಕು ನೆನಪಿರಲಿ ಎ-ಬಿ" ಅಂತ ಶುರುಮಾಡಿದ್ದೇ "ಹುಬ್ಬಿಯಾಗ ಫ್ರೆಂಡಿನ ಕಾರನ್ನ ಹೊಡದೇನಿ ಭಾಳ ಸರ್ತಿ" ಅಂತ ನಿರ್ಲಕ್ಷ್ಯ ತೋರಿದಂತೆ ನಟಿಸಿದರೂ ಕ್ಲಚ್ಚಿಲ್ಲದೇ ಕೇವಲ ಕೀಲಿ ತಿರುವುತ್ತಲೇ ಶುರುವಾಗುವ ಕಾರು ಕಂಡು ಮನುಗೆ ತುಸು ಆತಂಕವೇ ಆಗಿತ್ತು. ಬಹು ದಿನಗಳಿಂದ ಡ್ರೈವರ್ ಸೀಟಿನಲ್ಲಿ ಕುಳಿತಿಲ್ಲವಾದುದರಿಂದ ಆ ಆತಂಕವೇ ಮೈಮನಸ್ಸುಗಳಿಗೆ ಒಂದು ರೀತಿಯ ಜಡತ್ವವನ್ನು ತಂದಿತ್ತು.

"ಸ್ಟಾಪ್" ಎಂದ ಸುಘೋಷ. ದನಿಯಲ್ಲಿ ಆಗಲೇ ಇನಿಯನ ಮಾರ್ದವ ಹೋಗಿ ಅನುಭವಿ ಕೋಚ್‌ನ ಗಡಸು ಬಂದಿದ್ದನ್ನು ಮನು ಗಮನಿಸಿದಳು.

"ಕಾರು ಚಾಲೂ ಮಾಡೂ ಮೊದಲ ಏನೇನು ಚೆಕ್ ಮಾಡಬೇಕು?"

ಮನುಗೆ ಒಂದು ಕ್ಷಣ ಕಸಿವಿಸಿಯಾದರೂ ಸಾವರಿಸಿಕೊಂಡು ನಗುವಲ್ಲದ ನಗುವನ್ನು ತುಟಿಯಲ್ಲಿ ತುಳುಕಿಸುತ್ತ "ಮಿರರ್ ಆವಾಗನ ಚೆಕ್ ಮಾಡಿಕೊಂಡೆ" ಎಂದಳು. ಹಾಗನ್ನುತ್ತಲೇ ಮುಂದೆರಗಲಿರುವ ಪ್ರಮಾದ ಅವಳ ಮನಸ್ಸಿನಲ್ಲಿ ಹಾದುಹೋಯಿತು.

"ಅಯ್ಯೋ ಸಾರಿ ಸುಗೂ, ಗಡಿಬಿಡಿಯಾಗ ಲೈಸನ್ಸ್ ಪರ್ಸಿನ್ಯಾಗ ಉಳಿದುಹೋತು. ಒಂದು ನಿಮಿಷ ಬಂದೆ" ಅಂತ ಕಾರಿನ ಬಾಗಿಲು ತೆರೆದೋಡಿದಳು. ಮೆಟ್ಟಿಲು ಹತ್ತಿ ಮನೆಯ ಮುಂದೆ ನಿಂತಾಗ ಅವಳಿಗೆ ಮನೆಯ ಕೀಲಿ ಕೂಡ ಪರ್ಸಿನಲ್ಲೇ ಇರುವುದು ನೆನಪಾಯಿತು. ಮತ್ತೆ ಇಳಿದು ಬಂದು ಸುಘೋಷನ ಬಳಿಯಿರುವ ಮನೆ ಕೀಲಿಯನ್ನು ತೆಗೆದುಕೊಂಡು ಹೋಗಿ ತಲೆ ತಲೆ ಜಜ್ಜಿಕೊಳ್ಳುತ್ತ ಮನು ಮನೆಯಿಂದ ಪರ್ಸು ತೆಗೆದುಕೊಂಡು ಬಂದು ಮತ್ತೆ ಕಾರು ಶುರು ಮಾಡುವುದರೊಳಗೆ ಸುಘೋಷ ಆಗಲೇ ಕಿಡಿಕಿಡಿಯಾಗಿದ್ದ.

ಫೋರ್ಡ್ ಫಿಯೆಸ್ಟಾ ಎಂಬ ಸುಘೋಷನ ಈ ಹೊಟ್ಟೆಯ ಕೂಸನ್ನು ಮೆಲ್ಲಗೆ ರಿವರ್ಸ್ ತೆಗೆದುಕೊಂಡು ಆಗಷ್ಟೇ ರೆಕ್ಕೆ ಬಲಿತ ಹಕ್ಕಿಯ ಸಂಭ್ರಮದಲ್ಲಿಯೇ ಅಪಾರ್ಟ್‌ಮೆಂಟಿನ ಆವರಣದಿಂದ ರಸ್ತೆಗೆ ತಿರುಗಿಸಿದಳು. ತಿರುಗುವಾಗ ಇಂಡಿಕೇಟರ್ ಹಾಕಿ ಸ್ಟಾಪ್ ಸೈನ್ ಇದ್ದಲ್ಲಿ ಥೇಟು ಅಮೇರಿಕನ್ನರ ಶೈಲಿಯಲ್ಲಿ "ಒನ್ ಮಿಸ್ಸಿಸ್ಸಿಪಿ ಟೂ ಮಿಸ್ಸಿಸ್ಸಿಪಿ ಥ್ರೀ ಮಿಸಿಸ್ಸಿಪಿ" ಅಂತ ಮೂರು ಸೆಕೆಂಡುಗಳ ಕಾಲ ಕಾರು ನಿಲ್ಲಿಸಿ ಸುಘೋಷನನ್ನು ಕಡೆಗಣ್ಣಿನಲ್ಲಿ ಗಮನಿಸಿದಳು. ಅದೇಕೋ ಅವನ ಮೊಗದ ಗೆರೆಗಳು ಬಿಗಿದುಕೊಂಡಿದ್ದನ್ನು ಆ ಗಡಿಬಿಡಿಯಲ್ಲೂ ಗಮನಿಸಿದಳು.

ಕಾರು ರಸ್ತೆಗೆ ಇಳಿಯುತ್ತಲೇ ಸುಘೋಷನ ಹಾರಾಟ ಶುರುವಾಯಿತು.

"ಅಯ್ಯಯ್ಯೋ ಬ್ರೇಕು ಹಾಕು", "ಸ್ಟಾಪ್ ಸೈನು ಕಾಣಾಂಗಿಲ್ಲೇನ?", "ರೇರ್ ವ್ಯೂ ಕನ್ನಡಿಯನ್ನ್ಯಾಕ ನೋಡಾಂಗಿಲ್ಲ", "ಪ್ಯಾಸೆಂಜರ್ ಸೀಟ್ ಕನ್ನಡಿಯನ್ನ್ಯಾಕ ನೋಡಾಕತ್ತಿಲ್ಲ", "ಡ್ರೈವರ್ ಸೀಟಿನ ಕನ್ನಡೀನೂ ನೋಡ್ತಿರು", "ಬ್ಲೈಂಡ್ ಸ್ಪಾಟ್ ಕಾಣದಿದ್ರ ಹೊಡಕೋತಿ ಯಾವುದರ ಟ್ರಕ್ಕಿಗ", "ಇಪ್ಪತ್ತೈದು ಮೈಲ್ ಸ್ಪೀಡು ಹೋಗೋ ರಸ್ತೆಯಿದು. ನೀನು ಹದಿನೈದರಾಗ ಹೋದರ ಟ್ರಾಫಿಕ್ ಸ್ಲೋ ಮಾಡಾಕತ್ತಿ ಅಂತ ಟಿಕೆಟ್ ಕೊಡತಾರ ನೋಡು", "ರೋಡಿನ ಸೈನುಗಳ ಕಡೆ ಒಂದ್ ಕಣ್ಣು ಇಟ್ಟಿಡು"...

ಐದೇ ನಿಮಿಷಗಳ ಹಿಂದಿದ್ದ ಉತ್ಸಾಹವೆಲ್ಲ ಮನುಗೆ ಸರ್ ಅಂತ ಜಾರಿಹೋಗಲು ಇಷ್ಟು ಸಾಕಾಗಿತ್ತು. ಬೇರೆಯದೇ ಮನುಷ್ಯನೇನೋ ಎನ್ನುವ ರೀತಿಯಲ್ಲಿ ಬದಲಾದ ಸುಘೋಷನ ದನಿ ಎದೆಯ ಯಾವುದೋ ಬಿಂದುವಿನಲ್ಲಿ ಇಳಿದು ಕಲಕಿಬಿಟ್ಟಿತು. ಕಣ್ಣುಗಳಲ್ಲಿ ನೀರಿನ ತೆಳುಪದರ ಮೂಡಲು ಶುರುವಾಯಿತು.

ಕಾರಿನ 'ಹೆಸಾರ್ಡ್' ಬಟನ್ನನ್ನು ಒತ್ತಿ ರಸ್ತೆಯ 'ಶೋಲ್ಡರ್' ಭಾಗದಲ್ಲಿ ಕಾರನ್ನು ನಿಲ್ಲಿಸಿ ಮನು ಮಂಕಾಗಿ ಕುಳಿತುಬಿಟ್ಟಳು.

"ಹಿಂಗ ಮಾಡಿದ್ರ ಹೆಂಗ ಮನ್ವಿತಾ?"

ಮನುವಿನ ಪೂರ್ತಿ ಹೆಸರನ್ನು ಸುಘೋಷ ಕರೆದರೆ ಅದು ಕೊನೆಯ ಮೂವ್ ಅಂತ ಅವಳಿಗೆ ಗೊತ್ತು. ಅತಿಸಹಜವಾಗಿದ್ದ ತನ್ನ ಹೆಸರೂ ಆ ಸಂದರ್ಭದಲ್ಲಿ ಒಂದು ಬೈಗುಳದಂತೆ ಕೇಳಿಸುವುದು ಅವಳಿಗೆ. ಕಣ್ಣಿಳಿಂದ ನೀರು ದಳದಳ ಉದುರಲು ಶುರುವಾಯಿತು.

"ಏನಿಲ್ಲ ಸುಗೂ, ಯಾಕಷ್ಟು ವರವರ ಅಂತೀ ಹೇಳು?" ತುಂಡು ತುಂಡು ಮಾತುಗಳಲ್ಲಿ ಅಂದಳು.

"ನಾನೆಲ್ಲೆ ವರವರ ಅಂದೆ. ಏನಾರಾ ತಪ್ಪು ಹೇಳಿದ್ನಿ ಹೇಳು? ಹಿಂಗ ರಸ್ತಿ ನಡುವಿನಾಗ ಕಾರು ನಿಲ್ಲಿಸಿದ್ರ ಕಾಪ್ಸ್ ಬಂದು ನಮ್ಮ ಸಮೇತ ಗಾಡೀನೂ ಟೋ ಮಾಡಿಕೊಂಡು ಹೋಗತಾರ."

"ನಾ ಒಲ್ಲೆ, ನೀನ ಹೊಡಿ."

“ರಸ್ತಿ ಮಧ್ಯ ಇಳಿಯಾಕ ಇದು ನಿಮ್ಮ ಹುಬ್ಬಳ್ಳಿ ಬ್ರಾಡವೇ ಅಂದುಕೊಂಡೀಯೇನ? ರೈಟಿನ್ಯಾಗ ತಿರುಗಿಸಿ ಪಾರ್ಕಿಂಗ್ ಲಾಟಿನ್ಯಾಗ ನಿಲ್ಲಿಸು, ಅಲ್ಲಿಂದ ಹೊಡೀತೇನಿ” ಅಂದ.

ಕಣ್ಣುಗಳನ್ನು ಸ್ವಚ್ಛಗೊಳಿಸಿಕೊಂಡು ಬಲದ ಪಾರ್ಕಿಂಗ್ ಲಾಟಿನಲ್ಲಿ ಕಾರು ನಿಲ್ಲಿಸಿ ಇಬ್ಬರೂ ಸೀಟು ಬದಲಿ ಮಾಡಿಕೊಂಡರು. ಒಂದೂ ಮಾತನಾಡದೇ ಸುಘೋಷ 'ಪಾರ್ಕ್ ವ್ಯೂ ಅಪಾರ್ಟ್‌ಮೆಂಟ್ಸ್' ಎಂದು ಹಸಿರು ಅಕ್ಷರಗಳಲ್ಲಿ ಬರೆದುಕೊಂಡ ತಿರುವಿನತ್ತ ಕಾರು ತಿರುಗಿಸಿದ.

ಮನೆಗೆ ಬಂದದ್ದೇ ಇಬ್ಬರೂ ಒಮ್ಮೆಯೂ ಪರಸ್ಪರ ದೃಷ್ಟಿ ತಾಕದಂತೆ ನೋಡಿಕೊಂಡರು. ಚಿಕನ್ ಅಡುಗೆ ತಯಾರಿಸುವಷ್ಟು ಸಂಯಮ ಇಲ್ಲವಾದ್ದರಿಂದ ಮನು ಥಾ ಮಾಡಿದ ಚಿಕನ್ನನ್ನು ಹಾಗೆಯೇ ಫ್ರಿಡ್ಜಿಗೆ ಸೇರಿಸಿದಳು. ಘಂಟೆ ಆಗಲೇ ಮಧ್ಯಾಹ್ನ ಒಂದೂವರೆಯಾಗಿತ್ತು. ಫ್ರೋಜನ್ ಪರಾಟಾವನ್ನೇ ಬಿಸಿಮಾಡಿ ಹಿಂದಿನ ದಿನದ ಬೀನ್ಸ್ ಪಲ್ಯ, ಫುಲಾವಿಗೆ ಮೈಕ್ರೋವೇವಿನಲ್ಲಿ ಶಾಖ ಕೊಟ್ಟು, ಸವತೇಕಾಯನ್ನು ಅಡ್ಡಡ್ಡ ಸೀಳಿ ಬೇಬಿ ಕ್ಯಾರೆಟ್ಟುಗಳ ಜೊತೆ ಡೈನಿಂಗ್ ಟೇಬಲ್ಲಿನ ಮೇಲೆ ತಂದಿಟ್ಟಳು. ವಿವಿಧ ಪಾತ್ರೆಗಳು ಡೈನಿಂಗು ಟೇಬಲ್ಲಿಗೆ ಬಡಿದ ಸದ್ದಿನಲ್ಲೇ ಕಾಲ ಊಹಿಸಿದ ಸುಘೋಷ ಬೆಡ್‌ರೂಮಿನಿಂದ ಬರುವುದಕ್ಕೂ ಮನು ಇಬ್ಬರಿಗೂ ತಟ್ಟೆ ತಂದಿಡುವುದಕ್ಕೂ ಸರಿಹೋಯಿತು. ಟೀವಿಯ ಬಳಿಯೊಬ್ಬರು, ಬಾಲ್ಕನಿಯ ಬಳಿಯೊಬ್ಬರು ಮುಖ ತಿರುಗಿಸಿಕೊಂಡು ಉಂಡರು. ಸುಘೋಷನಿಗೆ ಹಪ್ಪಳ ಬೇಕಿದ್ದರೂ “ಎಲ್ಲಿಟ್ಟಿದ್ದೀ?” ಅಂತ ಅವನು ಮನುವನ್ನು ಕೇಳಲು ಹೋಗಲಿಲ್ಲ. ಅರ್ಧ ಊಟವಾದ ಮೇಲೆ ಮನುವಿಗೆ ಸುಘೋಷ ಫುಲಾವಿನ ಜೊತೆಗೆ ಯಾವಾಗಲೂ ಹಪ್ಪಳ ನಂಜಿಕೊಳ್ಳುವ ನೆನಪಾದ ಮೇಲೂ ಅವಳು ಪ್ರಜ್ಞಾಪೂರ್ವಕವಾಗಿ ಆ ಮಾತನ್ನು ಮರೆಯಲು ಪ್ರಯತ್ನಿಸಿದಳು.

ಇವಳು ಯಾವುದೋ ಪತ್ರಿಕೆ ಹಿಡಿದುಕೊಂಡು, ಅವನು ಲ್ಯಾಪುಟಾಪು ಹಿಡಿದುಕೊಂಡು ಇಡೀ ಸಂಜೆ ಕಳೆದರು. ರಾತ್ರಿಯೂ ಪರಾಟ ಬಿಸಿ ಮಾಡಿ ತಿಂದು ಇವಳು ಗೋಡೆಯ ಕಡೆಗೆ ತಿರುಗಿಯೂ, ಅವನು ಲ್ಯಾಪುಟಾಪಿನಲ್ಲಿ ಕ್ರಿಕೆಟ್ ಮ್ಯಾಚು ಹಚ್ಚಿಕೊಂಡೂ ಭುಸುಗುಡುತ್ತಲೇ ಒಬ್ಬರ ಮೈ ಒಬ್ಬರಿಗೆ ತಾಕದಂತೆ ಮಲಗಿದರು.

* * *

ಮುಂಜಾನೆ ಸರಿಯಾಗಿ ಆರು ಘಂಟೆಯ ಅಲಾರಾಮಿಗೆ ಮನುವಿಗೆ ಎಚ್ಚರವಾದಾಗ ಅವಳು ಎಂದಿನಂತೆ ಸುಘೋಷನ ಎದೆಯ ಮೇಲೆ ಮಲಗಿದ್ದಳು. ಅವನೂ ಎದ್ದು ಪರಸ್ಪರ ಕಣ್ಣಿನ ಮೇಲೆ ಕಣ್ಣು ಬೀಳುವತನಕ ಹಿಂದಿನ ದಿನದ ಮನಸ್ತಾಪ ಅವಳ ನೆನಪಿನಿಂದ ಮಾಸಿಯೇ ಹೋಗಿತ್ತು. ನಿಧಾನಕ್ಕೆ ಎದ್ದು ಕೂದಲಿಗೊಂದು ಬೋ ಹಾಕಿಕೊಂಡು ಬ್ರಷ್ ಮಾಡಲು ತೆರಳುವಾಗ ಮನುವಿಗೆ ಅಂದು ವಾರದ ದಿನವೆಂದೂ, ಸುಘೋಷನಿಗೆ ಡಬ್ಬಿಗೆ ಹಾಕಲು ಹಿಂದಿನ ದಿನ ತಾನು ಏನನ್ನೂ ತಯಾರಿಸಿಟ್ಟಿಲ್ಲವೆಂದೂ ನೆನಪಾಯಿತು.

ಬೇಗಬೇಗನೆ ಒಂದು ಲೋಟ ಅನ್ನಕ್ಕಿಟ್ಟು, ಪುಳಿಯೋಗರೆಗೆಂದು ಒಗ್ಗರಣೆಗಿಟ್ಟು, ಮೊಸರನ್ನದ ಒಗ್ಗರಣೆಗೆಂದು ಇನ್ನೊಂದು ಪಾತ್ರೆಯಿಟ್ಟು ಎರಡು ಲೋಟ ಹಾಲನ್ನು ಚಹಕ್ಕಾಗಿ ಮೈಕ್ರೋವೇವ್‌ನಲ್ಲಿ ಇರಿಸಿದಳು. ಫ್ರಿಡ್ಜಿನಿಂದ ನಾಲ್ಕು ಸ್ಲೈಸು ಬ್ರೆಡ್ಡು ತೆಗೆದು ಟೋಸ್ಟರ್ನೊಳಗಿಟ್ಟಳು. ಬೇರೆ ದಿನಗಳಾಗಿದ್ದರೆ ಒಮ್ಮೆಲೇ ಐದಾರು ಕೆಲಸ ಮಾಡುತ್ತಿದ್ದ ಮನು ಬೆಡ್ ರೂಮಿನಿಂದ ಎದ್ದು ಬಂದ ಸುಘೋಷನಿಗೆ ನುರಿತ ಆಟಗಾರಳಂತೆ ಕಂಡು ಅವಳ ಬೆನ್ನು ಬಳಸಿ ಕತ್ತಿಗೆ ಹೂಮುತ್ತನ್ನಿಡುವಂತೆ ಮಾಡುತ್ತಿತ್ತು.

ಆದರೆ ಅಂದು ಅವಳ ಮುಖದಲ್ಲಿ ಸುಘೋಷ ಬೇರೆಯದೇ ಭಾವವನ್ನು ಗುರುತಿಸಿದ್ದ. ಮುಂದಿನ ಒಂದೇ ಕ್ಷಣದಲ್ಲಿ ಅವನಿಗರಿವಿಲ್ಲದೇ ಆ ಮಾತಿನ ಬಾಣ ಹೆದೆ ಏರಿಯೇ ಬಿಟ್ಟಿತು.

"ಯಾಕ ಒಂಥರಾ ಅದಿ ಅಲಾ?"

ನಿನ್ನೆಯ ದಿನದ ಮನೋಕಲಹ ಇನ್ನೊಂದೆರಡು ದಿನದಲ್ಲಿ ಲಾವಾರಸದಂತೆ ಹೊರಬಂದು ದಹಿಸುತ್ತದೆ ಅಂತ ಮನುವಿಗೆ ಗೊತ್ತಿತ್ತು. ಆದರೆ ಅದು ಹೀಗೆ ಬೆಳಿಗ್ಗೆ ಬೆಳಿಗ್ಗೆಯೇ ನಡೆಯಬಹುದು ಅಂತ ಅವಳು ಊಹಿಸದೇ ಇದ್ದ ಕಾರಣ ಈ ಅನಿರೀಕ್ಷಿತಕ್ಕೆ ಸಿದ್ಧಳಾಗಿರಲಿಲ್ಲ.

"ನಾನ? ಇಲ್ಲಲಾ? ಏನಾಗೇತಿ?"

"ದಿನಾ ಏನು ಹಿಂಗಿರಂಗಿಲ್ಲ ನೀನು, ಹಾಂಗ ಸೊಟ್ಟ ಮಾರಿ ಮಾಡಿಕೊಂಡು ಕುಂದರಾಕ ಏನಾಗೇತಿ ಹೇಳು"

"ಯಾಕ ಹಂಗ ಅನ್ನತಿ? ಎಲ್ಲೆ ಸೊಟ್ಟ ಮಾರಿ ಮಾಡೇನಿ? ಅಷ್ಟಕ್ಕೂ ನಾನೇನು ಕುಂತಿಲ್ಲ, ಅಡಗಿ ಮಾಡಾತ್ತಿದ್ದು ಕಾಣಂಗಿಲ್ಲೇನ?"

"ಹಿಂಗ ಸೊಟ್ಟ ಮಾರಿ ಮಾಡಕೊಂಡ ಅಡಗಿ ಮಾಡೂದಾದ್ರ ಮಾಡಲಬ್ಯಾಡಾ"

"ಯಾಕ ಹಂಗಂತಿ? ಮಾತು ಮಾತಿಗ ಸೊಟ್ಟ ಮಾರಿ ಅಂತ? ನನಗೇನಾಗೇತಿ? ಸರಿನ ಅದೀನಲಾ?"

"ನೀನ ನಿನ್ನ ಮುಖಾ ಕನ್ನಡಿಯಾಗ ನೋಡಿಕೋ ಸೊಟ್ಟಗದ್ಯೋ ಇಲ್ಲೋ ಅಂತ, ನಾನ ಹಿಡೀಲೇನ ಕನ್ನಡಿ ತಂದ?"

"ನಾನಲ್ಲ ನೀನ ನಿನ್ನೆಯಿಂದ ಕನ್ನಡಿ ಕನ್ನಡಿ ಅಂತ ಬಾಯಿ ಬಡಕೊಳ್ಳಾಕತ್ತಿದ್ದು. ನಿನ್ನ ಮುಖಕ್ಕ ಹಿಡಕೋ, ನನಗ್ಯಾಕ ಹಿಡೀತಿ?"

"ಓಹ್, ನಿನ್ನಿ ನಡೆದಿದ್ದನ್ನ ಇನ್ನೂ ಮನಸ್ಸಿನ್ಯಾಗಿಟ್ಟುಕೊಂಡಿ ಏನ? ರೇರ್ ವ್ಯೂ ಕನ್ನಡಿಯಾಗ ನೋಡದ ಎಷ್ಟು ಜನ ಆಕ್ಸಿಡೆಂಟ್ ಮಾಡಿಕೊಂಡಾರ" ಬಾಯಲ್ಲಿ ಬ್ರಶ್ಶನ್ನು ಅಡ್ಡಡ್ಡ ಆಡಿಸುತ್ತ ಟೂಥ್‌ಪೇಸ್ಟಿನ ಬುರುಗು ಹೊರಬರಲಾರದಂತೆ ಬ್ಯಾಲೆನ್ಸು ಮಾಡುತ್ತ ಸುಘೋಷ ತೊದಲುತ್ತ ನುಡಿದ.

ಆಗಲೇ ಮನು ಕಣ್ಣೀರಿಡತೊಡಗಿದ್ದಳು. ಅದನ್ನು ಕಂಡು ಸುಘೋಷ ಇನ್ನೂ ಕಿರಿಕಿರಿಗೊಂಡ. ಕಣ್ಣೀರು ಕಂಡಿದ್ದೇ ಸಿಂಕಿನಲ್ಲೇ ಒಮ್ಮೆ ಬಾಯಿ ಮುಕ್ಕಳಿಸಿ ತನ್ನ ಎಂದಿನ ಶೈಲಿಯಲ್ಲಿ ಸಹಸ್ರನಾಮಾವಳಿ ಶುರು ಮಾಡಿದ್ದ. ಮ್ಯಾನಿಪ್ಯುಲೇಟ್ ಮಾಡುವವರು ಮಾತ್ರ ಕಣ್ಣೀರು ಹಾಕುತ್ತಾರೆ ಎಂಬುದು ಅವನ ಎಂದಿನ ವಾದವಾಗಿತ್ತು. ಅವನ ಮಾತುಗಳಲ್ಲಿ ಮನುವಿನ ಜನ್ಮ ಜಾಲಾಡುವಂಥ ಎಲ್ಲ ಮಾತುಗಳೂ ಬಂದು ಹೋದವು. "ಬೇಡ, ಅದೊಂದು ಹೇಳದಿರಲಿ" ಅಂತ ಅವಳು ಅಂದುಕೊಳ್ಳುತ್ತಲೇ ಅದೇ ಮಾತು ಅವನ ಬಾಯಿಂದ ಬಂತು. ತಕ್ಷಣ ಕಣ್ಣು ಒರೆಸಿಕೊಂಡಿದ್ದರೂ ಅನಾಮತ್ತಾಗಿ ಅವಳ ಕಣ್ಣುಗಳಿಂದುದುರಿದ ಎರಡು ಹನಿ ಅವನ ಟಿಫಿನ್ ಕ್ಯಾರಿಯರ್ನಲ್ಲಿ ಸೇರಿಯೇ ಹೋಗಿತ್ತು. ಇವನು ಆಫೀಸಿಗೆ ಬೇಗ ಹೋದರೆ ಸಾಕು ಅಂದುಕೊಳ್ಳುತ್ತ ಮುಂದಿನ ಎರಡು ಘಂಟೆಗಳನ್ನು ಕಳೆದಿದ್ದಳು.

* * *

ಹಾಗೆ ನೋಡಿದರೆ ಮನುವಿಗೆ ಸುಘೋಷನ ಕುರಿತು ಏನೇನೂ ತಕರಾರುಗಳಿಲ್ಲ. ಹಾಗೆ ಅಂದುಕೊಂಡ ಮರುಕ್ಷಣವೇ ಆ ಮಾತು ಸತ್ಯವಲ್ಲ ಅಂತಲೂ ಅವಳಿಗೆ ಅರಿವಾಗುವುದೂ ಸುಳ್ಳಲ್ಲ. ವಿಚಿತ್ರವೆಂದರೆ ಅವನು ಕಣ್ಣೆದುರಿಗೆ ಇಲ್ಲದಾಗ ಇಂದಿಗೂ ಅವಳಿಗೆ ಐದನೇಯತ್ತೆಯ ಆ ಪುಟ್ಟ ಸಹಪಾಠಿ ಹುಡುಗನೇ ಕಣ್ಮುಂದೆ ಬರುವ. ಮೊದಲ ಬೆಂಚಿನ ಗೋಡೆಯಂಚಿನ ತುದಿಯಿಂದ ಮೆಲ್ಲನೆ ನಾಚುತ್ತಲೇ ನಡೆದು ಅವನು ಬೋರ್ಡಿನ ಮೇಲೆ ಸುಜಾತಾ ಟೀಚರ್ ಹೇಳಿದ ಗಣಿತ ಬಿಡಿಸುತ್ತ ವಿಶಿಷ್ಟವಾಗಿ '೨' ಸಂಖ್ಯೆಯನ್ನು ಬರೆಯುವುದೇ ಕಣ್ಮುಂದೆ ಬರುವುದು. ಶಾಲೆಯಲ್ಲಿ ಒಮ್ಮೆಯೂ ತಲೆ ಎತ್ತದೇ, ಹುಡುಗರ ಗುಂಪಿನಲ್ಲಿ ಸೇರದೇ ಯಾವುದರಿಂದಲೋ ತಪ್ಪಿಸಿಕೊಳ್ಳಲೆಂಬಂತೆ ಸತತವಾಗಿ ಪುಸ್ತಕದಲ್ಲಿ ಹುದುಗಿರುತಿದ್ದ ಆ ಸಣಕಲು ಹುಡುಗನೇ ಈಗ ರಾತ್ರಿ ದೀಪವನ್ನೂ ಆರಿಸದೇ ಕಣ್ಣಗಳಲ್ಲಿ ಬಾಣದಂತೆ ನೋಟ ನೆಟ್ಟು ಅವನದೇ ಆದ ಅಪರೂಪದ ಆತ್ಮವಿಶ್ವಾಸದಿಂದ ಅವಳ ಇಡೀ ದೇಹವನ್ನು ನಖಶಿಖಾಂತ ಆವರಿಸಿ ಮುದ್ದಿಸುತ್ತಾನೆ ಅಂದರೆ ಅವಳಿಗೆ ನಂಬುವುದು ಕಷ್ಟ.

ಮನು, ಅವಳ ತಮ್ಮ ನವೀನ ಮತ್ತವರ ತಾಯಿ ಹರ್ಷಮಣಿ ಧಾರವಾಡದ ಅಜ್ಜನ ಮನೆಯಿಂದ ಜಗಳವಾಡಿಕೊಂಡು ಹುಬ್ಬಳ್ಳಿಯ ಸಾಯಿನಗರಕ್ಕೆ ಬಂದು ನೆಲೆಸುವ ಮೊದಲು ಮನು ಓದಿದ್ದು ಧಾರವಾಡದ ಬಾಸೆಲ್ ಮಿಶನ್ ಪ್ರಾಥಮಿಕ ಶಾಲೆಯಲ್ಲಿ. ಆಗ ಒಂದರಿಂದ ಐದನೆಯ ತರಗತಿಯವರೆಗೆ ಸುಘೋಷ ಅವಳ ಸಹಪಾಠಿಯಾಗಿದ್ದ. ನಂತರ ಹುಬ್ಬಳ್ಳಿಯ ಮಹಿಳಾ ವಿದ್ಯಾಪೀಠದಲ್ಲಿ ಮನು ಬಿ.ಎ. ಫೈನಲ್ ಓದುತ್ತಿರುವಾಗ ತೆರೆದುಕೊಂಡ ಫೇಸ್‌ಬುಕ್ ಎಂಬ ಆಧುನಿಕ ಮಾಯಾ ಲೋಕದಲ್ಲಿ ಹಳೆಯ ಸಹಪಾಠಿಗಳೆಲ್ಲ ಮತ್ತೆ ಸಿಗುವಾಗ ಮಾಯದಂತೆ ಸಿಕ್ಕ.

ಅವಳ ಜೊತೆಗೆ ಕಲಿತ ನೂರಾರು ಸಹಪಾಠಿಗಳಲ್ಲಿ ಒಬ್ಬನಾದ ಸುಘೋಷನ ಖಾಸಾ ವ್ಯಕ್ತಿತ್ವ ಕಡೆಯವರೆಗೂ ಅಪರಿಚಿತವಾಗಿಯೇ ಉಳಿಯಲು ಮನುವಿನ ಬಳಿ ಹತ್ತಾರು ಕಾರಣಗಳು ಹುಡುಕಿದರೆ ಸಿಗುವ ಕೈಯಳತೆಯಲ್ಲೇ ಇದ್ದವು. ಬೆಂಗಳೂರಿನ ಪೆಸಿಟ್‌ನಲ್ಲಿ ಇಂಜಿನಿಯರಿಂಗ್ ಮೂರನೆಯ ವರ್ಷ ಕಲಿಯುತ್ತಿದ್ದ ಸುಘೋಷ ಹುಬ್ಬಳ್ಳಿಯ ಕಾಲೇಜೊಂದರಲ್ಲಿ ಬಿ.ಎ. ಕಲಿಯುತ್ತಿದ್ದ ಮನುವನ್ನು ಒಮ್ಮೆಯೂ ಸಂಧಿಸದಿರಲು ಈ ಲೋಕದಲ್ಲಿ ಸಾಕಷ್ಟು ಸಮರ್ಥನೆಗಳಿದ್ದವು. ಆಗೆಲ್ಲ ಅಂತರ್ಜಾಲದಲ್ಲಿ ನಿಯಮಿತವಾಗಿ ಬ್ಲಾಗು ಬರೆಯುವ ಪಾಲಚಂದ್ರ ಎಂಬ ಹುಡುಗನನ್ನು ಮನು ತುಂಬಾ ಹಚ್ಚಿಕೊಂಡಿದ್ದಳು. ಹೆಸರು ಮತ್ತು ಹತ್ತಾರು ಬ್ಲಾಗುಪೋಸ್ಟ್‌ಗಳನ್ನು ಹೊರತುಪಡಿಸಿ ನೈಜತೆಗೆ ಹತ್ತಿರವಾದ ಒಂದೂ ವಿವರ ಪಾಲಚಂದ್ರನ ಕುರಿತು ತಿಳಿದಿಲ್ಲವೆಂಬ ಅರಿವು ಮೂಡುತ್ತಿದ್ದ ದಿನದಿಂದ ಸುಘೋಷ ಮನಸ್ಸಿಗೆ ಹತ್ತಿರವಾಗಹತ್ತಿದ. ಫೇಸ್‌ಬುಕ್ ಎಂಬ ಈ ಮಾಯಾ ಸೇತುವೆಯೊಂದು ಸಕಾಲದಲ್ಲಿ ಜನಿಸಿ ಈ ಇಬ್ಬರ ಮನಸ್ಸುಗಳನ್ನು ಬೆಸೆಯದಿದ್ದರೆ ಸುಘೋಷ ಮತ್ತು ಮನು ಇಬ್ಬರೂ ಪರಸ್ಪರರಿಗೆ ಕೇವಲ ಹೆಸರುಗಳಾಗಿ, ಬಾಲ್ಯದಲ್ಲಿ ಎಂದೋ ಸಂಧಿಸಿದ ಮಸುಕು ನೆನಪುಗಳಾಗಿ ಕಾಲಕ್ರಮೇಣ ಪರಸ್ಪರರ ಅಸ್ಥಿತ್ವವನ್ನೇ ಮರೆತುಬಿಡುತ್ತಿದ್ದ ಎರಡು ಪ್ರತ್ಯೇಕ ಬಿಂದುಗಳಾಗಿಬಿಡುತ್ತಿದ್ದರೋ ಏನೋ ಎಂದು ಮನುವಿಗೆ ಅನ್ನಿಸುತ್ತದೆ ಬಹಳ ಸಲ.

ಮನು ಡಿಗ್ರಿ ಮುಗಿಸಿ ಅವಳ ತಾಯಿ ಹರ್ಷಮಣಿ ಹತ್ತು ವರ್ಷಗಳಿಂದ ಕೆಲಸ ಮಾಡಿದ ಹುಬ್ಬಳ್ಳಿಯ ನವನಗರದ 'ರಾಕ್‌ವುಡ್ ಇಂಟರ್ ನ್ಯಾಷನಲ್' ಎಂಬ ಸ್ಟಾರ್ ಹೊಟೇಲಿನ ಲೆಫ್ಟ್ ವಿಂಗಿನಲ್ಲಿ ರಿಸೆಪ್ಶನಿಸ್ಟ್ ಆಗಿ ಸೇರಿದಾಗ ತಿಂಗಳ ಕೊನೆಗೆ ಕೈಗೆ ಬರುತ್ತಿದ್ದ ಆರೂವರೆ ಸಾವಿರವೂ ಅವಳಿಗೆ ಬಹು ದೊಡ್ಡ ಮೊತ್ತದಂತೆ ಭಾಸವಾಗುತ್ತಿತ್ತು. ಆಗೆಲ್ಲ ಅವಳು ತಾನು ಚಿಕ್ಕಂದಿನಿಂದ 'ಮಾಮಾ' ಎಂದು ಕರೆಯುತ್ತಿದ್ದ ವಸಂತ ಜಾಗೀರದಾರರನ್ನು ಮನತುಂಬಿ ನೆನೆಯುವಳು. 'ರಾಕ್‌ವುಡ್ ಇಂಟರ್ ನ್ಯಾಷನಲ್'ನಲ್ಲಿ ಮ್ಯಾನೇಜರರಾಗಿದ್ದ ಈ ವಸಂತ ಜಾಗೀರದಾರರು ಹರ್ಷಮಣಿಯ ಮೂಲಕ ಮನು-ನವೀನರಿಗೂ ತುಂಬಾ ವರ್ಷಗಳಿಂದ ಹತ್ತಿರದವರಾಗಿದ್ದರು. ತುಟಿಗೆ ತೆಳು ಗುಲಾಬಿ ಬಣ್ಣ ಹಚ್ಚಿ 'ದಿಸ್ ವೇ ಸರ್', 'ಎಸ್ ಮ್ಯಾಮ್', 'ಹ್ಯಾವ್ ಅ ಗ್ರೇಟ್ ಡೇ ಗಾಯ್ಸ್' ಎನ್ನುತ್ತ ಮನು ಈ ಕೆಲಸದಲ್ಲಿ ಮುಂದಿನ ಆರು ವರ್ಷ ಕಳೆಯುವುದಕ್ಕೂ, ಸುಘೋಷ ಪೆಸಿಟ್‌ನಲ್ಲಿ ಇಂಜಿನಿಯರಿಂಗ್ ಮುಗಿಸಿ, ಎರಡು ವರ್ಷ ವಿಪ್ರೋ ಎಂಬ ಕಂಪನಿಯಲ್ಲಿ ಕೆಲಸ ಮಾಡಿ, ನಂತರ ಅಮೇರಿಕೆಯ ಸ್ಯಾನ್ ಹೋಸೆ ವಿಶ್ವವಿದ್ಯಾಲಯದಲ್ಲಿ ಎಂ.ಎಸ್. ಮುಗಿಸಿ ಈಗಿರುವ 'ಸ್ಟ್ರಾಸನ್ ಸಾಫ್ಟವೇರ್ಸ್'ನಲ್ಲಿ ಕೆಲಸ ಹಿಡಿಯುವುದಕ್ಕೂ ಸರಿಹೋಗಿತ್ತು. ತಾನೇ ಮತ್ತೆ ಮತ್ತೆ ಅವನ ಬೆನ್ನು ಬಿದ್ದು ಮಾತನಾಡಿಸಿದ್ದಕ್ಕೆ ಅವನು ಈಗ ಅಮೇರಿಕದಲ್ಲಿ ಸೆಟಲ್ ಆಗಿರುವ ವಿಚಾರ ಎಷ್ಟರಮಟ್ಟಿಗೆ ಕಾರಣವಾಯಿತು ಅಂತ ಮನುಗೆ ಈಗಲೂ ಹೇಳುವುದು ಕಷ್ಟ. ಎಲ್ಲಿಂದಲೋ ಶುರುವಾಗಿ ಇನ್ನೆಲ್ಲೋ ಸುಳಿದು ಕೊನೆಗೆ ಇಲ್ಲಿ

ಬಂದು ನಿಂತಿದೆ ಅಂತ ಮಾತ್ರ ಅವಳು ಉಸುರಬಲ್ಲಳು. ತಂದೆ ತಾಯಿ ಇಲ್ಲದೇ ದೊಡ್ಡಪ್ಪನ ಮನೆಯಲ್ಲಿ ಬೆಳೆದ ಸುಘೋಷನಿಗೂ ಆ ಫೇಸ್‌ಬುಕ್ ಪ್ರೇಮ ಪ್ರಯಾಣ ಆಕರ್ಷಕವಾಗಿಯೇ ಇತ್ತು. ಸಂಬಂಧದಲ್ಲಿ ಏನು ಹುಡುಕಬೇಕೆಂದೇ ತಿಳಿಯದ ಧಾವಂತದಲ್ಲಿ ಮರುವರ್ಷ ಸುಘೋಷ ಭಾರತಕ್ಕೆ ಬಂದಾಗ ಇಬ್ಬರೂ ಮದುವೆಯಾಗಿದ್ದರು.

ಸುಘೋಷನ ಸ್ನೇಹಿತರ ಹೆಂಡತಿಯರು ಅಮೇರಿಕಾಕ್ಕೆ ಬಂದು ಒಂದೆರಡೇ ವರ್ಷಗಳಲ್ಲಿ ಎಂ.ಎಸ್. ಮುಗಿಸಿ ಯಾವುದೋ ಕಂಪನಿಯಲ್ಲಿ ಕೆಲಸ ಮಾಡುತ್ತ ವೀಕೆಂಡಿನ ಪಾಟ್‌ಲಕ್ ಡಿನ್ನರುಗಳಲ್ಲಿ ಮನು ತಯಾರಿಸಿದ ಪಾಲಕ್ ಸೊಪ್ಪಿನ ಹಸಿರು ಕಬಾಬ್ ಮೆಲ್ಲುತ್ತ "ಸೋ ವಾಟ್ ಡು ಯು ಡು?" ಅಂತ ತಮ್ಮ ನಾಜೂಕಾದ ಲೇಸಿನ ಬ್ರಾ ಪಟ್ಟಿಗಳನ್ನು ಕಾಣಿಸುವ ಹಾಗೆ ಧರಿಸಿ ಹೆಗಲುಮಟ್ಟದಲ್ಲಿ ಕತ್ತರಿಸಿದ ನಯವಾದ ಕೂದಲು ನೇವರಿಸುತ್ತ ಕೇಳುವಾಗ ಮಾತ್ರ ಮನುಗೆ ಫಜೀತಿಗಿಟ್ಟುಕೊಳ್ಳುತ್ತದೆ. ಆಗೆಲ್ಲ ಅವಳಿಗೆ ಅವರ ಲೇಸಿನ ಬ್ರಾ ಪಟ್ಟಿಯಷ್ಟೇ ಆಕರ್ಷಕವಾಗಿರುವ ಅವರ ಬಿ.ಇ., ಎಂ.ಎಸ್. ಡಿಗ್ರಿಗಳ ಮುಂದೆ ತಾನು ಹುಬ್ಬಳ್ಳಿಯ ಮಹಿಳಾ ವಿದ್ಯಾಪೀಠದಲ್ಲಿ ಕಲಿತ ಬಿ.ಎ. ಪದವಿಯ ಎಕಾನಾಮಿಕ್ಸ್- ಹಿಸ್ಟರಿ- ಪಾಲಿಟಿಕಲ್ ಸಾಯನ್ಸ್ ವಿಷಯಗಳು ಭರ್ಜರಿ ಮಾತುಗಾರಿಕೆಯ ನಡುವೆ ಅಕಸ್ಮಾತ್ತಾಗಿ ಸುಳಿವ ನಿರುಪದ್ರವಿ ಸುಳ್ಳುಗಳಂತೆ ಭಾಸವಾಗುವವು. ಪದವಿಯ ಕೊನೆಯ ವರ್ಷದಲ್ಲಿ ಎಕಾನಾಮಿಕ್ಸ್ ವಿಷಯದಲ್ಲಿ ಅತಿಹೆಚ್ಚು ಅಂಕ ಪಡೆದಿದ್ದಕ್ಕಾಗಿ ದೊರೆತ ಇನ್ನೂರಾಎಪ್ಪತ್ತು ರೂಪಾಯಿಗಳ ಪಾರಿತೋಷಕವೂ, ಅದರ ಹಿಂದೆ ಅವಳ ತಾಯಿ ಹರ್ಷಮಣಿಯ ಕಣ್ಣಗಳಲ್ಲಿ ತುಳುಕಿದ ಹೆಮ್ಮೆಯ ಹನಿಯೂ ನೆನಪಾಗಿ ಗಂಟಲು ಕಟ್ಟಿದಂತಾಗುವುದು. "ವೆಲ್, ಐ ಆಮ್ ಅ ರೈಟರ್" ಅಂತ ಕಣ್ಣುಗಳಲ್ಲಿ ಆತ್ಮವಿಶ್ವಾಸ ನಟಿಸುತ್ತ ಏರುದನಿಯಲ್ಲಿ ಹೇಳುವಾಗ ಕಂಕುಳಲ್ಲಿ, ತೊಡೆಸಂದಿಯಲ್ಲಿ ತುಸು ಬೆವರಿದ್ದು ಅರಿವಾಗಿ ಕಾಲ್ಬೆರಳುಗಳು ಅದುರಿದಂತಾಗುವುದು. ಒಂದೆರಡು ಕನ್ನಡ ಪತ್ರಿಕೆಗಳಲ್ಲಿ ಅವಳ ಒಂದಿಷ್ಟು ಹನಿ ಕವಿತೆಗಳು ಪ್ರಕಟವಾಗಿವೆಯಾದುದರಿಂದ ಸದ್ಯ ತಾನೂ ಒಬ್ಬ ಕವಿ ಅಂತ ಮುಲಾಜಿಲ್ಲದೇ ಹೇಳಿಕೊಳ್ಳಬಲ್ಲಳು.

ಮನು ಅಷ್ಟು ಹೇಳಿದ್ದೇ ಸುಘೋಷ ಎಲ್ಲಿದ್ದರೂ ಅವಳ ನೆರವಿಗೆ ಓಡಿ ಬರುತ್ತಾನೆ. ತನ್ನ ಉದ್ದುದ್ದ ಮೋಡಿ ಬೆರಳುಗಳಲ್ಲಿ ಕಲಾತ್ಮಕ ಕುಸುರಿ ಕೆತ್ತನೆಯಿರುವ ವೈನ್ ಗ್ಲಾಸನ್ನು ದೃಢವಾಗಿ ಹಿಡಿದು ಅವನು ಮಾತಿಗೆ ತೊಡಗಿದನೆಂದರೆ ಎದುರಿಗೆ ಯಾರೇ ಇದ್ದರೂ ಅವನ ಮಾತಿಗೆ ಸೋಲಲೇಬೇಕು, ಹಾಗಿರುತ್ತದೆ ಅವನ ವರಸೆ. ಬರಹಗಾರರಿಗೆ 'ಲೀಷ್ಹರ್' ಅಂದರೆ ಬಿಡುವು ಹೇಗೆ ಮುಖ್ಯ ಅಂತ ಶುರುವಾದ ಅವನ ವಾದ ಎಲ್ಲೆಲ್ಲೋ ಹೋಗಿ ಬರಹಗಾರರು ಜಗತ್ತಿಗೆ ಏಕೆ ಬೇಕು ಅನ್ನುವಲ್ಲಿ ಮುಟ್ಟುವವರೆಗೆ ಅವನ ಏಕಮುಖ ವಾದಸರಣಿಯನ್ನು ಅವನ ಸ್ನೇಹಿತರ ಹೆಂಡತಿಯರು ಸುಘೋಷನ ನಿಲುವಿನ ಜೊತೆಗೆ ಸವಿಯುತ್ತ ಮೆಚ್ಚಿಕೊಳ್ಳುವರು. ಅವನ ಉದ್ದುದ್ದ ಬೆರಳುಗಳು, ವಿಶಾಲ ಎದೆ, ಹರವಾದ ಮೈಕಟ್ಟು ಅವನಿರುವುದಕ್ಕಿಂತ ತುಸು ಎತ್ತರದ ನಿಲುವನ್ನು ಅವನಿಗೆ ದಯಪಾಲಿಸಿರುವುದು.

ಮಾತುಕತೆ ಶುರುವಾದ ಐದೇ ನಿಮಿಷಗಳಲ್ಲಿ ಸುಘೋಷ ಈ ತರಳೆಯರಿಗೆ ಬರವಣಿಗೆಯು ಹೇಗೆ ಉದಾತ್ತ ಕಾರ್ಯವೆಂದೂ, ಅದರಲ್ಲೂ ಭಾರತದ ಭಾಷೆಗಳಲ್ಲಿ ಬರೆಯುವವರು ಹೇಗೆ ಬರವಣಿಗೆಯನ್ನು ವೃತ್ತಿಯೆಂದು ತಿಳಿಯುವುದಿಲ್ಲವೆಂದೂ, ಆ ಕಾರಣಕ್ಕಾಗಿ ಬರಹಗಾರರಿಗೆ ಸಿಗುವ ಸ್ವಾತಂತ್ರ್ಯವೇ ಮುಖ್ಯವೆಂದೂ ವಿವರಿಸಲು ಬಹು ಪ್ರಯಾಸಪಟ್ಟಂತೆ ಮನುವಿಗೆ ಭಾಸವಾಗುವುದು. ಬರೆದ ನಾಲ್ಕು ಹನಿಗವನಗಳ ದೆಸೆಯಿಂದ ತನ್ನನ್ನು ಕನ್ನಡದ ಮುಖ್ಯ ಸಾಹಿತಿಗೆ ಹೋಲಿಸುತ್ತಿದ್ದಾನಲ್ಲ ಅಂತ ಮನು ಒಳಗೊಳಗೆ ಕಳವಳಗೊಳ್ಳುವಳು. ನಂತರದ ಕೆಲವೇ ನಿಮಿಷಗಳಲ್ಲಿ ಆ ಗುಂಪಿನ ಮಾತುಕತೆ ಕನ್ನಡ ಸಾಹಿತ್ಯದಿಂದ ಎಚ್–ಒನ್–ಬಿ ವೀಸಾಗೂ, ಗ್ರೀನ್ ಕಾರ್ಡಿನ ಅಪ್ಲಿಕೇಶನ್ನುಗಳಿಗೂ ತಿರುಗಿದಾಗ ತುಸು ನಿರಾಳವಾಗುವಳು.

* * *

“ವ್ಹಾಟ್, ಇಷ್ಟು ಲಗೂ ನಾಲ್ಕು ಘಂಟೆ ಆತ?” ಅಂದುಕೊಳ್ಳುವ ಮೊದಲೇ ಮನು ಹಾಸಿಗೆಯಿಂದ ಜಿಗಿದೆದ್ದಿದ್ದಳು. ಎದೆಯ ಮೇಲೆ ನಿಷ್ಪಾಪಿಯಂತೆ ಬಿದ್ದ ಮೊಬೈಲು ಚಾರ್ಜು ಮುಗಿದು ಜೀವ ಹೋಗಿದ್ದರೂ ಅವಳು ಎದ್ದ ಪಟ್ಟಿಗೆ ತಾನೂ ಹೌಹಾರಿ ನೆಲಕ್ಕೆ ಹಾಸಿದ ಕಾರ್ಪೆಟ್ ಮೇಲೆ ಬಿತ್ತು. ಸಂಜೆಯ ತೆಳು ಬಿಸಿಲಿಗೆ ಕಣ್ಣು ಹೊಂದಿಸಿಕೊಳ್ಳುತ್ತ ಇನ್ನೊಮ್ಮೆ ಸರಿಯಾಗಿ ಗಡಿಯಾರ ನೋಡಿದರೆ ಸಂಜೆ ನಾಲ್ಕೂ ಹದಿನೈದು ತೋರಿಸುತ್ತಿತ್ತು. ಅಂದರೆ ಸುಘೋಷ ಮನೆ ಸೇರುವುದಕ್ಕಿನ್ನೂ ಮೂರೂವರೆ ತಾಸುಗಳಿವೆ.

“ಮೂವತ್ತು ದಾಟಿದ ಮೇಲೆ ದೇಹದಲ್ಲಾಗುವ ಬದಲಾವಣೆಗಳು” ಅಂತ ಅಂತರ್ಜಾಲದಲ್ಲಿ ಹುಡುಕಲು ಶುರು ಮಾಡಿ ಒಂದರ ಹಿಂದೆ ಒಂದು ಕೊಂಡಿಗಳನ್ನು ಕ್ಲಿಕ್ಕಿಸುತ್ತ “ಮೂವತ್ತು ಅಂದರೆ ಇಂದಿನ ಹೊಸ ಇಪ್ಪತ್ತು, ಏಕೆ?”, “ಮೂವತ್ತರ ನಂತರ ಮನಃಶಾಂತಿ ಕಾಯ್ದುಕೊಳ್ಳುವುದು ಹೇಗೆ?”, “ಮನಃಶಾಂತಿಗೂ ಬಾಲ್ಯಕ್ಕೂ ಸಂಬಂಧವಿದೆಯೇ?”, “ನೀವು ತೊಂಬತ್ತರ ದಶಕದಲ್ಲಿ ಬಾಲ್ಯ ಕಳೆದಿದ್ದರೆ ಈ ಸಂಗತಿಗಳು ನಿಮಗೆ ನೆನಪಿರುತ್ತವೆ”, “ತೊಂಬತ್ತರ ದಶಕದಲ್ಲೇ ಬೋಲ್ಡ್ ಆಗಿ ಕಾಣಿಸಿಕೊಂಡ ನಟಿಯರು”, “ಪ್ಲಾಸ್ಟಿಕ್ ಸರ್ಜರಿ ಮಾಡಿಸಿಕೊಂಡ ಇಂದಿನ ಪ್ರಮುಖ ನಟಿಯರು ಯಾರು?”, “ದೀಪಿಕಾ ಪಡುಕೋಣೆಯ ಚರ್ಮದ ಹೊಳಪಿನ ಗುಟ್ಟೇನು?”, “ಕ್ಲಿಯೋಪಾತ್ರ ಅದೊಂದೇ ಗುಟ್ಟನ್ನು ಲೋಕದ ಕಣ್ಣಿಂದ ಹೇಗೆ ಕಾಯ್ದುಕೊಂಡಳು ಅಂತ ತಿಳಿಯಲು ಇಲ್ಲಿ ಕ್ಲಿಕ್ಕಿಸಿ”... ಹೀಗೇ ತಡವಿಲ್ಲದೇ ಅಂತರ್ಜಾಲ ದಯಪಾಲಿಸಿದ ಕೊಂಡಿಗಳನ್ನರಸುತ್ತ ಬಂದು ಕೊನೆಗೆ ಎಲ್ಲಿಂದ ಶುರುಮಾಡಿದೆ, ಇಲ್ಲಿ ಹೇಗೆ ಬಂದು ಮುಟ್ಟಿದೆ ಅಂತಲೇ ಮನುವಿಗೆ ಮರೆತು ಹೋಗಿತ್ತು. ಕೊನೆಗೆ “ಕ್ಲಿಯೋಪಾತ್ರಳ ಸೌಂದರ್ಯದ ರಹಸ್ಯ ಈ ಜೇಡಿಮಣ್ಣಿನಲ್ಲಿದೆ” ಅನ್ನುವ ಪೋಸ್ಟು ಓದುವಾಗ ಅಷ್ಟೊಂದು ಹೊತ್ತು ಮೊಬೈಲನ್ನು ನೋಡಿದ ಕಣ್ಣುಗಳಿಗೆ ವಿಶ್ರಾಂತಿ ಬೇಕೆನಿಸಿ ಅಲ್ಲೇ ಕಣ್ಮುಚ್ಚಿದ್ದಳು.

ಆ ದಿನ ಸಂಜೆ ಐದು ಘಂಟೆಗೆ ಅವಳು ಮನೆಯ ಹತ್ತಿರದ ಗ್ರಂಥಾಲಯಕ್ಕೆ ಹೋಗಬೇಕಿತ್ತು. ಈಗೆರಡು ತಿಂಗಳುಗಳಿಂದ ಆ ಸಾರ್ವಜನಿಕ ಲೈಬ್ರರಿಯಲ್ಲಿ ಮನು 'ವಾಲಂಟಿಯರ್' ಮಾಡುತ್ತಿದ್ದಳು. ಅಂದರೆ ಮುಖ್ಯ ಗ್ರಂಥಪಾಲಕಿ ಲಿಝ್ ಹೇಳಿದ ಕೆಲಸಗಳನ್ನು ಮಾಡಿಕೊಡುವುದು. ಸಾರ್ವಜನಿಕರು ಮರಳಿ ಕೊಟ್ಟ ಪುಸ್ತಕಗಳನ್ನು ಕಪಾಟುಗಳಲ್ಲಿ ಪೇರಿಸಿಡುವುದು, ಹರಿದು ಹೋದ ಬೈಂಡುಗಳ ಪುಸ್ತಕಗಳ ಸಂಖ್ಯೆಯನ್ನು ಲೆಡ್ಜರಿನಲ್ಲಿ ಬರೆದಿಡುವುದು, ಇತ್ಯಾದಿ ಸಣ್ಣ ಪುಟ್ಟ ಕೆಲಸಗಳು. ಯಾವುದೇ ಆದಾಯ ತರದ ಈ ಕೆಲಸಕ್ಕೆ ಸುಘೋಷ ಖುಷಾಲಿಗೆ 'ಬಿಟ್ಟಿ ಕೆಲಸ' ಎನ್ನುತ್ತಿದ್ದ.

ಮಂಚದ ಸರೀ ಹಿಂದಕ್ಕಿರುವ ಸದಾ ಬ್ಲೈಂಡು ಹಾಕಿರುವ ಕಿಟಕಿಯಲ್ಲಿ ಇಣುಕಿ ನೋಡಿದಳು. ಆಗಷ್ಟೇ ಶಾಲೆ ಬಿಟ್ಟ ಮಕ್ಕಳನ್ನು ಹಿಂದಿನ ಬೇಬಿ ಸೀಟುಗಳಲ್ಲಿ ಕೂರಿಸಿಕೊಂಡು ಉದ್ಯೋಗಸ್ಥ ತಾಯಂದಿರಿಬ್ಬರು ಕಾರು ಇಳಿಯುವುದನ್ನು ಕಂಡಳು. ತನ್ನ ಇಬ್ಬರು ಮಕ್ಕಳನ್ನು ಇಳಿಸಿಕೊಂಡ ನೀಲಿ ಕಾರಿನ ಹೆಂಗಸು ಮುಖದ ಮುಂದೆಯೇ ಸಿಕ್ಕಿದ ಕಪ್ಪು ಕಾರಿನ ಹೆಂಗಸಿಗೆ ಒಲ್ಲದ ಮನಸ್ಸಿನಿಂದೆಂಬಂತೆ ತುಸು ತುಟಿ ವಾರೆ ಮಾಡಿ 'ಹೆಲೋ' ಹೇಳಿದ್ದು ಕಂಡಿತು. ಇಂಥ ವೇಗದ ರಸ್ತೆಗಳಲ್ಲಿ ನಿರುಮ್ಮಳವಾಗಿ ಕಾರು ಬಿಟ್ಟುಕೊಂಡು ನಡೆವ ಹೆಂಗಸರನ್ನು ಕಂಡರೆ ಮನುವಿಗೆ ಹೊಟ್ಟೆಯಲ್ಲಿ ಬೆಂಕಿ ಬಿದ್ದಂತಾಗುತ್ತದೆ. ಅದರ ಹಿಂದೆಯೇ ಹುಬ್ಬಳ್ಳಿಯ ದಾಜೀಬಾನ ಪೇಟೆಯ ಸಂದುಗೊಂದುಗಳಲ್ಲಿ ಪುಟ್ಟ ಮಾರುತಿ ೮೦೦ ಕಾರನ್ನು ಓಡಿಸಿದ್ದು ನೆನಪಾಗುತ್ತದೆ.

ತಿಳಿಹಸಿರು ಫ್ರಾಕು ಧರಿಸಿದ ಕಪ್ಪು ಕಾರಿನ ಹೆಂಗಸು ಒಂದು ಕೈಯಲ್ಲಿ ಮಗುವನ್ನೆತ್ತಿಕೊಂಡು ಇನ್ನೊಂದರಲ್ಲಿ ಒಂದು ದೊಡ್ಡ ಹಾಲಿನ ಕ್ರೇಟನ್ ಹಿಡಿದುಕೊಂಡು ಮನುವಿನ ಕಿಟಕಿಯ ಕಣ್ಣಳತೆಯಿಂದ ನಿಧಾನಕ್ಕೆ ಮಾಯವಾಗುತ್ತಿದ್ದಳು. ಅದೇಕೋ ಮನುವಿನ ಮೈಯಲ್ಲಿ ಮಿಂಚಿನ ಸಂಚಾರವಾದಂತಾಯಿತು. ಟೀವಿ ಟೇಬಲ್ಲಿನ ಮೇಲೆ ಸುಘೋಷ ಇರಿಸಿಹೋಗಿದ್ದ ಕಾರಿನ ಕೀಲಿಯನ್ನು ನೋಡಿ ಕಾರು ಓಡಿಸುವ ಆಸೆ ತೀವ್ರವಾದರೂ ತಡೆದುಕೊಂಡಳು.

ಮರುಕ್ಷಣವೇ ಕೂದಲಿಗೊಂದು ಬೋ ಹಾಕಿಕೊಂಡು ಜೀನ್ಸು ತೊಟ್ಟು ಕಾರು ಕೀಲಿಯ ಜೊತೆಗೆ ಮನೆಯ ಕೀಲಿಯನ್ನೂ ತೆಗೆದುಕೊಂಡು ಶೂ ತೊಟ್ಟು ಹೊರ ನಡೆದಳು.

* * *

ಆರೂವರೆಗೆ ಮನು ಮನೆಗೆ ಮರಳಿದಾಗ ಸಣ್ಣಗೆ ಸಿಳ್ಳು ಹಾಕುತಿದ್ದಳು. ಇಂದು ಮೊದಲ ಬಾರಿ ಈ ಪರದೇಶದಲ್ಲಿ ಸ್ವತಂತ್ರವಾಗಿ ಕಾರು ಓಡಿಸಿದ ಉದ್ವೇಗದಲ್ಲಿ ಬೆಳಿಗ್ಗೆಯಿಂದ ಮನಸ್ಸನ್ನು ಆವರಿಸಿದ ಮನಸ್ಸಿನ ಜಾಡ್ಯವೆಲ್ಲ ಕರಗಿ ತಿಳಿಯಾಗಿತ್ತು. ಶಾವರ್‌ನಲ್ಲಿ ತಲೆಸ್ನಾನ ಮುಗಿಸಿಕೊಂಡು ಬಂದವಳಿಗೆ ಒಂದು ಕ್ಷಣ ರಾತ್ರಿ ಅಡುಗೆಗೆ ಏನು ಅಂತ ಚಿಂತೆ

ಆವರಿಸಿ ಹಿಂದಿನ ದಿನ ಥಾ ಮಾಡಿಟ್ಟಿದ್ದ ಚಿಕನ್ನು ನೆನಪಿಗೆ ಬಂತು. ಅದರ ಹಿಂದೆಯೇ ಸುಘೋಷನಿಗೆ ಬಿರಿಯಾನಿ ಎಷ್ಟು ಇಷ್ಟ ಎಂಬುದೂ ನೆನಪಿಗೆ ಬಂತು.

ಸರಿಯಾಗಿ ಏಳೂವರೆಗೆ ಎಂದಿನಂತೆ ಸುಘೋಷ ಮನೆಯ ಕೀಲಿ ತೆಗೆದು ಒಳಬಂದಾಗ ಬಿರಿಯಾನಿಯ ಘಮ ಮನೆಯನ್ನೆಲ್ಲ ತೆಳು ಮೋಡದಂತೆ ಆವರಿಸಿತ್ತು. ಪರಸ್ಪರ ಹಾಯ್ ಹೇಳಿದರೂ ಇಬ್ಬರೂ ಅದೇಕೋ ಕಣ್ಣು ತಪ್ಪಿಸಿದ್ದು ಇಬ್ಬರ ಗಮನಕ್ಕೂ ಬಂತು. ಅವನು ಕಣ್ಮುಂದೆ ಇಲ್ಲದಾಗ ಹುಟ್ಟುವ ದ್ವೇಷದ ಮಾತೆಲ್ಲ ಅವನು ಮುಂದೆ ಬಂದಾಗ ಕರಗಿಹೋಗುತ್ತದೆ. ಅವನ ಮುಗ್ಧ ನೋಟಕ್ಕೆ ಮನಸು ತುಂಬಿ ಬರುತ್ತದೆ. ಹಗೆ ಕರಗುತ್ತದೆ. ಬಹುಶಃ ಅವನಗೂ ಹಾಗೆಯೇ ಅನ್ನಿಸಿರಬಹುದು ತನ್ನ ಬಗ್ಗೆ ಅಂದುಕೊಂಡಳು ಮನು. ಅಥವಾ ಹಾಗೆಯೇ ಅನ್ನಿಸಲಿ ಅಂತ ಪ್ರಾರ್ಥಿಸಿದಳು.

“ಚಹಾ ಮಾಡ್ತೇನಿ” ಅಂತ ಸೋಫಾದಿಂದ ಎದ್ದವಳಿಗೆ ತುಂಬಾ ಹೊತ್ತಿನಿಂದ ಒಂದೂ ಮಾತಾಡದೇ ಇದ್ದುದರಿಂದ ದನಿ ತುಸು ಒಡೆದದ್ದು ಗಮನಕ್ಕೆ ಬಂತು, ಬಾಲ್ ಪಾಯಿಂಟ್ ಪೆನ್ನಿನಲ್ಲಿ ಬರೆದ ಮೊದಲ ಅಕ್ಷರವನ್ನು ಪೆನ್ನು ಮೂಡಿದ ಮೇಲೆ ಇನ್ನೊಮ್ಮೆ ತಿದ್ದಿದಂತೆ “ಚಹಾ” ಅಂತ ಇನ್ನೊಮ್ಮೆ ಹೇಳಿದಳು. “ಮ್ಯಾಗೀ ನೂ ಮಾಡಲಿ?” ಅಂತ ಕೇಳಿದ್ದಕ್ಕೆ “ಹಂ, ಥ್ಯಾಂಕ್ಸ್” ಅಂತ ಉತ್ತರ ಬಂತು.

ಮತ್ತೆ ಇದೇ ಮೌನ ನಾಲ್ಕು ದಿನ ಮುಂದುವರೆಯುತ್ತದೆ ಅಂತ ಮನುಗೆ ಸಂಕಟವಾಯಿತು. ಆ ವಾಕ್ಯ ಮನಸ್ಸಿನಲ್ಲಿ ಪೂರ್ಣಗೊಳ್ಳುವ ಮೊದಲೇ ಸುಘೋಷ ಬಂದು ಹಿಂದಿನಿಂದ ಹೆಗಲು ಬಳಸಿದ. ಕಡಾಯಿಯ ತುಂಬ ಇದ್ದ ಚೆಲುವಾದ ಬಿರಿಯಾನಿಯೂ ಅವನ ಈ ಕ್ರಿಯೆಗೆ ಕಾರಣವಾಗಿರಬಹುದೇನೋ ಎಂದು ಮನಗಂಡಂತೆ ಒಮ್ಮೆಲೇ ಮನುವಿನ ಜೊತೆ ಕಣ್ಣು ಕೂಡಿಸಲು ಅವನು ನಾಚಿದ. ಇಲೆಕ್ಟ್ರಿಕ್ ಸ್ಟೋವಿನ ಕಡೆಗೆ ತಿರುಗಿದ್ದ ಮನುವಿನ ಮುಖವನ್ನು ಮೆಲ್ಲಗೆ ತನ್ನೆಡೆಗೆ ತಿರುಗಿಸಿಕೊಂಡ. ಬೆಳಿಗ್ಗೆ ಆಫೀಸಿಗೆ ಹೊರಡುವಾಗ ಅವಳ ಮುಖದ ಮೇಲಿದ್ದ “ಆ ಒಂಥರಾ” ಈಗಿಲ್ಲದೇ ಕರಗಿಹೋಗಿರುವುದನ್ನು ಗಮನಿಸಿ ತನ್ನ ಹಿಡಿತವನ್ನು ಇನ್ನಷ್ಟು ಬಿಗಿ ಮಾಡಿದ.

ಇನ್ನೇನು ಕೆಲವೇ ಕ್ಷಣಗಳಲ್ಲಿ ತಾನು ತಿಳಿಸಲಿರುವ ಒಂಟಿಯಾಗಿ ಕಾರು ಚಲಾಯಿಸಿಕೊಂಡು ಲೈಬ್ರರಿಗೆ ಹೋದ ಘಟನೆಯನ್ನು ಹೇಳುವಾಗ ಇವನು ಒಮ್ಮೆಲೇ ಸಿರಕ್ ಅಂತ ಸಿಡುಕದಿರಲಿ ದೇವರೇ ಅಂತ ಮನು ಅವನ ನಿಮೀಲಿತ ಕಣ್ಣಗಳನ್ನು ತನ್ಮಯತೆಯಿಂದ ನೋಡುತ್ತಾ ಒಳಗೊಳಗೇ ಪ್ರಾರ್ಥಿಸಿದಳು.

*

# ಗಾಜಿನ ಗೋಡೆ

■ **ಆನಂದ ಸಿಂಹ,** San Ramon, CA.

ಒಂದಾನೊಂದು ಕಾಲದಲ್ಲಿ ಭಾರತದಲ್ಲಿ "ಜೀನ್ಸ್ ಪ್ಯಾಂಟ್" ಹಾಕುತ್ತಾನೆಂದರೆ ಅವನು ಒಂದು ಕಾಲನ್ನು ಅಮೇರಿಕಾದಲ್ಲಿ ಇಟ್ಟಿದ್ದಾನೆಂದೇ ಲೆಕ್ಕ. (ಸ್ವದೇಶದಲ್ಲಿ ಜೀನ್ಸನ್ನು 'ಜೀನ್ಸ್' ಎಂದೇ ಕರೆಯದೆ 'ಜೀನ್ಸ್ ಪ್ಯಾಂಟ್' ಎಂದು ಏಕೆ ಕರೆಯುತ್ತಾರೆಂದು ಇಂದಿಗೂ ತಿಳಿಯದು). ಹೆಣ್ಣು ಮಕ್ಕಳ ಪೈಕಿ ಜೀನ್ಸ್ ಹಾಕುತ್ತಿದ್ದವರು ಬಹಳ ಕಡಿಮೆ. ಅಮೇರಿಕಾ ಮತ್ತು ಇತರ ದೇಶಗಳಿಗೆ ವಲಸೆ ಬಂದವರ ಎಣಿಕೆಯೂ ಅಷ್ಟೆ ಬೆಂಗಳೂರಿನಂತಹ ನಗರದಲ್ಲೂ ಕೂಡ ಇಡೀ ಬೀದಿಗೆ ಒಬ್ಬರೋ ಇಬ್ಬರೋ 'ಫಾರಿನ್'ನಲ್ಲಿ ನೆಲೆಸಿದ್ದರು. ಹೆಣ್ಣು ಮಕ್ಕಳು ಒಂಟಿಯಾಗಿ ಹೊರದೇಶಕ್ಕೆ ಬರುವುದು ಇನ್ನೂ ಅಪರೂಪವಾಗಿತ್ತು. ವಿದೇಶಕ್ಕೆ ಅದರಲ್ಲೂ ಅಮೇರಿಕಾ ಮತ್ತು ಇತರ ಪಾಶ್ಚಾತ್ಯ ದೇಶಗಳಿಗೆ ವಲಸೆ ಹೋಗುವುದು ಎಂಥವರಿಗಾದರೂ ಒಂದು ಜೀವನ ನಿರ್ಣಯಾತ್ಮಕ ಹೆಜ್ಜೆ. ಬಹಳ ಮಂದಿಗೆ ಈ ವಿದೇಶ ಪ್ರಯಾಣವೇ ತಮ್ಮ ಜೀವನದ ಮೊಟ್ಟ ಮೊದಲ ವಿಮಾನಯಾನವಾಗಿತ್ತು. ಮುಂದೆ ಆಗಬಹುದಾದ ಹೊಸ ಅನುಭವಗಳ ಸ್ಯಾಂಪಲ್ಲು ವಿಮಾನ ಹತ್ತಿದ ಕ್ಷಣದಿಂದಲೇ ಪ್ರಾರಂಭವಾಗುತ್ತಿತ್ತು. ನೇರವಾಗಿ ಉದ್ಯೋಗಕ್ಕೆ ಬರುವವರ ಸಂಖ್ಯೆ ಅತಿ ವಿರಳ. ಉನ್ನತ ವ್ಯಾಸಂಗಕ್ಕೆ ಹೋಗುತ್ತಿದ್ದವರೇ ಹೆಚ್ಚು.

ಕಳಿಸಿಕೊಡುವ ತಂದೆತಾಯಿಯರಲ್ಲಿ ಕಣ್ಣೀರು, ಒಡಹುಟ್ಟಿದವರಲ್ಲಿ ಬೇಸರ. ಹೊರಟುನಿಂತವನಿಗೋ ಹೊಸ ದೇಶದಲ್ಲಿ ತಾನು ಎದುರಿಸಬೇಕಾದ ಸವಾಲುಗಳ ಬಗ್ಗೆ ಆತಂಕದ ಜೊತೆ ಗೃಹವಿರಹದ ಯಾತನೆ ಬೇರೆ. ತಾಯಂದರಿಗೆ ಮಗನ ಊಟದ ಬಗ್ಗೆ ಯೋಚನೆ, ಅಗಲಿಕೆಯ ಕೊರಗಾದರೆ ತಂದೆಯರಿಗೆ ಮಗನ ಕ್ಷೇಮಾಭಿವೃದ್ಧಿಯ ಆತಂಕ. ಇವಾವುದನ್ನೂ ಹೆಚ್ಚಾಗಿ ತೋರ್ಪಡಿಸದೆ ಮಗನಿಗೆ ಶುಭ ಹಾರೈಸಿ ಬೀಳ್ಕೊಡುವಿಕೆಯಾಗುತ್ತಿತ್ತು. ಹಲವು ವರ್ಷಗಳಿಂದ ಬೆಳೆಸಿಕೊಂಡು ಬಂದ ಮಗನ ಆಕಾಂಕ್ಷೆ ಮತ್ತು ಅದಕ್ಕೆ ಹಾಕಿಕೊಂಡಿದ್ದ ಯೋಜನೆ ಎಲ್ಲವೂ ಫಲಕಾರಿಯಾಗಿದೆಯೆಂಬ ಭಾವನೆಯೊಡನೆ ಸ್ವದೇಶದಿಂದ ನಿರ್ಗಮನವಾಗುತ್ತಿತ್ತು.

ವಿದೇಶದಲ್ಲಿ ಹೊಸ ಪರಿಸರ, ನೂತನ ಜೀವನ ಶೈಲಿ, ಅರಿಯದ ವಾತಾವರಣದ ಬಗ್ಗೆ ಏಕಕಾಲದಲ್ಲಿ ಭಯ, ವಿಸ್ಮಯ ಮತ್ತು ಕುತೂಹಲ. ತಾನೇ ಅಡಿಗೆ ಮಾಡಿಕೊಂಡು ತಿನ್ನುವ ಅನುಭವ ಹೊಸತು. ಹತ್ತಿರದವರನ್ನೆಲ್ಲಾ ಸ್ವಇಚ್ಛೆಯಿಂದ ಬಿಟ್ಟು ಬಂದೆನೆಂಬ ತಪ್ಪಿತಸ್ಥ ಮನೋಭಾವ, ತಿಂಗಳಿಗೊಮ್ಮೆಯೋ ಏನೋ ಬರುವ ಪತ್ರದ ಮೂಲಕವೇ ಕುಟುಂಬಸ್ಥರ ಯೋಗಕ್ಷೇಮ ತಿಳುದುಕೊಳ್ಳಬೇಕಿತ್ತು. ಮನೆಯಲ್ಲಿ ಫೋನ್ ಇದ್ದ ಭಾಗ್ಯವಂತರಿಗೆ, 'ಐ.ಎಸ್.ಡಿ.' ಕಾಲಿನಿಂದ ಮತ್ತಷ್ಟು ಹೆಚ್ಚಾಗುವ ಬಿಲ್ಲನ್ನು ನೆನೆದು ಬಲಾತ್ಕಾರವಾಗಿ ಮಿತಭಾಷಿಗಳಾಗುವ ಅವಶ್ಯಕತೆಯೊಂದಿಗೆ ವಿದೇಶದಲ್ಲಿನ ಜೀವನ ಶುರುವಾಗುತ್ತಿತ್ತು.

ಡಿಗ್ರಿ ಪಡೆದ ತತ್ ಕ್ಷಣ ಸ್ವದೇಶಕ್ಕೆ ಹಿಂತಿರುಗಿ ಬರುವೆ ಎಂಬ ಕೊಟ್ಟ ಮಾತು, ಕೇವಲ ಮಾತಿನ ರೂಪವಾಗಿಯೇ ಉಳಿಯುತ್ತಿತ್ತು. ಹಾಗಂತ ತನ್ನನ್ನು ವಚನಭ್ರಷ್ಟನೆಂದು ತಂದೆ ತಾಯಂದಿರು ತಪ್ಪು ತಿಳಿದುಕೊಳ್ಳುತ್ತಾರೋ ಎಂಬ ಆತಂಕ. ಉನ್ನತ ವ್ಯಾಸಂಗ ಮುಗಿಯುತ್ತಿದ್ದಂತೆ ತನ್ನ 'ಕೆರಿಯರ್'ನ ಚಿಂತನೆ, ಸ್ವದೇಶದಲ್ಲಿ ತನ್ನ ಶಿಕ್ಷಣಕ್ಕೆ ತಕ್ಕ ಉದ್ಯೋಗಾವಕಾಶ ಇಲ್ಲದಿರುವುದೆಂಬುದನ್ನೇ ಮುಂದಿಟ್ಟು ವಿದೇಶದಲ್ಲೇ ನೌಕರಿ ಶುರು, ತದನಂತರ 'ಹಸಿರು ಚೀಟಿ'ಯ ಚಿಂತನೆ. ಏತನ್ಮಧ್ಯೆ ಮನೆಯವರಿಂದ 'ಸೆಟಲ್' (ಅರ್ಥಾತ್ ಮದುವೆ) ಆಗಲು ಒತ್ತಡ ಬರಲು ಅವಸರದಲ್ಲೇ ತಂದೆ ತಾಯಂದಿರು ತಯಾರಿ ಮಾಡಿದ ವಧುಗಳ ಪಟ್ಟಿಯ ರವಾನೆ, ಹಠಾತ್ ಸಂದರ್ಶನದ ನಂತರ ದಿಢೀರ್ ಮದುವೆ, ಕಟ್ಟಿಕೊಂಡ ಹೆಂಡತಿಯನ್ನು ಕೂಡಲೇ ಕರೆದುಕೊಂಡು ಬರಲಾರದೆ ಮದುವೆಯಾದ ಮೇಲೂ ಕೆಲಕಾಲ ಬ್ರಹ್ಮಚರ್ಯ, ಹೆಂಡತಿಯೂ ಸೇರಿದ ಮೇಲೆ ಸುತ್ತಾಟ; ಇಲ್ಲಿಗೆ ಎರಡನೆಯ ಘಟ್ಟ ಸಂಪೂರ್ಣ.

ಮನೆ ಖರೀದಿ, ಅಪ್ಪ-ಅಮ್ಮಂದಿರಿಗೆ 'ವಿಸಿಟರ್ಸ್ ವೀಸಾ' ಏರ್ಪಾಡು, ಅವರ ಅಮೇರಿಕಾ ಪ್ರವಾಸದ ಗಡಿಬಿಡಿ, ನಯಾಗಾರ ಫಾಲ್ಸ್ ಮುಂದೆ ಫೋಟೋ ತೆಗೆಸಿಕೊಂಡು ಸಂಬಂಧಿಕರ ಜೊತೆ ಹಂಚಿಕೊಳ್ಳದಿದ್ದರೆ ಅಮೇರಿಕಾದಲ್ಲಿ ಪ್ರವಾಸ ಮಾಡಿದ್ದೇ ಸುಳ್ಳು ಎಂದುಕೊಳ್ಳುತ್ತಾರೋ ಎಂಬ ಆತಂಕವೂ ಇರುತ್ತಿತ್ತು. ಬಾಣಂತನಕ್ಕೆ ಅತ್ತೆ ಮಾವಂದಿರಿಗೆ ಆಮಂತ್ರಣ; ಮಗು, ನಂತರ ಮಕ್ಕಳು. ಮೂರು ಅಥವಾ ಐದು ವರ್ಷಗಳಿಗೊಮ್ಮೆ ಉತ್ಸುಕತೆಯಿಂದ ಸ್ವದೇಶಕ್ಕೆ ಭೇಟಿ, ಸ್ವಾಗತಿಸಲು ಮನೆಯವರ ಹಿಂಡೇ ವಿಮಾನ ನಿಲ್ದಾಣಕ್ಕೆ ಆಗಮನ, ಹುಟ್ಟಿಬೆಳೆದ ಊರಿನ ಪರಿಸರದಲ್ಲಿ ಬದಲಾವಣೆಗಳ ಮೇಲ್ನೋಟ, ಕಣ್ಣಿಗೆ ಕಾಣುವ ಮತ್ತು ಕಾಣದ ಊರಿನ ಬೆಳವಣಿಗೆಗಳ ಬಗ್ಗೆ ಮನೆಯವರ ಮತ್ತು ಹತ್ತಿರ ಸಂಬಂಧಿಕರ ಜೊತೆ ಕಾಡುಹರಟೆ. ನೆರೆಹೊರೆಯರ ಬಗ್ಗೆ 'ಅಪ್ಡೇಟ್'. ಅಮೇರಿಕಾದಲ್ಲಿ ಸಿಗುವ ವಸ್ತುಗಳ ಅದರಲ್ಲೂ 'ಎಲೆಕ್ಟ್ರಾನಿಕ್' ಸಾಮಗ್ರಿಗಳ ಬಗ್ಗೆ ಒಂದು ತರಹದ ಹೆಗ್ಗಳಿಕೆ. ಚೈನಾ, ಹಾಂಗ್ ಕಾಂಗ್ ಬಜಾರುಗಳಲ್ಲಿ ಸಿಗುವ ಖೋಟಾ

ಬ್ರಾಂಡುಗಳಿಗಿಂತ ಈ ಅಸಲಿ ಮಾಲಿನ ಗುಣಮಟ್ಟವನ್ನು ಮೆಚ್ಚಿ ಉಡುಗೊರೆಯನ್ನು ಸ್ವೀಕಾರ ಮಾಡಿದ ಮಂದಿಯ ಶ್ಲಾಘನೆ ತಂದ ತೃಪ್ತಿ. ಮನೆಗೋಸ್ಕರ 'ಟೇಪ್ ರೆಕಾರ್ಡರ್' ಮತ್ತು ಕ್ಯಾಸೆಟ್ಸ್, ಕಿರಿಯರಿಗೆ ವಾಕ್ಮನ್, ಕ್ಯಾಮೆರಾ, ಅಕ್ಕ ತಂಗಿಯರಿಗೆ 'ಪರ್ಫ್ಯೂಮ್', ನೆರೆಹೊರೆಯವರಿಗೆ ಚಾಕ್ಲೆಟ್ ಡಬ್ಬ– ಎಲ್ಲವೂ ಸಂಬಂಧಗಳ ಪ್ರಾಮುಖ್ಯತೆಯನ್ನಳೆಯುವ ಮಾನದಂಡಗಳಾಗಿರುತ್ತಿದ್ದವು. ಸ್ವದೇಶಕ್ಕೆ ಹೊರಡುವ ಮುನ್ನ ಈ ಉಡುಗೊರೆಗಳಿಗಾಗಿಯೇ ಮೀಸಲಾದ ಶಾಪಿಂಗ್‌ನ ಫಲವಾಗಿ ಸೂಟ್ ಕೇಸ್ ತುಂಬಿ ತುಳುಕುತ್ತಿತ್ತು.

ಮೇಲೆ ಹೇಳಿದುದೆಲ್ಲವೂ ಹೆಚ್ಚು ಕಡಿಮೆ ಬಹಳಷ್ಟು ಮಂದಿ ವಲಸೆಗಾರರಿಗೆ ಅನ್ವಯಿಸುತ್ತದೆ. ಎಲ್ಲವೂ ಪ್ರತಿಷ್ಠಾಪಿಸಿದ, ಸ್ಥಿರವಾದ ವ್ಯವಸ್ಥೆಯಲ್ಲಿತ್ತು. ಎಲ್ಲರೂ ತಮ್ಮ ತಮ್ಮ ಸ್ಥಾನಮಾನಗಳಿಗೆ ಅನುಗುಣವಾಗಿ ವರ್ತಿಸುತ್ತಿದ್ದರು. ವಿದೇಶದಲ್ಲೇ ನಮ್ಮ ಏಳಿಗೆ ಎಂಬುದರ ಬಗ್ಗೆ ಎರಡು ಮಾತಿರಲಿಲ್ಲ. ಗಾಳಿ ಯಾವ ಕಡೆ ಬೀಸುತ್ತಿದೆ ಎಂಬುವುದರ ಸೂಚನೆ ಸ್ಪಷ್ಟವಾಗಿತ್ತು. ಕೊಡುವ ಹಸ್ತ ವಿದೇಶ, ಸ್ವೀಕರಿಸುವ ಹಸ್ತ ಸ್ವದೇಶ ಎನ್ನುವ ಬಗ್ಗೆ ಗೊಂದಲವಿರಲಿಲ್ಲ. ಹೀಗೆಯೇ ಮುಂದುವರಿಯಬೇಕಾಗಿತ್ತು ಎನ್ನುವುದು ಶುದ್ಧ ಮೂರ್ಖತನ. ಕಾಲಚಕ್ರ ಉರುಳಿದಂತೆ ಎಲ್ಲವೂ ಬದಲಾಗುವುದು. ಮಾರ್ಪಡದ ಸಮಾಜ, ವ್ಯವಸ್ಥೆ, ದೇಶ ಯಾವ ಕಾಲದಲ್ಲೂ ಇರಲಿಲ್ಲ, ಮುಂದೆ ಇರುವುದೂ ಇಲ್ಲ. ಇಂಗ್ಲೀಷಿನಲ್ಲಿ ಒಂದು ಗಾದೆ ಹೀಗೆ ಭಾಷಾಂತರಗೊಳ್ಳುತ್ತದೆ, 'ಈ ಪ್ರಪಂಚದಲ್ಲಿ ಸ್ಥಿರವಾಗಿ ಇರುವ ಏಕೈಕ ವಸ್ತುವೆಂದರೆ ಅದು ಬದಲಾವಣೆ'.

ಈಗ ಇಂದಿನ ಸ್ಥಿತಿ ಗತಿಗಳಿಗೆ 'ಫಾಸ್ಟ್ ಫಾರ್ವರ್ಡ್' ಆಗೋಣ. ಹಿಂದೆ ಸ್ವದೇಶ ವಿದೇಶಗಳ ಮಧ್ಯೆ ಮಣ್ಣಿನ ಗೋಡೆಯಿತ್ತು. ಇಂದೂ ಗೋಡೆ ಇರುವುದು ನಿಜ. ಆದರೆ ಅದು ಗಾಜಿನ ಗೋಡೆಯಾಗಿ ಪರಿವರ್ತಿಸಿದೆ. ಅತಿ ಸುಲಭದ ಸಂಪರ್ಕ, ದಿನದ ೨೪ ಘಂಟೆ ಕಾಲ ಮತ್ತು ವಾರದ ೭ ದಿನವೂ ಭೂಗೋಳದ ಯಾವುದೇ ಮೂಲೆಯ ಸುದ್ದಿ ಕ್ಷಣಾರ್ಧದಲ್ಲಿ ಎಲ್ಲರನ್ನೂ ಏಕ ಕಾಲದಲ್ಲಿ ತಮ್ಮ ತಮ್ಮ ಮೊಬೈಲ್ ಮುಟ್ಟುವ ಸೌಲಭ್ಯ, ಸಾಮಾಜಿಕ ಜಾಲತಾಣಗಳ ಕೃಪೆ ಮತ್ತು ಗೂಗಲ್ಲಿನ ಕಟಾಕ್ಷಗಳಿಂದ ಅತಿ ಸುಲಭವಾಗಿ ಮಾಹಿತಿ ಸಿಗುವಿಕೆ, ಸ್ಥಳೀಯರಲ್ಲಿ ಹೆಚ್ಚುತ್ತಿರುವ ಪ್ರವಾಸ ಪ್ರವೃತ್ತಿ, ಮುಂತಾದುವು ಈ ಪಾರದರ್ಶಕತೆಗೆ ಕಾರಣವಾಗಿವೆ. ವರ್ಣಿಸಲಿಕ್ಕೆ ಬಾರದ ಸಂಪೂರ್ಣ ಬದಲಾವಣೆಯಾಗಿದೆ, ಪ್ರತಿಷ್ಠಿತ ವ್ಯವಸ್ಥೆಗಳ ಪತನವಾಗಿದೆ. ಸಮುದಾಯಗಳ ಮಧ್ಯೆ ಇದ್ದ ಮುಚ್ಚುಮರೆಯೂ ಮಾಯವಾಗಿದೆ. ಆರ್ಥಿಕ ಅಂತರದಲ್ಲಿಯೂ ಮೊದಲಿನ ವ್ಯತ್ಯಾಸ ಉಳಿದಿಲ್ಲ. ಯಾರಿಗೂ ತಿಳಿಯದೇ ಇರುವ ವಿಷಯಗಳು ಇಲ್ಲದಂತಾಗಿದೆ. ಮುಗ್ಧತೆ ನಿರ್ನಾಮವಾಗಿದೆ. ಅಚ್ಚರಿಮೂಡಿಸುವ ವಿಷಯಗಳು ವಿರಳವಾಗಿವೆ. ಹತ್ತಿರ ಸಂಬಂಧಿಕರ ಜೊತೆ ಮಾತನಾಡಲು ಸ್ವದೇಶಕ್ಕೆ ಮಾಡುವ ಕರೆಗಳು ಕುಂದಿರುವದಲ್ಲದೆ ಬಹಳ ನೀರಸವಾಗಿವೆ. ಬಹಳಷ್ಟು ಸಂಪರ್ಕ ವಾಟ್ಸ್ ಆಪ್ನ ಸಂದೇಶಗಳಲ್ಲಿ ನಡೆಯುವಾಗ ಮಾತಿನ ಅವಶ್ಯಕತೆಯೇ ಇಲ್ಲ ಎನ್ನುವಂತಾಗಿದೆ.

ಸ್ವದೇಶ ಸಾಧಿಸುತ್ತಿರುವ ಆರ್ಥಿಕ ಮುನ್ನಡೆ ಅನಿವಾಸಿಯರ ದೃಷ್ಟಿಯಲ್ಲಿ ಸ್ವಾಗತಾರ್ಹವಷ್ಟೇ ಅಲ್ಲ ಹೆಮ್ಮೆ ತರುವ ವಿಷಯವಾಗಿದೆ. ಆರ್ಥಿಕ ಸುಧಾರಣೆಯಿಂದ ಒದಗಿ ಬಂದ ಉತ್ತಮ ಔದ್ಯೋಗಿಕ ಅವಕಾಶಗಳ ಫಲವಾಗಿ ಸ್ಥಳೀಯರ ವೈಯಕ್ತಿಕ ಆದಾಯ ದೊಡ್ಡ ಪ್ರಮಾಣದಲ್ಲಿ ಏರಿದೆ. ಇದರಿಂದಾಗಿ, ಖರೀದಿಸುವ ಸಾಮರ್ಥ್ಯ ಹೆಚ್ಚಳವಾಗಿದೆ. ಸಾಧನೆಯ ದಿಶೆಯಲ್ಲಿ ನವಚೈತನ್ಯ ಕಾಣುತ್ತಿದೆ. ಬಹುರಾಷ್ಟ್ರೀಯ ಕಂಪನಿಗಳು ಪ್ರಪಂಚದ ಎಲ್ಲೆಡೆ ಹಬ್ಬಿ ಜಾಹಿರಾತುಗಳ ಮೂಲಕ ತಮ್ಮ 'ಬ್ರಾಂಡ್'ಗಳನ್ನು ಜನರ ಮನಸ್ಸುಗಳಲ್ಲಿ ಬೇರೂರಿಸುತ್ತಿರುವುದು ತಿಳಿದ ವಿಷಯ. ಭಾರತವೂ ಈ ವಿದ್ಯಮಾನಕ್ಕೆ ಹೊರತಾಗಿಲ್ಲ. ಉತ್ತಮ ಗುಣಮಟ್ಟದ ಉಡುಗೆ-ತೊಡುಗೆಗಳು, ಕಾರುಗಳು ಮತ್ತು ಇತರ ಪದಾರ್ಥಗಳು ಮಧ್ಯಮ ವರ್ಗದ ಜನಾಂಗಕ್ಕೆ ಲಭ್ಯವಾಗಿದೆ. ಆದರೆ ಇವೆಲ್ಲದರ ಇನ್ನೊಂದು ಮುಖವೂ ಕಾಣಿಸಿಕೊಳ್ಳಲಾರಂಭಿಸಿದೆ. ಪ್ರತಿಷ್ಠಿತ ಬ್ರಾಂಡುಗಳ ಗೀಳು ಸ್ಥಳೀಯರಲ್ಲಿ ಅತಿರೇಕಗೊಂಡಿದೆ. ಸ್ವದೇಶದ ಉಡುಪು ತೊಡಿಗೆಗಳಲ್ಲಿ ಕಂಡುಬರುತ್ತಿದ್ದ ವೈವಿಧ್ಯತೆ ಮಾಯವಾಗಿ ಸಕಲವೂ ಏಕರೂಪಿಯಂತಾಗಿದೆ. ಸ್ಥಳೀಯರ ಪಾಶ್ಚಾತ್ಯ ದೇಶಗಳ ಅನುಕರಣೆ ಫ್ಯಾಷನ್ ಜಗತ್ತಿಗೇ ಸೀಮಿತವಾಗಿಲ್ಲ. ಹಬ್ಬ ಮತ್ತು ವಿಶೇಷ ದಿನಗಳ ಆಚರಣೆಯಲ್ಲೂ ಕಂಡುಬರುತ್ತಿದೆ. ಭಾರತದಲ್ಲಿ 'ವ್ಯಾಲೆಂಟೈನ್ಸ್ ಡೇ' ಆಚರಿಸುವುದು ಈಗ ಹಳೆಯ ವಿಷಯ. ಇತ್ತೀಚಿನ ವರುಷಗಳಲ್ಲಿ 'ಹ್ಯಾಲೋವೀನ್' ಕೂಡ ಈ ಪಟ್ಟಿಗೆ ಸೇರಿದೆ. ಬೆಂಗಳೂರಿನ ಫೋರಮ್ ಮಾಲಿನಲ್ಲಿ ನಡೆದ ೨೦೧೮ರ ಹ್ಯಾಲೋವೀನ್ ಫ್ಯಾಷನ್ ಪರೇಡ್ ಇದಕ್ಕೆ ಸಾಕ್ಷಿ. ಇಂತಹ ಅಂಧ ಅನುಕರಣೆ ಅನಿವಾಸಿಯರ ದೃಷ್ಟಿಯಲ್ಲಿ ಪೊಳ್ಳೆನಿಸುತ್ತದೆ.

ಏರುಪೇರಿನ ಅಭಿವೃದ್ಧಿಯ ಫಲವಾಗಿ ಪರಿಸರ ಮಾಲಿನ್ಯತೆ, ವಾಹನ ಮತ್ತು ಕಟ್ಟಡಗಳ ಕಿಕ್ಕಿರಿದಿರುವಿಕೆ ಮುಂತಾದ ಇತರ ಅನಪೇಕ್ಷಣೀಯ ಪ್ರಭಾವಗಳು ಸ್ವದೇಶಕ್ಕೆ ಭೇಟಿ ನೀಡಿದಾಗ ಮುಖಾಮುಖಿಯಾಗಿ ಸಂಧಿಸುತ್ತವೆ. ಪ್ರಗತಿಯ ಹರಿವಿನಲ್ಲಿ ಸಿಕ್ಕಿ ಕೊಂಡಿರುವ ಸ್ಥಳೀಯರು ವಿದೇಶದಿಂದ ಭೇಟಿ ನೀಡುತ್ತಿರುವ ಗೆಳೆಯರ ಜೊತೆ ಆರಾಮವಾಗಿ ಕೂತು ಮಾತನಾಡುವ ಸುಯೋಗವನ್ನು ಕಳೆದುಕೊಂಡಿರುವುದು ದುರ್ದೈವದ ಸಂಗತಿ.

ಬೇರೊಬ್ಬರ ನಡತೆ, ವರ್ತನೆಗಳನ್ನು ನಿರ್ಣಯಕಾರನ ಸ್ಥಾನದಲ್ಲಿ ನೋಡದೆ, ಸ್ವಂತ ಅನುಭವದ ಆಧಾರವನ್ನಿಟ್ಟುಕೊಂಡು ಹೇಳಿದರೂ, ಸ್ಥಳೀಯರ ವರ್ತನೆ ಕೆಲವೊಮ್ಮೆ ಜಿಗುಪ್ಸೆ ತರುವಂತಿರುತ್ತದೆ. ಕಿರಿಕಿರಿಪಡುವುದು ನ್ಯಾಯಸಮ್ಮತವೆನಿಸುತ್ತದೆ. ನಾಗರಿಕ ಪ್ರಜ್ಞೆಯ ವಿಷಯ ತೆಗೆದುಕೊಂಡರೆ, ಹಲವಾರು ನಿದರ್ಶನಗಳು ಸಿಗಬಹುದು: ಕ್ಯೂನಲ್ಲಿ ನಿಂತಿರುವಾಗ ತಮ್ಮ ಸರದಿ ಬರಲು ಕಾಯದೆ ಕೌಂಟರಿನತ್ತ ಮುನ್ನುಗ್ಗುವುದು, ಸಾರ್ವಜನಿಕ ಸ್ಥಳಗಳಲ್ಲಿ ಕಸವನ್ನು ಬಿಸಾಡುವುದು, ಉಗುಳುವುದು, ಅಪರಿಚಿತರನ್ನು ದಿಟ್ಟಿಸಿ ನೋಡುವುದು, ಇತ್ಯಾದಿ. ಇಂತಹ ಪ್ರವೃತ್ತಿಯನ್ನು ಬಹಳಷ್ಟು ಸ್ಥಳೀಯರಲ್ಲಿ ಕಾಣಬಹುದು. ಉತ್ತಮ ನಾಗರಿಕತೆಯ ವಾತಾವರಣಕ್ಕೆ ಹೊಂದಿಕೊಂಡು ಬಾಳಿ ಅನಾಗರಿಕತೆಯನ್ನು

ತಾತ್ಕಾಲಿಕವಾಗಿಯಾದರೂ ಸಹಿಸುವ ಶಕ್ತಿಯನ್ನು ಅನಿವಾಸಿಯರು ಕಳೆದುಕೊಂಡಿದ್ದಾರೆ. ಐಹಿಕ ಪ್ರವೃತ್ತಿ, ಸೊಕ್ಕು, ಆಡಂಬರ, ದುಂದುವೆಚ್ಚ ಹೀಗೆ ಸ್ಥಳೀಯರಲ್ಲಿ ಹಿಂದೆ ಇರದ ಲಕ್ಷಣಗಳನ್ನು ಇತ್ತೀಚಿನ ವರ್ಷಗಳಲ್ಲಿ ಕಾಣಬಹುದು. ಈ ವಿಷಯದಲ್ಲಿ ಮಧ್ಯಸ್ಥಿಕೆ ವಹಿಸಿ, ಕ್ಷಣಕಾಲ, ಸ್ಥಳೀಯರ ಮಂಡನೆ ಕೇಳಿದರೆ, ಅದು ಹೀಗಿರಬಹುದು, "ನಮ್ಮ ವರ್ತನೆ ಅನಿವಾಸಿಗರ ನಿರೀಕ್ಷೆಗೆ ತಕ್ಕಂತೆ ಇರದಿದ್ದರೆ ಅದು ಅವರ ದೃಷ್ಟಿಯಲ್ಲಿ ಅಸಹ್ಯವಾಗಿ ಕಾಣುತ್ತದೆ. ತಾವು ದೇಶ ಬಿಟ್ಟು ಹೋದಾಗ ಸ್ಥಿರವಾಗಿ ತಲೆಯಲ್ಲಿ ನಾಟಿದ ಸ್ವದೇಶ ಸಮಾಜದ ಭಾವಚಿತ್ರವೇ ಈ ನಿರೀಕ್ಷೆಗೆ ಕಾರಣ. ಬದಲಾವಣೆಯ ಬಿರುಗಾಳಿಗೆ ಸಿಲುಕಿ ಆ ಭಾವಚಿತ್ರ ಗುರುತಿಸಲಾಗದಂತಹ ರೀತಿಯಲ್ಲಿ ಮಾರ್ಪಾಡಿಕೆಯಾಗಿದೆ. ಆದರೂ ಅನಿವಾಸಿಯರು ಅದನ್ನು ಸ್ವೀಕರಿಸಲು ಸಿದ್ಧರಾಗಿಲ್ಲ".

ಅನಿವಾಸಿ ಭಾರತೀಯರು ಬರಮಾಡಿಕೊಂಡ ದೇಶದಲ್ಲಿ ಶಕ್ತ್ಯಾನುಸಾರ ತಮ್ಮ ಸಂಸ್ಕೃತಿಯನ್ನು ಕಾಪಾಡಿಕೊಳ್ಳುವುದಕ್ಕೆ ಪ್ರಯತ್ನಪಡುತ್ತಾರೆ. ತಮ್ಮ ಸುತ್ತಮುತ್ತಲಿನ ಪರಿಸರ ಅನುಕೂಲಕರವಾಗಿರದಿದ್ದರೂ ಹಬ್ಬ ಹರಿದಿನಗಳನ್ನು ತುಂಬು ಉತ್ಸಾಹ ಮತ್ತು ಸಂಭ್ರಮಗಳಿಂದ ಆಚರಿಸುವರು. ಇದಕ್ಕೆ ಕಾರಣ 'ನಾಸ್ಟಾಲ್ಜಿಯಾ' ಅಂದರೆ ಹಳೆಯದರ ಮೇಲೆ ಹಂಬಲವಿರಬಹುದು ಅಥವಾ ತಮ್ಮ ಸಂಸ್ಕೃತಿಯು ತಮ್ಮ ಕೈಯಿಂದ ಜಾರಿ ಹೋಗುತ್ತಿದೆಯೋ ಏನೋ ಎಂಬ ಆತಂಕವೂ ಇರಬಹುದು. ಇದಕ್ಕೆ ಪ್ರತಿರೂಪವಾಗಿ ಭಾರತದಲ್ಲೇ ನೆಲೆಸಿರುವ ಸ್ಥಳೀಯರು ತಮ್ಮ ಸಂಸ್ಕೃತಿಯಿಂದ ದೂರ ಸರಿಯುತ್ತಿರುವುದು ಒಂದು ಶೋಚನೀಯ ಬೆಳವಣಿಗೆಯೆಂದು ಅನಿವಾಸಿಯರ ಭಾವನೆ.

ಉದ್ಯೋಗಸ್ಥರು, ಅದರಲ್ಲೂ ತಾಂತ್ರಿಕ ಉದ್ದಿಮೆಗಳಿಗೆ ಸೇರಿದವರು ವಲಸೆ ಬರುವುದು ಕಡಿಮೆಯಾಗಿದೆ. ಹಿಂದಿನಂತಿಲ್ಲ. ಬಂದ ಕೆಲವರು ಹಿಂದಿರುಗಿದ್ದಾರೆ. ಸ್ವದೇಶದ ಬಗ್ಗೆ ಹಿಂದೆ ಇದ್ದ ಒಂದು ತರಹ ಕೀಳರಿಮೆ ಸ್ಥಳೀಯರಲ್ಲಿ ಈಗ ಮಾಯವಾಗಿರುವುದು ಸಂತಸದ ಸುದ್ದಿ. 'ನಮ್ಮ ದೇಶ ಯಾವುದರಲ್ಲಿ ಏನು ಕಡಿಮೆ?' ಎಂಬ ವಿಶ್ವಾಸ ಯುವ ಪೀಳಿಗೆಯಲ್ಲಿ ಮೂಡಿದೆ. ಮೇಲಾಗಿ ಭಾರತದಲ್ಲೇ ಸಕಲ ಸೌಲಭ್ಯಗಳು ದೊರೆಯುವಾಗ ದೂರವೇಕೆ ಹೋಗಬೇಕು ಎಂಬ ಭಾವನೆ ಮೂಡಿದೆ. ತಮ್ಮ ಈ ಧೋರಣೆ ಮತ್ತಷ್ಟು ನ್ಯಾಯಸಮ್ಮತವಾಗಿಸಲೆಂಬಂತೆ ಅಮೇರಿಕ ಮುಂತಾದ ಪ್ರಗತಿಪರ ರಾಷ್ಟ್ರಗಳು ತಮ್ಮ ವಲಸೆ ಬರುವಿಕೆಯ ನೀತಿಯನ್ನು ಇತ್ತೀಚೆಗೆ ಮತ್ತಷ್ಟು ಬಿಗಿಪಡಿಸಿವೆ.

ಅನಿವಾಸಿಯರ ದೃಷ್ಟಿಯಲ್ಲಿ ತಾವು ನೆಲೆಸಿರುವ ದೇಶ ಎಂದೇ ಇದ್ದರೂ ವಿದೇಶವೇ ಎನ್ನಿಸಬಹುದು. ಆದರೆ ಅವರ ಸಂತತಿ ಆ ವಿದೇಶವನ್ನೇ ಸ್ವದೇಶವೆಂದು ಭಾವಿಸಿ, ಬೆಳೆದು ಮುಂದುವರಿಯುತ್ತಿದ್ದಾರೆ. ಹಿಂದಿನ ಪೀಳಿಗೆಯು (ಅರ್ಥಾತ್ ತಂದೆ ತಾಯಂದಿರು/ಅತ್ತೆ ಮಾವಂದಿರು) ವೃದ್ಧಾಪ್ಯ ಸಮೀಪಿಸಿ ಒಂಟಿಯಾಗಿಯೋ ಅಥವಾ ಹತ್ತಿರ ಸಂಬಂಧಿಕರೊಂದಿಗೋ ಸ್ವದೇಶದಲ್ಲೇ ಉಳಿದುಕೊಂಡರೆ ಕೆಲವರು ಮಕ್ಕಳ ಕರೆಗೆ ಒಪ್ಪಿ ವಿದೇಶದಲ್ಲೇ ಅವರ ಜೊತೆ ಖಾಯಂ ಆಗಿ ನೆಲೆಸಿದ್ದಾರೆ.

ಮುಂಬರುವ ದಶಕಗಳಲ್ಲಿ ವಲಸೆಗಾರುವಿಕೆಯ ಲಕ್ಷಣಗಳು ಹೇಗಿರಬಹುದು ಎಂಬ ಪ್ರಶ್ನೆಗೆ ನಿಖರವಾದ ಉತ್ತರ ಸಿಗುವುದು ಕಷ್ಟ. ಪ್ರಮಾಣದಲ್ಲಿ ಹೆಚ್ಚುಕಡಿಮೆ ಈಗಿನಷ್ಟೇ ಇರಬಹುದು ಅಥವಾ ಸ್ವಲ್ಪ ಕ್ಷೀಣಿಸಲೂಬಹುದು. ಅಮೆರಿಕದಲ್ಲಂತೂ ಭಾರತ ಮೂಲದ ಅನಿವಾಸಿಯರು ಒಂದು ಮಾದರಿಯ ಸಮುದಾಯವೆನಿಸಿಕೊಂಡಿದ್ದಾರೆ. ಆರ್ಥಿಕವಾಗಿ ಯಶಸ್ಸನ್ನು ಪಡೆದರೂ, ಅವರ ಒಡನಾಟ ತಮ್ಮ ವೃತ್ತಿನಿರತ ರಂಗಗಳಿಗಷ್ಟೇ ಸೀಮಿತವಾಗಿದೆ. ರಾಜಕೀಯ ವಲಯಗಳಲ್ಲಿ ಅವರ ಪ್ರಾತಿನಿಧ್ಯ ಬಹಳ ಕಡಿಮೆ ಪ್ರಮಾಣದಲ್ಲಿದೆ. ಪ್ರಜಾತಂತ್ರವು ಒದಗಿಸಿಕೊಡುವ ಅನುವುಗಳನ್ನು ಪೂರ್ಣವಾಗಿ ಉಪಯೋಗಿಸಿಕೊಂಡು ಚುನಾಯಿತ ಹುದ್ದೆಗಳಿಗೆ ನಿಂತು, ತಮ್ಮ ಸಮುದಾಯವನ್ನು ಪ್ರತಿನಿಧಿಸಿ ಅದರ ಹಿತಾಸಕ್ತಿಯನ್ನು ಸಂರಕ್ಷಿಸಬೇಕು. ತಮ್ಮ ಜನಸಾಂದ್ರತೆ ಹೆಚ್ಚಿರುವ ಜಾಗಗಳಲ್ಲಿ ಅನಿವಾಸಿಯರು ತಮ್ಮದೇ ಆದ ಲೋಕವನ್ನು ಸೃಷ್ಟಿಸಿಕೊಂಡಿದ್ದಾರೆ. ಅಂದರೆ ಇತರ ಭಾರತೀಯ ಅನಿವಾಸಿಯರೊಂದಿಗಷ್ಟೇ ಒಡನಾಡುವುದು, ಭಾರತೀಯ ರೆಸ್ಟೋರೆಂಟ್ಗಳಲ್ಲೇ ಊಟ ಮಾಡುವುದು, ಸ್ವತಂತ್ರವಾಗಿ ಆಲೋಚಿಸದೆ ಸಹದೇಶೀಯರನ್ನು ಅನುಸರಿಸಿ ಮಂದೆಗಟ್ಟಿ ಹೋಗುವುದು, ಇತ್ಯಾದಿ. ಇದಕ್ಕೆ ಬದಲು, ತಮ್ಮ ದೃಷ್ಟಿಕೋಣವನ್ನು ಅಂತರ್ಮುಖವಾಗಿಸದೆ, ಸ್ವೀಕರಿಸಿರುವ ದೇಶದ ನಡೆ ನುಡಿಗಳನ್ನು ಗೌರವಿಸಿ, ಅದರ ದೇಸಿಗರ ಜೊತೆ ಬೆರೆತು, ಅಲ್ಲಿನ ಆಗುಹೋಗುಗಳಲ್ಲಿ ಸಕ್ರಿಯವಾಗಿ ಭಾಗವಹಿಸಬೇಕು.

'Think Global, Act Local' ಎಂಬ ನಾಣ್ಣುಡಿಯು ಉದ್ದಿಮೆಗಳಿಗೆ ಸೀಮಿತವಾಗಿರದೆ ಮನುಷ್ಯರಿಗೂ ಅನ್ವಯಿಸುತ್ತದೆ.

*

## ಅದಲು ಅಮೆರಿಕ – ಬದಲು ಭಾರತ!

■ **ಮೈ. ಶ್ರೀ. ನಟರಾಜ,** Potomac, MD.

**ಅಗೋ ಅಂದಕಾಲತಿಲೆ:** ಡಾಲರಿಗೆ ಏಳೋ ಎಂಟೋ ರೂಪಾಯಿಗಳಿದ್ದಾಗ ಶುರುವಾಗುತ್ತದೆ ನನ್ನ ಪಶ್ಚಿಮದ ದಂಡಯಾತ್ರೆ. ಉನ್ನತ ವ್ಯಾಸಂಗಕ್ಕಾಗಿ ದೇಶ ತೊರೆಯುವ ಸಿದ್ಧತೆ ತರಾತುರಿಯಲ್ಲೇ ನಡೆಯುತ್ತಿದ್ದಾಗ ನಾನು ಮುಂಬೈ ಐಐಟಿಯಲ್ಲಿ ಮಾಸ್ಟರ್ಸ್ ಮುಗಿಸಿದ್ದೆ, ಅಮೆರಿಕಕ್ಕೆ ಹೋಗುವ ದಿಢೀರ್ ನಿರ್ಣಯವನ್ನು ಮಾಡಿಬಿಟ್ಟಿದ್ದೆ. ಪ್ಯಾಸ್ಪೋರ್ಟಿನಿಂದ ಹಿಡಿದು ಎಲ್ಲ ತಯಾರಿಗಳನ್ನೂ ಒಂದು ತಿಂಗಳಿಗೂ ಕಡಿಮೆ ಸಮಯದಲ್ಲಿ ಮಾಡಿ ಮುಗಿಸಬೇಕಾಗಿತ್ತು. ಆಗ ಮಿತ್ರರು ನನಗೆ ವೆಂಕಟರಾಮನ್ ಎಂಬ ಟ್ರ್ಯಾವಲ್ ಏಜೆಂಟಿನ ವಿಳಾಸ ಮತ್ತು ದೂರವಾಣಿಯನ್ನು ಕೊಟ್ಟು, ತಕ್ಷಣ ಅವನನ್ನು ಭೇಟಿಯಾಗುವಂತೆ ಪ್ರೋತ್ಸಾಹಿಸಿದರು. ಅವನನ್ನು ಕಂಡೊಡನೆಯೇ 'ಆತನೊಬ್ಬ ಮಾಯಾವಿ, ನನ್ನಂಥ ನೂರಾರು ವಿದ್ಯಾರ್ಥಿಗಳನ್ನು ದೇಶದಿಂದಾಚೆ ಕಳಿಸಿಕೊಡುವ ಒಂದು ಮಾಯಾಯಂತ್ರ' ಎಂದು ತಿಳಿಯಿತು! ವಿಮಾನ ಯಾನಕ್ಕೆ ಬೇಕಾದ ಹಣ ನನ್ನಲ್ಲಿರಲಿಲ್ಲ ಎಂಬ ವಿಷಯವನ್ನು ತಿಳಿಸಿದಾಗ, ವೆಂಕಟರಾಮನ್ ತನಗೆ ಪರಿಚಿತರಾಗಿದ್ದ ಕೆನರಾ ಬ್ಯಾಂಕ್ ಮ್ಯಾನೇಜರ್ ಒಬ್ಬರಿಗೆ ಫೋನಾಯಿಸಿ, ಒಡನೆಯೇ ನಾನು ಮಾಡಬೇಕಾದ ಕೆಲಸವನ್ನು ವಿವರಿಸಿದ. ಆತನ ಶಿಫಾರಸ್ಸಿನ ಮೇಲೆ ತಕ್ಷಣ ನಾನು ವಿಟಿ ಸ್ಟೇಶನ್ನಿಂದ ವಿಕ್ರೋಲಿಗೆ ಲೋಕಲ್ ಟ್ರೈನ್ ಹಿಡಿದೆ. ಬ್ಯಾಂಕ್ ಮ್ಯಾನೇಜರ್ ಕೊಟ್ಟ ಆದೇಶದಂತೆ, ಕೈಬರಹದ ಅರ್ಜಿಯನ್ನು ವಿಕ್ರೋಲಿ ವಿಭಾಗದ ಮುಖ್ಯ ಅಧಿಕಾರಿಯನ್ನುದ್ದೇಶಿಸಿ ಬರೆದು ಆತನ ಕೈಗಿತ್ತು ಎದ್ದು ನಿಂತೆ. ಕನ್ನಡದವರೇ ಆದ ಆತ, ನನ್ನ ಕೈಕುಲಕಿ ಅದೇ ಕ್ಷಣ ಐದು ಸಾವಿರ ರೂಪಾಯಿ ಸಾಲವನ್ನು ಎರಡೇ ಷರತ್ತಿನ ಮೇಲೆ ಮಂಜೂರು ಮಾಡಿಬಿಟ್ಟರು ! 'ಹಣವನ್ನು ಡಾಲರ್ ಕರೆನ್ಸಿಯಲ್ಲೇ ತೀರಿಸಬೇಕು' ಎಂಬುದು ಮೊದಲ ಷರತ್ತು, ಮತ್ತು ಸಾಲಪತ್ರಕ್ಕೆ ಐಐಟಿಯಲ್ಲಿ ಕೆಲಸ ಮಾಡುತ್ತಿರುವ ಒಬ್ಬ ಜವಾಬ್ದಾರರ ಸಹಿ. ನನಗೆ ಪಿಟ್ಸ್‌ಬರ್ಗ್ ವಿಶ್ವವಿದ್ಯಾಲಯದಿಂದ ಟೀಚಿಂಗ್ ಫೆಲೊಷಿಪ್ ದೊರಕಿದ್ದ ವಿಷಯವನ್ನು

ವೆಂಕಟರಾಮನ್ ಬ್ಯಾಂಕ್ ಮ್ಯಾನೇಜರನಿಗೆ ಮೊದಲೇ ತಿಳಿಸಿದ್ದ ಕಾರಣ ಕೆಲಸ ಸುಗಮವಾಯಿತು. ತಕ್ಷಣ ನಾನು ಸಾಲಪತ್ರವನ್ನು ತೆಗೆದುಕೊಂಡು ಕ್ಯಾಂಪಸ್ಸಿಗೆ ಬಂದು ಪ್ರೊಫೆಸರ್ ಜಗದೀಶರ ಸಹಿ ಹಾಕಿಸಿಕೊಂಡೆ. (ಡಾ. ಜಗದೀಶ್ ಒಬ್ಬ ದೇವರಂಥಾ ಮನುಷ್ಯ, ನನ್ನಂಥಾ ಎಷ್ಟು ವಿದ್ಯಾರ್ಥಿಗಳಿಗೆ ಗ್ಯಾರಂಟಿ ಸಹಿ ಹಾಕಿದ್ದರೋ, ಅವರೊಬ್ಬರಿಗೆ ಮಾತ್ರ ಗೊತ್ತು!)

ವೆಂಕಟರಾಮನ್ ಎಂದರೆ ಸಾಮಾನ್ಯನಲ್ಲ, ಆತನಂಥಾ ಟ್ರಾವೆಲ್ ಏಜೆಂಟ್ ಮತ್ತೊಬ್ಬನನ್ನು ನಾನು ಕಂಡೇ ಇಲ್ಲ. ಎಲ್ಲಿ ಎಲ್ಲಿ ಯಾವ ಯಾವ ಡಾಕ್ಟರ್ ಆಫೀಸ್ ಇದೆ, ಯಾವ ಯಾವ ಡಾಕ್ಟರ್ ಕೈಲಿ ಯಾವ ಯಾವ ಪರೀಕ್ಷೆಗಳನ್ನು ಮಾಡಿಸಿಕೊಳ್ಳಬೇಕು, ಎಕ್ಸ್-ರೇ ಎಲ್ಲಿ ತೆಗೆಸಿಕೊಳ್ಳಬೇಕು, ಮಲಪರೀಕ್ಷೆಯ ಹಿಂದಿನ ದಿನ (ಭಾರತೀಯರೆಲ್ಲರ ಕರುಳುಗಳಲ್ಲಿ ಸೇರಿಕೊಂಡಿರುವ ಕ್ರಿಮಿ-ಕೀಟಗಳನ್ನು ಕೊಂದು ಶುದ್ಧವಾದ ಫಲಿತಾಂಶ ಬರುವಂತೆ ಮಾಡಲು) ಯಾವ ಮಾತ್ರೆ ತೆಗೆದುಕೊಳ್ಳಬೇಕು..., ಒಂದೇ ಎರಡೇ, ಭಾರತದಾಚೆ ವಿದ್ಯಾಭ್ಯಾಸಕ್ಕೆ ಹೊರಡುವ ವಿದ್ಯಾರ್ಥಿಗಳಿಗೆ ಅವನೊಬ್ಬ ನಡೆದಾಡುವ ವಿಶ್ವಕೋಶ! ನಾವೆಲ್ಲಾ ವಿದ್ಯಾಭ್ಯಾಸಕ್ಕಾಗಿ ಅಮೆರಿಕೆಗೆ ಬಂದ ಕಾಲದಲ್ಲಿ ಇದ್ದ ಕಟ್ಟುಪಾಡುಗಳು ಈಗಿಲ್ಲ, ಯಾರೂ ಯಾವ ವೈದ್ಯಕೀಯ ಪರೀಕ್ಷೆಯನ್ನೂ ಮಾಡಿಸಿಕೊಳ್ಳುವ ಅಗತ್ಯವಿಲ್ಲ, ಅಷ್ಟರ ಮಟ್ಟಿಗೆ ಅಮೆರಿಕನ್ನರ ದೃಷ್ಟಿಯಲ್ಲಿ ಭಾರತ ಮುಂದುವರೆದಿದೆ ಆದರೆ, ಭಾರತೀಯರ ಕರುಳುಗಳಲ್ಲಿ ಅಮೀಬಿಕ್ ಡಿಸೆಂಟರಿಯ ಕುರುಹು ಸಂಪೂರ್ಣವಾಗಿ ನಾಶವಾಗಿದೆಯೋ ಇಲ್ಲವೋ ಗೊತ್ತಿಲ್ಲ! ಅದರ ಬಗ್ಗೆ ಮಾಹಿತಿ ಇದೆಯೋ ಇಲ್ಲವೋ ಅದೂ ಗೊತ್ತಿಲ್ಲ, ಇರಲಿ ಬಿಡಿ. ಅಂತೂ ಅಮೆರಿಕನ್ನರ ದೃಷ್ಟಿಯಲ್ಲಿ ಬದಲಾವಣೆಯಾಗಿದೆ ಎನ್ನುವುದೇ ಒಂದು ಶುಭ ಸಮಾಚಾರ.

ನಮ್ಮ ವೆಂಕಟರಾಮನ್ ಕೈಗೆ ಕೆನರಾ ಬ್ಯಾಂಕಿನ ೫,೦೦೦ ರೂ.ಗಳ ಚೆಕ್ ದೊರಕಿದ ಕೂಡಲೆ, ನನ್ನ ಇಡೀ ಭವಿಷ್ಯವನ್ನು ತನ್ನ ಕೈಗೆ ತೆಗೆದುಕೊಂಡುಬಿಟ್ಟ. ಪಿಟ್ಸ್‌ಬರ್ಗ್ ವಿವಿ ಕ್ಯಾಂಪಸ್ ಬಳಿ ಎಲ್ಲೆಲ್ಲಿ ಅಪಾರ್ಟ್‌ಮೆಂಟುಗಳು ಎಷ್ಟೆಷ್ಟು ಬಾಡಿಗೆಗೆ ದೊರಕುತ್ತವೆ, ಸಸ್ಯಾಹಾರಿಗಳು ಗ್ರೋಸರೀ ಸ್ಟೋರಿನಲ್ಲಿ ಏನೆಲ್ಲ ಕೊಳ್ಳಬಹುದು, ಉದಾಹರಣೆಗೆ, ಬ್ರೆಡ್ಡು, ಹಾಲು, ಜ್ಯಾಮ್, ಬೆಣ್ಣೆ ಮತ್ತು ಬಾಳೇಹಣ್ಣು ಹಾಗೂ ಯೋಗರ್ಟ್ ಇವುಗಳ ಸಹಾಯದಿಂದ ಹೇಗೆ ಸುಖವಾಗಿ, ಆರೋಗ್ಯವಾಗಿ ಮತ್ತು ಅಲ್ಪ ಖರ್ಚಿನಲ್ಲಿ ಜೀವನ ಸಾಗಿಸಬಹುದು, ಬರುವ ಅಸಿಸ್ಟೆಂಟ್‌ಶಿಪ್ಪಿನಲ್ಲಿ ಬಾಡಿಗೆ ತೆತ್ತು, ಗ್ರೋಸರೀ ಖರ್ಚು ಕಳೆದು ಎಷ್ಟು ಹಣ ಮಿಗಿಸಬಹುದು ಎಂಬೆಲ್ಲ ವಿವರಗಳ ಬಗ್ಗೆ ಉದ್ದನೆಯ ಲೆಕ್ಚರ್ ಕೊಟ್ಟ. 'ಒಂದು ಜೊತೆ ಅಂಬ್ಯಾಸಿಡರ್ ಷೂ, ಒಂದಿಷ್ಟು ಚಟ್ನಿ ಪುಡಿ, ಮೆಣಸಿನ ಪುಡಿ, ಹುಳಿ ಪುಡಿಗಳನ್ನು ತೆಗೆದುಕೊಂಡು ಹೋಗಲು ಮರೆಯಬೇಡ' ಎಂದು ಎಚ್ಚರಿಕೆ ಕೊಟ್ಟ. ಅಷ್ಟೇ ಅಲ್ಲದೇ, ಮುಂಬೈನಿಂದ ಬೆಂಗಳೂರಿಗೆ ಹೋಗಿ ಬರಲೂ ಅದೇ ಹಣದಿಂದ ವ್ಯವಸ್ಥೆ ಮಾಡಿಬಿಟ್ಟ. "ಹೇಗಿದ್ದರೂ ಗಣಪತಿ ಹಬ್ಬ ಬರಲಿದೆ, ನಿನ್ನ ಹುಟ್ಟಿದ ಹಬ್ಬ ಆಗಸ್ಟ್ ೨೭ ಅಲ್ಲವೇ?

(ಅವನ ಕಣ್ಣಿಂದ ಯಾವ ಅಂಶವನ್ನೂ ತಪ್ಪಿಸಲು ಸಾಧ್ಯವಿರಲಿಲ್ಲ, ಪ್ಯಾಸ್ಪೋರ್ಟ್ ಅರ್ಜಿಯನ್ನು ನೋಡಿದ್ದನಲ್ಲ!), ಮನೆಗೆ ಹೋಗು, ಹಬ್ಬ ಮುಗಿಸಿಕೋ, ಹುಟ್ಟಿದ ಹಬ್ಬ ಆಚರಿಸಿ, ತಂದೆ ತಾಯಿಗಳ ಆಶೀರ್ವಾದ ಪಡೆದು ಹಿಂದಿರುಗು, ಆಗಸ್ಟ್ ಕೊನೆಗೆ ನಿನ್ನ ಟಿಕೆಟ್ ಬುಕ್ ಮಾಡುತ್ತೇನೆ. ಮಧ್ಯದಲ್ಲಿ ಒಂದೆರಡು ಸ್ಟಾಪ್ ಕೊಡಿಸುತ್ತೇನೆ, ಆಮ್ಸ್ಟರ್‌ಡ್ಯಾಮ್, ರೋಮ್, ಮತ್ತು ನ್ಯೂಯಾರ್ಕ್ ನೋಡಿಕೊಂಡೇ ಪಿಟ್ಸ್‌ಬರ್ಗ್ ತಲುಪು. ಸೀದಾ ಪಿಟ್ಸ್‌ಬರ್ಗಿಗೆ ಹೋದರೆ ಏನು ಮಜಾ? ಎಲ್ಲ ಕಡೆ ಏರ್ಪೋರ್ಟಿನಲ್ಲೇ ಹೊಟೆಲ್ ಬುಕ್ ಮಾಡುತ್ತೇನೆ" ಎಂದ. ನನ್ನ ಬಳಿ ಅದಕ್ಕೆಲ್ಲಾ ಹಣವಿಲ್ಲ ಎಂದಿದ್ದಕ್ಕೆ "ಎಲ್ಲವೂ ಐದು ಸಾವಿರದಲ್ಲೇ ಆಗುತ್ತೆ, ಚಿಂತಿಸಬೇಡ, ನನ್ನ ಕಮೀಶನ್ ಸಹ" ಎಂದು ಕಣ್ಣು ಹೊಡೆದು ನಕ್ಕ, ಆ ಕೊರಮ 'ಅಯ್ಯರ್ ದಿ ಜೀನಿಯಸ್'!

**ಇನ್ನೂ ಮರೆಯದೇ ಉಳಿದ ಸ್ವಾರಸ್ಯ:** ವೆಂಕಟರಾಮನ್‌ನ ಸೆಕ್ರೆಟರಿ ಬಹಳ ಸುಂದರವಾದ ಸಿಂಧೀ ಹುಡುಗಿ, ಹೆಗಲಿನ ತನಕ ಬರುವಂತೆ ನೀಟಾಗಿ ಕತ್ತರಿಸಿದ ಕೂದಲು, ಸ್ಲೀವ್‌ಲೆಸ್ ರೌಕೆ, ಹೊಕ್ಕಳು ತೋರುವಂತೆ ಆಕರ್ಷಕವಾಗಿ ಉಟ್ಟ ಜಾರ್ಜೆಟ್ ಸೀರೆ, ತುಟಿಗೆ ತೆಳುವಾಗಿ ಬಳಿದ ಗುಲಾಬೀ ಬಣ್ಣದ ಲಿಪ್‌ಸ್ಟಿಕ್, ಬಿಳಿಯರನ್ನೂ ಮೀರಿಸುವ ಆರೋಗ್ಯಕರ ಬಿಳಿಪಿನ, ಸುಂದರ ಮುಖದ ಮೇಲೆ ಕೊಂಚ ಅಗಲವೇ ಎನ್ನಿಸುವಂಥಾ ಕೆಂಪು ಬಿಂದಿ ! ಅವಳ ಕಂಠವೋ, 'ಹೆಲೋ' ಎಂದರೆ, ಕೋಗಿಲೆ 'ಕುಹೂ' ಎಂದಂತೆ ಕೇಳುತ್ತಿತ್ತು ! ಐದು ದಶಕಗಳಾದರೂ ಇನ್ನೂ ಮರೆತಿಲ್ಲವೆಂದರೆ, ಅವಳ ಚೆಲುವನ್ನು ನೀವೇ ಊಹಿಸಿಕೊಳ್ಳಿ ! ಇತ್ತೀಚೆಗೆ ಹೋದಾಗ ಪಾಶ್ಚಿಮಾತ್ಯ ಉಡಿಗೆಗಳೇ ಹೆಚ್ಚಾಗಿ ಕಂಡುಬಂದು ಮುಂಬೈ ಸ್ತ್ರೀಯರ ಸೌಂದರ್ಯಪ್ರಜ್ಞೆ ಕೊಂಚ ನಿರಾಶೆ ತರಿಸಿತು!

**ಮನಸು ಜಟಕಾಬಂಡಿ:** ಈಗ ಡಾಲರಿಗೆ ೭೦ ರೂಪಾಯಿ ವಿನಿಮಯದ ಬೆಲೆಯಾಗಿದೆ, ಏರ್ ಫೇರಿನಲ್ಲಿ ಏರುಪೇರುಗಳಿದ್ದರೂ ಹದಿನೈದಿಪ್ಪತ್ತು ಸಾರಿ ಭಾರತ ಯಾತ್ರೆ ಮಾಡಿ ಆಗಿದೆ, ಪ್ರತಿಯೊಂದು ಭೇಟಿಯಾದ ಮೇಲೂ ನಾವು ಬಿಟ್ಟು ಬಂದ ಜನ್ಮಭೂಮಿ ಭಾರತ ಬದಲಾಗುತ್ತಿದೆ ಎಂದು ಭಾಸವಾಗುತ್ತದೆ. ವ್ಯಾಸಂಗ ಮುಗಿದ ಕೂಡಲೇ ಭಾರತಕ್ಕೆ ಹಿಂದಿರುಗಿದ್ದಿದ್ದರೆ ಬದಲಾಗುತ್ತಿರುವ ಜನ್ಮಭೂಮಿಯ ಅಭಿವೃದ್ಧಿಗೆ ನಾವೂ ಕೈಜೋಡಿಸಬಹುದಿತ್ತಲ್ಲವೇ ಎಂಬ ಪ್ರಶ್ನೆ ವಿಚಿತ್ರವಾಗಿ ಒಂದೆರಡು ವಾರ ಕಾಡಿ ನಿಧಾನವಾಗಿ ಕರಗಿಹೋಗುತ್ತದೆ. ಸಮಾನಾಂತರವಾಗಿ, 'ಸಧ್ಯ, ಬಂದು ಬಿದ್ದೆವಲ್ಲಾ ನಮ್ಮದೇ ಹಾಸಿಗೆಯಲ್ಲಿ' ಎಂಬ ಸಮಾಧಾನವೂ ಆಗುತ್ತದೆ! ಜೊತೆಗೇ ನಾವು ಆಸೆಪಟ್ಟು ಆಯ್ದುಕೊಂಡ ಕರ್ಮಭೂಮಿ ಅಮೆರಿಕಾ ಸಹ (ನಮಗೆ ಬೇಡವೆನಿಸುವ ರೀತಿಯಲ್ಲಿ) ಬದಲಾಗುತ್ತಿದೆಯೇ ಎಂಬ ಅನುಮಾನ ಮನಸ್ಸಿನ ಒಂದು ಮೂಲೆಯಲ್ಲಿ ರೂಪುತಾಳುತ್ತದೆ, ಅದು ತಳವೂರಿ ತಲೆ ಕೆಡಿಸುವ ಮುನ್ನ 'ಯಥಾಸ್ಥಿತಿ'ಗೆ ಹೊಂದಿಕೊಳ್ಳಲೇಬೇಕಾದ ಅನಿವಾರ್ಯಕ್ಕೆ ಮಣಿದ ಮನಸ್ಸು ಎಲ್ಲವನ್ನೂ ಮಸುಕಾಗಿಸುತ್ತದೆ. ಒಬ್ಬ ಮನುಷ್ಯನ ಜೀವನದಲ್ಲಿ ಐದು ದಶಕಗಳೆಂದರೆ

ಆಯುಷ್ಯದ ಅರ್ಧ ಅಥವಾ ಅರ್ಧಕ್ಕಿಂತ ಹೆಚ್ಚೆಂದೇ ಅರ್ಥ. ಆದರೆ, ದೇಶವೊಂದರ ಜೀವಮಾನದಲ್ಲಿ? ಅದೂ ಐದೋ ಹತ್ತೋ ಸಹಸ್ರ ವರ್ಷಗಳ ಇತಿಹಾಸವಿರುವ, ನೂರಿಪ್ಪತ್ತೈದು–ನೂರಮುವ್ವತ್ತೈದು ಕೋಟಿ ಜನಸಂಖ್ಯೆಯುಳ್ಳ ಭಾರತಕ್ಕೆ ನಾನೊಬ್ಬ ಹಿಂದಿರುಗದಿದ್ದರೇನು? ಸಮುದ್ರದಿಂದ ಒಂದು ಹನಿ ನೀರನ್ನು ತೆಗೆದಂತೆ, ಅಷ್ಟೆ ಮುನ್ನೂರೋ ನಾನೂರೋ ವರ್ಷಗಳ ಇತಿಹಾಸವುಳ್ಳ, ಮುವ್ವತ್ತು ಮುವತ್ತೈದು ಕೋಟಿ ಜನರಿರುವ ಅಮೆರಿಕಾ ನನ್ನನ್ನು ಆಕರ್ಷಿಸಿ ಕಬಳಿಸಿ ಉಳಿಸಿಕೊಂಡಿದೆ, ಇಲ್ಲಿನ ಭಾಗವಾಗಲು ಅವಕಾಶ ಕೊಟ್ಟಿದೆ. 'ಸುಖವಾಗೇ(?) ಇದ್ದೀವಲ್ಲಾ, ಮತ್ತೇಕೆ ಕೊರಗು?' ಎಂದು ಮನಸ್ಸು ವಟಗುಟ್ಟುತ್ತದೆ, ಆದರೆ, ಇದೊಂದು ಜವಾಬಿಲ್ಲದ ಪ್ರಶ್ನೆಯಾಗೇ ಉಳಿದುಬಿಡುತ್ತದೆ!

**ಅಮೆರಿಕಾ ಎಂದರೆ ವಿಶಿಷ್ಟ ದೇಶ:** ಇಲ್ಲಿ ಆಪಲ್ ಪೈ, ಹಾಟ್ ಡಾಗ್, ಫುಟ್‌ಬಾಲ್, ಬೇಸ್‌ಬಾಲ್, ಬ್ಯಾಸ್ಕೆಟ್ ಬಾಲ್, ಐಸ್ ಹಾಕಿ (ಇತ್ತೀಚೆಗೆ ಸಾಕರ್ ಕೂಡ), ಇನ್ನೂ ಏನೇನೋ ಇವೆ, ಆದರೆ ಯಾವುದೂ ನನ್ನದಲ್ಲ ಅನ್ನಿಸುತ್ತೆ, ಯಾಕೋ? ಇಲ್ಲಿನ ಮುವ್ವತ್ತೈದು ಕೋಟಿಯಲ್ಲಿ ಹೆಚ್ಚಿನವರು ವಿಶ್ವದ ಬೇರೆ ಬೇರೆ ದೇಶಗಳಿಂದ ನಮ್ಮಂತೆಯೇ ಬಂದು ಸೇರಿಕೊಂಡವರು. ನಾವು ಇತ್ತೀಚಿನವರು ಅಷ್ಟೆ. ಇಂಗ್ಲೆಂಡ್, ಐರ್ಲೆಂಡ್, ಜರ್ಮನಿ, ಇಟಲಿ ಮುಂತಾದ ದೇಶಗಳಿಂದ ಬಂದ ಬಿಳಿಯರು ಅಮೆರಿಕದ ಕರಗಿಸುವ ಕಡಾಯಿಯಲ್ಲಿ ಬಿದ್ದು ಕರಗಿಬಿಟ್ಟಿದ್ದಾರೆ. ಅವರು ಇಲ್ಲಿಗೆ ಬಂದ ಹೊಸತರಲ್ಲಿ ಆಫ್ರಿಕದಿಂದ ಕೊಂಡು ತಂದ ಅಥವಾ (ಬಲಾತ್ಕಾರವಾಗಿ) ಹಿಡಿದು ತಂದ ಕರಿಯ ಜನಾಂಗ, ದಾಸ್ಯವನ್ನು ಅನುಭವಿಸಿ ಇಂದಿಗೂ ಬಿಳಿಯರೊಂದಿಗೆ ಸಮಾನತೆಗಾಗಿ ಹೊಡೆದಾಡುತ್ತಲೇ ಇದೆ. 'ಕರಗಿಸುವ ಕಡಾಯಿಯಲ್ಲಿ ಬಿಳಿಯರಲ್ಲದವರಿಗಾಗೇ ಒಂದು ಪಾರ್ಶ್ವವನ್ನು ಕಾದಿರಿಸಲಾಗಿದೆಯೋ?' ಎಂಬ ಅನುಮಾನ ಮನಸ್ಸಿನಲ್ಲಿ ಮೂಡುತ್ತದೆ. 'ನಮ್ಮಂಥಾ ಕಂದುಚರ್ಮದ ಜನರು ಕರಗಿಸುವ ಕಡಾಯಿಯಲ್ಲಿ ಬೀಳಬೇಕೋ, ಬೇಡವೋ? ಈಗಾಗಲೇ ಬಿದ್ದವರು ಕೊರಗುತ್ತಿದ್ದಾರಾ? ಕಡಾಯಿಯಲ್ಲಿ ನಮ್ಮದೇ ಒಂದು ಪಾರ್ಶ್ವವನ್ನು ಸೃಷ್ಟಿಸಿಕೊಳ್ಳಲು ತಿಣುಕುತ್ತಿದ್ದೇವಾ? ಸಾವಿರ–ಎರಡು ಸಾವಿರ ವರ್ಷಗಳ ಕೆಳಗೆ ನಮ್ಮ ಭಾರತದಲ್ಲೂ ಹೀಗೇ ಆಗಿದ್ದಿರಬಹುದೇ? ಅಲ್ಲೂ ಒಂದು ಕಡಾಯಿ ಇತ್ತೇ? ಅದರೊಳಕ್ಕೆ ಹೊರಗಿನಿಂದ ಬಂದವರು ಬಿದ್ದು ಕರಗಿದರೇ? ಅಥವಾ ಅಲ್ಲೂ ಕಡಾಯಿಗೆ ಹಲವು ಭಾಗಗಳಿದ್ದವೇ?' ಮುಂತಾದ ಪ್ರಶ್ನೆಗಳಿಂದ ಮನಸ್ಸು ಕದಡಿ ಕುದಿಯಲಾರಂಭಿಸುತ್ತದೆ, ಆ ಕುದಿತದ ಬಿಸಿಯಿಂದಲಾದರೋ ಎಲ್ಲರೂ ಕರಗಿ ಒಂದಾಗಿಬಿಡಬಾರದೇಕೆ ಎಂಬ ನಿರ್ಬಲ ಕೂಗೊಂದು ಒಳಗಿಂದ ಹೊರಟು, ಹೊರ ಬರುವ ಮುನ್ನ ಕ್ಷೀಣವಾಗಿಬಿಡುತ್ತದೆ. ಎಷ್ಟೊಂದು ಬದಲಾವಣೆಗಳಾದರೂ ಮಾನವ–ಮಾನವರ ನಡುವೆ ಸಮಾನತೆ ಉಂಟಾಗುವ ಬದಲಾವಣೆ ಭಾರತದಲ್ಲಾಗಲೀ ಅಮೆರಿಕದಲ್ಲಾಗಲೀ ಏಕೆ ಇನ್ನೂ ಆಗಿಲ್ಲ?

**ಅಗೋ ಅಲ್ಲಿ ಹಾಗೆ, ಇಗೋ ಇಲ್ಲಿ ಹೀಗೆ:** ದಿನ ನಿತ್ಯದ ಬಳಕೆಗೆ ಬೇಕಾದ ಬೇಳೆ, ಹುಣಿಸೇಹಣ್ಣು, ಮುಂತಾದ ದಿನಸಿ–ಸಾಂಬಾರ ಪದಾರ್ಥಗಳಿಲ್ಲದೇ ಒದ್ದಾಡಿದ ದಿನಗಳು

ಮರೆತುಹೋಗಿವೆ, ಈಗ ಅಮೆರಿಕದಲ್ಲಿ ಭಾರತೀಯ ದಿನಸಿಯಂಗಡಿ ಇಲ್ಲದ ಊರೇ ಇಲ್ಲ, ಭಾರತದಲ್ಲಿ ಮಾಡುವ ಊಟತಿಂಡಿಗಳನ್ನು ಇಲ್ಲಿಯೂ ಪುಷ್ಕಳವಾಗಿ ತಿಂದು ಬಂಧು-ಮಿತ್ರರಿಗೆ ಉಣಬಡಿಸಿ ಖುಷಿಪಡುತ್ತಾ ಬದುಕಿದ್ದೇವೆ. ಭಾರತದಲ್ಲಿ ಮಾಡಿದ ವ್ರತ-ಪೂಜೆಗಳ ಜೊತೆಗೆ ಅಲ್ಲೂ ಮಾಡದ ಯಾಗ/ಯಜ್ಞ/ಹೋಮ/ಹವನಗಳನ್ನು ಇಲ್ಲಿ ಮಾಡಿ(ಬಿಟ್ಟಿ)ದ್ದೇವೆ. ಸಣ್ಣ ಊರುಗಳಲ್ಲಿ ಒಂದೋ ಎರಡೋ ಆದರೆ, ದೊಡ್ಡ ನಗರಗಳಲ್ಲಿ ಹತ್ತಿಪ್ಪತ್ತು ದೇವಾಲಯಗಳನ್ನು ಕಟ್ಟಿ ನಡೆಸುತ್ತಿದ್ದೇವೆ. ಮುಖ್ಯ ದೇವರುಗಳಾದ ಶಿವ ಮತ್ತು ವಿಷ್ಣುಗಳ ಜೊತೆಗೆ, ರಾಮ, ಕೃಷ್ಣ, ಗಣಪತಿ, ಲಕ್ಷ್ಮಿ, ಸರಸ್ವತಿ, ರಂಗನಾಥ/ಅನಂತಪದ್ಮನಾಭ, ಆಂಜನೇಯರೇ ಮೊದಲಾಗಿ, ಮಂತ್ರಾಲಯದ ರಾಯರು, ಶಿರಡಿಯ ಬಾಬಾರವರೆಗೆ, ಎಲ್ಲರೂ ಬಂದು ಅಮೆರಿಕದ ದೇಗುಲಗಳಲ್ಲಿ ರಾರಾಜಿಸುತ್ತಿದ್ದಾರೆ. ಇಷ್ಟಾದರೂ ನಮ್ಮ ಮಕ್ಕಳು ನಮ್ಮ ಧರ್ಮ ಮತ್ತು ನಂಬಿಕೆಗಳನ್ನು (ನೇರವಾಗಿ ಧಿಕ್ಕರಿಸದಿದ್ದರೂ) ಮನಸಾರೆ ಒಪ್ಪಿ ಆಚರಿಸುತ್ತಿಲ್ಲ. ನಮ್ಮ ಮಾತೃಭಾಷೆಯನ್ನು ಹೆಚ್ಚಿನ ಸಂಖ್ಯೆಯಲ್ಲಿ ಆಡುತ್ತಿಲ್ಲ, ಕಲಿಯುತ್ತಿಲ್ಲ ಎಂದು ಗೊತ್ತಿದ್ದರೂ (ಕನ್ನಡನಾಡಿನ ದೊಡ್ಡ ದೊಡ್ಡ ಊರುಗಳಿಂದಲೇ ಕನ್ನಡ ಮಾಯವಾಗುತ್ತಿರುವದನ್ನು ನೆಪ ಮಾಡಿಕೊಂಡು) ನಮಗೆ ನಾವೇ ಸಮಾಧಾನ ಮಾಡಿಕೊಳ್ಳುತ್ತಾ ಹಾಯಾಗಿರುವದನ್ನು ಕಲಿತಿದ್ದೇವೆ. ನಮ್ಮಲ್ಲನೇಕರು ಊರಿಗೆ ಹಿಂದಿರುಗಿ ತಂದೆತಾಯಿಗಳು ತೋರಿಸಿದ ಹೆಣ್ಣುಗಳಲ್ಲೇ ಒಂದನ್ನು ವರಿಸಿ ಮದುವೆಯಾಗಿದ್ದರೂ, ಎರಡನೇ ಮತ್ತು ಮೂರನೇ ಪೀಳಿಗೆಯ ಮಕ್ಕಳಲ್ಲಿ ಮದುವೆಯ ವಿಷಯದಲ್ಲಿ ಸಾಕಷ್ಟು ಬದಲಾವಣೆಯ ಜೊತೆಗೆ ಗೊಂದಲವೂ ಉಂಟಾಗಿದೆ. ಅಮೆರಿಕದಲ್ಲಿ ಹುಟ್ಟಿ ಬೆಳೆದ ಭಾರತೀಯ ಮಕ್ಕಳು ಅಮೆರಿಕದ ಮುಖ್ಯವಾಹಿನಿಯಲ್ಲಿ ನಿಧಾನವಾಗಿಯಾದರೂ ಬೆರೆಯುವ ಯತ್ನದಲ್ಲಿದ್ದಾರೆ. ನಾವು ಹೇರಿದ ಮೌಲ್ಯಗಳಿಂದ ಬಳಲಿದ್ದಾರೆ. ಇಪ್ಪತ್ತು ಮುವ್ವತ್ತು ವರ್ಷಗಳ ಹಿಂದೆ, ನಮ್ಮ ಮಕ್ಕಳನ್ನು ಶಾಲಾ ಕಾಲೇಜುಗಳಿಗೆ ಕಳಿಸಿದಾಗ ವಿರುದ್ಧ ಲಿಂಗದವರೊಂದಿಗೆ ಬೆರೆಯದಂತೆ ನಿಷೇಧಿಸಿ ಅವರಿಗೆ ಸಂಗಾತಿಗಳನ್ನು ನಾವೇ ಹುಡುಕಲು ಯತ್ನಿಸಿ ಸೋತಿದ್ದೇವೆ. ನಮ್ಮ ಗೊಂದಲದಿಂದ ಅವರನ್ನು ಎಡಬಿಡಂಗಿಳನ್ನಾಗಿಸಿದ್ದೇವೆ. ಆದರೆ, ಭಾರತದಲ್ಲೇ ಗಂಡು ಹೆಣ್ಣುಗಳು ಸಲಿಗೆಯಿಂದ ಬೆರೆತು ತಮ್ಮ ವಾರಿಗೆಯವರನ್ನೇ ಪ್ರೀತಿಸಿ ಮದುವೆಯಾಗುತ್ತಿರುವುದನ್ನು ಕಂಡು ಹಲುಬಿದ್ದೇವೆ. ಸಮಯವನ್ನು ಹೆಪ್ಪುಗಟ್ಟಿಸಿ ಬೇಸ್ತುಬಿದ್ದ ನಾವೂ ಬದಲಾಗಲು ಯತ್ನಿಸಿದ್ದೇವೆ, ಆದರೆ ಕೆಲವರಿಗೆ ಈ ಬದಲಾವಣೆ, 'ಟೂ ಲಿಟಲ್, ಟೂ ಲೇಟ್' ಆಗಿದೆ. ಮದುವೆಗೆ ಮುಂಚಿನ ಸ್ನೇಹ ಸಲಿಗೆಗಳನ್ನು ಕಂಡು ಸಿಂಡರಿಸುತ್ತಿದ್ದ ಕೆಲವರಾದರೂ ಮಡಿವಂತಿಕೆಯನ್ನು ಕೊಂಚಕೊಂಚವಾಗಿ ಸಡಿಲಿಸುತ್ತಾ ಇದ್ದಾರೆ. 'ನನ್ನ ಮಗಳ ಬಾಯ್ ಫ್ರೆಂಡ್ ಇವನು' ಎಂದು ಪರಿಚಯ ಮಾಡಿಕೊಡಲು ಯಾವ ಸಂಕೋಚವೂ ಕೆಲವರಿಗೆ ಕಾಣುತ್ತಿಲ್ಲ, ಅಂಥಾ ವಿವಾಹಪೂರ್ವ ಕೂಡಿಕೆಗಳು ಅತೀವ ಸಹಜ ಎನ್ನುವಷ್ಟು ಕೆಲವರು ಬದಲಾಗಿದ್ದಾರೆ (ಮುಂದುವರೆದಿದ್ದಾರೆ?)!

ಮೂಲ ನಿವಾಸಿಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳದಿದ್ದರೆ, ಮುನ್ನೂರು ನಾನೂರು ವರ್ಷಗಳ ಮಿತವಾದ ಇತಿಹಾಸವುಳ್ಳ, ಅಮೆರಿಕಾ ಜನರು ಹೊರಗಿಂದ ಬಂದು ಹೊಸ ನಾಡಿನಲ್ಲಿ ನೆಲೆಸಿ ತಮ್ಮ ವರ್ಣಗಳನ್ನು ಉಳಿಸಿಕೊಳ್ಳುತ್ತಾ 'ಸೆಲೆಕ್ಟಿವ್' ಆಗಿ ಬೆರೆಯುತ್ತಿರುವ ಚಿತ್ರ ನಮ್ಮ ಮುಂದಿರುವುದನ್ನು ನಾವು ನಿತ್ಯ ನೋಡುತ್ತಿದ್ದೇವೆ. ಐದಾರು ಸಾವಿರ ವರ್ಷಗಳಿಂದ ನಾಗರಿಕತೆಯನ್ನು ಬೆಳೆಸಿಕೊಂಡ ಭಾರತೀಯರ ಮಧ್ಯೆ ಆಗಿಂದಾಗ್ಗೆ ಹೊರದೇಶದ ಜನರು ಪ್ರವೇಶಿಸಿದ್ದಾರೆ, ಕೆಲವರು ಭಾರತವನ್ನು ಆಕ್ರಮಣಕಾರಿಗಳಾಗಿ ಪ್ರವೇಶಿಸಿ ಲೂಟಿಮಾಡಿ ಹಿಂದಿರುಗಿದ್ದಾರೆ. ಇನ್ನು ಕೆಲವರು ಅದರ ಶ್ರೀಮಂತಿಕೆಗೆ, ತಾತ್ವಿಕ ಸಮೃದ್ಧಿಗೆ ಮಾರುಹೋಗಿ ಅಲ್ಲೇ ನೆಲೆಸಿದ್ದಾರೆ. ಆದರೆ ಎಷ್ಟರ ಮಟ್ಟಿಗೆ ಅವರೆಲ್ಲಾ ಬೆರೆತು ಭಾರತೀಯರಾಗಿದ್ದಾರೆ? ಹಲವು ಧರ್ಮಗಳ, ಅವುಗಳೊಳಗಿನ ಪ್ರಭೇದಗಳ, ವರ್ಣಗಳ, ಜಾತಿಗಳ ಕಾರಣದಿಂದ ಭಾರತ ಒಂದು ವಿಚಿತ್ರ ಮಿಶ್ರಣದಂತಾಗಿದೆ. ಹೊರಗಿನಿಂದ ನೋಡಿದಾಗ, 'ಒಡೆದ ಚೂರುಗಳನ್ನು ಅಷ್ಟೇನೂ ಶಕ್ತಿಶಾಲಿಯಲ್ಲದ ಗೋಂದಿನಿಂದ ಅಂಟಿಸಿದಂತಿದೆ' ಎಂದು ಒಮ್ಮೊಮ್ಮೆ ಎನ್ನಿಸುತ್ತೆ. ಇಷ್ಟೊಂದು ವೈರುಧ್ಯಗಳ ನಡುವೆ ನಾಜೂಕಾಗಿ ಅಂಟಿ ನಿಂತಿರುವ ಜನಸಮೂಹ ಒಂದು ರಾಷ್ಟ್ರವೇ? ನೂರಾರು ಸಣ್ಣ–ಪುಟ್ಟ ರಾಜ್ಯಗಳಾಗಿ ಹಲವಾರು ದಶಕಗಳು/ಶತಕಗಳು ಮೆರೆದು ಮಾಯವಾದ ಇತಿಹಾಸವನ್ನುಳ್ಳ, ವಿವಿಧ ಭಾಷೆಗಳನ್ನಾಡುವ ರಾಜಕೀಯ ತುಕಡಿಗಳು, 'ಒಂದು ಧ್ವಜದಡಿ ಬಂದೆವು' ಎನ್ನುವ ಮೊದಲೇ ಇಬ್ಭಾಗವಾದ ಭೌಗೋಳಿಕ ನಕ್ಷೆಯ ಆಕಾರ ಸಹಜವಾದದ್ದೇ? ಅಥವಾ ಅವರು ಒಂದುಗೂಡಿದ್ದೇ ಪರಕೀಯರ ಆಕ್ರಮಣದ ಫಲಿತಾಂಶವಾಗಿಯೇ? ಹಾಗೆ ನೋಡಿದರೆ, ನಾವು ಪ್ರಾಥಮಿಕ ಶಾಲೆಯಲ್ಲಿ ನೋಡುತ್ತಿದ್ದ ಬ್ರಿಟಿಷ್ ಸಾಮ್ರಾಜ್ಯದ ಅಖಂಡ ಭಾರತದ ನಕ್ಷೆಯೇ ಇಂದಿನ ತುಂಡುತುಂಡಾದ ನಕ್ಷೆಗಿಂತ ಸಹಜವಾಗಿ ಕಣ್ಮುಂದೆ ಬರುತ್ತಿರುತ್ತದೆ! 'ಅಮೆರಿಕಕ್ಕೆ ಇರುವಂತೆ ಭಾರತಕ್ಕೂ ಒಂದು ಮಹಾಕಥಾನಕ (ಗ್ರ್ಯಾಂಡ್ ನ್ಯಾರೆಟಿವ್) ಉಂಟೆ? ಹಾಗಿದ್ದಲ್ಲಿ, ಅದೇನು? ಆ ಭೌಗೋಳಿಕ ಪ್ರದೇಶ ಇನ್ನೂ ಒಡೆದು ಚೂರಾಗದೇ ಇರಲು ಅದರ ಹಿಂದಿರುವ ಶಕ್ತಿ ಏನು?' ಇವೇ ಮುಂತಾದ ಪ್ರಶ್ನೆಗಳ ಕುರಿತು ಅನೇಕ ಚರ್ಚೆಗಳು ನಡೆಯುತ್ತಲೇ ಇರುತ್ತವೆ. ಅದರಲ್ಲೂ, ನಾಲ್ಕೈದು ದಶಕಗಳಿಂದ ಅಮೆರಿಕದಲ್ಲಿ ಬಾಳ್ವೆ ನಡೆಸಿರುವ ನಮಗೆ ಅಮೆರಿಕ ತನ್ನನ್ನು ತಾನು ಗುರುತಿಸಿಕೊಳ್ಳುವ ರೀತಿ, ಇತರರನ್ನು ಅದು ಗುರುತಿಸುವ ರೀತಿ ಮತ್ತು ಅದರ ಹಿಂದಡಗಿರುವ ನೀತಿ, ಇವುಗಳ ಪರಿಚಯ ಮತ್ತು ಅನುಭವ ಕೊಂಚವಾದರೂ ಇರುವುದರಿಂದ ನಮ್ಮ ಜನ್ಮಭೂಮಿಯಾದ ಭಾರತದ ಇತಿಹಾಸದ ಬಗ್ಗೆ ಮತ್ತು ಇಂದಿನ ಬದಲಾದ ಭೌಗೋಳಿಕ ಪರಿಸ್ಥಿತಿಯ ಬಗ್ಗೆ ಚಿಂತಿಸುವುದು ಅಗತ್ಯವೆನಿಸುತ್ತಿದೆ.

ನಾವಿಲ್ಲಿ ಬಂದ ವರ್ಷಗಳಲ್ಲಿ ಮತ್ತು ಇತ್ತೀಚೆಗೆ: ೬೦–೭೦ರ ದಶಕಗಳಲ್ಲಿ, ಏನಾದರೋ ಮುಖ್ಯ ಕಾರಣಕ್ಕಾಗಿ ಊರಿನ ಜನರನ್ನು ದೂರವಾಣಿಯ ಮೂಲಕ ಸಂಪರ್ಕಿಸುವ ಸಂದರ್ಭ ಬಂದಾಗ ಪಡುತ್ತಿದ್ದ ಫಜೀತಿ, ಪಟ್ಟವರಿಗೇ ಗೊತ್ತು! ಇಲ್ಲಿ

ಬಂದಿಳಿದ ಎರಡು ದಿನಗಳಲ್ಲೇ ಪ್ರತಿಯೊಬ್ಬರಿಗೂ ಒಂದು ದೂರವಾಣಿ ಸಿಗುವ ಪವಾಡದ ಬಗ್ಗೆ ನಮಗಾದ ಹಿಗ್ಗು, ಅದನ್ನು ಮನೆಯವರೊಂದಿಗೆ ಹಂಚಿಕೊಳ್ಳಲು ಎಷ್ಟು ಏರೋಗ್ರಾ್ಯಮುಗಳು ತುಂಬಲ್ಪಟ್ಟಿದ್ದವೋ ಊಹಿಸುವುದು ಕಷ್ಟ. ಊರಿನಲ್ಲಿ ಮನೆಯ ಒಂದೆರಡು ಫರ್ಲಾಂಗಿನೊಳಗೇ ಯಾರದಾದರೋ ಮನೆಯಲ್ಲಿ ಫೋನಿದ್ದರೆ, ಅವರನ್ನು ಕರೆದು ಅವರಿಗೆ ತೊಂದರೆ ಕೊಟ್ಟು ನಮ್ಮ ಮನೆಯ ಜನರನ್ನು ದಯವಿಟ್ಟು ಕರೆದುತರುವಂತೆ ಬೇಡಿಕೊಂಡು, ಅವರು ಸಹಕರಿಸಿ ನಮ್ಮ ಮನೆಯವರನ್ನು ಕರೆತಂದರೆ, ಅವರೊಂದಿಗೆ ಎರಡು ಮೂರು ನಿಮಿಷ ಕಿರಿಚಾಟದ ಸಂಭಾಷಣೆ ನಡೆಸಿದರೆ, ಅದೊಂದು ವಿಶೇಷ ಮಹಾಸಾಧನೆ! ಅದಕ್ಕಾಗಿ ಮುಂಗಡ ಬುಕ್ ಮಾಡಿ ಕಾಯುವುದೇನು, ಮನೆಯಿಂದ ಹೊರಗೆ ಹೆಜ್ಜೆ ಇಡದೆ ಒದ್ದಾಡುವುದೇನು? ಈಗ ಅಲ್ಲಿ ನಡೆದಿರುವ ದೂರವಾಣಿ ಸಂವಹನಕ್ರಾಂತಿಯ ಬಗ್ಗೆ ಹೆಚ್ಚಿಗೆ ಹೇಳುವ ಅಗತ್ಯವಿಲ್ಲ. ಇಲ್ಲಿನ ಅತ್ಯಂತ ಮುಂದುವರೆದ ಮೊಬೈಲ್ ಫೋನನ್ನು ಅಲ್ಲಿಗೆ ತೆಗೆದುಕೊಂಡು ಹೋದರೆ ಅದನ್ನು ಉಪಯೋಗಿಸುವ ಬಗ್ಗೆ ಅಲ್ಲಿನ ಮಕ್ಕಳ ಕೈಲಿ ಹೇಳಿಸಿಕೊಂಡು ಕಲಿಯುವಂಥ ಪ್ರಸಂಗ ಈಗಿದೆ! ಮಾಹಿತಿ ತಂತ್ರಜ್ಞಾನಕ್ಕೆ ಬೇಕಾದ ಪರಿಣತಿಯನ್ನು ಒದಗಿಸುತ್ತಿರುವವರು ನಮ್ಮ ಭಾರತೀಯರೇ ಅಲ್ಲವೇ ಎಂದು ಹೆಮ್ಮೆಪಡಬೇಕಷ್ಟೆ? 'ಮಾ–ಬೆಲ್' ಎಂಬ ಕಂಪನಿಯೊಂದು ಎಂಥಾ ಅದ್ಭುತವಾದ ಟೆಲಿಫೋನ್ ಸೇವೆಯನ್ನು ಅಮೆರಿಕದಲ್ಲಿ ನಮಗೆ ಒದಗಿಸುತ್ತಿತ್ತು, ಇಂದು ನಮಗೆ ದೊರಕುವ ಕಳಪೆ ಸೇವೆಯ ಜೊತೆಗೆ ಅದಕ್ಕೆ ತೆರಬೇಕಾದ ಹಣ! ಏತಕ್ಕಾಗಿ ಎಷ್ಟು ಹಣ ತೆರುತ್ತಿದ್ದೇವೆ ಎಂದು ತಿಳಿದುಕೊಳ್ಳಲು ಅವರು ಕಳಿಸುವ ಹತ್ತಾರು ಪುಟಗಳ ಬಿಲ್ಲನ್ನು ಓದಿ ತಲೆ ನೋವು ಬಂದು ಸಹಾಯಕ್ಕೆ ಕರೆದರೆ, ಫೋನಿನ ಆ ತುದಿಯಲ್ಲಿರುವವರಾದರೂ ಯಾರು? ಅವರೂ ನಮ್ಮ ಬೆಂಗಳೂರಿಗರೋ ಪುಣೇಕರ್ಗಳೋ ಆಗಿರುವ ಸಾಧ್ಯತೆಯೇ ಹೆಚ್ಚು! ನಾನಂತೂ ಕೆಲವರನ್ನು ಕನ್ನಡದಲ್ಲೇ ಮಾತಾಡಿಸಿದ್ದೇನೆ! 'ಸಂಕುಚಿತ ವಿಶ್ವ'ವೆಂದರೆ ಇದೇ ಅಲ್ಲವೇ? ಆದರೆ, ಸಂಕುಚಿತ ವಿಶ್ವದ ತಲೆನೋವುಗಳೂ ಇಲ್ಲದಿಲ್ಲ. ಪ್ರತಿನಿತ್ಯ ಭಾರತದಿಂದ ಬರುವ ಕೊರಮರ ಟೆಲಿಫೋನ್ ಕಾಲ್‌ಗಳು – ಅದೇ, 'ನಿಮ್ಮ ಕಂಪ್ಯೂಟರ್ ಕೆಟ್ಟಿದೆ, ವೈರಸ್ ಬಂದಿದೆ, ಸರಿಮಾಡುತ್ತೇನೆ, ನಿಮ್ಮ ಬ್ಯಾಂಕ್ ಅಕೌಂಟ್ ನಂಬರ್ ಕೊಡಿ' ಎಂತಲೋ, ಅಥವಾ 'ಇದೋ ನಿಮ್ಮ ಐ ಆರ್ ಎಸ್ ಮಿತ್ರ ಕರೆಯುತ್ತಿದ್ದೇನೆ, ನೀವಿನ್ನೇನು ಜೈಲುಕಂಬಿ ಎಣಿಸುವವರಿದ್ದೀರಿ, ನಾನು ಹೇಳಿದಂತೆ ಮಾಡಿ, ಮೊದಲು ನಿಮ್ಮ ಸೋಶಿಯಲ್ ಸೆಕ್ಯೂರಿಟಿ ನಂಬರ್ ಕೊಡಿ, ನಾನು ಕೊಡುವ ವಿಳಾಸಕ್ಕೆ ನಾನು ಹೇಳಿದ ಮೊಬಲಗಿನ ಚೆಕ್ ಕೂಡಲೇ ಕಳಿಸಿ, ನೀವು ಜೈಲು ಸೇರದಂತೆ ನೋಡಿಕೊಳ್ಳುವ ಕೆಲಸ ನನ್ನದು' ಎಂದು ಹಿಂಸಿಸುವ ಜನರು, ಅವರೂ ಭಾರತೀಯರೇನೇ. ಎಷ್ಟೋ ಬಾರಿ ಕನ್ನಡದಲ್ಲಿ/ಹಿಂದಿಯಲ್ಲಿ ಕೆಟ್ಟಕೆಟ್ಟ ಬೈಗಳ ಬೈದಿದ್ದೇನೆ, ಆದರೂ ಪ್ರಯೋಜನವಾಗಿಲ್ಲ. ಒಬ್ಬನಂತೂ ನನ್ನಿಂದ ಬೈಸಿಕೊಂಡ ಮೇಲೆ ನನಗೆ ದೋಸ್ತಿ ಆಗಿಬಿಟ್ಟ, 'ಕ್ಯಾ ಕರೇ ಸಾಬ್, ರೋಟೀ ಕಪಡೇ ಮಕಾನ್ ಕೇ ಲಿಯೇ

ಕುಛ್ ನ ಕುಛ್ ಕರ್ನಾ ಪಡ್ತಾ ಹೈ ನಾ? ಹಮ್ ಲೋಗ್ ದೇಸಿಯೋಂಕೋ ಸತಾನಾ ನಹೀ ಚಾಹ್ತೆ, ಯೇ ಸಬ್ ಗೋರೋಂಕೇಲಿಯೆ' ಎಂದು ಸಮಝಾಯಿಷಿ ಬೇರೆ ಕೊಟ್ಟಿದ್ದ!

**ಬದಲಾಗುತ್ತಿದೆ ಭಾರತ:** ಬೆಂಗಳೂರಿನ ಎಲೆಕ್ಟ್ರಾನಿಕ್ ಸಿಟಿ ಅಥವಾ ಮೈಸೂರಿನ ಇನ್‌ಫೋಸಿಸ್ ಕ್ಯಾಂಪಸ್ ನೋಡಿದರೆ ಅಮೆರಿಕವೇ ಅಲ್ಲಿ ಬಂದು ಕೂತಿದೆಯೋ ಎಂದು ಭಾಸವಾಗುವಷ್ಟು ಭಾರತ ಬದಲಾಗಿದೆ. ಅಲ್ಲಿ ಯಾವ ಹೆಣ್ಣು ಮಕ್ಕಳೂ ಈಗ ಸೀರೆ ಉಡುವುದು ಕಾಣುವುದಿಲ್ಲ (ಅಲ್ಲಲ್ಲಿ ಸಲ್ವಾರ್ ಕಮೀಜ್ ಕಂಡರೂ ಕಾಣಬಹುದು). ಜೀನ್ಸ್ ಮತ್ತು ಟೀ-ಶರ್ಟ್ ತೊಟ್ಟ, ಬೆನ್ನು ಚೀಲ (ಬ್ಯಾಕ್ ಪ್ಯಾಕ್) ಹೊತ್ತ, ಗಿಡ್ಡ ಕೂದಲಿನ ತರುಣಿಯರೇ ಎಲ್ಲೆಲ್ಲೂ. ಲಿಂಗಭೇದವಿಲ್ಲದೇ ಎಲ್ಲರೂ ಸ್ಕೂಟರ್ ಯಾ ಕಾರುಗಳಲ್ಲಿ ಓಡಾಡುವರು. ತಿಂಗಳು-ಎರಡು ತಿಂಗಳಿಗೊಮ್ಮೆ ಪರದೇಶ ಯಾನ ಮಾಡುತ್ತ, ಕೈತುಂಬ ಸಂಬಳ ತರುವರು. ಇಂಥಾ ವಿದ್ಯಾವಂತ ಸ್ವತಂತ್ರ ಮನೋವೃತ್ತಿಯ ಹೆಣ್ಣುಗಳ ಮನ ತಣಿಸಿ, ಅವರನ್ನು ಆರಾಧಿಸಿ ಮದುವೆಯಾಗಿ, ಮನೆಗೆಲಸದಲ್ಲಿ ಸಹಭಾಗಿಗಳಾಗಿ ಮಕ್ಕಳನ್ನು ನೋಡಿಕೊಳ್ಳುವ ಗಂಡು ಮಕ್ಕಳನ್ನು ತಯಾರಿಸುತ್ತಿರುವ ಭಾರತಮಾತೆ ನಿಜಕ್ಕೂ ಬದಲಾದ ನವ ನವೀನ ಧನ್ಯ ಮಾತೆ!

ಈ ದಿನಗಳಲ್ಲಿ, ಅದರಲ್ಲೂ ನಗರಗಳಲ್ಲಿ, ಹೆಣ್ಣನ್ನು ನೋಡಲು ಬರುವ ಗಂಡುಗಳು, ತಲೆ ತಗ್ಗಿಸಿಕೊಂಡು ಬಂದು ಉಪ್ಪಿಟ್ಟು, ಕೇಸರೀಭಾತ್, ರಸಬಾಳೆ, ಸ್ಟ್ರಾಂಗ್ ಕಾಫೀ ಸರ್ವ್ ಮಾಡಿ ಮಾಯವಾಗುವ ಹದಿಹರೆಯದ ಹುಡುಗಿ, ಗಂಡಿನ ಮನೆಯವರು ಇಷ್ಟಪಟ್ಟರೆ ಎಲ್ಲರ ಮುಂದೆ ಚಾಪೆಯ ಮೇಲೆ ಕೂತು ತಂಬೂರಿ ಶ್ರುತಿ ಮಾಡಿಕೊಂಡು ಹಾಡುವ ಹೆಣ್ಣು, ಗಂಡು ಒಪ್ಪಿತೇ ಇಲ್ಲವೇ ತಿಳಿಯಲು ತವಕದಿಂದ ವಾರಗಟ್ಟಲೆ ಕಾಯ್ದು ಅನೇಕವೇಳೆ ನಿರಾಶರಾಗುವ ಹೆಣ್ಣಿನ ಮನೆಮಂದಿ, ಇವೆಲ್ಲಾ ಮಾಯವಾದ ಹಳೆಯ ಕಥೆಗಳಷ್ಟೆ? ಇಂಥಾ (ಒಳ್ಳೆಯ) ಬದಲಾವಣೆಗಳ ಜೊತೆಗೇ, ಜಾತಕದ ಕಾಟ, ವರದಕ್ಷಿಣೆಯ ಭೂತ, ಇರಲಿ ಇಲ್ಲದಿರಲಿ ಹಣವನ್ನು ಸ್ಪರ್ಧಾತ್ಮಕವಾಗಿ ಅನಗತ್ಯ ಖರ್ಚುಮಾಡುವ/ಮಾಡಿಸುವ ಚಟ ಇನ್ನೂ ಮಾಯವಾಗಿಲ್ಲದೇ ಇರುವುದು ಒಂದು ವಿಪರ್ಯಾಸ. ಖೇದದ ಸಂಗತಿಯೆಂದರೆ, ಅಲ್ಲಿನ ಅನೇಕ ಕೆಟ್ಟ ಅಭ್ಯಾಸಗಳೂ ಮೂಢನಂಬಿಕೆಗಳೂ ಹತ್ತು ಸಾವಿರ ಮೈಲಿ ದೂರದ ಅಮೆರಿಕೆಗೂ ಬಂದು ತಳ ಊರಿವೆ. ಲಗ್ನಪತ್ರಿಕೆ, (ಇತ್ತೀಚಿನ ಲಗ್ನಪತ್ರಿಕೆಗಳು ಕೆಲವೊಮ್ಮೆ ಒಂದು ಪುಸ್ತಕದ ಮಾದರಿ ಇರುತ್ತವೆ, ಅಷ್ಟೊಂದು ಭಾರ, ಅಷ್ಟೊಂದು ಅಲಂಕಾರದ ವಿನ್ಯಾಸಗಳು, ಪುಟಗಟ್ಟಲೆ ಮಾಹಿತಿ!) ದೇವರ ಸಮಾರಾಧನೆ, ಧಾರೆ, ನಾಗೋಲಿ, ಆರತಕ್ಷತೆ, ಬೀಗರೌತಣ ಮುಂತಾದ ದಕ್ಷಿಣ ಭಾರತದ ಪದ್ಧತಿಗಳ ಜೊತೆಗೆ, ಉತ್ತರ ಭಾರತದ ಸಗಾಯಿ, ಸಂಗೀತ್, ಮೆಹಂದಿ, ಬಿಳಿ ಕುದುರೆ ಏರಿ ಬರುವ ಬಾರಾತ್ (ಅಪರೂಪಕ್ಕೆ ಗಜರಾಜ ಪ್ರತ್ಯಕ್ಷ ಆಗುವುದೂ

ಇದೆ!), ಕೈಕಾಲು ಮುರಿಯುವುದನ್ನೂ ಲೆಕ್ಕಿಸದೇ ಕುಣಿದು ಕುಪ್ಪಳಿಸುವ ಭಾಂಗರಾ ನೃತ್ಯ, ಅಮೆರಿಕದ ಬ್ರೈಡಲ್ ಷವರ್, ಕುಡಿತ, ಕುಣಿತ ಮತ್ತು ಅಸಂಖ್ಯ ಸಿಹಿ–ಖಾರದ ತಿಂಡಿ–ತೀರ್ಥಗಳಿಂದ ಕೂಡಿದ ರಿಸೆಪ್ಶನ್, ಲಕ್ಷಗಟ್ಟಲೆ ಬಾಳುವ (ಒಂದೇ ಸಾರಿ ಉಡುವ) ಸೀರೆ, (ಒಂದೇ ಸಾರಿ ಧರಿಸುವ) ಲೆಹಂಗಾ ಇವೆಲ್ಲಾ ಸೇರಿ ಅಮೆರಿಕನ್ನರು ಮೂಗಿನ ಮೇಲೆ ಬೆರಳಿಟ್ಟು, 'ಅಬ್ಬಾ ಭಾರತೀಯರ ದುಂದುವೆಚ್ಚವೇ!' ಎಂದು ಉದ್ಗಾರ ತೆಗೆಯುವಂತೆ ಮಾಡುವ ಮದುವೆಗಳು ಹೆಚ್ಚಾಗುತ್ತಿವೆ. (ನನ್ನ ಜೊತೆ ಕೆಲಸ ಮಾಡುತ್ತಿದ್ದ, ಭಾರತೀಯರೊಂದಿಗೆ ಸಂಬಂಧ ಬೆಳೆಸಿದ ಹಲವು ಅಮೆರಿಕನ್ನರು ಇಂಥಾ ದುಂದಿನಿಂದ ಬೆದರಿ/ಬೆವರಿ ಬೇಸತ್ತು ಬಸವಳಿದು ತಮ್ಮ ಕಷ್ಟವನ್ನು ನನ್ನೊಂದಿಗೆ ತೋಡಿಕೊಂಡದ್ದಿದೆ. ಅವರಿಗೆ ಯಾವ ರೀತಿ ಸಮಾಧಾನ ಹೇಳಬೇಕೋ ತಿಳಿಯದೇ, ತಿಪ್ಪೆ ಸಾರಿಸಿದ ಪ್ರಸಂಗಗಳೇ ಹೆಚ್ಚು!)

ಕಳೆದ ಒಂದೆರಡು ದಶಕಗಳಲ್ಲಿ ನಾವು ನೋಡುತ್ತಿರುವ ಬಹು ದೊಡ್ಡ ಬದಲಾವಣೆ ಎಂದರೆ, ವಿವಾಹ ವಿಚ್ಛೇದನದ ಪಿಡುಗು. ಅಮೆರಿಕದ ಸ್ವಚ್ಛಂದ ವಾತಾವರಣದ ಗಾಳಿ ಬೀಸಿ ಇಲ್ಲಿ ನೆಲೆಸಿರುವ ಭಾರತೀಯರ ಸಾಮಾಜಿಕ ಮತ್ತು ವೈವಾಹಿಕ ಜೀವನಗಳಲ್ಲಿ ಪಾಶ್ಚಿಮಾತ್ಯರ ನಡಾವಳಿ ಹೊಕ್ಕಿದ್ದರೆ ಅದರಲ್ಲಿ ಆಶ್ಚರ್ಯವೇನು? ಅಗ್ನಿಸಾಕ್ಷಿಯಾಗಿ ತಾಳಿ ಕಟ್ಟಿದ ಮಾತ್ರಕ್ಕೆ ಸುಖವಿರಲಿ ಇಲ್ಲದಿರಲಿ ವಿವಾಹ ಸಂಬಂಧಕ್ಕೆ ಗಂಟುಬಿದ್ದಿರಬೇಕೆ? ವಿಚ್ಛೇದನ ಪಡೆಯಲು ಕಾನೂನು ಅವಕಾಶ ಕೊಡುತ್ತದೆ. ಮಹಿಳೆಯರು ಹಿಂದಿನಂತೆ ಗಂಡಸಿನ ಅಧೀನದಲ್ಲಿರಲು ಒಪ್ಪಬೇಕಾದ ಅನಿವಾರ್ಯತೆಯಿಲ್ಲ, ಅವರೂ ಪುರುಷರ ಜೊತೆಜೊತೆಗೂ ಸಮಸಮವಾಗಿ ವಿದ್ಯಾವತಿಯರಾಗಿ ದುಡಿಯಲು ಶಕ್ತರಾಗಿರುವುದರಿಂದ ಸುಖವಿಲ್ಲದ ಮದುವೆಯಲ್ಲಿ ಬಂಧಿತರಾಗಿ ನರಳುವುದರ ಬದಲು ಇಬ್ಬರೂ ತಮ್ಮ ತಮ್ಮ ದಿಕ್ಕಿನಲ್ಲಿ ಹೊರಟು, ವಂಚನೆಯಾಗಿದ್ದ ಸುಖವನ್ನು ಹುಡುಕುತ್ತಾ ಸಾಗಬಹುದು. ಈ ವ್ಯವಸ್ಥೆಯನ್ನು ಅಮೆರಿಕದಲ್ಲಿರುವ ಭಾರತೀಯರೂ ನಿಧಾನವಾಗಿಯಾದರೂ ಒಪ್ಪಿಕೊಳ್ಳುತ್ತಿದ್ದಾರೆ. ಆದರೆ ಅಮೆರಿಕದ ಅಂಕಿ–ಸಂಖ್ಯೆಗಳಿಗೆ ಹೋಲಿಸಿದರೆ ಮೊದಲ ಪೀಳಿಗೆಯ ಭಾರತೀಯರು ಇನ್ನೂ ಆ ಮಟ್ಟವನ್ನು ತಲುಪಿಲ್ಲವೆಂಬುದೇ ಸಮಾಧಾನದ ಸಂಗತಿ. ಆದರೆ, ಭಾರತೀಯರ ಎರಡನೆಯ ಪೀಳಿಗೆಯ ಮಕ್ಕಳಲ್ಲಿ ಕೆಲವೇ ತಿಂಗಳಲ್ಲೇ ಅಥವಾ ಒಂದೆರಡು ವರ್ಷಗಳಲ್ಲೇ, ಅಷ್ಟೊಂದು ಆಸೆಯಿಂದ, ಪ್ರೀತಿಯಿಂದ ಅದ್ದೂರಿಯಾಗಿ ಮಾಡಿಕೊಂಡ ಮದುವೆಗಳು ಮರಳಿನ ಮನೆಗಳಂತೆ ಕುಸಿದುಬೀಳುತ್ತಿರುವುದು ವಿನಾಶಕಾರಿ ಎನ್ನಿಸುತ್ತಿದೆ. ಭಾರತದಲ್ಲಿ ಸಹ ಇತ್ತೀಚಿನ ದಿನಗಳಲ್ಲಿ ವಿಚ್ಛೇದನ ಒಂದು ಸಾಮಾಜಿಕ ಪಿಡುಗಾಗಿದೆ ಎಂಬುದನ್ನು ಗಮನಿಸಬಹುದಾಗಿದೆ. ಅಪರೂಪಕ್ಕೆ ಕೆಲವು ಜೋಡಿಗಳು ಸಕಾರಣವಾಗಿಯೇ ಬೇರಾಗುತ್ತಿದ್ದಾರೆ, ಹಾಗಾಗುವುದರಿಂದ ಇಬ್ಬರಿಗೂ ಒಳ್ಳೆಯದೇ ಆಗಬಹುದು. ಆದರೆ ಸಣ್ಣ ಪುಟ್ಟ ಕಾರಣಗಳನ್ನೇ ದೊಡ್ಡದು ಮಾಡಿಕೊಂಡು ವಿವಾಹಗಳು ಮುರಿದುಬೀಳುತ್ತಿರುವುದು ಸಮಾಜದ ದೃಢತೆಗೆ ಒಳ್ಳೆಯದಲ್ಲ. ಬದಲಾದ ಪರಿಸ್ಥಿತಿಯನ್ನು ಎದುರಿಸಲು ಬೇಕಾದ ತಯಾರಿ ಇಂದಿನ ಯುವಕ–ಯುವತಿಯರಲ್ಲಿ ಇಲ್ಲದಿರುವುದು

ಒಂದು ಕಾರಣವಾದರೆ, ತಂದೆ ತಾಯಿಗಳ ಪ್ರತ್ಯಕ್ಷ ಅಥವಾ ಪರೋಕ್ಷ ಪಾತ್ರವೂ ಸಾಕಷ್ಟು ಇದೆ ಎನ್ನಬಹುದು.

**ಮಾಧ್ಯಮ ವ್ಯಾಯೋಗ:** ಪ್ರಜಾಪ್ರಭುತ್ವದ ಆಧಾರಸ್ತಂಭಗಳಲ್ಲೊಂದಾದ 'ಸಮಾಚಾರ ಮಾಧ್ಯಮ' ಇಂದು ತನ್ನದೇ ಒಂದು ಪ್ರಭುತ್ವವನ್ನು ಸ್ಥಾಪಿಸಿಕೊಂಡಿದೆ. ವೃತ್ತಪತ್ರಿಕೆ ಮತ್ತು ಬಾನುಲಿಗಳೇ ವಾರ್ತಾಪ್ರಸಾರದ ಮುಖ್ಯ ಸಾಧನಗಳಾಗಿದ್ದ ಕಾಲವೊಂದಿತ್ತು. ನಮಗಿಷ್ಟವಾದ ಒಂದೋ ಎರಡೋ ಪತ್ರಿಕೆಗಳನ್ನೋದಿ ಖುಶಿಯಿಂದ ಇರಬಹುದಾಗಿದ್ದ ಆ ದಿನಗಳು ಮತ್ತೆ ಮರಳಿ ಬರಲಾರವು! ದಶಕಗಳ ಹಿಂದೆ ಅನೇಕ ಪತ್ರಿಕೆಗಳು ಒಂದಿಷ್ಟು ಸ್ವಾತಂತ್ರ್ಯವನ್ನು ಹೊಂದಿದ್ದರೂ ಬಾನುಲಿ ಮಾಧ್ಯಮ ಬಹುತೇಕ ಸರ್ಕಾರದ ಧ್ವನಿಯಾಗಿತ್ತು. ನಂತರ ಹುಟ್ಟಿದ ಹತ್ತಾರು ಭಾಷೆಗಳ ನೂರಾರು ಪತ್ರಿಕೆಗಳು, ನೂರಾರು ಆಕಾಶವಾಣಿ ಕೇಂದ್ರಗಳು, ಕೆಲವು ಖಾಸಗಿಯಾದರೆ ಇನ್ನು ಕೆಲವು ಸರ್ಕಾರೀ ಆಗಿದ್ದವು. ಭಾರತದಂಥಾ ಮುಂದುವರೆಯುತ್ತಿದ್ದ ದೇಶಗಳಲ್ಲಿ ಸರ್ಕಾರದ ವಿರುದ್ಧ ಆಡುವ/ಬರೆಯುವ ಸಾಹಸವನ್ನು ಮಾಡಿದರೆ ಅದನ್ನು ತಡೆಯುವ ನಾನಾ ಮಾರ್ಗಗಳು ಸರ್ಕಾರಕ್ಕೆ ಇರುವುದರಿಂದ, ಅಭಿವ್ಯಕ್ತಿ ಸ್ವಾತಂತ್ರ್ಯವೆನ್ನುವುದು ಎಲ್ಲ ಮಾಧ್ಯಮಗಳ ಕೈಗೂ ಎಟಕುವಂಥಾ ಸರಕಾಗಿರಲಿಲ್ಲ! ಅಮೆರಿಕದಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯ ಇರುವಷ್ಟು ಮತ್ತೆಲ್ಲೂ ಇದ್ದಂತಿಲ್ಲ. 'ದೂರದರ್ಶನ'ವೆಂಬ ಪ್ರಭಾವಕಾರೀ ಮಾಧ್ಯಮ ಬಂದ ಮೇಲೆ ಇಡೀ ಪ್ರಪಂಚದ ವಿದ್ಯಮಾನಗಳು ಸರ್ವವ್ಯಾಪಿಯಾಗಿ ಪ್ರಸಾರವಾಗುತ್ತಿವೆ. ಟೀವಿ ಮಾಧ್ಯಮದ ನೂರಾರು ಚ್ಯಾನಲ್ಲುಗಳು ಬಂದಮೇಲಂತೂ ಪ್ರತಿ ರಾಜಕೀಯ ಪಕ್ಷವೂ ತನ್ನದೇ ಸತ್ಯವನ್ನು ವಾರದ ಏಳು ದಿನಗಳೂ ಇಪ್ಪತ್ನಾಲ್ಕು ಘಂಟೆಗಳೂ ಪ್ರಸಾರ ಮಾಡುತ್ತಲೇ ಇರುತ್ತದೆ. ಅಲ್ಲಿ ನಡೆಯುವ ಚರ್ಚೆಗಳನ್ನು, ಸಮೀಕ್ಷೆಗಳನ್ನೂ ಸುದ್ದಿಯ ಮುಂಚೆ ನಡೆಯುವ ಭವಿಷ್ಯವಾಣಿಗಳನ್ನೂ, ಸುದ್ದಿಯ ನಂತರದ ಬುಗುರಿ ಪಂಡಿತರ (ಸ್ಪಿನ್ ಡಾಕ್ಟರ್ಸ್) ವಿಶ್ಲೇಷಣೆಗಳನ್ನೂ ಕೇಳುತ್ತ ಹೋದರೆ ಹುಚ್ಚು ಹಿಡಿಯುವುದೊಂದೇ ಬಾಕಿ. ಅಮೆರಿಕದಲ್ಲಿ ರಶ್ ಲಿಂಬಾ, ಶಾನ್ ಹ್ಯಾನಿಟಿಗಳಂಥಾ ಪ್ರಸಾರಕರು, ಸಿ ಎನ್ ಎನ್, ಎನ್ ಬಿ ಸಿ, ಫಾಕ್ಸ್ ನ್ಯೂಸ್ ಚ್ಯಾನಲ್ಲುಗಳ ವಕ್ತಾರರು ತಂತಮ್ಮ ಮೆಚ್ಚಿನ ರಾಜಕೀಯ ಪಕ್ಷಗಳ ಪುಡಾರಿಗಳನ್ನು ವಹಿಸಿಕೊಳ್ಳುವ, ವಿರೋಧಿಗಳಿಂದ ರಕ್ಷಿಸುವ ಚಮತ್ಕಾರವನ್ನು ಕೇಳಿ/ನೋಡಿಯೇ ಅನುಭವಿಸಬೇಕು. ಭಾರತದಲ್ಲೂ ಅದೇ ಗತಿ ಈಗ ಬಂದಿರುವಂತಿದೆ. ಮಾಧ್ಯಮ ಎಂಬುದು ದೇಶವನ್ನು ಒಡೆಯಬಹುದು, ಸುಟ್ಟುಹಾಕಬಹುದು, ವೈರಿಗಳಿಗೆ ಮಾರಿಬಿಡಬಹುದು. ಯಾರನ್ನು ನಂಬುವುದೆಂದು ಗೊತ್ತಾಗದಂತೆ ಬುಗುರಿ ಪಂಡಿತರು ಬೊಗಳುತ್ತಲೇ ಇರುತ್ತಾರೆ. ಇದಷ್ಟೇ ಸಾಲದೆಂಬಂತೆ, ಪ್ರತಿಯೊಬ್ಬರ ಕೈಲೂ ಒಂದು ಐಫೋನ್! ಯೂಟ್ಯೂಬ್, ಫೇಸ್‌ಬುಕ್, ಟ್ವಿಟ್ಟರ್, ಒಂದೇ ಎರಡೇ, ಸತ್ಯವನ್ನು ಅಥವಾ ಅನೃತವನ್ನು ಒಂದೇ ಕ್ಷಣದಲ್ಲಿ 'ವೈರಲ್' ಆಗಿಸುವ ಸಾಧ್ಯತೆ ಸಾಧಾರಣ ಜನಗಳ ಕೈಗೆ ಸಿಕ್ಕಿದೆ. ಎಲ್ಲಿ ಯಾರೋ ಸತ್ತರೆ, ಇನ್ನೆಲ್ಲೋ ಯಾರೋ ತಮ್ಮದೇ ವ್ಯಾಖ್ಯಾನದಿಂದ ಆರೋಪಿ ಯಾರೆಂದು ತೀರ್ಮಾನಿಸಿ ತಮಗೆ

ಬೇಕಾದಂತೆ ತಿರುಚಿ ಒಬ್ಬರಿಂದೊಬ್ಬರಿಗೆ ಹರಡಿ ಸಮಾಜದಲ್ಲಿ ಕೋಪ, ದ್ವೇಷ, ರೋಷಗಳನ್ನು ಕಾಡುಬೆಂಕಿಯಂತೆ ಹರಡುವ ಕ್ರಮ ಅನೂಚಾನವಾಗಿದೆ. ರಾಜಕೀಯ ಮುಖಂಡರು ಬೆಳಗಾಗೆದ್ದು ಯಾರನ್ನೇ ನೆನೆಯಲಿ ಬಿಡಲಿ, ಟ್ವೀಟ್ ಅಂತೂ ಮಾಡೇ ಮಾಡುತ್ತಾರೆ. ರಸಕವಳಕ್ಕೆ ಕಾಯುವಂತೆ ಕಾಯ್ದು ಅವರ ಟ್ವೀಟುಗಳನ್ನು ಬೆಳಗಾಗೆದ್ದು ಉಣ್ಣುವ, ಉಂಡು ತೇಗುವ, ಹಿಗ್ಗುವ, ಜೈಕಾರದೊಂದಿಗೆ ರಸ್ತೆಗಿಳಿಯುವ, ತಮ್ಮ ಹೀರೋ ಹೇಳಿದ್ದನ್ನು ವಿರೋಧಿಸುವ 'ವೈರಿ'ಗಳನ್ನು ಬಡಿದಿಕ್ಕುವ ಧೀರರ ಸಂಖ್ಯೆ ಎಲ್ಲೆಲ್ಲೂ ಹೆಚ್ಚುತ್ತಿದೆ. ಭಾರತದ ಇತ್ತೀಚಿನ ಕೆಲವು ಟಿವಿ ಚರ್ಚೆಗಳಂತೂ ಭಯಂಕರವಾಗಿರುತ್ತವೆ. ಭಾಗವಹಿಸುವ ಪ್ರತಿಯೊಬ್ಬರೂ (ನಿರೂಪಕ/ನಿರೂಪಕಿಯೂ ಸೇರಿದಂತೆ) ಏಕಕಾಲದಲ್ಲಿ ಅರಚುತ್ತಾ ಯಾರ ಮಾತೂ ಯಾರಿಗೂ ಕೇಳದಂತೆ/ಅರ್ಥವಾಗದಂತೆ ಮಾಡುವ ಒಂದು ಹೊಸ ಕಲೆಯೇ ಹುಟ್ಟಿಕೊಂಡಿದೆ. ಇದಕ್ಕಿಂತ ದೊಡ್ಡ ಅಪಾಯಕಾರೀ ಬದಲಾವಣೆ ಭಾರತದಲ್ಲಾಗಲೀ, ಅಮೆರಿಕದಲ್ಲಾಗಲೀ ಅಥವಾ ವಿಶ್ವದ ಯಾವುದೇ ಎಡೆಯಲ್ಲಾಗಲೀ ಆಗಲು ಸಾಧ್ಯವೇ ಇಲ್ಲ.

ಇಂದು ಒಂದು ದೇಶ ಶತ್ರುದೇಶಕ್ಕೆ ಸೈನ್ಯವನ್ನು ಕಳಿಸುವ ಅಗತ್ಯವೇ ಇಲ್ಲ. ಕುಳಿತಲ್ಲೇ ವಿರೋಧಿಗಳ ಗಣಕಗಳನ್ನು ಭೇದಿಸಿ ಅವರ ಇಡೀ ವ್ಯವಸ್ಥೆಯನ್ನೇ ಬದಲಿಸಿಬಿಡಬಹುದಾಗಿದೆ. ಸುಳ್ಳು ಸುದ್ದಿಗಳನ್ನು ಬೆಂಕಿಯಂತೆ ಹರಡಿಸಿ ಇತರ ದೇಶದ ಚುನಾವಣೆಯ ಫಲಿತಾಂಶವನ್ನೇ ಬದಲಿಸಬಹುದಾಗಿದೆ. ಭಾರತದಂಥ ದೇಶದಲ್ಲಿ ಯಾವ ಯಾವ ಜಾತಿ/ಕೋಮು/ಧರ್ಮ/ಭಾಷೆಯ ಜನರು ಯಾವ ಪಕ್ಷಕ್ಕೆ ಮತ ಹಾಕಬಹುದು, ಸಮಾಜವನ್ನು ಹೇಗೆ ವಿಭಜಿಸಿದರೆ ಯಾವ ಪಕ್ಷವನ್ನು ಗೆಲ್ಲಿಸಬಹುದು ಎಂಬುದನ್ನು ಯೂರೋಪಿನಲ್ಲಿ ಕುಳಿತ ಗಣಕಿಗಳು ತೀರ್ಮಾನಿಸುವ ಮಟ್ಟಕ್ಕೆ ಇಂದಿನ (ಅ)ರಾಜಕೀಯ ಪರಿಸ್ಥಿತಿ ಬೆಳೆದು ನಿಂತಿದೆ (ಜಾರಿ ಬಿದ್ದಿದೆ!).

**ಎಲ್ಲಿಂದ ಎಲ್ಲಿಗೋ:** ಇತ್ತೀಚೆಗೆ ಭಾರತಕ್ಕೆ ಭೇಟಿ ಕೊಟ್ಟಾಗ, ಸಭೆಯೊಂದರಲ್ಲಿ ಭಾಷಣ ಮಾಡಿದಾಗ, ಸಭೆಯಲ್ಲಿದ್ದ ಒಬ್ಬಾತ ಕೇಳಿದ ಪ್ರಶ್ನೆ ಹೀಗಿತ್ತು: "ಅಮೆರಿಕದಲ್ಲಿರುವ ಭಾರತೀಯರು ಜಾತಿಪದ್ಧತಿಯನ್ನು ಅನುಸರಿಸುತ್ತಿರುವರೆ?" ಅಂದಿನ ಸಭೆಯಲ್ಲಿ ನಾವು ಚರ್ಚಿಸುತ್ತಿದ್ದ ವಿಷಯ ಅಮೆರಿಕದಲ್ಲಿ ಭಾರತೀಯ 'ಡಯಸ್ಪೋರಾ.' ಆದರೆ ಪ್ಯಾನಲಿಸ್ಟರು ಯಾರೂ ಜಾತಿಯ ವಿಷಯವನ್ನೆತ್ತಿರಲಿಲ್ಲವಾಗಿ ಪ್ರಶ್ನೆ ಅನಿರೀಕ್ಷಿತವಾಗಿತ್ತು. ನನಗೆ ತಿಳಿದ ಮಟ್ಟಿಗೆ ಪ್ರಾಮಾಣಿಕವಾಗಿ ಉತ್ತರಿಸಿದೆ. ನಂತರ ನಡೆದದ್ದು ಇನ್ನೂ ಅನಿರೀಕ್ಷಿತವಾಗಿತ್ತು! ಅಂದು ಲೋಕಾರ್ಪಣೆಗೊಂಡ ಪುಸ್ತಕಗಳ ಬಗ್ಗೆಯಾಗಲೀ, ಮಂಡಿಸಲ್ಪಟ್ಟ ಭಾಷಣಗಳ ಬಗ್ಗೆಯಾಗಲೀ ಯಾವ ವಿಷಯವನ್ನೂ ಪ್ರಕಟಿಸದ ಪ್ರಸಿದ್ಧ ಕನ್ನಡ ದೈನಿಕವೊಂದು, ಜಾತಿಯ ಪ್ರಶ್ನೆಯ ಕುರಿತು ಆಡಿದ ನನ್ನ ಸಾಂದರ್ಭಿಕ/ಅನೌಪಚಾರಿಕ ಹೇಳಿಕೆಯನ್ನೇ ಮುಖ್ಯವಾಗಿಸಿ ತಲೆಬರಹ ಕೊಟ್ಟು ಪ್ರಕಟಿಸಿದ್ದು ಮಾತ್ರ ವಿಚಿತ್ರವೆನಿಸಿತು. ಮಾಧ್ಯಮದ ಉದ್ದೇಶಗಳು ಎಲ್ಲೆಲ್ಲೋ ಹೇಗೆ ಹೇಗೋ ಅವಿತಿಟ್ಟುಕೊಂಡಿರುತ್ತವೆ ಎಂದು

ಆಶ್ಚರ್ಯವಾಯಿತು. ಪ್ರಪಂಚದಲ್ಲಿ ಏನೇ ಬದಲಾದರೂ ಮಾಧ್ಯಮದವರು ಚಿಂತಿಸುವ ರೀತಿ ಬದಲಾಗಲು ಸಾಧ್ಯವಿಲ್ಲವೆಂದು ಈ ಪ್ರಸಂಗದಿಂದ ನನಗೆ ಖಚಿತವಾಯಿತು. ಸುಮಾರು ಐವತ್ತು ವರ್ಷಗಳ ಮುನ್ನ ವಿದ್ಯಾರ್ಥಿಯಾಗಿ ಅಮೆರಿಕಕ್ಕೆ ಬಂದ ಹೊಸತರಲ್ಲಿ, ಸೋಶಿಯಾಲಜಿ ತರಗತಿಯೊಂದಕ್ಕೆ ನನ್ನನ್ನು ಅತಿಥಿ ಭಾಷಣಕಾರನಾಗಿ ಕರೆದಿದ್ದರು. ಅಲ್ಲಿ ಕೂಡ ನನಗೆ ಕೊಟ್ಟ ಭಾಷಣದ ವಸ್ತು 'ಭಾರತದಲ್ಲಿ ಜಾತಿ ಪದ್ಧತಿ' ಎಂದೇ ಆಗಿತ್ತು! ಒಟ್ಟಿನಲ್ಲಿ ಭಾರತದ ಜಾತಿ ಪದ್ಧತಿ ಎಂಬುದು ವಿಶ್ವದ ಎಲ್ಲಾ ದೇಶಗಳಿಗೂ ಒಂದು ಅಬ್ಸೆಶನ್ ಆಗಿದೆ. (ಈ ಪರಿಸ್ಥಿತಿಗೆ ನಾವು ಯಾರಿಗೆ ಋಣಿಗಳಾಗಿರಬೇಕೆಂದು ಹೇಳುವುದು ಅಷ್ಟೇನೂ ಕಷ್ಟದ ವಿಷಯವಲ್ಲ!) ಮಹಾವೀರ, ಬುದ್ಧ, ಬಸವ, ಗುರು ಗೋವಿಂದ, ಗಾಂಧಿ, ಯಾರೆಲ್ಲ ಬಂದರೂ ಭಾರತದ ಜಾತಿ ಪದ್ಧತಿ ಅಳಿಸಿಲ್ಲ. ಪೈಗಂಬರನ ಅನುಯಾಯಿಗಳು ಖಡ್ಗ ಹಿಡಿದು ಬಂದರೂ, ಕ್ರಿಸ್ತನ ಅನುಯಾಯಿಗಳು ಬೈಬಲ್ ಹಿಡಿದು ಬಂದರೂ ಭಾರತದಲ್ಲಿ ಜಾತಿ ಎಂಬುದನ್ನು ಅಳಿಸಲಾಗಿಲ್ಲ. ಧರ್ಮ ಪರಿವರ್ತನೆಗೊಂಡ ಕ್ರೈಸ್ತರೂ ಸಹ ಬ್ರಾಹ್ಮಣ ಕ್ರಿಶ್ಚಿಯನ್ನರಿಂದ ಹಿಡಿದು, ದಲಿತ ಕ್ರಿಶ್ಚಿಯನ್ನರವರೆಗೂ ಜಾತಿ ಪದ್ಧತಿಯನ್ನು ಅನುಸರಿಸುತ್ತಲೇ ಇದ್ದಾರಲ್ಲಾ! ಮುಸಲ್ಮಾನರು ಬಾಯ್ಮಾತಿಗೆ ತಾವೆಲ್ಲಾ ಒಂದೇ ಎಂದರೂ ಅವರಲ್ಲೂ ಸುನ್ನಿ, ಷಿಯಾ, ಅಹ್ಮದೀಯ, ಸೂಫಿ, ಹನಾಫಿ, ಮೊದಲಾದ ವಿಂಗಡಣೆ ಇದ್ದೇ ಇದೆ. ಭಾರತದ 'ಜಾತಿ ವ್ಯವಸ್ಥೆ'ಯನ್ನು ದೇಶದ ರಾಜಕಾರಣಿಗಳು, ಭಾರತದ ವೈರಿಗಳು, ಹಿಂದು ಧರ್ಮದ ಆಂತರಿಕ ಮತ್ತು ಬಾಹ್ಯ ಶತ್ರುಗಳು ತಮಗೆ ಅನುಕೂಲವಾಗುವಂತೆ ಬಳಸಿಕೊಳ್ಳುತ್ತಾ ತಂತಮ್ಮ ಅಜೆಂಡಾಗಳನ್ನು ಬಲಪಡಿಸಿಕೊಳ್ಳುತ್ತಲೇ ಇದ್ದಾರಲ್ಲ. ಭಾರತದಲ್ಲಾಗಲೀ ಅಮೆರಿಕದಲ್ಲಾಗಲೀ, ಅಥವಾ ವಿಶ್ವದ ಯಾವುದೇ ಭಾಗದಲ್ಲೇ ಆಗಲಿ, ಏನೇ ಬದಲಾವಣೆ ಆದರೂ ಮೇಲು–ಕೀಳು, ಕಪ್ಪು–ಬಿಳುಪು, ಧನಿಕ–ಬಡವ ಎಂಬ ಭೇದ ಭಾವ ಬದಲಾಗದು ಎಂಬ ತೀರ್ಮಾನಕ್ಕೆ ನಾನು ಬಂದಿದ್ದೇನೆ.

**ದೇಗುಲ ಯಾತ್ರೆ:** ಇತ್ತೀಚಿನ ಭಾರತ ಭೇಟಿಯಲ್ಲಿ ನಾನು, ನನ್ನ ಮಡದಿ, ನನ್ನ ಚಡ್ಡಿ–ಗೆಳೆಯ ಮತ್ತು ಅವನ ಮಡದಿ ದಕ್ಷಿಣ ಭಾರತದ ದೇಗುಲಗಳ ದರ್ಶನಕ್ಕೆಂದು ಒಂದು ಪ್ರವಾಸವನ್ನು ಏರ್ಪಡಿಸಿಕೊಂಡೆವು. ಕಂಚಿಯ ಕಾಮಾಕ್ಷಿ, ಮಧುರೆಯ ಮೀನಾಕ್ಷಿ, ಚಿದಂಬರದ ನಟರಾಜ, ಶ್ರೀರಂಗದ ರಂಗನಾಥ, ತಂಜಾವೂರಿನ ಬೃಹದೀಶ್ವರ, ಕುಂಭಕೋಣದ ಕುಂಭೇಶ್ವರ, ಸಾರಂಗಪಾಣಿ, ನಾಗೇಶ್ವರ, ಸೋಮೇಶ್ವರ, ಹಾಗೇ ಹತ್ತಿರದ ಐರಾವತೀಶ್ವರ, ನವಗ್ರಹ ದೇವಾಲಯಗಳು, ತಿರುಚಿರಾಪಳ್ಳಿಯ ಉಚ್ಚಿ ಪಿಳ್ಳೆಯಾರ್ (ಬೆಟ್ಟದ ಗಣಪ), ವೆಲ್ಲೂರಿನ ಬಳಿ ಇರುವ ಶ್ರೀಪುರಂನಲ್ಲಿ ಇತ್ತೀಚೆಗೆ ಕಟ್ಟಿರುವ ಚಿನ್ನದ ಭವ್ಯ ಗೋಪುರವುಳ್ಳ ಶ್ರೀಲಕ್ಷ್ಮೀನಾರಾಯಣಿ ದೇವಾಲಯ, ಹಾಗೂ ತಿರುವಯ್ಯಾರಿನಲ್ಲಿರುವ ಶ್ರೀ ತ್ಯಾಗರಾಜರ ಮತ್ತು ಬೆಂಗಳೂರು ನಾಗರತ್ನಮ್ಮ ಅವರ ಸಮಾಧಿ, ಹೀಗೆ ನಮಗಿದ್ದ ಸಮಯದಲ್ಲಿ ನೋಡಬಹುದಾದಷ್ಟೂ ದೇವಾಲಯಗಳನ್ನು ಕಂಡು ತಣಿದೆವು.

ಪ್ರಯಾಣದುದ್ದಕ್ಕೂ ಉತ್ತಮ ರಸ್ತೆಗಳು, ಏಸಿ ಇರುವ ಒಳ್ಳೆಯ ವಾಹನ, ಸ್ನೇಹಮಯಿ ಸಾರಥಿ, ತಂಗಲು ಚತುರ್ತಾರಾ ಹೊಟೆಲುಗಳು, ಉಣ್ಣಲು ಇಡ್ಲಿ, ವಡೆ, ದೋಸೆ, ರಸಂ, ಸಾಂಬಾರ್, ಮೊಸರುಗಳನ್ನು ಧಾರಾಳವಾಗಿ ಬಾಳೆಯ ಎಲೆಯ ಮೇಲೆ ಬಡಿಸುವ ಶಾಖಾಹಾರೀ ಫಲಾಹಾರಮಂದಿರಗಳು! ಇನ್ನೇನು ಬೇಕು? ಅಭಿವೃದ್ಧಿಗೊಂಡ ರುಚಿ-ಶುಚಿಗಳು ಉತ್ತಮ ಬದಲಾವಣೆಯ ಶುಭಸೂಚಕಗಳು!

**ಸೋಜಿಗವೆಂದರೆ ಇದೇ:** ಭಾರತೀಯ ಸನಾತನ ಧರ್ಮವನ್ನು ದ್ವೇಷಿಸುವುದನ್ನೇ ಆಳ್ವಿಕೆಯ ಮೂಲಮಂತ್ರವನ್ನಾಗಿಸಿಕೊಂಡ ರಾಜಕಾರಣಿಗಳನ್ನುಳ್ಳ ತಮಿಳುನಾಡಿನ ದೇವಾಲಯಗಳು ಸಹಸ್ರಾರು ವರ್ಷಗಳಿಂದ ಪೂಜಾ ಪದ್ಧತಿಗಳನ್ನು ಚಾಚೂ ತಪ್ಪದೇ ನಡೆಸಿಕೊಂಡು ಬರುತ್ತಿರುವುದನ್ನು ಕಂಡಾಗ, ಆ ಬೃಹತ್ ದೇವಾಲಯಗಳ ಸುತ್ತ ನೆಲೆಸಿರುವ ಭಕ್ತರ ಸಂಸ್ಕಾರ, ನಿಷ್ಠೆ, ಗಾಢ ನಂಬಿಕೆ, ಮನೆಗಳ ಮುಂದೆ ರಂಗೋಲಿಯಿಟ್ಟು ಉತ್ಸವಗಳಿಗೆ ಕಾಯುವ ಅಸಂಖ್ಯಾತರ ಆಸಕ್ತಿ, ಇವನ್ನೆಲ್ಲಾ ಕಂಡಾಗ, ಸಹಸ್ರಾರು ವರ್ಷಗಳಿಂದ ಭಾರತವನ್ನು ಭದ್ರವಾಗಿಟ್ಟಿರುವ ಏನೋ ಒಂದು ಅದ್ಭುತ ಶಕ್ತಿ ಇನ್ನೂ ಜೀವಂತವಾಗಿದೆ ಎನ್ನಿಸಿತು! ಅದೊಂದು ಬದಲಾಗದಿದ್ದರೆ, ಏನು ಬದಲಾದರೂ ಭಯವಿಲ್ಲ ಎಂಬ ಸಮಾಧಾನವೂ ಆಯಿತು!

ಇಲ್ಲಿ (ಅಂದರೆ, ಅಮೆರಿಕದಲ್ಲಿ) ಹಲವು ವರ್ಷಗಳ ಹಿಂದೆ ನಡೆದದ್ದು ಇಂದು ಭಾರತದಲ್ಲಿ ನಡೆಯುತ್ತಿದೆ. ಹಿಂದೆ ನಾವು ಭಾರತದಲ್ಲಿ ಅನುಸರಿಸುತ್ತಿದ್ದ ಪದ್ಧತಿಗಳು ಅಲ್ಲಿ ಮಾಯವಾಗಿವೆ ಆದರೆ ಅಮೆರಿಕದ ಭಾರತೀಯರಲ್ಲಿ ಇನ್ನೂ ಪ್ರಚಲತಿಯಲ್ಲಿವೆ. ಭಾರತೀಯರಿಗೆ ಬೇಡವಾದ ಯೋಗ, ಶಾಖಾಹಾರ ಅಮೆರಿಕವನ್ನಾವರಿಸಿದೆ. ಇಂದು ಭಾರತದ ಪ್ರಾಥಮಿಕ ಶಾಲೆಗಳಲ್ಲಿ "ಸತ್ಯವೇ ನಮ್ಮ ತಾಯಿ ತಂದೆ, ಸತ್ಯವೇ ನಮ್ಮ ಬಂಧು ಬಳಗ, ಸತ್ಯವಾಕ್ಯಕೆ ತಪ್ಪಿನಡೆದರೆ, ಮೆಚ್ಚನಾ ಜಗದೀಶನು" ಎಂಬ ನೀತಿ ಪಾಠವನ್ನು ಕಲಿಸುವ ಪಠ್ಯಪುಸ್ತಕಗಳೇ ಮಾಯವಾಗಿವೆ. ಈ ಅದಲು-ಬದಲುಗಳು ಅಮೆರಿಕ-ಭಾರತಗಳ ಜಗ್ಗಾಟದ ಕೊಂಡಿಗಳಾಗಿವೆ. ಸತ್ಯವನ್ನು ಹುಡುಕುವ, ಹರಡುವ, ರಕ್ಷಿಸುವ, ಮತ್ತು ಸತ್ಯವಂತರಾಗಿ ಬಾಳುವ ಆದರ್ಶ ಭಾರತೀಯರಿಗೆ ಭಾರತದಲ್ಲೂ ಇರಲಿ, ಅಮೆರಿಕದಲ್ಲೂ ಇರಲಿ. ಭಾರತದಲ್ಲಿ 'ಸತ್ಯಮೇವ ಜಯತೇ' ಎಂಬುದು ಕೇವಲ ಒಂದು ಘೋಷಣೆಯಾಗದೇ ಜೀವನದ ದಾರಿ ದೀಪವಾಗಲಿ. ಅಮೆರಿಕದ ಜನತೆ ಕೊಚ್ಚಿಕೊಳ್ಳುವ 'ಎಕ್ಸೆಪ್ಶನಲಿಸಮ್' ಕೇವಲ 'ಸ್ಲೋಗನ್' ಆಗದೇ ವಿಶ್ವದ ದಾರಿದೀಪವಾಗಲಿ. ಬದಲಾವಣೆಗೆ ಹೆದರಬೇಕೇಕೆ? ಹೆದರಿದರೆ ಅದು ಆಗುವುದಿಲ್ಲವೇ? ಬದಲಾವಣೆ ಬರಲಿ, ಒಳ್ಳೆಯದನ್ನು ಉಳಿಸಿ ಕೆಟ್ಟದ್ದನ್ನು ಅಳಿಸಲಿ!

*

# ಭಾರತ ಬದಲಾಗುತ್ತಿದೆ...

■ **ಮಂಜುಳ ಭದ್ರಸ್ವಾಮಿ,** Fremont, CA.

ಹತ್ತು ಹದಿನೈದು ವರ್ಷಗಳ ಹಿಂದೆ ಪ್ರತಿದಿನ ತಲೆಯ ಮೇಲೆ ತರಕಾರಿ ಬುಟ್ಟಿ ಹೊತ್ತು, ಮನೆ ಮನೆಗೆ ತರಕಾರಿ ವ್ಯಾಪಾರ ಮಾಡಲು ಬರುತ್ತಿದ್ದ ಕೆಂಪಮ್ಮನ ದರ್ಶನ ಈಗ ತಿಂಗಳಿಗೆ ಎರಡೋ ಮೂರೋ ಬಾರಿ ಮಾತ್ರ. ಮನೆಯ ಮುಂದೆ ಹಸುವಿನ ಜೊತೆಗೆ ಕರುವನ್ನು ಎಳೆದು ತಂದು ನೊರೆ ಹಾಲು ಕರೆದು ಕೊಡುತ್ತಿದ್ದ ಗೋಪಾಲನಂತೂ ಇಲ್ಲವೇ ಇಲ್ಲ. ತಳ್ಳುವ ಗಾಡಿಯ ಮೇಲೆ ರಂಗೋಲಿ, ಹುಣಸೆ ಹಣ್ಣು, ನಿಂಬೆಕಾಯಿ, ಮಾರಲು ಬರುತ್ತಿದ್ದ ಸಣ್ಣ-ಪುಟ್ಟ ವ್ಯಾಪಾರಿಗಳಂತೂ ಕಾಣುವುದೇ ಇಲ್ಲ. ಕಾಲ ಬದಲಾಗಿದೆ ಸ್ವಾಮಿ. ಈಗ ತರಕಾರಿ, ರಂಗೋಲಿ ಮಾರುವವರೆಲ್ಲ, ಓಪನ್ ಆಟೋಗಳಲ್ಲಿ, ಮೈಕ್ ಹಿಡಿದು ಜೋರಾಗಿ ಅನೌನ್ಸ್ ಮಾಡುತ್ತಾ, ರಸ್ತೆಯಲ್ಲಿ ಗದ್ದಲ ಎಬ್ಬಿಸುತ್ತ ಮಾರಾಟ ಮಾಡಲು ಬರುತ್ತಾರೆ. ಮೊದಲೆಲ್ಲ ಸೈಕಲ್ ಮೇಲೆ ಬಂದು ಹಾಲು ಹಾಕುತ್ತಿದ್ದ ರಂಗ, ಹೂ ಮಾರುತ್ತಿದ್ದ ಸೀನ, ಪೇಪರ್ ಹಾಕುತ್ತಿದ್ದ ರಮೇಶ, ಈಗ ಕೈನೆಟಿಕ್ ಹೋಂಡಾದ ಮೇಲೆಯೇ ದರುಶನ ನೀಡುವುದು ಸಂತೋಷದ ವಿಷಯ. ಇನ್ನು ಮೊಬೈಲ್ ವಿಷಯ ಬೇಡ ಬಿಡಿ. ಸಾಸಿವೆ ಇಲ್ಲದ ಮನೆ ಇಲ್ಲದಂತೆ, ಮೊಬೈಲ್ ಇಲ್ಲದ ಮನುಷ್ಯ ಕಾಣುವುದೇ ಅಪರೂಪ. ಮತ್ತೊಂದು ಹೊಸ ಬದಲಾವಣೆ ಎಂದರೆ ಎಲ್ಲೆಡೆ ಲಭ್ಯವಿರುವ ಒಲೋ ಆಟೋ ಮತ್ತು ಕ್ಯಾಬ್ ಸರ್ವಿಸ್. ಜನಸಾಮಾನ್ಯರೂ ತಮ್ಮ ಸೆಲ್ ಫೋನಿನಲ್ಲಿ ಆಪ್ ಡೌನ್ಲೋಡ್ ಮಾಡಿಕೊಂಡು ಬೇಕೆಂದಾಗ ಪಡೆಯಬಹುದಾದ ಆಟೋ ಅಥವಾ ಕ್ಯಾಬ್ ಸೇವೆ. ಈ ಸೇವೆ ಭಾರತದ ಸುಮಾರು ನೂರಾಹತ್ತು ನಗರಗಳಲ್ಲಿ ಲಭ್ಯ. ಮತ್ತೊಂದು ಆಶ್ಚರ್ಯಕರ ಬದಲಾವಣೆ, ಅರವತ್ತಾರರ ನನ್ನಮ್ಮ ಕ್ರೆಡಿಟ್ ಕಾರ್ಡ್ ಬಳಸುವುದು!

**ಋತು ಚಕ್ರ ತಿರುಗುವುದು, ಕಾಲನೆದೆ ಮರುಗುವುದು**
**ಮೃತನ ಮೈಯಿಂದ ಹೊಸ ಹುಲ್ಲು ಮೊಳೆಯುವುದು**

**ಕ್ಷಿತಿ ಗರ್ಭ ಧರಿಸುವಳು, ಮತ್ತುದಿಸುವುದು ಜೀವ**
**ಸತತ ಕೃಷಿಯೋ ಪ್ರಕೃತಿ ಮಂಕುತಿಮ್ಮ.**

– ಡಿ.ವಿ.ಜಿ.

ಡಿ.ವಿ.ಜಿ.ಯವರು ಹೇಳುವಂತೆ ನಿತ್ಯ ಪರಿವರ್ತನೆಯ ಚೈತನ್ಯ ನೃತ್ಯ ಜಗದಲಿ ಸತ್ಯ. ಹೌದು ಸ್ನೇಹಿತರೆ, ಈ ಬಾರಿ ಭಾರತ ಪ್ರವಾಸದಲ್ಲಿ, ಮೈಸೂರಿನಲ್ಲಿ ನಾ ಕಂಡ ಕೆಲವು ಬದಲಾವಣೆಗಳಿವು. ಇದು 'ಡಿಜಿಟಲ್ ಇಂಡಿಯ', ತಾಂತ್ರಿಕವಾಗಿ ಮುಂದುವರಿದ ಭಾರತದ ಒಂದು ತುಣಕು.

ಭಾರತೀಯ ನಾಗರಿಕರ ಡಿಜಿಟಲ್ ಸಬಲೀಕರಣ ಹಾಗೂ ಮಾಹಿತಿ ಡಿಜಿಟಲೀಕರಣ. ಪ್ರಗತಿಯ ಪಥದತ್ತ ಸರಿಯುತ್ತಿರುವ ಭಾರತದ ಒಂದು ಮುಖ. ಮತ್ತೊಂದು ಮುಖ ಕಾಣಬೇಕೆಂದರೆ ಭಾರತದ ನಿಜ ದರ್ಶನವಾಗಬೇಕಾದರೆ, ದೇಶದ ಬೆನ್ನೆಲುಬಾದ ಹಳ್ಳಿಗಳನ್ನು ನೋಡಬೇಕು. ಕೃಷಿ ಪ್ರಧಾನ ದೇಶದ ಕೃಷಿಕ ಮಕ್ಕಳನ್ನು ಕಾಣಬೇಕು. ರೈಲ್ವೆ ಸ್ಟೇಷನ್ನಿನಲ್ಲಿ ರೈಲಿಗಾಗಿ ಕಾಯುತ್ತ, ಹತ್ತಿರದ ಟಾಯ್ಲೆಟ್ಟಿನಿಂದ ತೂರಿ ಬರುವ ದುರ್ವಾಸನೆ ಸವಿಯಬೇಕು. ಸೆಕೆಂಡ್ ಕ್ಲಾಸ್ ಕೋಚಿನಲ್ಲಿ, ಶ್ರೀಸಾಮಾನ್ಯ ಪ್ರಯಾಣಿಸುವ ರೈಲ್ಲಿನಲ್ಲಿ ಪ್ರಯಾಣಿಸಬೇಕು. ಅದರಲ್ಲಿ ಕಾಫಿ, ಟೀ, ಬಜ್ಜಿ, ಬೋಂಡ ಮಾರುತ್ತ, ಹೊಟ್ಟೆ ಹೊರೆದು ಜೀವನ ಸಾಗಿಸುವ ಮುದುಕರನ್ನು, ಮಕ್ಕಳನ್ನು, ಹೆಂಗಸರನ್ನು ಕಾಣಬೇಕು. ಕಸ ತುಂಬಿ, ಗಬ್ಬು ನಾರುವ ಸಣ್ಣ ಪುಟ್ಟ ರಸ್ತೆಗಳಲ್ಲಿ ನುಸುಳಬೇಕು. ಕೆ.ಎಸ್.ಆರ್.ಟಿ.ಸಿ. (KSRTC) ಬಸ್ಸಿನಲ್ಲಿ, ತಮ್ಮ ಮನೆಯ ಕಸದ ಡಬ್ಬ ಎಂಬಂತೆ, ಕಡ್ಲೆಕಾಯಿ ಸಿಪ್ಪೆ, ಕಿತ್ತಳೆ ಸಿಪ್ಪೆಯನ್ನು ನೆಲದ ಮೇಲೆ ಇವತ್ತಿಗೂ ಚೆಲ್ಲುವ ಪ್ರಯಾಣಿಕ ಬಂಧುಗಳೊಡನೆ ಸಂಚರಿಸಬೇಕು. ರೈಲ್ವೆ ಸ್ಟೇಷನ್, ಬಸ್ ಸ್ಟಾಂಡ್'ನ ಧೂಳು ನೆಲ, ನೊಣ, ಸೊಳ್ಳೆಯ ಸಂಗೀತ, ಅಲ್ಲೇ ಕಸದ ನಡುವೆ ಕೂತು ಮೊಸರನ್ನ ತಿನ್ನುವ ಮಕ್ಕಳನ್ನು, ಮಹಿಳೆಯರು – ಇವೆಲ್ಲವನ್ನು ಕಾಣಬೇಕು 'ಡಿಜಿಟಲ್ ಇಂಡಿಯ'ದ ಭ್ರಮೆ ಇಳಿಯಲು.

ಒಂದೆಡೆ ತಾಂತ್ರಿಕವಾಗಿ, ವೈಜ್ಞಾನಿಕವಾಗಿ ತ್ವರಿತಗತಿಯಲ್ಲಿ ಮುನ್ನುಗ್ಗುತ್ತಿರುವ ಭಾರತ. ಮತ್ತೊಂದೆಡೆ ಮಿತಿಮೀರಿ ಬೆಳೆಯುತ್ತಿರುವ ಜನಸಂಖ್ಯೆ, ಬಡತನ, ಭ್ರಷ್ಟಾಚಾರ, ನೈರ್ಮಲ್ಯ ಸಮಸ್ಯೆ, ನೀರಿನ ಕೊರತೆ. ನಾಗರಿಕರಿಗೆ ಪ್ರಾಥಮಿಕ ಶಿಕ್ಷಣ, ಆರೋಗ್ಯ, ಸ್ವಚ್ಛ ಪರಿಸರ ಒದಗಿಸಲು ಹೆಣಗಾಡುತ್ತಿರುವ ಸರ್ಕಾರ. ಎಲ್ಲಕ್ಕಿಂತ ಮಿಗಿಲಾಗಿ, ಬೆಂಗಳೂರು–ಚೆನ್ನೈ ನಡುವಿನ ಒಂದು ಪುಟ್ಟ ಹಳ್ಳಿಯಲ್ಲಿ, ಬಯಲಿನಲ್ಲಿ ಶೌಚ ಮಾಡುತ್ತ, ಮೊಬೈಲ್ ಕೈಯಲ್ಲಿ ಹಿಡಿದ ಎಂಟು–ಹತ್ತು ವರ್ಷದ ಹುಡುಗನ ಚಿತ್ರ 'ಡಿಜಿಟಲ್ ಇಂಡಿಯ'ದ ಸತ್ಯ ಬಯಲಿಗೆಳೆದಿತ್ತು. ೨೦೧೪ರಲ್ಲಿ ಭಾರತ ಕೈಗೊಂಡ 'ಸ್ವಚ್ಛ ಭಾರತ ಅಭಿಯಾನ'ದತ್ತ ಮತ್ತೆ ಗಮನ ಸೆಳೆದಿತ್ತು. ಪುಣ್ಯಕ್ಕೆ ಬಯಲಿನಲ್ಲಿ ಶೌಚ ಮಾಡುತ್ತ, ಕೈಯಲ್ಲಿ ಚಕ್ಕುಲಿ ಕಡಿಯುತ್ತಿರುವ ಹುಡುಗರನ್ನು ನೋಡಲಿಲ್ಲ!

ಭಾರತದ ಪ್ರಧಾನಮಂತ್ರಿಗಳಾದ ಶ್ರೀ ನರೇಂದ್ರ ಮೋದಿಯವರು ೨೦೧೪, ಅಕ್ಟೋಬರ್ ೨ರಂದು ಚಾಲನೆ ನೀಡಿದ 'ಸ್ವಚ್ಛ ಭಾರತ ಅಭಿಯಾನ' ಮೋದಿಯವರ ನಾಯಕತ್ವದಲ್ಲಿ, ಭಾರತವನ್ನು ಅಭಿವೃದ್ಧಿಯ ಪಥದತ್ತ ಒಯ್ಯುವ ನಿಟ್ಟಿನಲ್ಲಿ ಕೈಗೊಂಡ ಪ್ರಮುಖ ಯೋಜನೆಗಳಲ್ಲಿ ಮುಖ್ಯವಾದುದು. ಈ ಯೋಜನೆ ೨೦೧೯ನೆ ಇಸವಿಯ ಹೊತ್ತಿಗೆ ಭಾರತವನ್ನು ಸ್ವಚ್ಛ ಭಾರತವನ್ನಾಗಿಸುವ ಗುರಿ ಹೊಂದಿದೆ. ಮಹಾತ್ಮ ಗಾಂಧಿಯವರ ಕನಸನ್ನು ನನಸಾಗಿಸುವ ಆಶಾಭಾವನೆಯೊಂದಿಗೆ ಸುಮಾರು ೬೨ ಕೋಟಿ ರೂಪಾಯಿಯ ಬಜೆಟ್ಟಿನಡಿ, ಭಾರತದ ಎಲ್ಲ ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿ ನೈರ್ಮಲ್ಯ ಕಾರ್ಯಕ್ರಮಗಳನ್ನು, ಜನ ಜಾಗೃತಿ, ಕೊಳಗೇರಿ ನಿರ್ಮೂಲನೆ ಮುಂತಾದ ಪ್ರಗತಿಪರ ಚಟುವಟಿಕೆಗಳನ್ನು ಹಮ್ಮಿಕೊಂಡು, ಭಾರತವನ್ನ 'ಬಯಲು ಶೌಚ, ಬಯಲು ಬಹಿರ್ದೆಸೆ ಮುಕ್ತ' ರಾಷ್ಟ್ರವನ್ನಾಗಿಸುವ ಧ್ಯೇಯದೊಂದಿಗೆ ಈ ಅಭಿಯಾನ ಪ್ರಾರಂಭವಾಯಿತು. ಸ್ವತಃ ಪ್ರಧಾನ ಮಂತ್ರಿಗಳ ನೇತೃತ್ವದಲ್ಲಿ, ಗಣ್ಯಾತಿಗಣ್ಯರು ಈ ಚಳುವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಸ್ವಚ್ಛತಾ ಅಭಿಯಾನವನ್ನು ಸಾಮೂಹಿಕ ಚಳುವಳಿಯನ್ನಾಗಿಸಿದರು. ಬಹುಶಃ ಸ್ವಾತಂತ್ರ್ಯ ನಂತರ ನಡೆದ ಚಳುವಳಿಗಳಲ್ಲಿ ಇದು ಅತ್ಯಂತ ದೊಡ್ಡ ಪ್ರಮಾಣದ್ದು ಎಂದರೆ ತಪ್ಪಾಗಲಾರದು. ಅದಮ್ಯ ಉತ್ಸಾಹ, ಹುರುಪಿನಿಂದ ಆರಂಭವಾದ ಚಳುವಳಿ, ಭಾರತ ಇನ್ನು ಕೆಲವೇ ದಿನಗಳಲ್ಲಿ ಸ್ವಚ್ಛತೆಯನ್ನ ಸಾಧಿಸಿಬಿಡುತ್ತದೆಂಬ ಆಶಾಕಿರಣವನ್ನ ಮನದಲ್ಲಿ ಮೂಡಿಸಿತ್ತು. ಇಡಿ ವಿಶ್ವವೇ ಭಾರತದತ್ತ ಮುಖ ಹೊರಳಿಸಿತ್ತು.

ಆದರೆ ದಿನ ಕಳೆದಂತೆ, ವರ್ಷಗಳುರುಳಿದಂತೆ ಜನರ ಉತ್ಸಾಹ ಕುಂದಿದಂತೆ ತೋರುತ್ತಿದೆ. ಮೊದಲಿದ್ದ ಹುರುಪು ನಂದಿದೆ. ಹಳ್ಳಿಗಳಷ್ಟೇ ಅಲ್ಲದೆ ಬೆಂಗಳೂರು, ಚೆನ್ನೈ, ಕೊಲ್ಕತ್ತಾದಂತಹ ನಗರ ಪ್ರದೇಶಗಳಲ್ಲಿ ಸ್ವಚ್ಛತೆ ಎಂಬುದು ಇನ್ನೂ ದೂರದ ಕನಸಿನಂತೆ ತೋರುತ್ತಿದೆ. 'ಸ್ವಚ್ಛ ಭಾರತ ಅಭಿಯಾನ'ದಡಿಯಲ್ಲಿ ಅನೇಕ ಕಡೆ ಶೌಚಾಲಯಗಳನ್ನು ನಿರ್ಮಿಸಿದ್ದರೂ ಎಷ್ಟೋ ಕಡೆ ಸಾರ್ವಜನಿಕರು ಅದನ್ನು ಬಳಸುತ್ತಿಲ್ಲ. ಕಾರಣ ನೀರಿಲ್ಲ. ಇನ್ನು ಕೆಲವು ಕಡೆ, ಅದರಲ್ಲೂ ಹಳ್ಳಿಗಳಲ್ಲಿ ಶೌಚಾಲಯಗಳನ್ನು ಕಟ್ಟಿಗೆ ಶೇಖರಿಸಿಡಲು, ಸಾಕುಪ್ರಾಣಿಗಳನ್ನ ಕಟ್ಟಲು ಬಳಸಲಾಗುತ್ತಿದೆ. ಮತ್ತೆ ಕೆಲವೆಡೆ ಅಂಗಡಿಗಳಾಗಿಯೂ, ಉಗ್ರಾಣಗಳಾಗಿಯೂ ಬಳಸಲಾಗುತ್ತಿದೆ. ಎಂತಹ ವಿಪರ್ಯಾಸ. ಈಗ 'ಶೌಚಾಲಯಗಳನ್ನು ಬಳಸಿ' ಎಂಬ ಅಭಿಯಾನ ಬೇಕಿದೆ. ಮೈಸೂರು ಜಿಲ್ಲಾ ಪಂಚಾಯತ್, ಈಗ 'ಶೌಚಾಲಯ ಬಳಸಿ' ಆಂದೋಲನವನ್ನು ಜಾರಿಗೆ ತಂದಿದೆ. ಉತ್ತರ ಭಾರತದ ಅನೇಕ ಹಳ್ಳಿಗಳಲ್ಲಿ ಮನೆಯ ಒಳಗೆ ಶೌಚಾಲಯ ನಿರ್ಮಿಸುವುದು ನಮ್ಮ ಸನಾತನ ಧರ್ಮಕ್ಕೆ ನಾವು ಎಸಗುವ ಅಪಚಾರ ಎಂಬ ಭಾವನೆ ಇವತ್ತಿಗೂ ನಮ್ಮ ಜನರಲ್ಲಿದೆ.

ಭಾರತ ಬದಲಾಗುತ್ತಿದೆ. ಪ್ರಗತಿಯತ್ತ ಹೆಜ್ಜೆ ಹಾಕುತ್ತಿದೆ. ದೇಶದೆಲ್ಲೆಡೆ ಡಿಜಿಟಲ್ ಕ್ರಾಂತಿಯಾಗುತ್ತಿದೆ. ಹಳ್ಳಿ, ಪಟ್ಟಣಗಳ ಸರ್ಕಾರಿ ಕಛೇರಿಗಳು ಗಣಕೀಕೃತವಾಗುತ್ತಿವೆ. ಸರ್ಕಾರಿ ಶಾಲೆಗಳಲ್ಲಿ ಕಂಪ್ಯೂಟರ್ ಕಲಿಸುತ್ತಿದ್ದಾರೆ. ದೇಶ ಬದಲಾಗುತ್ತಿದೆ. ನಿಜ. ಆದರೆ

ಭಾರತ ಸಂಪೂರ್ಣವಾಗಿ ರೂಪಾಂತರಗೊಂಡಿದೆ ಎಂದು ಭಾವಿಸಿದರೆ ಅದು ಸತ್ಯಕ್ಕೆ ದೂರದ ಮಾತು. ಅದರಲ್ಲೂ ಅನಿವಾಸಿ ಭಾರತೀಯರಾದ ನಾವು ನಮ್ಮ ಕಂಪ್ಯೂಟರ್‌ನ ಮುಂದೆ, ಎ.ಸಿ. ಕೋಣೆಯಲ್ಲಿ ಕೂತು ಅಥವಾ ಫೈವ್ ಸೀಟರ್ ಸೋಫಾ ಮೇಲೆ ಕೂತು, ನಮ್ಮ ಐಫೋನ್ ನೋಡಿ ನನ್ನ ದೇಶ ಬದಲಾಗಿದೆ, ದೇಶದೆಲ್ಲೆಡೆ ಡಿಜಿಟಲ್ ಕ್ರಾಂತಿಯಾಗಿದೆ ಎಂದು ಬೀಗಿದರೆ ಅದು ಬಾವಿಯೊಳಗಿನ ಕಪ್ಪೆಗೆ ನಾವು ನೀಡುವ ಸ್ಪರ್ಧೆಗೆ ಸಮ. ಇವತ್ತಿಗೂ ಭಾರತದ ಎಷ್ಟೋ ಹಳ್ಳಿಗಳಲ್ಲಿ ಕುಡಿಯುವ ನೀರಿನ ಸಮಸ್ಯೆಯಿದೆ, ಪ್ರಾಥಮಿಕ ಆರೋಗ್ಯ ತಪಾಸಣಾ ಕೇಂದ್ರಗಳ ಕೊರತೆಯಿದೆ. ಪ್ರಾಥಮಿಕ ಶಿಕ್ಷಣ ಎಷ್ಟೋ ಜನರಿಗೆ ಇಂದಿಗೂ ಕನಸಾಗಿದೆ.

ಬದಲಾವಣೆ ಜಗದ ನಿಯಮ. ಬೆಳವಣಿಗೆ ಮನುಕುಲದ ಧರ್ಮ. ಪ್ರಗತಿ ಸಮಾಜದ ಮರ್ಮ. ನಿತ್ಯ ಪರಿವರ್ತನೆ ಪ್ರಕೃತಿಯ ಸಹಜ ಆಯಾಮ. ನನ್ನ ದೇಶ ಪ್ರಗತಿಯ ಪಥದಲ್ಲಿದೆ. ಭಾರತದ ಜನಜೀವನದಲ್ಲಿ ಸಾಮಾಜಿಕ, ಆರ್ಥಿಕ ಬದಲಾವಣೆ ಕಂಡುಬರುತ್ತಿದೆ. ಹೆಮ್ಮೆಯ ವಿಷಯ. ಮುಂದುವರೆದ ದೇಶಗಳ ಸಾಲಿಗೆ ಕಾಲಿಕ್ಕಲು ಭಾರತ ಹವಣಿಸುತ್ತಿದೆ. ಆದರೆ ಅದಕ್ಕಾಗಿ ಅದು ಸಾಧಿಸಬೇಕಾದ, ಕೆಲಸಗಳು ನೂರಾರು. ಕ್ರಮಿಸಬೇಕಾದ ಮೈಲಿ ಸಾವಿರಾರು. ಬರೀ ಡಿಜಿಟಲ್ ಕ್ರಾಂತಿ ಸಂಪೂರ್ಣ ಕ್ರಾಂತಿಯಲ್ಲ. ಭಾರತ ಸಾಧಿಸಬೇಕಾದ, ಅದರಲ್ಲೂ ಸ್ವಚ್ಛತೆಯ ವಿಷಯದಲ್ಲಿ ಗುರಿ ತಲುಪಲು ಸವೆಸಬೇಕಾದ ದಾರಿ, ಯೋಜನಗಳಷ್ಟು, ಜನರ ಮನೋಭಾವ ಬದಲಾಗಬೇಕಾಗಿದೆ. ಮುಖ್ಯವಾಗಿ ಜನರಲ್ಲಿ ಸ್ವಚ್ಛತೆಯ ಅರಿವು ಮೂಡಬೇಕು. ಸರ್ಕಾರ ಎಷ್ಟೇ ಯೋಜನೆಗಳನ್ನು ಜಾರಿಗೆ ತಂದರೂ ಜನ ಅದರ ಉಪಯೋಗ ಪಡೆಯದಿದ್ದಲ್ಲಿ, ಅದರ ಮಹತ್ವ ಅರಿಯದಿದ್ದಲ್ಲಿ ಯಾವ ಯೋಜನೆಯೂ ಪ್ರಯೋಜನಕ್ಕೆ ಬಾರದು. ಜನ ತ್ವರಿತವಾಗಿ ಜಾಗೃತರಾಗಬೇಕಿದೆ. ಆದರೆ ಅದು ಸುಲಭದ ಮಾತಲ್ಲ. ಸುಮಾರು ೧.೩೫ ಬಿಲಿಯನ್ ಜನಸಂಖ್ಯೆಯಿರುವ ಭಾರತದಂತಹ ದೊಡ್ಡ ದೇಶ ಸಂಪೂರ್ಣವಾಗಿ ಪರಿವರ್ತಿತವಾಗಲು ಸಮಯ ಬೇಕು. ಅದರಲ್ಲೂ, ಒಂದು ಹಂತದಿಂದ ಮತ್ತೊಂದು ಹಂತಕ್ಕೆ ಬದಲಾಗುತ್ತಿರುವಾಗ ಒಂದೇ ರಾತ್ರಿಯಲ್ಲಿ ದೇಶ ರೂಪಾಂತರಗೊಳ್ಳಲು ಸಾಧ್ಯವಿಲ್ಲ. ಮೋದಿಯವರಂತಹ ಸಮರ್ಥ, ನಿಷ್ಠಾವಂತ ನಾಯಕರು ಹುಟ್ಟಿ ಬರಬೇಕು. 'ಸ್ವಚ್ಛ ಭಾರತ ಅಭಿಯಾನ'ದಂತಹ ಅನೇಕ ಚಳುವಳಿಗಳು, ಮೋದಿಯವರು, ಭಾರತ ಕೂಡ ಬದಲಾಗಬಲ್ಲದೆಂಬ ವಿಚಾರವನ್ನು, ಬೀಜವನ್ನು ಜನರ ಮನಸ್ಸಿನಲ್ಲಿ ಬಿತ್ತಿರುವುದಕ್ಕೆ ನಿದರ್ಶನ. ಈ ಬೀಜಗಳೆಲ್ಲ ಮೊಳಕೆಯೊಡೆದು ಮರವಾಗಿ ಬೆಳೆಯಬೇಕು. ಭಾರತದಲ್ಲಿ ಸಂಪೂರ್ಣ ಕ್ರಾಂತಿಯಾಗಲು. ಬದಲಾಗುತ್ತಿರುವ ನನ್ನ ದೇಶಕ್ಕೆ ಬೇಕು ಕೇವಲ ಒಬ್ಬ ಮೋದಿಯಲ್ಲ, ನೂರಾರು ಸಾವಿರಾರು, ಮೋದಿಯವರಂತಹ ನಿಷ್ಠಾವಂತ ನಾಯಕರು.

*

# ಜನಪದ ಕಲೆಯ ಮೇಲೆ ಸುಧಾರಣೆಯ ಪರಿಣಾಮ

■ ಆಹಿತಾನಲ, Arcadia, CA.

ಗೊಬ್ಬಾರ ಗುಂಡಿಯಲ್ಲಿ
ಕೆಂಬಾರಿ ಸೊಪ್ಪು ಹುಟ್ಟಿ
ಕೈಲೂತಿ ತಿಂದು ಕರು ತಿಂದ
ಕೋಲೇ ಕೋಲು ಕೋಲೆನ್ನಿರೇ
ಲೂಗಿನಾ ಕೋಲು ಕೋಲೆನ್ನಿರೇ

ಕೈಲೂತಿ ತಿಂದು ಕರು ತಿಂದು ನೊರಿ ಹಾಲು
ಕೌಳಿಗಿ ತುಂಬಿ ಚೆಂಬ್ ತುಂಬಿ
ಕೋಲೇ ಕೋಲು ಕೋಲೆನ್ನಿರೇ
ಲೂಗಿನಾ ಕೋಲು ಕೋಲೆನ್ನಿರೇ

ನಮ್ಮೂರು, ಕರ್ನಾಟಕದ ಕರಾವಳಿಯ ಕೋಟದ ಸುತ್ತುಮುತ್ತಲಿನ ಹಳ್ಳಿಯಲ್ಲಿ, "ಕೋಲು ಹೊಯ್ಯು"ವ ಗ್ರಾಮ್ಯ ರೂಪ ತುಂಬಿದ ಜನಪದ ಹಾಡು ಇದು. ಇಲ್ಲಿ "ಕೆಂಬಾರಿ ಸೊಪ್ಪು" ಎಂದರೆ, ಕೆಂಪು ಹರಿವೆ ಸೊಪ್ಪು. ಹೂವಿನಕೋಲು ಹೂಗಿನಕೋಲಾಗಿ, ಇನ್ನಷ್ಟು ಗ್ರಾಮ್ಯರೂಪ ತಾಳಿ, "ಲೂಗಿನಾಕೋಲಾ"ಗಿದೆ. "ಕೈಲೂತಿ" ಒಂದು ಹಸುವಿನ ಹೆಸರು. ಇದರ ಒಟ್ಟಾರ್ಥ – ಗೊಬ್ಬರ ಗುಂಡಿಯಲ್ಲಿ ಬೆಳೆದ ಕೆಂಪು ಹರಿವೆ ಸೊಪ್ಪನ್ನು ತಿಂದು, ಕೌಳಿಗೆಯನ್ನೂ (ಒಂದು ಚಿಕ್ಕ ಪಾತ್ರೆ), ಚೆಂಬನ್ನೂ ತುಂಬಿಸುವಷ್ಟು ನೊರೆಹಾಲನ್ನು ಕೈಲೂತಿ ಕೊಟ್ಟಿತು ಎಂದು. ಬಾಲ್ಯದಲ್ಲಿ ಇಂಥ ಹಾಡನ್ನು ಕೋಲು ಬಡಿಯುತ್ತ ಹಾಡುವ ಹೆಂಗಳೆಯರಿಂದ ಬಹಳಷ್ಟು ಕೇಳಿದ್ದೆ. ಇತ್ತೀಚೆಗೆ ಭಾರತಕ್ಕೆ ಭೇಟಿಕೊಟ್ಟಾಗ, ಇಂಥ ಜನಪದ ಹಾಡಿನ ಗ್ರಾಮೀಣ ಸಾಹಿತಿಗಳ ನೆನಪಾಗಿ, ಅಂಥ ಹಾಡುಗಳನ್ನು ಕೇಳುವ ಹಂಬಲ ಹುಟ್ಟಿ, ಅವರಿಗಾಗಿ ಬಹಳಷ್ಟು ಹುಡುಕಾಡಿದೆ. ಆದರೆ, ನನ್ನ ಪ್ರಯತ್ನಗಳೆಲ್ಲಾ ಮಣ್ಣುಪಾಲಾಗಿದ್ದುವು. ಕಾರಣವಿಷ್ಟೆ: ಹಳೆಯ ತಲೆಮಾರಿನ ಇಂಥ ಕಲಾವಿದೆಯರು

ತೀರಿಕೊಂಡ ಮೇಲೆ, ಮುಂದಿನ ತಲೆಮಾರಿನವರು ಈ ಕಲೆಯನ್ನು (ಅಸಡ್ಡೆಯಿಂದ?) ಮುಂದುವರಿಸಿಕೊಂಡು ಬಾರದಿರುವುದು. ಅಂದರೆ, ಒಂದು ಜನಪದ ಕಲೆಯೇ ಅಳಿಸಿ ಹೋಯ್ತೆಂಬ ವಿಷಾದ. ಇದೊಂದು ದುರಂತವೆಂದೇ ಹೇಳಬಹುದು. "ಜಾಗತೀಕರಣ" ತಂದ ಬದಲಾವಣೆಯ ನೆಪದಲ್ಲಿ ಒಂದು ಜನಪದ ಕಲೆಯ "ಕೊಲೆ"ಯಾಗಿದೆ ಎಂದು ಹೇಳಬಹುದು. ಮೇಲಿನ ಹಾಡು, ಒಂದು ಜನಪದ ಕಥನದ ತುಣುಕಷ್ಟೆ! ಹಿಂದೆ ಈ ಹಾಡಿನ ಪೂರ್ತಿ ಪಾಠವನ್ನು ಕೇಳಿದ್ದರೂ, ಅವೆಲ್ಲ ನನಗೀಗ ಜ್ಞಾಪಕವಿಲ್ಲ. ಇದಕ್ಕೆ ಕಾರಣ, ಬಹಳ ವರ್ಷ ನನ್ನ ಅಮೆರಿಕದಲ್ಲಿನ ವಾಸ, ನನ್ನಲ್ಲಿ ತಂದ ಬದಲಾವಣೆ!

ಜಾಗತೀಕರಣ, ಸಮಾಜದಲ್ಲಿ ತಂದ ಅನೇಕ ಬದಲಾವಣೆಗಳಲ್ಲಿ ಮೇಲಿನದು ಒಂದು. ನಮ್ಮೂರಲ್ಲಿ ನಡೆದ ಇನ್ನೂ ಕೆಲವು ಬದಲಾವಣೆಗಳನ್ನು ನಾನು ನಿಮ್ಮೊಡನೆ ಹಂಚಿಕೊಳ್ಳ ಬಯಸುತ್ತೇನೆ:

ನನ್ನ ಹಿರಿಯರು ಬೇಸಾಯಗಾರರು. ಭತ್ತ ಬೆಳೆಸಿ, ಬಂದ ತೆನೆ ಪರಿಪಕ್ವವಾದಾಗ, ಪೈರನ್ನು ಮನೆಗೆ ತಂದು, ಹುಲ್ಲಿನಿಂದ ಭತ್ತವನ್ನು ಬೇರ್ಪಡಿಸಲು ತೆನೆ ತುಂಬಿದ ಹುಲ್ಲಿನ ಕಟ್ಟನ್ನು "ಹೊಡೆಮಂಚ"ದ ಮೇಲೆ ಬಡಿಯುತ್ತಾರೆ. ಬೇರ್ಪಡಿಸಿದ ಭತ್ತವನ್ನು ಸ್ವಲ್ಪ ಕಾಲ ನಾರುಚೀಲಗಳಲ್ಲಿ ಶೇಖರಿಸುತ್ತಾರೆ. ಆಮೇಲೊಂದು ಶುಭ ಮುಹೂರ್ತದಲ್ಲಿ ಹುಲ್ಲಿನಿಂದ ನಿರ್ಮಿಸಿದ ಒಂದು ತಾತ್ಕಾಲಿಕ ಕಣಜದಲ್ಲಿ ಶೇಖರಿಸಿಡುತ್ತಾರೆ. ಈ ಕಣಜವನ್ನು "ತಿರಿ" ಎಂದು ನಮ್ಮೂರಲ್ಲಿ ಕರೆಯುತ್ತಾರೆ. ನನ್ನ ಬಾಲ್ಯದಲ್ಲಿ ನಾ ಕಂಡ ನಮ್ಮ ಮನೆಯ ತಿರಿ, ಹೇರಳ ಪ್ರಮಾಣದಲ್ಲಿ ಭತ್ತವನ್ನು ಶೇಖರಿಸುವಷ್ಟು ಗಾತ್ರದಲ್ಲಿ ದೊಡ್ಡದಾಗಿತ್ತು. ಇಂಥ ತಿರಿಯನ್ನು ನಿರ್ಮಿಸುವುದೊಂದು ಅನನ್ಯ ಜಾನಪದ ಕಲೆ! ದೊಡ್ಡ ಗಾತ್ರದ ಬುಟ್ಟಿಯೊಂದನ್ನು ನಿರ್ಮಿಸಿ, ಅದರೊಳಗೆ ಭತ್ತ ತುಂಬಿಸುತ್ತ ಬರುತ್ತಾರೆ. ಗಾತ್ರ ಮೇಲಕ್ಕೇರಿದಂತೆ ಇನ್ನಷ್ಟು ಹುಲ್ಲನ್ನು ಸೇರಿಸಿ, ಮತ್ತಷ್ಟು ಭತ್ತ ತುಂಬಿಸುತ್ತಾರೆ. ಭದ್ರತೆ ಕೊಡಲು, ಅದರ ಸುತ್ತ ತೆಂಗಿನ ನಾರು ಹಾಗೂ ಹುಲ್ಲಿಂದ ರಚಿಸಿದ ದಪ್ಪದ ದಾರಗಳನ್ನು ಒಂದಾದ ಮೇಲೆ ಇನ್ನೊಂದನ್ನು ಸುತ್ತುತ್ತ ಬರುತ್ತಾರೆ. ಎಲ್ಲ ಮುಗಿದ ಮೇಲೆ, ದಪ್ಪದ ಹುಲ್ಲಿನ ಮಾಡೊಂದರ ದೊಡ್ಡ ಕ್ಯಾಪ್ ತಲೆಯ ಮೇಲೇರುತ್ತದೆ. ಕೊನೆಯಲ್ಲಿ, ಹುಲ್ಲಿನಿಂದ ಮಾಡಿದ ದಪ್ಪದ "ಚಂಡೆ"ಯೊಂದನ್ನು ಗೋಳಾಕಾರದಲ್ಲಿ ತಿರಿಯಡಿಯಲ್ಲಿ ಸುತ್ತ ಹರಡಿ, ಅದರ ಮೇಲೆ ದಪ್ಪವಾಗಿ ಮಣ್ಣು ಬಳಿಯುತ್ತಾರೆ. ಸಂಪೂರ್ಣವಾದಾಗ ಅದೊಂದು ದುಂಡು ಗುಡಿಸಲಾಕಾರವನ್ನು ತಾಳುತ್ತದೆ.

ನಮ್ಮಲ್ಲಿ ಹೆಚ್ಚಾಗಿ ಕುಸುಬಲಕ್ಕಿಯ ಬಳಕೆ. ಸುಮಾರು ಡಿಸೆಂಬರ್-ಜನವರಿ ಸಮಯ, ತಿರಿಯಿಂದ ಅಷ್ಟಷ್ಟೇ ಭತ್ತವನ್ನು ಬೇಯಿಸಿ, ಸಾಕಷ್ಟು ಒಣಗಿಸಿ, ಅದನ್ನು ಕುಟ್ಟಿ (ನಮ್ಮಲ್ಲಿ ಭತ್ತ ಕುಟ್ಟುವುದನ್ನು ಭತ್ತ ತೊಳಿಯುವುದು ಎಂದು ಹೇಳುತ್ತಾರೆ), ಅಕ್ಕಿ ತಯಾರಿಸುತ್ತಾರೆ. ನಮ್ಮ ಮನೆಯಲ್ಲಿ ಭತ್ತ ಕುಟ್ಟಲು ಹತ್ತಿಪ್ಪತ್ತು ಒರಳುಗಳಿದ್ದ "ಒರಳು ಕೊಟ್ಟಿಗೆ" ಎಂಬ ಹೆಸರು ಹೊತ್ತ ಒಂದು ಚಾವಡಿ ಇದ್ದಿತ್ತು. ಅಲ್ಲಿ ಬೆಳಗಿನ ಜಾವ

ಹೆಂಗಳೆಯರು ಬಂದು ಭತ್ತ ಕುಟ್ಟುತ್ತಾರೆ. ಬೇಸರ ಕಳೆಯಲೆಂದು ಜನಪದ ಹಾಡು ಹೇಳಿಕೊಂಡೇ ಭತ್ತ ಕುಟ್ಟುತ್ತಾರೆ:

**ಸುಮ್ಮನೆ ತೊಳಿದರೆ ಗುಮ್ಟಕ್ಕಿ ಹಾಡ್ಹಾಂಗೆ ।**
**ಹಾಡ್ಹೇಳಿ ಭತ್ತು ತೊಳಿದರೆ । ಎಲೆ ನಾರಿ**
**ಬ್ಯಾಸರೊ ಬೆನ್ಹಾಕಿ ಹೋಪುದು ॥**

(ಗುಮ್ಟಕ್ಕಿ = ಗೂಬೆ; ಹೋಪುದು = ಹೋಗುವುದು.)

ಇಂಥ ಹಲವು ಹಾಡುಗಳು ಹಳ್ಳಿಯ ಹೆಂಗಳೆಯರ ಕಂಠದಿಂದ ಸುಶ್ರಾವ್ಯವಾಗಿ ಹರಿದು ಬರುತ್ತಿದ್ದವು. ಈ ಕೆಳಗೆ ಕೆಲವು ಉದಾಹರಣೆಗಳನ್ನು ಕೊಡುತ್ತಿದ್ದೇನೆ:

**ಬಡವರು ಸತ್ತರೆ ಸುಡುಕೂ ಸೌದಿಲ್ಲೆ ।**
**ಒಡ್ಲ ಕಿಚ್ಚೀಲಿ ಹೆಣಬೆಂದೊ । ಬಗವಂತಾ**
**ಬಡವಗೆ ಸಾವು ಇನ್ಯಾಕೆ ? ॥**

(ಸೌದಿಲ್ಲೆ = ಸೌದೆ ಇಲ್ಲ)

**ಏಕಾದಸಿಯೆಂದ್ ಯಾಕ್ಮಾಡೀರೀ ಸ್ವಾಮೀ ।**
**ಮೂರ್ ಹೊತ್ತು ಉಂಬ ದೊಡ್ಡವ್ರಿಗೆ । ನಮ್ಮಂತ**
**ಪಾಪಿಗ್ಳಿಗ್ ಅನುದಿನೊ ಉಪ್ವಾಸೋ ॥**

(ಉಂಬ = ಊಟಮಾಡುವ)

**ಕೂಕಣ್ಣಿ ನಂಟರೆ ಕೂಳಿಗೆ ಅಕ್ಕಿಲ್ಲ ।**
**ನಾ ಕುಟ್ಟೂ ಅಕ್ಕಿ ನಂದಲ್ಲ । ನಂಟರೆ**
**ಹೊತ್ಕಂತೂ ಒಳ್ಗೀ ಹೊಳೆ ದಾಟಿ ॥**

ಇಂಥ ಜನಪದ ತ್ರಿಪದಿಗಳಲ್ಲಿ ಅಡಗಿದ ಬಡತನವನ್ನು ಬಣ್ಣಿಸುವ ನೋವಿನ ಸುಳಿವು ಓದುಗರಿಗಾಗದಿರಲಾರದು. ಹಾಡಿನ ಮೂಲಕ ತಮ್ಮ ಒಡಲಿನ ಸಂಕಟಗಳನ್ನು ಹೊರಗೆಡವಿ, ತಮ್ಮ ಹೃದಯವನ್ನು ಹಗುರ ಮಾಡಿಕೊಳ್ಳುವರೋ ಏನೋ!

ಆದರೂ, ನೋವಿನ ಮಧ್ಯೆ ಹಾಸ್ಯ ತುಂಬಿದ ಹಾಡುಗಳನ್ನೂ ಈ ಮಹಿಳೆಯರ ಬಾಯಿಂದ ಕೇಳಬಹುದು. ಅವರ ಬಡತನದ ಜೀವನದಲ್ಲಿ ಅಲ್ಲಲ್ಲಿ ಹಾಸ್ಯ ಸಂಗತಿಗಳು ಜರುಗುತ್ತಲೇ ಇರುತ್ತವೆ. ಅವರು ಅಂಥ ಸಂಗತಿಗಳನ್ನು ನೆನೆಸಿ, ತಮ್ಮ ಕಷ್ಟಗಳನ್ನು ಮರೆಯುತ್ತಾರೆ:

**ಭತ್ತ ಕುಟ್ಟಿದವ್ಳ್ ಕೈಗೆ ಬಯ್ನಿ ಮುಳ್ಳ್ ಹೆಟ್ಟಿತು ।**
**ಮದ್ದಿಗ್ಹೋದ್ ಅಣ್ಣಯ್ಯ ಬರ್ಲಿಲ್ಲೆ । ಬಸ್ರೂರ್**
**ಸೂಳಿ ಕಂಡಲ್ಲೇ ಒರ್ಗಿದ ॥**

(ಇಲ್ಲಿ ಬಸರೂರು ಎಂಬ ಸ್ಥಳದಲ್ಲಿ ಸೂಳೆಯರ ಸಂಖ್ಯೆ ಹೆಚ್ಚಾಗಿರುವುದು)

ಈ ಕೆಳಗಿನ ತ್ರಿಪದಿಯನ್ನು ಒಬ್ಬ ಮಹಿಳೆ ಭತ್ತ ಕುಟ್ಟುವ ಕೊಟ್ಟಿಗೆಗೆ ದೊಡ್ಡ ಗಾತ್ರದ ಹೆಂಗಸೊಬ್ಬಳು ಭೇಟಿ ಮಾಡಿದಾಗ ಹೇಳಿರಬೇಕು:

**ಅಮ್ಮ ನಿಮ್ಕುಂಡಿ ಮಂದಾರ ಪರ್ವತೋ ।**
**ಅಮ್ಮಾ ಹ್ಯಾಂಗ್ಬಂದ್ರಿ ನೆಡ್ಕಂಡ್ । ಮಣುಬಾರೋ**
**ನಿಮ್ಮ ಆ ಕುಂಡಿ ಹೊತ್ಕಂಡ್ ॥**

**ಹಸ್ರ್ ಕೆಂಪಿನೊಳ್ಗೆ ಹಸ್ರ್ ಕೆಂಚಿನ್ ಕೆಂಚಮ್ಮ ।**
**ಬಸ್ರ್ ಬಂದ್ರೆ ಹ್ಯಾಂಗ್ ನೆಡೆವಳು । ಸುಗ್ಗೀ**
**ಕೆಸ್ರ್ ಗೆದ್ದೀಲ್ ಬಸವ ನೆಡ್ದಾಂಗೆ ॥**

**ಚಳಿ-ಚಳಿ ಆಯ್ತೆಂದ್ ಒಲಿ ಮುಂದೆ ಕೂತ್ಕಂಡ್ ।**
**ಹಳಿ ಮೈನ ಕಾಯ್ಸಿತ್ಪಂಗೆ । ಆ ಬಿರಾಮ್ನ**
**ಬಿಳಿ ನೊರಿ ಗಡ್ಡುನಾ ಸುಟ್ಕಂಡ ॥**

(ಕಾಯ್ಸಿತ್ಪಂಗೆ = ಕಾಯಿಸುತ್ತಿರುವಾಗ; ನೊರಿ ಗಡ್ಡು = ನೊರೆ ಗಡ್ಡ)

(ಈ ಹಾಡಿನ ಸಂದರ್ಭ: ಒಬ್ಬ ಮುದಿ ಬ್ರಾಹ್ಮಣ (ಬಿರಾಮ್ನ) ಒರಳು ಕೊಟ್ಟಿಗೆ ಕಡೆ ಬಂದಾಗ, ತಮಾಷೆಗಾಗಿ ಈ ಹಾಡನ್ನು ಹೆಂಗಳೆಯರು ಹೆಣೆದುದು.)

**ಅರೆ ಸೋಂಕ್ಹೆಣ್ಣಿನ ಗಂಡ ದೇಶಾಂತ್ರಕ್ಹೋದಾನೆ ।**
**ಆರ್ಹೆತ್ತ ಮೇಲೆ ಅಂವ ಬಂದು । ಕೇಳಿದನೇ**
**ನಾರೀ ನಿನ್ಮಕ್ಕಾ ಹೆಸರೇನು ? ॥**
**ಗಂಗಯ್ಯ, ತುಂಗಯ್ಯ, ಈರಬದ್ರಯ್ಯ ।**
**ಬಿಂಗಯ್ಯ ಬಿರುಮಯ್ಯ ಬಸವಯ್ಯ । ಮಕ್ಕಳೇ**
**ಹೋಗಿ ನಿಮ್ಮಪ್ಪಯ್ನಿಗ್ ಶರಣೆನ್ನಿ ॥**
**ಯಾರಿಗ್ಹುಟ್ಟಿದ್ಮಕ್ಳು ಯಾರಿಗೆ ಶರಣೆಂಗು ।**
**ಆನೀಮೇಲ್ಬಪ್ಪ ಅರಸಂಗೆ । ಶರಣೆಂದ್ರೆ**
**ಹಾನ್ಯಾಲಿ ಹೊನ್ನ ಅಳೆಸುವಾ ॥**

(ಅರೆಸೋಂಕು = ಅರ್ಧ ಸುತ್ತು ಕಡಿಮೆ; ಹಾನ್ಯಾಲಿ= ಅಳೆಯುವ ಒಂದು ಪಾತ್ರೆ)

**ಅತ್ತಿ ಮನಿ ದ್ವಾಸಿ ಹತ್ತಿಯ ಹೂಗಿನ್ಹಾಂಗೆ ।**
**ಎಪ್ಪತ್ತು ತಿಂದ ಮದುಮಗನ । ಹೊಟ್ಟೀಲಿ**
**ನೆಗಳುಂಟೋ ಏನೋ ಶಿವಬಲ್ಲ ॥**

(ಅತ್ತಿಮನಿ = ಅತ್ತೆ ಮನೆ; ನೆಗಳ = ಮೊಸಳೆ)

**ಸ್ವಾದ್ರ್ ಮಾವನ ಮಗನೆ ಸೋತಿ ನನ್ನೈಲಿ ।**
**ಜೋತ್ರ ನನ್ ಕೈಲಿ ಉಳಿದ್ಹೋದೊ । ಇಲ್ಕೇಣ್**
**ಸೋತಿ ಅಂದ್ಹೇಳು ಕೊಡುವೇನು ॥**

(ಸೋತಿ=ಸೋತೆ; ಜೋತ್ರ=ದೋತ್ರ; ಇಲ್ಕೇಣ್=ಇಲ್ಲಿ ಕೇಳು)

ಹೀಗೆ, ಹಳ್ಳಿಗರು ತಮ್ಮ ಬದುಕಿನಲ್ಲಿ ಎದುರಿಸುವ ಹಲವಾರು ರಸಮಯ ಸನ್ನಿವೇಶಗಳನ್ನು, ಹಾಸ್ಯ ಪ್ರಜ್ಞೆಯಿಂದ ನೋಡಿ ತಮ್ಮ ಹೃದಯವನ್ನು ಹಗುರಪಡಿಸಿಕೊಳ್ಳುತ್ತಾರೆ. ಈ ಹಳ್ಳಿಗರು ಬದುಕನ್ನು ನೋಡುವ ರೀತಿ, ಬೆರಗುಗೊಳಿಸುವಂಥದೇ!

ಇಂತಹ ರಸವತ್ತಾದ ತ್ರಿಪದಿಗಳನ್ನು ನಾನು ಬಾಲ್ಯದಲ್ಲಿ ಕೇಳಿದ್ದುದು. ಆಗ ನನ್ನನ್ನು ಇವು ಅಷ್ಟೊಂದು ಆಕರ್ಷಿಸಿರಲಿಲ್ಲ. ಒಮ್ಮೆ ಚಂದು ಎಂಬ ಹಾಡುಗಾರ್ತಿಯನ್ನು ಕರೆದು ಹೇಳಿದ್ದೆ: "ಚಂದು, ಬೆಳ್ಗಾಗೆದ್ ಅದೆಂಥಾ ಹಾಡ್ಪೇಳಿ ರಗಳೆ ಮಾಡ್ತಿ (ಮಾಡುತ್ತೀಯಾ) ಮಾರಾತಿ (ಮಹಾರಾಯ್ತಿ), ನನ್ ಬೆಳ್ಗಿನ್ ನಿದ್ರಿ ಎಲ್ಲಾ ಕೆಡ್ತ್ಸ್ತೇ. ನಿನ್ ಬಾಯಿಗೆ ಬೀಗ ಹಾಕ್ಬೇಕ್ (ಹಾಕಬೇಕು)" – ಎಂದು. ಅದಕ್ಕೆ ಉತ್ತರವಾಗಿ ಮರುದಿವಸ ಬೆಳಿಗ್ಗೆ ಭತ್ತ ಕುಟ್ಟುತ್ತಾ ಒಂದು ತ್ರಿಪದಿಯನ್ನು ಅವಳೂ, ಮುತ್ತು (ಮುತ್ತಕ್ಕ) ಎಂಬ ಇನ್ನೊಬ್ಬ ಮಹಿಳೆಯೂ ಹೆಣೆದಿದ್ದರು. ಇದು ಅಂಥ ಅನಕ್ಷರ ಮಹಿಳೆಯರಲ್ಲಿ ಸುಪ್ತವಾಗಿ ಅಡಗಿದ್ದ ಸಾಹಿತ್ಯ ಪ್ರತಿಭೆಯ ಮೇಲೆ ಬೆಳಕು ಚೆಲ್ಲುತ್ತದೆ:

**ಭತ್ತೂ ಕುಟ್ವಂಗೆ ಹೊತ್ತು ಕಳಿಕೆಂದು ।**
**ಮುತ್ತು ಮತ್ ನಾನೂ ಹಾಡ್ತಿಪ್ಪಂಗೆ । ಚಣ್ ಒಡ್ಯರ್**
**ನಿದ್ರಿ ಹೊತ್ತೆಲ್ಲಾ ಹಾಳಾಯ್ತು ॥**

(ಹಾಡ್ತಿಪ್ಪಂಗೆ = ಹಾಡುತ್ತಿರುವಾಗ; ಚಣ್ ಒಡ್ಯರ್ = ಸಣ್ಣ ಒಡೆಯನಾಗಿ ನನ್ನನ್ನು ಸಂಬೋಧಿಸಿದ ರೀತಿ; ಕಳಿಕೆಂದು = ಕಳೆಯಲೆಂದು)

ಇನ್ನು, ಅಕ್ಕಿ ತಯಾರಾದ ಮೇಲೆ, ಅದನ್ನು ಶೇಖರಿಸುವ ರೀತಿಯೂ ಅನನ್ಯ! ಹುಲ್ಲಿನಿಂದ ಮಾಡಿದ ಬುಟ್ಟಿಯೊಂದನ್ನು ರಚಿಸಿ, ಅದರೊಳಗೆ ಅಕ್ಕಿ ತುಂಬಿ, ಗೋಳಾಕಾರದ ಆ ಆಕೃತಿಯ ಸುತ್ತ ಭದ್ರತೆಗಾಗಿ, ಹುಲ್ಲಿನಿಂದ ತಯಾರಿಸಿದ ದಾರ ಸುತ್ತುತ್ತಾರೆ. ಇದನ್ನು ನಮ್ಮೂರಲ್ಲಿ "ಮುಡಿ" ಎಂದು ಕರೆಯುತ್ತಾರೆ. ಹಿಂದೆ ಇಂಥ ಮುಡಿಗಳನ್ನು ಪಿರಮಿಡ್ ತರ ಕೂಡಿಟ್ಟು ದಪ್ಪದ ಹುಲ್ಲಿನ ಕ್ಯಾಪ್ ಹೊದಿಸಿಡುತ್ತಿದ್ದರು. ಅದನ್ನು ಎಲ್ಲರೂ "ಕುತ್ತಟ" ಎಂದು ಕರೆಯುತ್ತಿದ್ದು, ನಮ್ಮ ಕುಟುಂಬವನ್ನು "ಕುತ್ತಾಟದ ಐತಾಳ ಕುಟುಂಬ"ವೆಂದು ಕರೆಯುತ್ತಿದ್ದರು.

ನನಗೆ ಮೇಲೆ ಉದ್ಧರಿಸಿದಂಥ ಜನಪದ ತ್ರಿಪದಿಗಳ ಮೇಲಿನ ಅಭಿಮಾನ ಬಂದದ್ದು, ನಾನು ಊರು ಬಿಟ್ಟು ಬಂದ ಮೇಲೆ. ಕೆಲವು ವರ್ಷಗಳ ಹಿಂದೆ ಅಮೆರಿಕದಿಂದ ರಜೆಗೆಂದು ಊರಿಗೆ ಹೋದಾಗ, ಈ ಕಲಾವಿದೆ, ಚಂದುವನ್ನು ಭೇಟಿಯಾಗಿದ್ದೆ. ಈಗವಳು ಮುದುಕಿಯಾಗಿದ್ದಾಳೆ. ಮೊದಲಿನ ಲವಲವಿಕೆ ಇಲ್ಲ. ಹಳೆಯ ನೆನಪಾಗಿ, "ಚಂದೂ... ಒಂದ್ ಭತ್ತ ಕುಟ್ಟು ಹಾಡ್ಪೇಳ್ ಕಾಂಬೊ (ನೋಡೋಣ), ಕೇಣ್ದೆ (ಕೇಳದೆ) ತುಂಬ ದಿವ್ಸ ಆಯ್ತ್" ಎಂದು ಕೇಳಿದೆ. ಅವಳು ಕೊಟ್ಟ ಉತ್ತರ ಸಮಾಜದಲ್ಲಾದ ಬದಲಾವಣೆಯನ್ನು ಸಂಕ್ಷಿಪ್ತಗೊಳಿಸಿತ್ತು: "ನಂಗೀಗ ಆ ಹಾಡೆಲ್ಲ ಮರ್ತ್ಹೋಯ್ತು ಒಡೀನೆ (ಒಡೆಯನೇ). ಈಗಳ್ (ಈಗಿನ ಕಾಲದಲ್ಲಿ) ಅಂತ ಹಾಡ್ಪೇಳ್ವರು ಯಾರೂ ಇಲ್ಲೆ, ಅಯ್ಯಾ... ಎಲ್ಲಾರ್ ಬಾಯಲ್ಲೂ ಸಿನಿಮಾ ಹಾಡು... ಈ ಸಿನಿಮಾ ಬಂದು, ಎಲ್ಲಾ ಹಾಳ್ಮಾಡ್ತು... ಚಲ್-ಚಲ್ (ಹೊಲಸು) ಸಿನಿಮಾ ಕಂಡ್ಕಂಡ್ ಅದ್ರಲ್ಲ ಬಪ್ಪ (ಬರುವ) ಚಲ್ ಹಾಡ್ಗಳೇ ಈಗಿನ್ ಮಕ್ಕಳ್ಗೆಲ್ರಿಗೂ ಖುಷಿ... ಅಲ್ದೆ, ಈಗಳ್ ಭತ್ತ ಕುಟ್ಟು ಅಬ್ಯಾಸ್ವೇ (ಅಭ್ಯಾಸವೇ) ಇಲ್ಯಲೆ

(ಇಲ್ಲವಲ್ಲ)... ಎಲ್ಲಾರೂ ಮೆಶಿನ್‌ಗೆ ಅಕ್ಕಿ ಮಾಡೂಕೆ ಕಳ್ಸ್ರ್ರ (ಕಳುಹಿಸುತ್ತಾರೆ)... ಪಿರಪಂಚ (ಪ್ರಪಂಚ) ಬದ್ಲಾಯಿತ್ (ಬದಲಾಗಿದೆ) ನಾಗಪ್ಪೈನರೇ!" ಎಂದು ಹೇಳಿದ್ದಳು. ಹೌದು, ಸಮಾಜದಲ್ಲಿ ಕಾಲ ಬದಲಾದಂತೆ, ಅದರ ಜೊತೆಗೆ ಅನೇಕ ಬದಲಾವಣೆಗಳಾಗುತ್ತವೆ! ಅವನ್ನು ನಾವು ಒಪ್ಪಿಕೊಳ್ಳುವ ಸಮಯ ಬಂದಿದೆ. ಆದರೆ, ಜನಪದ ಹಾಡುಗಾರ್ತಿಯರ ಕುಶಲ ಕಲೆ ಮಾಯವಾಗುತ್ತಿರುವುದು ಒಂದು ವಿಷಾದದ ಸಂಗತಿಯೇ! ಗ್ರಂಥಗಳಲ್ಲಿ ಜನಪದ ಹಾಡುಗಳನ್ನು ಉಳಿಸಿಕೊಳ್ಳುವ ಪ್ರಯತ್ನವೇನೋ ಮುಂದುವರಿಯುತ್ತಿದೆ. ಮತ್ತಿಘಟ್ಟ ಕೃಷ್ಣಮೂರ್ತಿ, ಚಂದ್ರಶೇಖರ ಐತಾಳ, ಶಿವರಾಮ ಐತಾಳ, ಮತ್ತಿತರರು ಇಂಥ ಜನಪದ ಹಾಡುಗಳನ್ನು ಶೇಖರಿಸಿ, ಪ್ರಕಟಿಸಿ ಆ ನಿಟ್ಟಿನಲ್ಲಿ ಸಾಹಿತ್ಯ ಸೇವೆ ಸಲ್ಲಿಸಿದ್ದಾರೆ. ಅವುಗಳನ್ನು ಹಾಡುವ ಹಲವು ಹಾಡುಗಾರ್ತಿಯರನ್ನೂ ಇಂದಿನ ತಲೆಮಾರಿನಲ್ಲಿ ಕಾಣಬಹುದು. ಆದಾಗ್ಯೂ ಈ ಜನಪದ ಹಾಡುವ ಕಲಾವಿದೆಯರು ಈಗಿನ ತಲೆಮಾರಿನಲ್ಲಿ ಸಿಗುವುದು ಕಷ್ಟವಾಗಿದೆ.

ನಮ್ಮ ಹಿಂದಿನ ತಲೆಮಾರಿನ ಗ್ರಾಮೀಣರು ಅನಕ್ಷರರಾಗಿರಬಹುದು; ಅವಿದ್ಯಾವಂತರಂತೂ ಅಲ್ಲವೇ ಅಲ್ಲ! ಅಂಥವರ ಪಾಂಡಿತ್ಯಕ್ಕೆ ಎಲ್ಲರೂ ತಲೆದೂಗಲೇ ಬೇಕು! ಅವರ ಮೇಲೆ ಅಭಿಮಾನ ಹುಟ್ಟುವುದಂತೂ ಖಂಡಿತ. ವೇದಗಳು ಮೌಖಿಕ ವರ್ಗಾವಣೆಯ ಮೂಲಕ ಉಳಿದು ಬಂದ ಹಾಗೆ ಇಂಥ ಹಾಡುಗಳೂ ಉಳಿದು, ಜನಪದ ಸಾಹಿತ್ಯವನ್ನು ಶ್ರೀಮಂತಗೊಳಿಸಿವೆ ಎಂದರೆ ತಪ್ಪಾಗಲಾರದು. ಆದರೆ, ಸುಧಾರಣೆ/ ಜಾಗತೀಕರಣದ ನೆಪದಲ್ಲಿ, ಸಮಾಜದಲ್ಲಾದ "ಬದಲಾವಣೆ", ನಮ್ಮ ಹಿಂದಿನ ಅನೇಕ ಸಂಪ್ರದಾಯಗಳನ್ನು ಬದಲಿಸಿದೆ. ನಮ್ಮ ಬೆನ್ನೆಲುಬಾಗಿದ್ದ ಗುಡಿಕೈಗಾರಿಕೆ, ಈಗ ಯಂತ್ರಯುಗದ ಪಾಲಾಗಿದೆ. ತಿರಿ ಕಟ್ಟುವ, ಮುಡಿಕಟ್ಟುವ, ಭತ್ತ ಕುಟ್ಟುವ "ಕೈಗಾರಿಕೆ"ಗಳೆಲ್ಲಾ ಮಾಯವಾಗಿವೆ. ಭತ್ತ ಕುಟ್ಟುವಾಗ ಹಾಡುತ್ತಿರುವ ಹಳ್ಳಿ ಹಾಡುಗಳು, ಮನೆಮನೆಗೆ ಬಂದು ಹಾಡುತ್ತಿದ್ದ "ಕೋಲು ಹೊಯ್ಯು"ವ ಹಾಡುಗಳ ಸ್ವರ ಉಡುಗಿಹೋಗಿದೆ. ಸಮಾಜದಲ್ಲಿ ಅನೇಕ ಉಪಯುಕ್ತ ಸುಧಾರಣೆಗಳಾಗಿರುವುದು ನಿಜ! ಕಾಲನ ಮುಂದೋಟದಲ್ಲಿ, ನವೀನ ಪದ್ಧತಿಗಳು ಹಿಂದಿನ ಕಟ್ಟಳೆಗಳನ್ನು, ಸಂಪ್ರದಾಯಗಳನ್ನು ಬದಲಿಸಿವೆ. ಆದಾಗ್ಯೂ, ಹಿಂದಿನ ಸಂಪ್ರದಾಯಗಳನ್ನು ಸಂಪೂರ್ಣ ಮರೆತುಬಿಡುವುದು ತರವೇ? – ಎಂಬ ಪ್ರಶ್ನೆ ನನ್ನನ್ನು ಕಾಡುತ್ತಿದೆ.

ಅಮೆರಿಕದಲ್ಲಿ ಐದು ದಶಕಗಳ ಕಾಲ ವಾಸವಾಗಿದ್ದರೂ, ನನ್ನೂರ ಗ್ರಾಮ್ಯ ಭಾಷೆಯನ್ನು (ಕೋಟ–ಕುಂದಾಪುರದ ಆಡುಭಾಷೆ, ಅಥವಾ, ಹೋಯ್ಕ್–ಬರ್ಕ್ ಭಾಷೆ) ನಾನು ಮರೆಯಲಿಲ್ಲ. ನನ್ನ ಪಾಲಿಗೆ ಅದು ಸಂಗೀತವಿದ್ದಂತೆ. ಕೋಟಕ್ಕೆ ಹೋದಾಗ ತನ್ನಷ್ಟಕ್ಕೆ ತಾನೆ ಆ ಭಾಷೆಯಲ್ಲೆ ನಾನು ನಮ್ಮವರೊಡನೆ ಅತ್ಯಭಿಮಾನದೊಂದಿಗೆ ಸಂಭಾಷಿಸುತ್ತೇನೆ. ಆದರೆ, ಇತ್ತೀಚಿನ ಕೋಟದ ಭೇಟಿಯಲ್ಲಿ, ಅಲ್ಲಿನ ಯುವಪೀಳಿಗೆಯವರು ಹೆಚ್ಚಾಗಿ ಈ ಹೋಯ್ಕ್–ಬರ್ಕ್ ಅದ್ಭುತವಾಗಿತ್ತು. ಆಡುಭಾಷೆಯನ್ನು ಬಿಟ್ಟು, ನಾಜೂಕಿನ

ಕನ್ನಡ ಭಾಷೆಯಲ್ಲೇ ಮಾತಾಡುತ್ತಿರುವುದನ್ನು ಗಮನಿಸುತ್ತಿದ್ದೇನೆ. ಪರಿಣಾಮವಾಗಿ, ನನ್ನ ಆಡುಭಾಷೆ ಅವಸಾನದ ಕಡೆಗೆ ಹೆಜ್ಜೆಹಾಕುತ್ತಿದೆಯೇ – ಎಂಬ ಕಳವಳ ನನ್ನನ್ನು ಕಾಡುತ್ತಿದೆ. ನಾಜೂಕೀಕರಣದಿಂದಾಗಿ ಒಂದು ಡೈಲೆಕ್ಟ್ ನಾಶವಾಗುತ್ತಿದೆಯೇ? ಹಾಗಿದ್ದಲ್ಲಿ ಅದು ವಿಷಾದ ತರುವಂಥದೇ!

ಈ ಲೇಖನದಲ್ಲಿ ಉದ್ಧರಿಸಿದ ಹಾಡುಗಳನ್ನು ನೆನೆಸಿಕೊಂಡಾಗಲೆಲ್ಲ ನನ್ನ ಮನಸ್ಸು ಅರಳುತ್ತದೆ. ಈಗ ನಾನು ಊರಿಗೆ ಹೋದಾಗಲೆಲ್ಲ, ನಮ್ಮೂರಿನ ಹಲವು ಸಂಪ್ರದಾಯಗಳನ್ನು ಕಳೆದುಕೊಂಡ ಅನುಭವವಾಗುತ್ತದೆ. ಹಿಂದೆ ನಮ್ಮ ಮನೆಯಲ್ಲಿ ಶೋಭಿಸುತ್ತಿದ್ದ ಕುತ್ತಟ್ಟ, ಆ ದೊಡ್ಡ ತಿರಿ, ಎಲ್ಲವೂ ಮಾಯವಾಗಿ, ನಮ್ಮ ಮನೆಯಂಗಳ ಬರಿದಾಗಿ, ಕಳೆ ಕಳೆದುಕೊಂಡಿದೆ. ಭತ್ತ ಕುಟ್ಟುವಾಗಲೂ, ಕೋಲು ಹೊಯ್ಯುವಾಗಲೂ ಹಾಡುತ್ತಿದ್ದ ಕಲಾವಿದೆಯರನ್ನು – ಚಂದು, ಬಚ್ಚಿ, ಮುತ್ತಕ್ಕ, ಲಚ್ಚಿ, ಮಿಣ್ಣು, ಬುಡ್ಡು, ಸೂರು, ಮುಂತಾದವರು (ಈ ಹೆಸರುಗಳೂ ಪ್ರಾದೇಶಿಕವಾದ ಗ್ರಾಮೀಣ ಹೆಸರುಗಳು) – ಕಾಲ ಕಬಳಿಸಿದೆ. ನಮ್ಮ ದೈನಂದಿನ ಬದುಕೂ ಬಹಳಷ್ಟು ಬದಲಾಗಿದೆ. ಹಾಗೆ ನೋಡಿದಲ್ಲಿ, ಸಾವೆಂಬ ವಿದ್ಯಮಾನ, ನಮ್ಮ ಬದುಕನ್ನು ಹೊಸ ಹೊಸ ತಲೆಮಾರುಗಳಿಂದ ಚಿರನೂತನವಾಗಿಡುತ್ತದಲ್ಲವೇ? ಈ ಗ್ರಾಮೀಣ ಕಲಾವಿದೆಯರ ಹಾಡುಗಳು ಈಗ ಸ್ಮರಣೆಯಲ್ಲಿ ಮಾತ್ರ ಉಳಿದಿವೆ. ಭತ್ತ ಕುಟ್ಟುವ ಒರಳು ಕೊಟ್ಟಿಗೆ ಪಾಳು ಬಿದ್ದಿದೆ. ಗದ್ದೆ ಉಳುವ ನೇಗಿಲುಗಳು, ಒರಳೆ ತಿಂದೋ ಏನೋ, ಒಲೆಗಳ ಪಾಲಾಗಿವೆ. ಹಸು, ಕೋಣಗಳಿಂದ ತುಂಬಿದ ಕೊಟ್ಟಿಗೆ ಬರಿದಾಗಿ ಉಳಿದಿದ್ದು ನನ್ನ ಹೃದಯವನ್ನೂ ಬರಿದು ಮಾಡಿದೆ. ಇವೆಲ್ಲ ಸಮಾಜ ಸುಧಾರಣೆ ತಂದ ಪರಿಣಾಮಗಳು! ಅವುಗಳನ್ನು ನಾವು ಒಪ್ಪಿಕೊಳ್ಳಲೇ ಬೇಕಾಗಿದೆ!

ಇಲ್ಲಿ, ಹಿಂದೆ ನಾನು ಕಂಡ ಹಲವು ಸಂಪ್ರದಾಯಗಳು ಬದಲಾಗಿರುವುದನ್ನು ಗಮನಿಸಿ, ನೊಂದ ನನ್ನ ಮನಸ್ಸಿನಲ್ಲಿ ಉದ್ಭವಿಸಿದ ಕೆಲವು ಅವ್ಯಕ್ತ ಅನಿಸಿಕೆಗಳನ್ನು ನಿಮ್ಮೊಡನೆ ಹಂಚಿಕೊಂಡಿರುತ್ತೇನೆ. ಇಂಗ್ಲಿಷ್‌ನಲ್ಲಿ ಹೇಳುತ್ತಾರೆ: Old is Gold ಎಂದು. ಆದರೆ, "Old order changeth yielding place to new" ಎಂಬುದನ್ನೂ ನಾವು ಒಪ್ಪಿಕೊಳ್ಳಬೇಕು. ಹಿಂದಿನದನ್ನು ಮರೆಯದೆ, ಸಮಾಜದಲ್ಲಾದ ಇಂದಿನ "ಬದಲಾವಣೆ"ಗಳೊಡನೆ ಹೊಂದಿಕೊಂಡು ಹೋಗಲು ಅಸಾಧ್ಯವೇ? – ಎಂದು ನಾನೀಗ ಯೋಚಿಸುತ್ತಿದ್ದೇನೆ.

*

## ಮನೆ–ಮನಗಳು ಬದಲಾವಣೆ ಕಂಡಾಗ...

■ **ಸರಿತಾ ನವಲಿ,** West Windsor, NJ.

ನಮ್ಮ ಹಳ್ಳಿಯಲ್ಲಿನ ಹುಲ್ಲು ಹೊದಿಸಿದ್ದ ಗುಡಿಸಲುಗಳು ಕಾಲಕ್ರಮೇಣ ಕಣ್ಮರೆಯಾಗಿ ಮಣ್ಣಿನ ಮನೆಗಳಾಗಿ ಪರಿವರ್ತನೆಗೊಂಡು, ಮಣ್ಣಿನ ಮನೆಗಳು ಈಗ ಕಾಂಕ್ರೀಟಿನ ಮನೆಗಳಾಗಿವೆ. ಮುಳ್ಳು–ಕಂಟಿಗಳ ಕಾಲುಹಾದಿ ಮಣ್ಣಿನ ರಸ್ತೆಯಾಗಿ, ಮಣ್ಣು–ಕಲ್ಲುಗಳ ಕಚ್ಚಾ ರಸ್ತೆಯೀಗ ಡಾಂಬರಿನ ಹೊದಿಕೆ ಹೊದ್ದುಕೊಂಡು ನವೀಕರಣಗೊಂಡಿದೆ. ನದಿ–ತೊರೆಗಳವರೆಗೆ ಮೈಲಿಗಟ್ಟಲೆ ನಡೆದುಕೊಂಡು ಹೋಗಿ ಒಂದು ಬಿಂದಿಗೆ ನೀರನ್ನು ತರುತ್ತಿದ್ದ ಕಷ್ಟ ನಿವಾರಣೆಯಾಗಿ, ಮನೆಯ ಮುಂದೆಯೇ ಕೊಳಾಯಿಯಲ್ಲಿ ನೀರು ಸುರಿಯುತ್ತಿದೆ. ಅಲ್ಲೊಂದು–ಇಲ್ಲೊಂದು ಎಂದು ಉರಿಯುತ್ತಿದ್ದ ವಿದ್ಯುತ್ ದೀಪಗಳೀಗ ಮನೆ–ಮನೆಯಲ್ಲೂ ಪ್ರಜ್ವಲಿಸಲು ಪ್ರಾರಂಭವಾಗಿವೆ. ಪಟ್ಟಣದಿಂದ ದಿನಕ್ಕೆರಡು ಸಲ ನಮ್ಮ ಹಳ್ಳಿಗೆ ಬಂದು ಹೋಗುತ್ತಿದ್ದ ಖಾಸಗಿ ಬಸ್ಸಿನ ಬದಲು ಈಗ ಗಂಟೆಗೊಮ್ಮೆ ಸರಕಾರಿ ಬಸ್ಸುಗಳು ಬಂದು ಹೋಗಿ, ಸಾರಿಗೆ ವ್ಯವಸ್ಥೆ ಸುಧಾರಿಸಿದೆ. ಸಂಜೆ ಹೊತ್ತಲ್ಲಿ ತಮ್ಮತಮ್ಮ ಮನೆಯ ಕಟ್ಟೆಯ ಮೇಲೆ ಕುಳಿತು, ಅಕ್ಕ–ಪಕ್ಕದ ಮನೆಯವರ ಹತ್ತಿರ ಸುಖ–ದುಃಖ ಮಾತನಾಡುತ್ತ, ರಾತ್ರಿ ಕಂದೀಲಿನ ಮಿಣುಕು ದೀಪ ಹಚ್ಚಿಕೊಂಡು, ರೇಡಿಯೋ ಕೇಳುತ್ತ ಸಮಯ ಕಳೆಯುತ್ತಿದ್ದ ನಮ್ಮ ಹಳ್ಳಿಯ ಜನ, ಈಗ ಹೊಲದ ಕೆಲಸ ಮುಗಿಸಿ ಮನೆಗೆ ಬಂದ ಕೂಡಲೇ ಟಿ.ವಿ.ಯ ಮುಂದೆ ಕುಳಿತು ಸೀರಿಯಲ್‌ಗಳನ್ನು ನೋಡುತ್ತಾರೆ. ಬಾಲ್ಯದಿಂದ ಇಂದಿನವರೆಗಿನ ಪ್ರತಿ ದಶಕಗಳನ್ನು ಮೆಲುಕು ಹಾಕಿದಾಗ ಕಂಡುಬರುವ ಅಂಶವೆಂದರೆ ಬದಲಾವಣೆ, ತಪ್ಪಿಸಿಕೊಳ್ಳಲಾಗದ ಜಗದ ನಿಯಮ!

ಜಗದ ಈ ನಿಯಮಕ್ಕೆ ಹೊಂದಿಕೊಳ್ಳುತ್ತ ಹೋಗುವ ನಮಗೆ, ನಾವು ನಡೆದು ಬಂದ ದಾರಿಯನ್ನೊಮ್ಮೆ ಹಿಂದಿರುಗಿ ನೋಡಿದಾಗಲೇ ಈ ಬದಲಾವಣೆಗಳ ಅರಿವಾಗುತ್ತದಲ್ಲವೇ? ಪ್ರಕೃತಿಯಲ್ಲಿನ ಬದಲಾವಣೆ ಸಹಜವಾದದ್ದು, ನೈಸರ್ಗಿಕ ಎಂದಾದರೆ, ಬಹುತೇಕ ಬದಲಾವಣೆಗಳನ್ನು ನಾವು ಬದುಕಿನುದ್ದಕ್ಕೂ ನಮ್ಮ–ನಮ್ಮ ಅವಶ್ಯಕತೆಗಳಿಗೆ

ತಕ್ಕಂತೆ, ನಾವು ಒಳಪಡುವ ಪರಿಸ್ಥಿತಿಗಳಿಗನುಸಾರವಾಗಿ, ನಮ್ಮ ಜೀವನಾನುಭವಗಳಿಂದ ಕಂಡುಕೊಳ್ಳುತ್ತೇವೆ. ಪ್ರತಿಯೊಬ್ಬ ಮನುಷ್ಯನ ಜೀವನವೆನ್ನುವುದು ಆತ ತನಗೆಂದು ಆರಿಸಿಕೊಂಡ ಜೀವನಾಸಕ್ತಿಯಲ್ಲಿ ಸಾರ್ಥಕತೆಯ ಗುರಿಯನ್ನು ತಲುಪುವವರೆಗಿನ ಪಯಣವೆಂದಾಗ, ಮನುಷ್ಯ ತನ್ನ ಪಯಣವನ್ನು ಮುಂದುವರಿಸದೆ ನಿಂತರೆ ಆತನೊಂದಿಗೆ 'ಸಮಯ' ನಿಲ್ಲುವುದಿಲ್ಲ! ಸಾಗುವ ಸಮಯದೊಂದಿಗೆ ನಾವು ನಡೆಯಲೇಬೇಕೆಂದಾಗ ಗಡಿಯಾರದ ಟಿಕ್-ಟಿಕ್ ಶಬ್ದ, ಸಮಯದ ಚಲನೆಯನ್ನು ಹೇಳುವುದರೊಂದಿಗೆ ಬದುಕಿನಲ್ಲಿನ ಬದಲಾವಣೆಯ ಕಥೆಯನ್ನೂ ಹೇಳುತ್ತದೆ.

ಹಳ್ಳಿಯಿರಲಿ, ನಗರವಿರಲಿ ಅಥವಾ ಮನೆಯನ್ನು ಕಟ್ಟಲು ಬಳಸಿದ ಸಾಮಗ್ರಿಗಳೇನೇ ಇರಲಿ, ಪುಟ್ಟ ಮಗುವಾಗಿ ತನ್ನ ಜೀವನವನ್ನು ಪ್ರಾರಂಭಿಸುವ ಪ್ರತಿಯೊಬ್ಬನ ಬದುಕಿನ ಪಯಣದಲ್ಲಿ, ಮನೆಯೆನ್ನುವುದು ಭಾವನಾತ್ಮಕ ತಾಣವಾಗಿ, ಆತನ ಜೀವನದ ಅದೆಷ್ಟೋ ಬದಲಾವಣೆಗಳಿಗೆ ಸಾಕ್ಷಿಯಾಗುತ್ತದೆ. ಅದು ಬರೀ ನಾಲ್ಕು ಗೋಡೆಗಳ ಕಟ್ಟಡವಾಗಿರದೆ, ಪತ್ರ ವ್ಯವಹಾರದ ವಿಳಾಸವಾಗಿರದೆ, ಜೀವನದಲ್ಲಿ ಪ್ರೀತಿ, ವಿಶ್ವಾಸ, ಸಂಬಂಧ, ಸಂಸ್ಕಾರಗಳ ಮಹತ್ತ್ವವನ್ನು ಕಲಿಸಿಕೊಟ್ಟು, ಪುಟ್ಟಮಕ್ಕಳಿಂದ ವಯೋವೃದ್ಧರವರೆಗೆ ಮನಸ್ಸಿನ ಸ್ವಾತಂತ್ರ್ಯವನ್ನೂ ನೀಡುತ್ತದಲ್ಲವೇ? ಮನೆಯೆನ್ನುವುದು ನಾವು ಜೀವನದ ಮೌಲ್ಯಗಳನ್ನು ಕಲಿಯುವಲ್ಲಿ ಹೇಗೆ ಮಾರ್ಗದರ್ಶಿಯಾಗುತ್ತದೆ ಎಂದುಕೊಳ್ಳುತ್ತ, ವರ್ಷಗಳುರುಳಿದಂತೆ ಹಿಂದಿನ ಮತ್ತು ಇಂದಿನ ತಲೆಮಾರಿನವರ ಜೀವನ ಕ್ರಮ, ಪಾಲಿಸಿಕೊಂಡು ಬಂದ ರೂಢಿ-ಪದ್ಧತಿಗಳು, ಉಳಿಸಿಕೊಂಡ ಜೀವನದ ಮೌಲ್ಯಗಳಲ್ಲಿ ಏನೆಲ್ಲ ಬದಲಾವಣೆಗಳಾಗಿವೆ ಎಂದು ಯೋಚಿಸತೊಡಗಿದೆ. ಮಗುವಾಗಿ ಹುಟ್ಟಿ, ಬೆಳೆದು ದೊಡ್ಡವರಾದಂತೆ ಪ್ರತಿ ವ್ಯಕ್ತಿಯ ಮೊಗ್ಗಿನ ಮನಸ್ಸನ್ನು ಹೂವಾಗಿ ಅರಳಿಸಿ, ಕಾಯಾಗಿಸಿ, ಹಣ್ಣಾಗಿಸಿ, ಆ ವ್ಯಕ್ತಿಯ ವ್ಯಕ್ತಿತ್ವವನ್ನು ಸಕಾರಾತ್ಮಕವಾಗಿ ಬೆಳೆಸುವಲ್ಲಿ ರೂವಾರಿಯಾಗುವ ಮನೆಯೇ ಈಗ ಬದಲಾವಣೆಯ ಕೇಂದ್ರವಾಗಿ ಕಂಡಿತ್ತು. ಆದರೆ ಈಗಲೂ ನಮ್ಮ ಹಳ್ಳಿಯ ಮನೆಗಳಲ್ಲಿ ಇಂತಹ ಬದಲಾವಣೆಗಳು ಅಷ್ಟಾಗಿ ಕಂಡುಬರುವುದಿಲ್ಲ ಎನ್ನುವುದು ಸಮಾಧಾನ ತಂದರೂ, ಇವೆಲ್ಲ ನಗರಗಳಲ್ಲಿ ಕಾಣಿಸಿಕೊಳ್ಳುವ ನಕಾರಾತ್ಮಕ ಬದಲಾವಣೆಗಳು ಅನ್ನುವ ಭಾವನೆ ಮೂಡಿತ್ತು.

ಮನೆಯೆಂದಾಕ್ಷಣ ನನ್ನ ಕಣ್ಣ ಮುಂದೆ ಸುಳಿಯುವ ಚಿತ್ರವೆಂದರೆ ವಿಶಾಲವಾದ ಅಂಗಳ, ಸುತ್ತಲೂ ಎತ್ತರದ ಕಾಂಪೌಂಡಿನ ಗೋಡೆ, ಕಬ್ಬಿಣದ ಗೇಟು, ಅದಕ್ಕೆ ಚಪ್ಪರ ಹಾಕಿ ಹಬ್ಬಿಸಿದ ಮಲ್ಲಿಗೆ ಬಳ್ಳಿ, ಹೂದೋಟ, ಮನೆಯ ಮುಂದಿನ ಜಗುಲಿ, ಅಂಗಳದಲ್ಲಿನ ವೈವಿಧ್ಯಮಯ ರಂಗೋಲಿ, ದೊಡ್ಡದಾದ ಮನೆ, ವಿವಿಧ ಬಗೆಯ ಹಣ್ಣಿನ ಗಿಡಗಳಿಂದ ತುಂಬಿದ ಹಿತ್ತಲು ಮತ್ತು ಇವುಗಳೊಂದಿಗೆ ಮನದಂಗಳದಲ್ಲಿ ಮೂಡುವ ಸಾವಿರಾರು ನೆನಪಿನ ಚಿತ್ತಾರಗಳು! ಕಾಲ ಬದಲಾಗಿ ಕಾಂಕ್ರೀಟಿನ ಕಾಡಾಗಿ ಪರಿವರ್ತನೆಗೊಳ್ಳುತ್ತಿರುವ ನಗರಗಳಲ್ಲಿ ಮನೆಯ ಅಂಗಳವೆಲ್ಲಿ? ಹಿತ್ತಲೆಲ್ಲಿ? ಇದನ್ನೆಲ್ಲ ನೋಡಿದಾಗ, ಇತ್ತೀಚಿನ

ವರ್ಷಗಳಲ್ಲಿ ನಮ್ಮ ನಗರದ ಮನೆಗಳ ಮುಂದಿನ ಅಂಗಳದ ರಂಗೋಲಿಯೂ ಮಾಸುತ್ತ ಹೋಗುತ್ತಿದೆ ಎನಿಸುತ್ತದೆ. ರಂಗೋಲಿಯ ಚಿತ್ತಾರಕ್ಕೂ ಜಾಗವಿಲ್ಲವೆಂದಾಗ, ಅಂಗಳದಲ್ಲಿನ ಬಣ್ಣ-ಬಣ್ಣದ ಹೂಗಿಡಗಳು, ಕಾಂಪೌಂಡಿನ ಗೇಟಿಗೆ ಹಬ್ಬಿಸುತ್ತಿದ್ದ ಕಾಗದದ ಹೂವಿನ ಗಿಡ, ಮಲ್ಲಿಗೆಯ ಬಳ್ಳಿಗಳೂ ಮಾಯವಾಗಿವೆ. "ನನ್ನ ಅಂಗಳದಾಗ ಮಲ್ಲೀಗಿ ಗಿಡ ಹುಟ್ಟಿ, ಝುಲ್ಲೀಸ ಬ್ಯಾಡೊ ಗಿಣಿರಾಮಾ..." ಎನ್ನುವ ಗರತಿಯ ಹಾಡಿನ ಸಾಲುಗಳು ವಾಸ್ತವವಾಗದೆ ಪುಸ್ತಕದಲ್ಲಿಯೇ ಉಳಿದುಹೋಗುತ್ತಿವೆ. ಅಂಗಳದೊಂದಿಗೆ ಹಿತ್ತಲವೂ ಮಾಯವಾಗಿ, ಪೇರಲ-ಮಾವಿನ ಮರಗಳೂ ಕಾಣೆಯಾಗಿ, ಹಣ್ಣನ್ನು ಸವಿಯಲು ಹಿಂಡು-ಹಿಂಡಾಗಿ ಬರುತ್ತಿದ್ದ ಗಿಣಿಗಳೂ ದೂರವಾಗಿವೆ. ಮನೆಯಲ್ಲೆಲ್ಲ ಮುಕ್ತವಾಗಿ ಹಾರಾಡಿಕೊಂಡು, ಮೂಲೆಯಲ್ಲೊಂದು ಗೂಡು ಕಟ್ಟಿಕೊಂಡು, ಅಜ್ಜಿ ಹೇಳುತ್ತಿದ್ದ 'ಕಾಗಕ್ಕ-ಗುಬ್ಬಕ್ಕನ ಕಥೆ'ಗೆ ಅರ್ಥ ಕೊಡುತ್ತಿದ್ದ ಗುಬ್ಬಚ್ಚಿಗಳೆಲ್ಲ ಎಲ್ಲಿ ಹೋದವೋ ಎಂದು ಯೋಚಿಸುವಂತಾಗಿರುವಾಗ, ಗಿಣಿಗಳು ಕಣ್ಮರೆಯಾದದ್ದು ಅಸಹಜವೆನಿಸುವುದಿಲ್ಲ. ಹತ್ತು ವರ್ಷಗಳ ಹಿಂದೆ ನಾವು ಬೆಂಗಳೂರಿನಲ್ಲಿ ಹೊಸದಾಗಿ, ದೊಡ್ಡದಾದ ಮನೆಯನ್ನು ಕಟ್ಟಲು ಮುಂದಾದಾಗ, ಹಳೆಕಾಲದ ಹೆಂಚಿನ ಮನೆಯೊಂದಿಗೆ ಅಂಗಳ-ಹಿತ್ತಲವೂ ಉಳಿಯದೆ, ಅದೆಷ್ಟೋ ವರ್ಷಗಳಿಂದ ಬೆಳೆದು ನಿಂತಿದ್ದ ಮಾವಿನಮರ, ಚಕ್ಕೋತದ ಮರಗಳನ್ನೂ ಉಳಿಸಿಕೊಳ್ಳಲಾಗಲಿಲ್ಲ. ಅದರೊಂದಿಗೆ "ಚಕ್ಕೋತದ ಮರವಿರುವ ಮನೆ" ಅನ್ನುವ ಬಾಯಿಮಾತಿನ ವಿಳಾಸವನ್ನು ಈಗಿನ ಮೂರಂತಸ್ತಿನ ದೊಡ್ಡಮನೆ ಕಳೆದುಕೊಂಡಿದೆ. 'ತುಳಸಿ' ಗಿಡದೊಂದಿಗೆ ಹಲವಾರು ಹೂವಿನ ಗಿಡಗಳು, ಅಲಂಕಾರಿಕ ಸಸ್ಯಗಳು ಹೂಕುಂಡಕ್ಕೆ ಸೀಮಿತಗೊಂಡಿವೆ. ಹೀಗೆ, ಅಂಗಳದಿಂದ ಆರಂಭಗೊಂಡ ಬದಲಾವಣೆ ನಗರದ ಹಲವಾರು ಮನೆಗಳ ಹೊಸ್ತಿಲುಗಳಿಂದ ಒಳಗೆ ಕಾಲಿಟ್ಟು 'ಗೃಹ ಪ್ರವೇಶ' ಮಾಡಿದೆ!

ಮನೆಯ ವಿಸ್ತೀರ್ಣ-ವಿನ್ಯಾಸ ಕಾಲಕ್ಕೆ ತಕ್ಕಂತೆ, ಅವಶ್ಯಕತೆಗೆ ತಕ್ಕಂತೆ ಬದಲಾದಂತೆ, ಹಿಂದಿನ-ಇಂದಿನ ಜೀವನ ಶೈಲಿಯಲ್ಲಿಯೂ ಬದಲಾವಣೆ ನೋಡಬಹುದು. ಮನುಷ್ಯನ ಬದಲಾದ ಜೀವನ ಕ್ರಮದಲ್ಲಿ ನಮ್ಮ ಹವ್ಯಾಸಗಳು, ತಿನ್ನುವ ಆಹಾರಕ್ರಮ, ವಿಶ್ರಾಂತಿಗೆಂದು ಮಾಡುವ ನಿದ್ದೆಯೂ ಬದಲಾವಣೆಯನ್ನು ಕಂಡಿವೆ. ಹಳ್ಳಿ-ಪಟ್ಟಣಗಳಿಗೆ ಹೋಲಿಸಿ ನೋಡಿದಾಗ ನಗರಗಳಲ್ಲಿನ ಜೀವನ ಕಷ್ಟಕರವಾದದ್ದು, ಪ್ರತಿ ನಿಮಿಷವೂ ಓಟ ! ಸಮಯವನ್ನು ಸರಿಯಾಗಿ ಬಳಸಿಕೊಳ್ಳದಿದ್ದರೆ ತೊಂದರೆ ತಪ್ಪಿದ್ದಲ್ಲವೆನ್ನುವಾಗ, ನಿಯಮಿತವಾಗಿರಬೇಕಾಗಿದ್ದ ಜೀವನಶೈಲಿಯನ್ನು ಬಹಳಷ್ಟು ಕುಟುಂಬಗಳು ತಮ್ಮ-ತಮ್ಮ ಅವಶ್ಯಕತೆಗಳಿಗೆ ತಕ್ಕಂತೆ ಬದಲಾಯಿಸಿಕೊಂಡಿರುವುದು ಕಂಡುಬರುತ್ತಿದೆ. ಮನುಷ್ಯನ ಅವಶ್ಯಕತೆಗಳಿಗೆ ಅನುಸಾರವಾಗಿ ಬದುಕಿನ ಕ್ರಮವೇ ಬದಲಾದಾಗ, ರಾತ್ರಿ ಬೇಗ ಮಲಗಿ, ಬೆಳಿಗ್ಗೆ ಬೇಗ ಎದ್ದು, ನಸುಕಿನಲ್ಲಿ ವಾಯುವಿಹಾರ ಮಾಡುವವರ ಸಂಖ್ಯೆ ಗಣನೀಯವಾಗಿ ಕಡಿಮೆಯಾಗುತ್ತಿದೆ ಎನಿಸುತ್ತದಲ್ಲವೇ? ಅಡುಗೆಮನೆಯ ಊಟೋಪಚಾರಗಳೂ, ದೇವರಮನೆಯ ಪೂಜಾಪದ್ಧತಿಗಳೂ ಬದಲಾವಣೆಯ ಪಟ್ಟಿಗೆ ಸೇರಿಕೊಂಡಿವೆಯಲ್ಲವೇ?

ಇಂತಹ ಬದಲಾವಣೆಗಳು ಪ್ರತಿದಿನದ ಬದುಕಿನಲ್ಲಿ ವಿಶೇಷತೆಯನ್ನು ಪಡೆಯದೆ ಇದ್ದರೂ, ಹಬ್ಬದ ದಿನಗಳಲ್ಲಿ ವಿಶೇಷವಾಗಿ ಎಲ್ಲರ ಗಮನವನ್ನು ತಮ್ಮತ್ತ ಸೆಳೆಯುತ್ತವೆ. ಅಜ್ಜಿಯ ಕಾಲದಲ್ಲಿ ಹಬ್ಬದ ದಿನಗಳಲ್ಲಿ ಕಟ್ಟಿಗೆ ಒಲೆಯ ಮೇಲೆ ಬೇಳೆ ಕುದಿಸಿ, ರುಬ್ಬುವ ಕಲ್ಲಿನಲ್ಲಿ ಹೂರಣ ರುಬ್ಬಿ, ಹೋಳಿಗೆಯನ್ನು ಮಾಡುವ ಪದ್ಧತಿಯೀಗ, ಹಬ್ಬದ ಹಿಂದಿನ ದಿನ ಹೋಳಿಗೆ ಮಾರುವ ಅಂಗಡಿಯ ಮುಂದೆ ಸಾಲುಗಟ್ಟಿ ನಿಂತು ಸರದಿಯಲ್ಲಿ ಹೋಳಿಗೆಯನ್ನು ಕೊಂಡುತರುವಲ್ಲಿಗೆ ಬದಲಾಗಿದೆ. ಮನೆಮಂದಿಯೆಲ್ಲ ಒಟ್ಟಿಗೆ ಕುಳಿತುಕೊಂಡು ಬಾಳೆಯೆಲೆಯಲ್ಲಿ ಊಟ ಮಾಡುವುದು ಮರೆಯಾಗಿ ಹೋಗಿರುವುದರೊಂದಿಗೆ, ಬಾಳೆಯೆಲೆ ಹರಡಿ, ಸಾಂಪ್ರದಾಯಿಕ ಊಟ ಬಡಿಸುವ ಅದೆಷ್ಟೋ ಹೊಟೇಲುಗಳು ತಲೆಯೆತ್ತಿವೆ. ಶಾಲಾ-ಕಾಲೇಜು, ಆಫೀಸುಗಳಿಗೆ ರಜೆಯಿರುವ ಹಬ್ಬದ ದಿನದಂದು ತಡವಾಗಿ ಎದ್ದು, ರಜೆಯ ಮಜವನ್ನು ಸವಿದು, ಸಾಂಪ್ರದಾಯಿಕ ಊಟ ಬಡಿಸುವ ಹೊಟೇಲಿನಲ್ಲಿ ಹಬ್ಬದೂಟ ಮಾಡುವುದನ್ನು ತಮ್ಮ ಆಧುನಿಕತೆಯ ಲಕ್ಷಣವೆಂದುಕೊಂಡಿರುವ ಕೆಲವರನ್ನು ನೋಡುತ್ತೇವೆ. ಇದನ್ನು, ಅವರು ಕಂಡುಕೊಂಡ ಬದಲಾವಣೆಯ ಭ್ರಮೆ ಎನ್ನಬಹುದೇನೋ? ಒಂದು ದಿನದ ಹಬ್ಬದಾಚರಣೆಯೇ ಹೀಗಾಗಿದೆಯೆಂದರೆ, ಒಂದು ವರ್ಷಕ್ಕಾಗುವಷ್ಟು ಉಪ್ಪಿನಕಾಯಿ, ಹಪ್ಪಳ-ಸಂಡಿಗೆಗಳನ್ನು ಮಾಡಿಡುತ್ತಿದ್ದ ಪದ್ಧತಿಯೂ ನಿಂತುಹೋಗಿದೆ. ಇವುಗಳನ್ನು ತಿನ್ನಬೇಕೆಂಬ ಯೋಚನೆ ಮೂಡಿ ನಾಲಗೆ ನೀರೂಡಿಸಿದರೆ, 'ಸುಬ್ಬಮ್ಮ', 'ಕಮಲಮ್ಮ'ನ ಅಂಗಡಿಯಿಂದ ಖರೀದಿಸಿದರಾಯಿತೆಂಬ ಬದಲಾವಣೆಯನ್ನು ಕಾಣುತ್ತೇವೆ. ಹಬ್ಬದ ಸಂಭ್ರಮಾಚರಣೆಗೆಂದೇ ವರ್ಷಕ್ಕೆ ಮೂರರಿಂದ ನಾಲ್ಕು ಸಲ ಹೊಸ ಬಟ್ಟೆ ಖರೀದಿಸುತ್ತಿದ್ದ ರೂಢಿಯೂ ಬದಲಾವಣೆಯ ಜಾಡನ್ನು ಹಿಡಿದಿದೆ. ವರ್ಷಪೂರ್ತಿ ಕಣ್ಸೆಳೆಯುವ ಸೇಲ್ಗಳಲ್ಲಿ, ಆನ್-ಲೈನ್ ಶಾಪಿಂಗ್ ಎಂದು ಮನೆಯಲ್ಲೇ ಕುಳಿತು ಖರೀದಿ ಮಾಡಿದರೂ, ಎಲ್ಲರಲ್ಲಿ ಅದೇನೋ ಅತೃಪ್ತಿ ಕಾಣುತ್ತದೆ.

ಮನೆಯಲ್ಲಿನ ಜನರ ಜೀವನಶೈಲಿ ಬದಲಾಗುವುದರೊಂದಿಗೆ ಅವರ ಹವ್ಯಾಸಗಳೂ ಬದಲಾಗಿದ್ದನ್ನು ಕಾಣುತ್ತೇವಲ್ಲ? ದಶಕಗಳು ಕಳೆದಂತೆ ಪುಸ್ತಕಗಳನ್ನು ಓದುವ ಹವ್ಯಾಸ ಬಹುತೇಕ ಮನೆಗಳಲ್ಲಿ ಕಡಿಮೆಯಾಗಿರುವುದು ಕಂಡುಬರುತ್ತಿದೆ. ನಾನು ಬಾಲ್ಯದಿಂದ ಓದಿಕೊಂಡು ಬೆಳೆದ 'ಚಂದಮಾಮ', 'ಬೊಂಬೆಮನೆ' ಪತ್ರಿಕೆಗಳು ಬರೀ ನೆನಪುಗಳಾಗಿ ಉಳಿದಿವೆ. ಅದೆಷ್ಟೋ ಮನೆಗಳಲ್ಲಿ ವಾರಪತ್ರಿಕೆಗಳು, ಮಾಸಪತ್ರಿಕೆಗಳನ್ನು ಕೊಂಡು ಓದುವ ರೂಢಿ ನಿಂತುಹೋಗಿದೆ. ಇದಕ್ಕೆ ನಮ್ಮ ಮನೆಯೂ ಹೊರತಾಗಿಲ್ಲ. ನಾವೆಲ್ಲ ಶಾಲಾ-ಕಾಲೇಜಿನ ದಿನಗಳಲ್ಲಿ ಮನೆಗೆ ತಂದು ಓದುತ್ತಿದ್ದ ವಾರಪತ್ರಿಕೆಗಳನ್ನು ಓದಲು ಈಗ ನಮ್ಮ ಮನೆಯಲ್ಲಿನ ಮಕ್ಕಳು, ಹಿರಿಯರು ಇಷ್ಟಪಡುವುದಿಲ್ಲ ಎನ್ನುವ ಕಾರಣ ಮನಸ್ಸಿಗೆ ನೋವನ್ನು ತರುತ್ತದೆ. ದೃಶ್ಯಮಾಧ್ಯಮದ ಹಾವಳಿಯಿಂದ ಈ ಬದಲಾವಣೆಯಾಗಿದೆ ಎನ್ನುವುದನ್ನು ಒಪ್ಪಿಕೊಳ್ಳುವಂತೆ ಮಾಡುತ್ತದೆ. ಜೊತೆಗೆ ದೂರದರ್ಶನದ ಒಂದು ಚಾನೆಲ್ ನೋಡುತ್ತಿದ್ದ ಅಂದಿನವರ ಉತ್ಸಾಹವನ್ನು ಈಗಿನ ನೂರಾರು ಚಾನೆಲ್ಲುಗಳನ್ನು ನೋಡುವ

(ಚಾನೆಲ್ಲುಗಳನ್ನು ಬದಲಾಯಿಸುವ) ಹುಚ್ಚಿಗೆ ಹೋಲಿಸಿ ನೋಡಿದಾಗ, "ಅತಿಯಾದರೆ ಅಮೃತವೂ ವಿಷವಾಗುತ್ತದೆ" ಎನ್ನುವಂತಾಗಿದೆಯಲ್ಲವೇ? ಇನ್ನು, ಕಳೆದೊಂದು ದಶಕದಿಂದ ನಮ್ಮೆಲ್ಲರ ಜೀವನಕ್ಕೆ ಲಗ್ಗೆಯಿಟ್ಟ ಸಾಮಾಜಿಕ ಜಾಲತಾಣಗಳು, ತಂತ್ರಜ್ಞಾನದಲ್ಲಿನ ಬದಲಾವಣೆ, ಮನುಷ್ಯನ ಬದುಕಿನಲ್ಲಿ ವೈಜ್ಞಾನಿಕವಾಗಿ, ಸಾಮಾಜಿಕವಾಗಿ ಏನೆಲ್ಲ ಹೊಸತನ್ನು ನೀಡಿದ್ದರೂ, ಅವುಗಳ ಬಳಕೆಯಲ್ಲಿನ ಮಿತಿ–ಪರಿಮಿತಿಗಳನ್ನು ಅರಿತುಕೊಂಡಾಗಲೇ ಅದು ಸಕಾರಾತ್ಮಕ ಬದಲಾವಣೆ ಎನಿಸಿಕೊಳ್ಳುತ್ತದಲ್ಲವೇ? ಈ ಬದಲಾವಣೆಯನ್ನು ಕಾಣುವಲ್ಲಿ ಹಳ್ಳಿ–ಪಟ್ಟಣಗಳ ಮನೆಗಳೂ, ನಗರದ ಮನೆಗಳೂ ಎಂಬ ಭೇದವಿಲ್ಲ. ಆಗಸದ 'ಚಂದಮಾಮಾ'ನನ್ನು ತೋರಿಸಿ ಪುಟ್ಟ ಮಕ್ಕಳಿಗೆ ಅಜ್ಜಿ–ಅಮ್ಮ ಊಟ ಮಾಡಿಸುತ್ತಿದ್ದ ಬಗೆ ಬದಲಾಗಿ, ಟಿ.ವಿ.ಯನ್ನು ತೋರಿಸುತ್ತ ಊಟ ಮಾಡಿಸುವುದರೊಂದಿಗೆ, ಈಗ ಮಕ್ಕಳ ಕೈಯಲ್ಲಿ ಸ್ಮಾರ್ಟ್ ಫೋನ್ ಇಟ್ಟು ಊಟ ಮಾಡಿಸುವಲ್ಲಿಗೆ ಬದಲಾವಣೆಯನ್ನು ಕಂಡಿದೆ! ನಾವೆಲ್ಲ ಚಿಕ್ಕವರಾಗಿದ್ದಾಗ ಆಡಿದ ಆಟಗಳನ್ನು ನಮ್ಮ ಮಕ್ಕಳಿಗೂ ಕಲಿಸುವ ಬದಲು, ಹಿಂದಿನ ಆಟ–ಪಾಠಗಳು ಮರೆಯಾಗಿ ಹೋಗಿವೆ ಎಂದು ನೆನಪಿಸಿಕೊಳ್ಳಲೂ ಸಾಮಾಜಿಕ ಜಾಲತಾಣಗಳ ಮೊರೆಹೋಗುತ್ತಿರುವುದು ಸಾಮಾನ್ಯವಾಗಿದೆ. ಮನೆಯ ಹಿರಿಯರು ಟಿ.ವಿ.ಯ ಧಾರಾವಾಹಿಗಳಿಗೆ ಅಂಟಿಕೊಂಡಂತೆ, ಮಕ್ಕಳೂ ವಿಡಿಯೋ ಗೇಮ್‌ಗಳಲ್ಲಿ ಮಗ್ನರಾಗಿದ್ದಾರೆ. ಮಕ್ಕಳಿಗೆ ಅಜ್ಜ–ತಾತ ಹೇಳುವ ಕಥೆಗಳು ಬೇಕಾಗಿಲ್ಲ, ತಾತ–ಅಜ್ಜಿಗೆ ಟಿ.ವಿ.ಯ ಧಾರಾವಾಹಿಗಳಿಂದ ಸಮಯ ಸಿಗುವುದಿಲ್ಲ! ಚಿಕ್ಕಂದಿನಲ್ಲಿ ನಮಗೆಲ್ಲ ಅಜ್ಜಿ ಹೇಳುತ್ತಿದ್ದ ಪೌರಾಣಿಕ ಕಥೆಗಳು, ನೀತಿ ಕಥೆಗಳು ವಿಡಿಯೋ ಗೇಮ್‌ಗಳ ಹಾವಳಿಯಲ್ಲಿ ಈಗ ಕಳೆದುಹೋಗಿವೆ.

ಮನೆಯಲ್ಲಿ ಕಂಡ ಬದಲಾವಣೆಗಳ ಬಗ್ಗೆ ಬರೆಯುವಾಗ, ಅಕ್ಕ–ಪಕ್ಕದ ಮನೆಯವರ ಬಗ್ಗೆ ಬರೆಯದಿದ್ದರೆ ಹೇಗೆ? ಈ ನಿಟ್ಟಿನಲ್ಲಿನ ಬದಲಾವಣೆಯನ್ನು ಹೆಚ್ಚಾಗಿ ನಗರಗಳಲ್ಲಿಯೇ ಕಾಣುತ್ತೇವೆ. ಇತ್ತೀಚೆಗೆ ದಾರಿಯಲ್ಲಿ ನಮ್ಮನ್ನು ಕಂಡಾಗ ಮುಗುಳ್ನಗುವವರ, ಪರಸ್ಪರ ಸುಖ–ದುಃಖ ವಿಚಾರಿಸುವವರ, ಇತರರಿಗಾಗಿ ಸ್ಪಂದಿಸುವವರ ಸಂಖ್ಯೆ ಕಡಿಮೆಯಾಗಿದೆ ಎನಿಸುವುದಲ್ಲವೇ? ಪ್ರತಿ ನಿಮಿಷವೂ ಓಡುವುದನ್ನೇ ಅಪೇಕ್ಷಿಸುವ ನಗರಜೀವನದಲ್ಲಿ ಇದಕ್ಕೆಲ್ಲ ಸಮಯವೆಲ್ಲಿದೆ? ಹೆಣ್ಣುಮಕ್ಕಳು ತಮ್ಮ ಮನೆಯ ಮುಂದಿನ ಕಟ್ಟೆಯ ಮೇಲೆ ಕುಳಿತುಕೊಂಡು, ಕಾಂಪೌಂಡಿನ ಗೋಡೆಗೆ ಒರಗಿಕೊಂಡು ಮಾತುಕತೆಯಲ್ಲಿ ನಿರತರಾಗಿರುತ್ತಿದ್ದರು ಎಂಬುದನ್ನು ಈಗ ಊಹಿಸಲೂ ಆಗದಂತಾಗಿದೆ. ಹಿಂದಿನ ಕಾಲದ ಸಿ.ಸಿ.ಟಿ.ವಿ.ಗಳೆಂದು ಅಕ್ಕಪಕ್ಕದ ಮನೆಯ ಅಜ್ಜಿಯರನ್ನು ಹಾಸ್ಯಾಸ್ಪದವಾಗಿ ತೋರಿಸಿದ್ದ ಸಂದೇಶವೊಂದನ್ನು ವಾಟ್ಸ್ಯಾಪಿನಲ್ಲಿ ನೋಡಿದಾಗ, ಅವಶ್ಯಕತೆಯಿದ್ದಾಗ ಒಬ್ಬರಿಗೊಬ್ಬರು ಸಹಾಯಕ್ಕೆ ನಿಂತು, ನೆರೆಹೊರೆಯವರ ಸಂತೋಷದಲ್ಲಿ ಭಾಗಿಯಾಗುವುದರೊಂದಿಗೆ ಅವರ ನೋವಿಗೆ ಸ್ಪಂದಿಸುತ್ತಿದ್ದವರು ಈ ಅಕ್ಕಪಕ್ಕದ ಮನೆಯವರಲ್ಲವೇ ಎನಿಸಿತ್ತು. ಈಗೀಗ ಪಕ್ಕದ ಮನೆಯಲ್ಲಿರುವವರ ಪರಿಚಯವೇ ನಮಗೆ ಇರುವುದಿಲ್ಲವೆಂದಾಗ ಸ್ಪಂದಿಸುವ

ವಿಚಾರವೆಲ್ಲಿಯದು? ಇನ್ನು ಬಹುಮಹಡಿಯ ಫ್ಲ್ಯಾಟುಗಳಲ್ಲಿ ವಾಸಿಸುವವರಿಗೆ ತಮ್ಮ ಪಕ್ಕದ ಮನೆಯಲ್ಲಿರುವ ಕುಟುಂಬದವರ ಮುಖ ಪರಿಚಯವೂ ಇರುವುದಿಲ್ಲ. ಎದುರಿಗೆ ಸಿಕ್ಕರೆ ನಮ್ಮ ಪಕ್ಕದ ಮನೆಯವರೆಂದು ಗುರುತಿಸಲೂ ಆಗದಿದ್ದಾಗ, "ನಮಗೇಕೆ ಇನ್ನೊಬ್ಬರ ಗೊಡವೆ?" ಎನ್ನುವಷ್ಟರ ಮಟ್ಟಿಗೆ ಬದಲಾದ ಪರಿಸ್ಥಿತಿಯನ್ನು ಕಾಣುತ್ತಿದ್ದೇವೆ.

ಮನೆಯೊಂದಿಗೆ ಕುಟುಂಬ, ಅದರೊಡನೆ ಬರುವ ಸಂಬಂಧಗಳು, ಈ ಎಲ್ಲ ಸಂಬಂಧಗಳೊಂದಿಗೆ ಕಳೆಯುವ ಕ್ಷಣಗಳು ಬದುಕಿನುದ್ದಕ್ಕೂ ಜೊತೆಯಾಗುವವು. ಸಂಬಂಧಗಳ ನಡುವಿನ ವಿಶ್ವಾಸ, ಅಲ್ಲಿನ ಪ್ರತಿಯೊಬ್ಬ ಸದಸ್ಯ ಬೆಳೆಸಿಕೊಳ್ಳುವ ಆತ್ಮವಿಶ್ವಾಸಕ್ಕೂ ಕಾರಣವಾಗುತ್ತದೆ ಎನ್ನುವ ಮಾತು ನಿಜವೆನಿಸಿದರೂ, ಬದಲಾದ ಮನೆಯ ವಾತಾವರಣ ಮನಗಳನ್ನು ಬದಲಾಯಿಸುವಲ್ಲಿ ತಡಮಾಡುವುದಿಲ್ಲ ಎನಿಸುತ್ತದೆ. ನಮ್ಮ ನಡುವಿನ ಭಾವನಾತ್ಮಕ ಬೆಸುಗೆಗಳು ಬದಲಾಗುವುದರೊಂದಿಗೆ ಕೆಲವೊಮ್ಮೆ ನಾವೂ ಬದಲಾಗುತ್ತೇವೆ. ಹೊಂದಾಣಿಕೆಯೆ ಬದುಕಿನ ಸೂತ್ರವೆನ್ನುವುದು ಮರೆತುಹೋಗಿದೆ. ಹಲವು ವರ್ಷಗಳಿಂದ ಕಣ್ಮರೆಯಾಗುತ್ತ ಬಂದ ಅವಿಭಕ್ತ ಕುಟುಂಬ ಪದ್ಧತಿ, ಈಗ ಒಂದು ಕುಟುಂಬಕ್ಕೇ ಸೀಮಿತಗೊಂಡಿದ್ದನ್ನು ಕಾಣುತ್ತೇವೆ. 'ನಾವು', 'ನಮ್ಮದು' ಎನ್ನುವ ಹೃದಯ ವೈಶಾಲ್ಯ, 'ನಾನು', 'ನನ್ನದು' ಎಂದು ಸಂಕುಚಿತಗೊಂಡಿದೆ. ಈ ಬದಲಾವಣೆಯನ್ನು ಕಂಡಾಗ, "ಹತ್ತಿರವಿದ್ದು ದೂರ ನಿಲ್ಲುವೆವು ನಮ್ಮ ಅಹಮ್ಮಿನ ಕೋಟೆಯಲಿ, ಎಷ್ಟು ಕಷ್ಟವೋ ಹೊಂದಿಕೆ ಎಂಬುದು ನಾಲ್ಕು ದಿನದ ಈ ಬದುಕಿನಲಿ" ಎನ್ನುವ ಸಾಲುಗಳು ನೆನಪಾಗುತ್ತವೆ. ಕಾಲ ಬದಲಾದಂತೆ ಮನೆಯಲ್ಲಿನ ಸಂಬಂಧಗಳ ವ್ಯಾಪ್ತಿಯೂ ವಿಸ್ತಾರವಾಗುತ್ತದೆ. ಅದಕ್ಕೆ ತಕ್ಕಂತೆ ನಮ್ಮ ಮನಸ್ಸನ್ನು ಬದಲಾಯಿಸಿಕೊಳ್ಳುವ ಪ್ರಬುದ್ಧತೆಯೂ ಬೇಕಲ್ಲವೇ? ನಮ್ಮ ಬದುಕಿನ ಆದ್ಯತೆಗಳನ್ನು ತೂಗುವಲ್ಲಿ ಮನಸ್ಸು ವಿಫಲಗೊಂಡಾಗ, ಮನೆಯ ಹಿರಿಯರನ್ನು ದೂರ ಮಾಡುವುದನ್ನೂ, ಒಂಟಿಯಾಗಿ ಬದುಕುವಂತೆ ಮಾಡುವುದನ್ನೂ ಕಾಣುತ್ತೇವೆ. ಇನ್ನು ಬದುಕಿನ ಸತ್ಯವನ್ನು ಎದುರಿಸುವ ಸರದಿ ನಮ್ಮದಾದಾಗ, ನಾವು ನೀಡುವ ಅನವಶ್ಯಕ ಸಮರ್ಥನೆಗಳು, ಮಾಡುವ ಆರೋಪ-ಪ್ರತ್ಯಾರೋಪಗಳು ಮನಸ್ಸನ್ನು ಅನಾರೋಗ್ಯಗೊಳಿಸುವಲ್ಲಿ ಮುಂಚೂಣಿಯಲ್ಲಿರುತ್ತವೆ ಎನ್ನುವುದನ್ನು ನಮಗಾಗುವ ಅನುಭವಗಳಿಂದ ತಿಳಿದುಕೊಳ್ಳುತ್ತೇವೆ. ಮನುಷ್ಯ ತನ್ನ ಪ್ರಾಮಾಣಿಕತೆಯನ್ನು ಕಳೆದುಕೊಂಡಾಗ ಮನದ ಕನ್ನಡಿಯೂ ಬದಲಾಗಿ, ವಿರೂಪದ ಪ್ರತಿಬಿಂಬವನ್ನೇ ಬಿಂಬಿಸುತ್ತದೆಯಲ್ಲವೇ? ಈ ಹಿಂದೆ ಹೀಗಿರಲಿಲ್ಲವಲ್ಲ, ಸಾಗುವ ಸಮಯದೊಂದಿಗೆ ಅಂತರಾತ್ಮವೂ ಬದಲಾಗುವುದೇ? ಮನುಷ್ಯನ ಭಾವನೆಗಳನ್ನು ಮನೆಯವರೇ ದುರುಪಯೋಗಪಡಿಸಿಕೊಳ್ಳುವುದನ್ನು ಬದಲಾವಣೆ ಎನ್ನುವುದೇ ಎಂದು ಪ್ರಶ್ನಿಸಿಕೊಳ್ಳುವಂತಾಗಿದೆ.

ಇನ್ನು ಅಂತರ್ಜಾಲ, ಸಾಮಾಜಿಕ ಜಾಲತಾಣಗಳಿಂದ ಅರೆ-ಬರೆ ಮಾಹಿತಿ ಪಡೆದ ಇಂದಿನ 'ಗೂಗಲ್ ಜ್ಞಾನಿ'ಗಳ ಮತ್ತು ಜೀವನಾನುಭದಿಂದ ಜ್ಞಾನ ಪಡೆದ ಹಿಂದಿನ 'ಅನುಭವಜ್ಞಾನಿ'ಗಳ ನಡುವೆ ಮಾತಿನ ಘರ್ಷಣೆ ನಡೆದಾಗ, ಮನಸ್ಸುಗಳು

ದೂರವಾಗುವುದಷ್ಟೇ ಅಲ್ಲ ಅಪರಿಚಿತವಾಗುವುದೂ ಕಂಡುಬರುತ್ತದೆ. ನಾವಾಡುವ ಅದೆಷ್ಟೋ ಅನವಶ್ಯಕ, ಅರ್ಥವಿಲ್ಲದ ಮಾತುಗಳು ಮನಸ್ಸುಗಳನ್ನು ಬದಲಾಯಿಸುವಲ್ಲಿ ಮುಖ್ಯ ಪಾತ್ರ ವಹಿಸುತ್ತವೆ ಎಂದುಕೊಂಡಾಗ, "ಮಾತು ಬರುವುದು ಎಂದು ಮಾತಾಡುವುದು ಬೇಡ, ಒಂದು ಮಾತಿಗೆ ಎರಡು ಅರ್ಥವುಂಟು, ಎದುರಿಗಿರುವವನ ಕೂಡ ಮಾತು ಬಲ್ಲವ ಗೆಳೆಯ, ಬರಿದೆ ಆಡುವ ಮಾತಿಗರ್ಥವಿಲ್ಲ" ಎನ್ನುವ ಕವಿತೆಯ ಸಾಲುಗಳು ನಮ್ಮ ಬದುಕಿಗೆ ಕಿವಿಮಾತಾಗಿ ಕಾಣುತ್ತವೆ. ನಮ್ಮ ಸ್ವಾಭಿಮಾನ, ವ್ಯಕ್ತಿತ್ವಕ್ಕೆ ಧಕ್ಕೆ ಉಂಟುವಾಡುವ ಸಂಬಂಧಗಳಿಂದ ದೂರ ಉಳಿಯುವುದೇ ಒಳಿತೆನ್ನುವ ನಿರ್ಧಾರ ಮನಸ್ಸಿನದಾಗುತ್ತದೆ. ಮನಸ್ಸುಗಳ ನಡುವಿನ ಅಂತರ ಸಂಬಂಧದ ಎಳೆಗಳನ್ನು ಸಡಿಲಗೊಳಿಸುತ್ತದಲ್ಲವೇ? ಬದಲಾಗುವ ಸಮಯ ಹಾಗೂ ಪರಿಸ್ಥಿತಿಗಳ ಜೊತೆಗೆ ಸಂಬಂಧಗಳು ಬದಲಾಗುತ್ತವೆಯೇ? ಅಥವಾ ಅವುಗಳನ್ನು ನಿಭಾಯಿಸುವವರು ಬದಲಾಗುವರೋ? ಬಾಲ್ಯದ ದಿನಗಳಿಂದ ನನ್ನ ಸುತ್ತಮುತ್ತಲಿನ ಮನೆ–ಮನಗಳಲ್ಲಿ ಆದ ಬದಲಾವಣೆಗಳನ್ನು ನೋಡುತ್ತ, ಕಾರಣವನ್ನು ಹುಡುಕುತ್ತ ಯೋಚಿಸಿದಂತೆಲ್ಲ, "ದಿನಗಳೆದಂತೆ ಸಂಬಂಧಗಳು ಬಣ್ಣ ಕಳೆದುಕೊಂಡು ಮಸುಕಾಗುತ್ತವೆ" ಎನ್ನುವ ಸಾಲುಗಳು ನನ್ನನ್ನು ಕಾಡುತ್ತವೆ. ಬಾಲ್ಯದ ದಿನಗಳಲ್ಲಿ ಸಂಬಂಧಗಳಲ್ಲಿ ಕಂಡುಬರುವ ಗಾಢತೆ ಸಮಯ ಸರಿದಂತೆ ಏಕೆ ಮಸುಕಾಗುತ್ತದೆ? ಬಟ್ಟೆಯ ನೇಯ್ಗೆಯ ಎಳೆಗಳು ಸಡಿಲಗೊಂಡಂತೆ, ಪ್ರೀತಿ–ವಾತ್ಸಲ್ಯ, ಮಮತೆ–ವಿಶ್ವಾಸಗಳ ಎಳೆಗಳಿಂದ ನೇಯಲ್ಪಟ್ಟ ಸಂಬಂಧದ ಎಳೆಗಳೂ ಸಡಿಲಗೊಳ್ಳುತ್ತವೆಯೇ? ಕಾಲ ಬದಲಾದಂತೆ ಪರಿಸ್ಥಿತಿ, ಮನಸ್ಥಿತಿಗಳಲ್ಲಿ ಇಷ್ಟೊಂದು ಬದಲಾವಣೆಯೇ? ನನ್ನನ್ನು ಕಾಡಿದ ಈ ಎಲ್ಲ ಪ್ರಶ್ನೆಗಳಿಗೆ ಡಿ.ವಿ.ಜಿ. ಅವರ 'ಮಂಕುತಿಮ್ಮನ ಕಗ್ಗ'ದ ಪದ್ಯವೊಂದರಲ್ಲಿ ಉತ್ತರ ಕಂಡಿತ್ತು.

**ಮಲಗಿದೋದುಗನ ಕೈ ಹೊತ್ತಗೆಯು ನಿದ್ದೆಯಲಿ ।**
**ಕಳಚಿ ಬೀಳ್ವದು; ಪಕ್ವ ಫಲವಂತು ತರುವಿಂ ॥**
**ಇಳೆಯ ಸಂಬಂಧಗಳು ಸಂಕಲ್ಪ ನಿಯಮಗಳು ।**
**ಸಡಿಲುವುವು ಬಾಳ್ ಮಾಗೆ – ಮಂಕುತಿಮ್ಮ ॥**

ನಮ್ಮ ಬದುಕಿನಲ್ಲಿ ಮನೆ–ಮನಗಳ ಬದಲಾವಣೆಯನ್ನು ಒಪ್ಪಿಕೊಳ್ಳುವುದು 'ಕಹಿ ಸತ್ಯ'ವೆನಿಸಿದರೂ, "ಕೋಯಿ ಲೌಟಾದೆ ಮೇರೆ ಬೀತೆ ಹುವೆ ದಿನ್, ಬೀತೆ ಹುವೆ ದಿನ್ ವೊ ಮೇರೆ ಪ್ಯಾರೆ ಪಲಛಿನ್ (ಕಳೆದುಹೋದ ನನ್ನ ಸುಂದರವಾದ ದಿನಗಳನ್ನು ಯಾರಾದರೂ ಹಿಂದಿರುಗಿಸುತ್ತೀರಾ?)" ಎಂದು ಹಾಡಿಕೊಂಡು ಮನನೊಂದುಕೊಳ್ಳುವುದರ ಬದಲು, ಈ ಬದಲಾವಣೆಗಳನ್ನು ಒಪ್ಪಿಕೊಳ್ಳುವಂತಹ ಮನಸ್ಸಿನ ಪಕ್ವತೆಯನ್ನು ಪಡೆಯುವ ಪ್ರಯತ್ನ ನಮ್ಮದಾಗಬೇಕಲ್ಲವೇ?

*

# ಪಿತೃಕಾಮೇಷ್ಟಿ

■ ಪ್ರಕಾಶ್ ನಾಯಕ್, Cupertino, CA.

– ೧ –

ಅಚ್ಚಬಿಳಿ ಪಂಚೆಯನ್ನು ಸುತ್ತಿಕೊಂಡ ವೃದ್ಧರೊಬ್ಬರು ಪಕ್ಕದಲ್ಲಿ ನಿಂತಿದ್ದ ಬೆಂಗಳೂರು ಬಸ್ಸಿನಿಂದಿಳಿದು, ಬಿರಬಿರನೆ ಬಸ್‌ಸ್ಟ್ಯಾಂಡಿನಿಂದ ಹೊರಧಾವಿಸುತ್ತಿದ್ದರು. ಕೆಲಸಕ್ಕೆ ಹೊರಟ ಮಗನನ್ನೋ ಮಗಳನ್ನೋ ಬಸ್ಸುಹತ್ತಿಸಿ ಮನೆಗೆ ಹೋಗುತ್ತಿರಬಹುದು ಎನ್ನುವ ಯೋಚನೆ ಬಂದೊಡನೆ, "ಇದೊಂದ್ ಕೆಲ್ಸ ಮಾಡ್ಲೇಬೇಕು ನೀನು" ಎನ್ನುವಂತೆ ದಿಟ್ಟಿಸಿನೋಡಿ, ತಮ್ಮ ಮುಖವನ್ನು ಆವರಿಸಿದ್ದ ನಿರಾಶೆ, ಹನಿಗೂಡುತ್ತಿರುವ ಕಣ್ಣುಗಳನ್ನು ಮರೆಮಾಡಲೆಂದು ಮುಖ ಹೊರಳಿಸಿದ ಅಪ್ಪನ ಚಿತ್ರ ಕಣ್ಣಿಗೆ ಕಟ್ಟಿ ಭಗೀರಥ ಬೇಚೈನುಗೊಂಡ. ಊರು ಮುಟ್ಟಿದೊಡನೆ ಹೇಗಾದರೂ ಮಾಡಿ ಗಣಪತಣ್ಣನ ಬಾಯಿ ಬಿಡಿಸಲೇಬೇಕು. ಅಂತು ತಿಳಿಯದೆ ಅಪ್ಪನ ಮೌನದ ಚಕ್ರವ್ಯೂಹವನ್ನು ಭೇದಿಸುವುದಾದರೂ ಹೇಗೆ? ಗಣಪತಣ್ಣನಿಗೆ ಹೇಳಬೇಕೆಂದಿದ್ದ ಮಾತುಗಳನ್ನು ಮತ್ತಷ್ಟು ಹುರಿಗೊಳಿಸುವ ಮನಸ್ಸಾಯಿತು. ಆದರೆ ಅಂದುಕೊಂಡಿದ್ದ ಮಾತೊಂದೂ ನೆನಪಾಗದು. ಛೆ! ಅಕ್ಕನ ಮಗ ಸಾಂತನಾದರೂ ಇದ್ದಿದ್ದರೆ? ಕುಮಟೆಯಿಂದ ಗೋಕರ್ಣದವರೆಗೂ ಬಂದಿದ್ದ ಪುಣ್ಯಾತ್ಮ, ಕೊನೆಗಳಿಗೆಯಲ್ಲಿ ಕೈ ಕೊಟ್ಟಿದ್ದ.

"ಅಣ್ಣ, ನೀನೇ ಹೋಗ್ಬಾ. ಊರ ಗಾಂವ್ಕಾರ ನೀನ, ನಿಂಗೆ ಸಂತೀಗೆ ಯಾರ್ಬೇಕ? ಹೋಗುದು ಗಣಪತಣ್ಣನ ಮನೀಗೆ, ಉಳ್ಕಳ್ಳುದೂ ಅಲ್ಲೇ. ನಾನ್ ಬರೂಕಿಲ್ಲಾ ಅಂತ ಅಲ್ಲ, ಆದ್ರೆ... ನಂಗೆ... ಒಂದು ಸಣ್ಣ ಕೆಲ್ಸ್ ಬಂದ್ಬಿಟ್ಟಿದೆ. ಅದೇನಾಯ್ತಂದ್ರೆ..."

ಹಾಗೆ ಮುಖದ ಮೇಲೆ ಸೊಳ್ಳೆ ಹೊಡೆದಂತೆ, ಯಾವ ಬಿಡೆಬಿಸಾತೂ ಇಲ್ಲದೆ ಸುಳ್ಳು ಹೇಳುವಾಗ ಸಾಂತನೊಟ್ಟಿಗೆ ಅವನದೇ ಪ್ರಾಯದ, ಹುಡುಗಾಟದ ನಿಲುವಿನ, ತುಂಟ ನೋಟದ ಹುಡುಗನಿದ್ದ. ಈ ಬಸ್ ಸ್ಟ್ಯಾಂಡಿನಲ್ಲಿ ಅವ ಹೇಗೆ ಸಿಕ್ಕನೋ! ಅವರಿಬ್ಬರೂ ಸೇರಿ ಗೋಕರ್ಣದಲ್ಲಿ ಅದೇನು ಕಾರಸ್ಥಾನ ನಡೆಸುವವರಿದ್ದಾರೊ! ರಥಬೀದಿಯ

ಮಗ್ಗುಲುಗಳಲ್ಲಿ, ಚಿಪ್ಪಿಸರ, ಟೀ ಶರ್ಟುಗಳನ್ನು ನೇತುಹಾಕಿದ, ದಿನವಿಡೀ ನೊಣಹೊಡೆಯುತ್ತಿರುವಂತೆ ಕಾಣುವ ಗೂಡಂಗಡಿಗಳ ಅಸಲಿ ವ್ಯವಹಾರಗಳನ್ನು ಕುಮಟೆಯಿಂದ ಗೋಕರ್ಣ ತಲುಪುವ ತನಕವೂ ಕಿವಿತುಂಬುತ್ತ ಬಂದಿದ್ದ ಸಾಂತ, ಈಗ ತಪ್ಪಿಸಿಕೊಳ್ಳಲು ಸಬೂಬು ಹೇಳುತ್ತಿರುವಾಗ, ಮೀಸೆಯೂ ಮೂಡದ ಆ ಇನ್ನೊಬ್ಬ ಪೋರನ ತುಟಿಯಂಚಿನಲ್ಲಿ ಸಾಂತನ ಮಾತುಗಳೆಲ್ಲಾ ಹಸೀ ಸುಳ್ಳು ಎನ್ನುವಂತೆ ಸಣ್ಣ ನಗುವೊಂದು ಉಚಾಯಿಸುತಿತ್ತು. ಸಾಂತನ ಮಾತಿನಲ್ಲಿ, "ನಿನ್ನ ಊರು, ನಿನಗೇ ಗೊತ್ತಿಲ್ಲವೆ?" ಎನ್ನುವ ಸವಾಲಿನ ವಾಸನೆ ಹತ್ತಿದ್ದೇ ಭಗೀರಥ, "ಸರಿ ಮಾರಾಯ, ನಾನೊಬ್ನೇ ಹೋಗಿ ಬರ್ತೆ. ನಿನ್ನ ಅರ್ಜಂಟ್ ಕೆಲ್ಸ ಮುಗ್ಸಕೊ" ಎಂದು ವಾಪಸು ರಪ್ಪನೆ ಉತ್ತರಿಸಿದ್ದ. ಸಾಂತನ ಹತ್ತಿರ ಕೇಳಬೇಕೆಂದಿದ್ದ ಪ್ರಶ್ನೆಗಳು ಅವಡುಗಚ್ಚಿ ಕುಳಿತಿದ್ದವು. ಇಂತಹ ಸಂದರ್ಭದಲ್ಲಿ ಅಪ್ಪನ ನಾಲಿಗೆಯ ತುದಿಯಲ್ಲೇ ಕೂತಿರುತಿದ್ದ ಸಮಾಧಾನ ನೆನಪಾಯಿತು.

'ಮೋಡ ಕಟ್ಟದ್ರಾಗಲ್ವೊ. ಮಳೆ ಹುಯ್ಯುದಕ್ಕೂ ಮುಹೂರ್ತ ಕೂಡಿಬರ್ಬೇಕು.'

'ಹೌದು, ಅಂತಹ ಮುಹೂರ್ತ ಸ್ವಲ್ಪ ನಿಧಾನವಾದರೂ ಬಂದೇಬರುತ್ತದೆ' ಎಂದು ಒಳಗೊಳಗೇ ಗುದಮುರಿಗೆ ಹಾಕುತ್ತ ಇದು ಹೀಗೆಯೇ ಎಂದು ಹೆಸರಿಸಲಾಗದ ಮತ್ಯಾವುದಕ್ಕೋ ಧೈರ್ಯಪಟ್ಟುಕೊಳ್ಳುವುದಕ್ಕೂ, ಅಲ್ಲಿಯವರೆಗೂ ಕುಸುಕುಸು ಮಾಡುತ್ತ ನಿಂತಿದ್ದ ಅವನ ಬಸ್ಸು ಕೊನೆಗೂ ಕೊಸರಿಕೊಂಡು ಬಸ್‌ಸ್ಟಾಂಡಿನಿಂದ ಹೊರಬೀಳುವುದಕ್ಕೂ ಸರಿಹೋಯಿತು.

– ೨ –

ಸಾಂತ ಹೇಳುವುದರಲ್ಲೂ ಸತ್ಯವಿತ್ತು. ಊರಿನ ಅಂಗುಲಂಗುಲವೂ ಅರಿವಿದ್ದ ಭಗೀರಥನಿಗೆ ಅಲ್ಲಿಗೆ ಹೋಗಲು ಅಷ್ಟು ವರ್ಷಗಳ ನಂತರವೂ ಮತ್ತೊಬ್ಬರ ಅಗತ್ಯವಿರಲಿಲ್ಲ. ಹದಿಹರೆಯದಲ್ಲಿ ಓಡಾಡಿದ ಊರು, ನಂತರವೂ ಅಪ್ಪನೊಂದಿಗಿನ ಮಾತುಕತೆಗಳ ಮಧ್ಯೆ ನುಸುಳದ ದಿನಗಳೇ ಇರಲಿಲ್ಲ. ವರ್ಷಗಳುರುಳಿದಂತೆ ಮನಸ್ಸಿನಲ್ಲಿದ್ದ ಆ ಚಿತ್ರಗಳಿಗೆ ಹೊಸಹೊಸ ವಿವರಗಳು ಸೇರಿಕೊಂಡು ಇನ್ನಷ್ಟು ಕಳೆಗಟ್ಟುವುದನ್ನು ಗಮನಿಸಿ, ಆ ಇಡೀ ಚಿತ್ರ ತಮ್ಮಿಬ್ಬರ ಕಲ್ಪನೆ ಮಾತ್ರ, ತಿದ್ದಿತಿದ್ದಿ ಬದಲಾದ ಚಿತ್ರಗಳ ವಾಸ್ತವ ಬೇರೆಯೇ ಇರಬಹುದೆಂದು ಗುಮಾನಿಪಟ್ಟಿದ್ದೂ ಇದೆ. ಅದಲ್ಲದಿದ್ದರೆ...

ಅಪ್ಪನ ಪ್ರಾಯದಲ್ಲಿ ಜೋಳಿಯಲ್ಲಿ ಮೊಗ್ಗೆಕಾಯಿ ತುಂಬಿ ಗೋಕರ್ಣ ಪೇಟೆಯಲ್ಲಿ ಮಾರಲು, ಅದೂ ಬರಿಗಾಲಿನಲ್ಲಿ ಹೊತ್ತು ತರುತ್ತಿದ್ದರಂತೆ. ಹಾಗೆಯೇ ತೊಟ್ಟು ನೀರೂ ಬೆರೆಸಿರದ ಹಾಲಿನ ತಂಬಿಗೆಗಳನ್ನು ಮುಂಜಿ–ಮದುವೆ–ಶ್ರಾದ್ಧ ಎಂದು ವರುಷವಿಡೀ ಸಂತರ್ಪಣೆಯಿರುತ್ತಿದ್ದ ಗಜಾನನ ಪಂಡಿತರ ಮನೆಯಲ್ಲಿ ಖಾಲಿ ಮಾಡುತ್ತಿದ್ದರಂತೆ. ಅದೇ ತಂಬಿಗೆಯಲ್ಲಿ ಅವರು ಕೇಸರಿಬಾತು ತುಂಬಿಕೊಡುತ್ತಿದ್ದರಂತೆ. ಎಲ್ಲವೂ

ನೋವುನಲಿವುಗಳನ್ನು ನವಿರಾಗಿ ಹೆಣಿಕೆ ಹಾಕಿದ ಮುಗಿಯದ ಧಾರಾವಾಹಿಗಳು. ಇಂತಹ ಕತೆಗಳನ್ನು ಅದೆಷ್ಟು ಬಾರಿ ಹೇಳಿದ್ದರೆಂದರೆ, ಅವುಗಳೊಡನೆ ಹೇಳಿದ ಧಾಟಿಯೂ, ಕೊನೆಯಲ್ಲಿನ ನಿಟ್ಟುಸಿರೂ ಕಿವಿಯಲ್ಲಿ ಕೂತುಬಿಟ್ಟಿದ್ದವು. ಆ ನಾಸ್ಟಾಲ್ಜಿಕ್ ದನಿಗಳಿಗೆ ಮೈಕೊಡುವಂತೆ ಬಂಕಿಕೋಡ್ಲ ದಾಟಿದ ನಂತರದ ಎರಡು ಸಣ್ಣ ಗುಡ್ಡಗಳು, ಮಾಬಲ ಶೆಟ್ಟರ ಕಿರಾಣಿ–ಕಂ–ಚಾದಂಗಡಿ, ಗಾಜಿನ ಕಪಾಟಿನಲ್ಲಿದ್ದ ಖಾರದವಲಕ್ಕಿ–ಕಾಜಮೇಜಿನ ಗುಡ್ಡೆಗಳು, ಬೆಳಿಗ್ಗಿನಿಂದ ಸಂಜೆಯವರೆಗೂ ಕಿತ್ಲಿಯಲ್ಲಿ ಕುದಿಯುತ್ತಿದ್ದ ಕಡುಗೆಂಪು ಚಹ, ರಸ್ತೆಯಿಡೀ ಎತ್ತಿನ ಗಾಡಿಗಳು ಕೆದರಿಟ್ಟ ಧೂಳು, ಆ ಕೆಂಧೂಳಿನಲ್ಲಿ ಮುಳುಗೇಳುತ್ತಿದ್ದ ಬದಿಯಲ್ಲಿ ಗೇರು ಹಕ್ಕಲಗಳು, ಈ ಕೆಂಪುರಸ್ತೆಯ ಸಹವಾಸವೇ ಬೇಡ ಎನ್ನುವಂತೆ, ಬತ್ತದ ಗದ್ದೆಗಳ ಹಸಿರಿನ ನಡುವಿಂದ ಬೈತಲೆಯಂತೆ ಒಂಟಿಯಾಗಿ ಸಾಗುವ ಕಾಲುದಾರಿ... ಅಸಂಖ್ಯ ಚಿತ್ರಗಳು. ಒಂದು ಸಲ ಸ್ವತಃ ಭಗೀರಥನೇ ಚಿಕ್ಕಪ್ಪನ ಮಕ್ಕಳ ಜೊತೆ ಕೊನೆಯ ಶೋ ಸಿನೇಮಾ ನೋಡಿ, ಹೆಡ್–ಲೈಟ್ ಮತ್ತು ಬೆಲ್‌ಗಳ ಐಷಾರಾಮಿ ಇರದ ಲಟಾರಾ ಸೈಕಲ್ಲಿನಲ್ಲಿ, ಶಿಳ್ಳೆ ಹೊಡೆಯುತ್ತ ಊರು ಸೇರಿದ್ದ ಸೆಲ್ಫಿಯೂ ಇತ್ತು. ತಾನೇತಾನಾಗಿ ತೆರೆದುಕೊಳ್ಳುವ ಆ ನೆನಪಿನ ಸಂಪುಟದ ಚಿತ್ರಗಳೋ, ಹಿಗ್ಗಿಸಿದಷ್ಟೂ ಹೆಚ್ಚಿನ ವಿವರಗಳಿಂದ ತುಂಬಿಕೊಳ್ಳುವ ಅನಂತ ಸ್ಪಷ್ಟತೆಯ ಕನಸಿನ ಕಣಜಗಳು!

ಇವೆಲ್ಲ ರಸ್ತೆಗೆ ಡಾಂಬರು ಬೀಳುವುದಕ್ಕಿಂತ ಮುಂಚಿನ ಈಸ್ಟಮನ್ ಕಲರಿನ ಚಿತ್ರಗಳು. ಸುಣ್ಣ–ಗಿಲಾಯಿ ಕಂಡಿರದ, ಮಾಡಿಗೆ ಮಾಡು ತಾಗಿಸಿ ಒಟ್ಟಾಗಿ ನಿಂತ ಕೆಂಪುಕಲ್ಲಿನ ಒಂದಂತಸ್ತಿನ ಮನೆಗಳು, ಮನೆಗಿಂತ ದೊಡ್ಡ ಕೊಟ್ಟಿಗೆಗಳು, ಅವುಗಳನ್ನು ಬೇಕಾಬಿಟ್ಟಿಯಾಗಿ ಆವರಿಸಿಕೊಳ್ಳುವ ಗುಂಡುಗಲ್ಲಿನ ಪಾಗಾರ, ದಾಟಲು ಹಾವಸೆಗಟ್ಟಿದ ದಣಪೆ... ಎಲ್ಲವೂ ಅಲ್ಲಿನ ಕಥೆಗಳಿಗೆ ರಂಗಸಜ್ಜಿಕೆಗಳು. ಹಗಲಲ್ಲಿ ಮೇದು ಸಂಜೆ ತಾವಾಗಿಯೇ ಕೊಟ್ಟಿಗೆ ಸೇರುತ್ತಿದ್ದ ದನಗಳೂ, ಇಡೀ ಊರಜನರ ವಾಸನೆ ಹಿಡಿದು ಬಾಲ ಅಲ್ಲಾಡಿಸುತ್ತಿದ್ದ ನಾಯಿಗಳೂ, ಉಟ್ಟ ಕಚ್ಚೆಯಲ್ಲಿ ಊರುಸುತ್ತುವ ಗಂಡಸರೂ, ಕಸಬರಿಗೆ ಹಿಡಿದೇ ಕುಶಲ ವಿಚಾರಿಸುವ ಹೆಂಗಸರೂ ಆ ಚಿತ್ರಗಳಿಗೆ ಜೀವ ತುಂಬುತ್ತಿದ್ದರು. ಆ ನೆನಪುಗಳಲ್ಲಿ ಈಗ ಗೋಚರಿಸುವ ಊನವೆಂದರೆ, ಅಲ್ಲಿ ಎಲ್ಲವೂ ಸಾರ್ವಜನಿಕವಾಗಿದ್ದವು. ಕೊಡೆ, ಚಪ್ಪಲಿ, ಬ್ಯಾಟರಿ, ಕೈಚೀಲಗಳಂತಹ ದಿನೋಪಯೋಗಿ ಸಾಮಾನುಗಳು ಮನೆಯಿಂದ ಮನೆಗೆ ಓಡಾಡುತ್ತಿದ್ದವು. ಅವುಗಳೊಡನೆ ಸಂಸಾರದ ಗುಟ್ಟುಗಳೂ ಒಂದೆಡೆ ನಿಲ್ಲಲಾರದೇ ಕುಪ್ಪಳಿಸುತ್ತ, ಬಾವಿಕಟ್ಟೆ, ಗದ್ದೆ, ಗೊಬ್ಬರದಕುಳಿ, ಬೇಣ ಎನ್ನುವ ಭೇದ ತೋರದೇ ಎಲ್ಲೆಂದರಲ್ಲಿ ಬಯಲಾಗಿ ಹಗುರಾಗುತ್ತಿದ್ದವು. ಮನೆಗೆ ಬಂದ ನೆಂಟರು ಕೇರಿಯ ಉಳಿದ ಮನೆಗಳಲ್ಲಿ ನೀರನ್ನಾದರೂ ಕುಡಿಯದೇ ಹೋಗುವ ಸಾಧ್ಯತೆ ಇರಲಿಲ್ಲ. ಪರಿಕಿಸಿ ನೋಡಿದರೆ ಆ ಮನೆಗಳಿಗೆ ಸ್ವಂತ ರಸ್ತೆಗಳೂ ಇರಲಿಲ್ಲ. ಒಂದು ಮನೆಯ ಹಾದಿ ಇನ್ನೊಂದು ಮನೆಯ ಅಂಗಳದ ಮೂಲಕವೇ ಹಾದುಹೋಗುತ್ತಿತ್ತು. ಒಂದು ಜೀರಿಗೆ ಕಷಾಯ, ಅದಕ್ಕೆ ಪುರುಸೊತ್ತಿಲ್ಲದಿದ್ದರೆ ಕವಳ, ಇನ್ನೂ ತರಾತುರಿಯಲ್ಲಿದ್ದರೆ ನೀರು–ಬೆಲ್ಲ... ಈ ಆತಿಥ್ಯಕ್ಕೆ

ಸಮಾಧಾನವಾಗದೇ, "ಅದೇನು ಕುದುರೆ ಕಟ್ಟಿ ಬರ್ತಿರೋ ಏನೋ, ಕುಂಡೆ ಊರಲಿಕ್ಕೂ ಪುರುಸೊತ್ತಿಲ್ಲ" ಎನ್ನುವ ಆತ್ಮೀಯ ಆರೋಪ. ಇವುಗಳ ಮಧ್ಯೆ ಮಾತು, ಮಾತು, ಮಾತು... ಮನೆಯೆದುರಿನ ಚಿಟ್ಟೆಯೆಂಬ ಬಯಲು ರಂಗಮಂದಿರದಲ್ಲಿ ಅನಾವರಣಗೊಳ್ಳುವ ರಂಗುರಂಗಿನ ಹಗರಣಗಳು, DNA ಜಾಲಾಡುವ ಬಯ್ಗುಳಗಳು, TRP–ಸೆನ್ಸಾರುಗಳ ಹಂಗಿಲ್ಲದ ರಿಯಾಲಿಟಿ ಶೋಗಳಂತೆ ನಿರಂತರವಾಗಿ ಇರುತ್ತಿದ್ದವು.

"ಮನುಷ್ಯರಂತೆಯೇ ಪ್ರತೀ ಊರಿಗೂ ವಿವರಣೆಗೆ ನಿಲುಕದ ಸ್ವಂತಿಕೆಯಿರುತ್ತದೆ. ಅಲ್ಲಿನ ಊಟೋಪಚಾರಗಳಲ್ಲಿ, ನಡವಳಿಕೆಗಳಲ್ಲಿ, ಬಾಯ್ತುಂಬಿ ಉಗಿಯುವ ಬಯ್ಗುಳಗಳಲ್ಲಿ ಆ ನೆಲದ ವಾಸನೆಯಿರುತ್ತದೆ. ಆ ಮಣ್ಣಿನಲ್ಲಿ ಹುಟ್ಟಿಬೆಳೆಯದೇ ಆಮದಾದ ಆಧುನಿಕತೆ, ಮನುಷ್ಯರ ವಾಸನೆ ಮರೆಸಿ ಮತ್ತೇರಿಸುವ ಸುಗಂಧದ್ರವ್ಯದಂತೆ, ಅವುಗಳ ಸ್ವಂತಿಕೆಯನ್ನು ಸಪಾಟು ಮಾಡುತ್ತದೆ. ಪ್ರತಿ ಹಳ್ಳಿಯೂ ಗ್ಲೋಬಲ್ ಇಕಾನಮಿಯ ಯುನಿಫಾರ್ಮ್ ಧರಿಸಿ, ಒಂದು ಮತ್ತೊಂದರ ಪಡಿಯಚ್ಚಾಗಿ ನಕಾಶೆಯಲ್ಲಿನ ಬಿಂದುವಾಗುತ್ತದೆ. ಕಮ್ಯೂನಿಸಂ ಧಮಕಾಯಿಸಿ ವೈವಿಧ್ಯತೆಯ ನೆಲಸಮ ಮಾಡಿದರೆ ಕ್ಯಾಪಿಟಲಿಸಂ ಆಮಿಷ ಒಡ್ಡಿ ಅದನ್ನು ಸಾಧಿಸುತ್ತದೆ."

"ಅವಸಾನದತ್ತ ಪ್ರಾದೇಶಿಕ ಅಸ್ಮಿತೆ" ಸೆಮಿನಾರಿನಲ್ಲಿ ಶ್ಯಾಂಸುಂದರ್ ಇನಾಂದಾರ್ ಎಂಬ ತಜ್ಞ ತನ್ನ ಸಂಶೋಧನೆಯಲ್ಲಿ ಸಂಗ್ರಹಿಸಿದ ಉದಾಹರಣೆಗಳ ಸಮೇತ ವಿಷಯ ಮಂಡಿಸಿದಾಗ ಭಗೀರಥ ಬೆಚ್ಚಿ, ಒಮ್ಮೆ ಊರಿಗೆ ಹೋಗಿಬರುವ, ನೆನಪಿನ ನಾಸ್ಟಾಲ್ಜಿಕ್ ಚಿತ್ರಗಳ ಸತ್ಯವನ್ನು ಪ್ರೌಢ ಕಣ್ಣುಗಳಿಂದ ಖಾತ್ರಿಪಡಿಸಿಕೊಳ್ಳುವ ನಿರ್ಧಾರ ಮಾಡಿದ್ದ. ಅವಸರದ ಬದುಕಿನಲ್ಲಿ ಮತ್ತಷ್ಟು ವರ್ಷಗಳು ಮರೆಗೆ ಸರಿದಿದ್ದವು. ಅಪ್ಪನ ಆರ್ತ ನೋಟದ, ಅದರಲ್ಲಿಯೂ ಹೊಸದಾಗಿ ತಾವೇ ಹಾಕಿಕೊಂಡ ಕಡುಮೌನದ ಬಲವಂತ ಇಲ್ಲದಿರುತ್ತಿದ್ದರೆ ಈಗಲೂ ಹೋಗುತ್ತಿರಲಿಲ್ಲವೇನೋ! ಆದರೆ ಊರು ಈಗಾಗಲೇ ಬದಲಾಗಿರಬಹುದೇ?

"ಇಡೀ ಜಗತ್ತನ್ನು ಬೇಕಾದ್ರೆ ಬದಲು ಮಾಡಬಹುದು, ಆದರೆ ಈ ಹಡಬೆ ಊರು! ಊಹೂಂ, ಸಾಧ್ಯನೇ ಇಲ್ಲ. ಅಲ್ಲಿನ ನೀರಿನ ಗುಣವೇ ಹಾಗೆ, ತಾನೂ ಬದಲಾಗುವುದಿಲ್ಲ, ಆಗುವವರನ್ನೂ ಬಿಡುವುದಿಲ್ಲ."

ಯಾವ ಸಮಜಾಯಿಶಿಯನ್ನೂ ಕೊಡದೆ ಅಪ್ಪ ನಿರ್ಣಯ ಕೊಡುತ್ತಿದ್ದರು. ಹಾಗೆ ಹೇಳುವಾಗಿನ ಅವರ ಶ್ವಾಸದ ಏರಿಳಿಕೆಯಲ್ಲಿ, ಗಂಟಿಕ್ಕುವ ಮುಖದ ಸ್ನಾಯುಗಳಲ್ಲಿ ತೀವ್ರ ಅಸಮಾಧಾನವನ್ನು ಗುರುತಿಸಬಹುದಿತ್ತು. ಒಂದು ಭಾವುಕ, ನಿರ್ಣಾಯಕ ಗಳಿಗೆಯಲ್ಲಿ, "ಇಂದಿಗೆ ಈ ಊರಿನ ಋಣ ಮುಗಿಯಿತು, ಇನ್ನೊಮ್ಮೆ ಈ ದರಿದ್ರ ಊರಿಗೆ ಕಾಲಿಟ್ಟರೆ ಹೇಳು" ಎಂದು ಪಂಚೆ ಕೊಡವಿ ಅವರು ಬೆಂಗಳೂರಿಗೆ ಬಂದದ್ದು ಮೂವತ್ತು ವರ್ಷಗಳ ಹಿಂದೆ. ಆದರೆ ಬೆಂಗಳೂರಿನ ಸಿಮೆಂಟು–ಟಾರಿನ ಭರಾಟೆಯನ್ನು ಸಹಿಸಿಕೊಂಡು ಬಚಾವಾಗಿ ಉಳಿದ ಮಿಲಾವಟಿ ಮಣ್ಣು ದಿನವೂ ಊರ ದಿಕ್ಕಿಗೆ ಮುಖಮಾಡಿ ಮಲಗುತ್ತಿದ್ದ

ಬಲಿತ ಬೇರುಗಳಿಗೆ ಸ್ವಂತದ್ದಾಗಲೇ ಇಲ್ಲ, ಇದರಲ್ಲಿ ಯಾವುದಾದರೊಂದು ನೆಪಮಾಡಿ ಬೆಂಗಳೂರಿಗೆ ಬರುತ್ತಿದ್ದ ಅಂಗಡಿ ಗಣಪತಣ್ಣನ ಪಾಲು ಸಣ್ಣದಲ್ಲ. ಬೆಂಗಳೂರಿಗೆ ಬಂದಾಗ ಅವನಿಗೆ ಮನೆಯಲ್ಲಿ ಎಲ್ಲಿಲ್ಲದ ಮೆಹರಬಾನಿ. ಇಡೀ ದಿನ ಅವರ ಕಿವಿಯಲ್ಲಿ ಕುಸುಕುಸು ಮಾಡಿ ತಿದಿಯೊತ್ತಿ, ಕೊನೆಗೆ ಒಳಗಿನ ಶಾಖ ಭಗೀರಥನಿಗೂ ತಾಕುವಂತೆ ಹೇಳುತ್ತಿದ್ದ:

"ನಿಂಗೆ ನಂಬ್ಕಿ ಬರೂಹಂಗಿಲ್ಲವೊ ತಮ್ಮಾ, ಊರ ಜನ ಮಾತ್ರ... ನಾಲ್ಕಾಣೆ ಸಿಕ್ತದಂದ್ರೆ ಏನು ತಿನ್ನೂದಕ್ಕೂ ತಯಾರು. ನ್ಯಾಯದ ಮಾತು ಕೇಳಲೇಬ್ಯಾಡ. ಸುಬಗತನ ಎಲ್ಲಾ ಬರೀ ಬಾಯ್ಮಾತಲ್ಲೇ."

ಆದರೆ ಅಲ್ಲಿಯದೇ ಧೂಳಿನಿಂದ ಅರೆಕೆಂಪೇರಿದ ಖಾದಿ ಟೋಪಿ, ಧೋತಿ ಧರಿಸಿ ಮತ್ತೆ ಊರಿಗೆ ಹೊರಟು ನಿಂತಾಗ, ಅಲ್ಲಿಯವರೆಗೆ ಊರನ್ನು ದೂರಿದವ ತಾನಲ್ಲವೇ ಅಲ್ಲ ಎನ್ನುವಂತೆ, 'ನಿಮ್ಮಪ್ಪ ಬರೂದ ಬ್ಯಾಡವೊ ತಮ್ಮಾ, ನಿಮ್ಗೇನಾಗಿದ ಬರೂಕೆ? ಕದ್ದೊಂಡು ಬಂದರ್ಯೊ ಇಲ್ಲಾ ಖೂನಿ ಮಾಡಿಕೆ ಬಂದರ್ಯೊ? ನೀವು ಊರು ಬಿಟ್ರೂ ಊರು ನಿಮ್ಮ ಬಿಡುದಲ್ವೋ. ತಾಸಿಗೊಂದು ಬಸ್ಸು ಆಗಿದ್ದಾವೆ ಈಗ. ಗೋಕರ್ಣದಲ್ಲಿ ಹತ್ತಿದರೆ ಅರ್ಧ ಗಂಟೆಯಲ್ಲಿ ಊರು' ಎಂದು ಘೋಷಿಸಿ, ಆಮಂತ್ರಣದ ಜೊತೆಯಲ್ಲಿಯೇ ಇಲ್ಲದ ಅಪರಾಧೀ ಭಾವವನ್ನು ಹುಟ್ಟುಹಾಕಿ ಹೋಗುತ್ತಿದ್ದ. ಅವನು ಹೊರಬಿದ್ದಿದ್ದೇ, ಅಪ್ಪ, "ಈ ಗಣಪತಿ, ಇಲ್ಲಿ ಪಾಂಡವರಿಗೂ ಭಾವ, ಅಲ್ಲಿ ಕೌರವರಿಗೂ ಭಾವ. ಎರಡು ತಲೆಯ ಇಮ್ಮಡಿಗ" ಎಂದು ಬಯ್ದುಕೊಂಡರೂ ಮತ್ತೆ ಅವನ ನಿರೀಕ್ಷೆಯಲ್ಲಿಯೇ ಇರುತ್ತಿದ್ದರು.

ಅವರು ಅವನನ್ನು ಎದುರುನೋಡುತ್ತಿದ್ದರೋ ಅಥವಾ ಅಲ್ಲಿನ ಸುದ್ದಿಗಳನ್ನು ಎದುರುನೋಡುತ್ತಿದ್ದರೋ? ಇಡೀ ಜಗತ್ತಿನ ರಾಜಕೀಯದ ಬೀಜವೇ ಆ ಊರಲ್ಲಿದ್ದ ಹಾಗೆ, ಊರಿಗೆ ಊರೇ ನಿಂತು ತಮ್ಮನ್ನು ಗಡಿಪಾರು ಮಾಡಿದ ಹಾಗೆ ವರ್ತಿಸುತ್ತಿದ್ದರು. ನಿದ್ದೆಯಲ್ಲೂ, ಊರು, ಅಲ್ಲಿಯ ಜನ ಬದಲಾಗಬಹುದು, ತಮ್ಮನ್ನು ಬರಮಾಡಿಕೊಳ್ಳಬಹುದು ಎನ್ನುವ ನಿರೀಕ್ಷೆಯಲ್ಲಿ ನೆಲಕ್ಕೆ ಕಿವಿಕೊಟ್ಟು ಮಲಗಿದಂತೆ ಅನಿಸುತ್ತಿತ್ತು. ಆದರೆ, ಬೆಂಗಳೂರಿನಲ್ಲಿ ಸಂಸಾರಮಾಡಿ ದೀಪಾವಳಿ, ಬಂಡೀಹಬ್ಬ ಎಂದು ಸವುಡು ಸಿಕ್ಕಾಗಲೆಲ್ಲ ಊರಿಗೆ ಬಂದುಹೋಗಿ ಮಾಡುವವರು, "ಅಣ್ಣ, ಊರು ಮಾತ್ರ ಹ್ಯಾಂಗಿತ್ತೋ ಹಾಂಗೇ, ಫ್ರಿಜ್ನಲ್ಲಿ ಹಾಕಿಟ್ಟಂಗೆ ಇದೆ" ಅಂತ ಹೇಳಿ ಅವರ ನಿರೀಕ್ಷೆಯ ಗೋಪುರವನ್ನು ಧಮಾಸು ಮಾಡಿಬಿಡುತ್ತಿದ್ದರು.

ಗೋಕರ್ಣದ ಇಕ್ಕಟ್ಟಿನ ಓಣಿಗಳಲ್ಲಿಂದ ನುಣುಚಿಕೊಂಡ ಬಸ್ಸು ಗಂಗಾವಳಿ ರಸ್ತೆಯನ್ನು ಕಂಡದ್ದೇ ಮನೆದಾರಿಯ ವಾಸನೆ ಸಿಕ್ಕ ನಾಯಿಯಂತೆ ಓಡತೊಡಗಿತು. ಕೊನೆಯ ಸ್ಟಾಪಿಗೆ ಗಣಪತಣ್ಣನ ಅಂಗಡಿ ಮತ್ತು ಅದಕ್ಕೆ ಹೊಂದಿಕೊಂಡ ಅವನ ಎರಡು ಮಾಡಿನ ಮನೆ. ಒಮ್ಮೆ ಅಲ್ಲಿಗೆ ತಲುಪಿಬಿಟ್ಟರೆ ನಂತರ ಎಲ್ಲವೂ ಸಲೀಸು ಎನ್ನುವ ಸಮಾಧಾನದಿಂದ ಭಗೀರಥ ಸೀಟಿಗೊರಗಿದ. ಕರಾವಳಿಯ ಬಿರುಬೇಸಗೆಯ

ಸೆಕೆ, ಕಿಟಕಿಯಿಂದ ಬರುತ್ತಿದ್ದ ಗಾಳಿ ಮತ್ತು ಮೆದುಳಿನಲ್ಲಿ ಓಡುತ್ತಿದ್ದ ನಾಸ್ಟಾಲ್ಜಿಯ ಸಿನೇಮಾ ಝೊಂಪು ಹತ್ತಿಸಿದವು.

– ೩ –

ಎಚ್ಚರವಾದಾಗ ಬಸ್ಸು ಮಾಬಲ ಶೆಟ್ಟರ ಅಂಗಡಿಯ ಮುಂದೆ ನಿಂತಿತ್ತು. ಅಂಗಡಿಗೆ ಮಂಗಳೂರು ಹೆಂಚು ಹೋಗಿ ಎರಡಂತಸ್ತಿನ ಥಾರಸಿ ಬಂದಿತ್ತು. ಗಾಜಿನ ಕಪಾಟುಗಳಲ್ಲೀಗ ಅಂತರರಾಷ್ಟ್ರೀಯ ಬ್ರಾಂಡಿನ ಬಾಟಲು–ಪಾಲಿಪ್ಯಾಕ್‌ಗಳು..., ಆದರೆ ಹೊಲಬು ಮಾತ್ರ ಹಳೆಯದೇ. ಮುಂದೆ ಕುಳಿತವನು ಮಾಬಲ ಶೆಟ್ಟರ ಹಿರೇಮಗ ಗಜುವೇ ಇರಬೇಕು, ಶೆಟ್ಟರ ಗೌಜಿಗೆ ಹೆದರಿ ಕಾಲೇಜು ಬಿಟ್ಟು ಅಂಗಡಿಯ ಓನರ್–ಕಂ–ಮ್ಯಾನೇಜರ್ ಆದವ ಈಗ ಟೈಮ್ ಮಷೀನಿನಲ್ಲಿ ಸಿಕ್ಕಿ ಒಮ್ಮೆಲೇ ಮುದುಕಾದಂತೆ ಕಾಣುತ್ತಿದ್ದ. ನೋಡಿ ಎಷ್ಟು ವರ್ಷವಾಯಿತೋ! ಬಸ್ಸಿನಲ್ಲಿ ಗೋಕರ್ಣದಿಂದ ಹೊರಡುವಾಗ ಉಪ್ಪಿನಕಾಯಿಗೆ ಮಾವಿನಮಿಡಿ ಹಾಕಿದ ಹಾಗೆ ಗಚ್ಚಾಗಿಚ್ಚಿಯಾಗಿ ತುಂಬಿದ್ದು ಕನಸಿನಲ್ಲೆನ್ನುವಂತೆ ಜನ ಖಾಲಿಯಾಗಿಬಿಟ್ಟಿದ್ದರು. ಅಂಗಡಿಯ ಮುಂದೆಯೂ ಜನವಿರಲಿಲ್ಲ. ಡ್ರೈವರ್–ಕಂಡಕ್ಟರ್ ಜೋಡಿ ಅಂಗಡಿಯ ಚಿಟ್ಟೆಯ ಮೇಲೆ ಪಟ್ಟಾಂಗ ಹೊಡಿಯುತ್ತ ಕುಳಿತಿತ್ತು. ತಾನು ಮಲಗಿದ್ದರ ಬಗ್ಗೆ ನಾಚಿಕೆಯಾಗಿ, 'ಈ ಬಸ್ಸಿನ ಕಥೆ ಯಾವಾಗಲೂ ಹೀಗೆಯೋ' ಎಂದು ಇದ್ದ ಇನ್ನೊಬ್ಬ ಪ್ರಯಾಣಿಕನನ್ನು ಕೇಳಬೇಕು ಎಂದರೆ ಆತ ಗಾಢ ಅಮಲಿನಲ್ಲಿ ಜೊಲ್ಲು ಸುರಿಸುತ್ತ ಅರೆಗಣ್ಣು ತೆರೆದು ಮಲಗಿದ್ದ. ಯಾರನ್ನಾದರೂ ಕೇಳಿದರಾಯ್ತೆಂದು ಭಗೀರಥ ಬಸ್ಸಿನಿಂದಿಳಿದ.

ಡ್ರೈವರ್ ಅವನನ್ನು ನೋಡಿ, "ಅರೇ, ನೀವು ಇನ್ನೂ ಇಲ್ಲೇ ಇವ್ರಿ? ಬಸ್ಸು ಮುಂದೆ ಹೋಗೋ ಹಾಂಗಿಲ್ಲಾ. ಸಂಕದ ರಿಪೇರಿ ನಡೀತಿದೆ. ಅಲ್ಲಿ ತಿರುಗಿಸಿಕೊಳ್ಳಿಕ್ಕೂ ಜಾಗ ಇಲ್ಲ. ಈ ರೂಟಿನ ಹಣೆಬರನೇ ಇಷ್ಟು. ಯಾರ ಮನೆಗೆ ಹೋಗ್ಬೇಕಾಗಿತ್ತು?" ಎಂದು ಕೇಳಿದಾಗ, ಆಗಲೇ ತಾನು ಅಲ್ಲಿಯವನಲ್ಲ ಎಂಬ ತೀರ್ಮಾನಕ್ಕೆ ಬಂದ ಅವನ ಬಗ್ಗೆ ಸಿಟ್ಟು ಬಂದರೂ, "ಗಣಪತಿ ನಾಯ್ಕರ ಮನೀಗೆ" ಎಂದಷ್ಟೇ ಉತ್ತರಿಸಿದ.

ಡ್ರೈವರ್, "ಅಂಗಡಿ ಗಣಪತಿ ನಾಯ್ಕರ ಮನೀಗೆ? ಇಲ್ಲಿಂದ ಒಂದೇ ಫರ್ಲಾಂಗು, ನಿಮ್ಮತ್ರ ಲಗೇಜೂ ಇಲ್ಲಾ. ಹೀಂಗೇ ಹೆಜ್ಜೆ ಹಾಕ್ತಾ ಹೋದ್ರೆ ಇಷ್ಟೊತ್ತಿಗೆ ಸುಮಾರು ದೂರ ಹೋಗ್ಬುಟ್ಟಿದ್ರಿ. ಯಾರದಾದ್ರೂ ಬೈಕ್ ಸಿಕ್ತದೋ ನೋಡಿ, ಆದ್ರೆ ಹುಷಾರು, ಗಾಡಿಗಿಂತ್ಲೂ ಸ್ವಂತಕ್ಕೆ ಎಣ್ಣೆ ಹಾಕಿ ಹೊಡೆಯುವವರೇ ಜಾಸ್ತಿ" ಎಂದು, ನಂತರ ಕಂಡಕ್ಟರನ ಕಡೆ ತಿರುಗಿ, "ನಿಮ್ಗೆ ಸಂಬಳ ಕುಡೂದೇ ವೇಸ್ಟ್ ನೋಡ. ಪ್ಯಾಸೆಂಜರನ್ನ ಎಬ್ಬಸದೇ ಇಲ್ಲಿ ಬಂದು ಕೂತ್ಬಿಟ್ಟಿ. ಏರ್ ಹೋಸ್ಟೆಸ್ ನೋಡಿ ಕಲೀಬೇಕ್ರೋ ನೀವೆಲ್ಲಾ" ಎಂದು ಹೇಳಿ, ತಾನು ಹೇಳಿದ್ದು ದೊಡ್ಡ ಜೋಕೆನ್ನುವಂತೆ ನಕ್ಕ.

ಡ್ರೈವರನ ಆ ಹುಸಿ ಆಪಾದನೆಯಿಂದ ಗಲಿಬಿಲಿಗೊಂಡವನಂತೆ ಕಂಡಕ್ಟರ್, "ಗಂಟಲು ಹರ್ದು ಹೋಗೂಹಂಗೆ ಕೂಗಿ ಹೇಳಿದ್ನಲ್ಲಾ, ನೀವು ಗಟ್ಟಿಯಾಗಿ ಮಲಗಿದ್ರಿ ಅಂತ ಕಾಣ್ತದೆ. ಬ್ಯಾಗ್ ಹೋಗಿ, ಸಂಜೀ ವಾಕಿಂಗೂ ಆದಹಾಂಗೆ ಆಯ್ತು" ಎಂದ.

ಭಗೀರಥನ ಕಡಿಮೆಯಾಗದ ಗೊಂದಲವನ್ನು ಗಮನಿಸಿದ ಡ್ರೈವರ್, "ಬೇಕಾದ್ರೆ ಅಲ್ಲಿಗೆ ಹೋಗೋ ಜನ ಮತ್ತೊಂದಿದೆ ನೋಡಿ" ಎಂದು ಹೇಳಿ, ಇನ್ನೂ ತನ್ನ ದೂಷಣೆಯಿಂದ ಮುನಿಸಿಕೊಂಡಿದ್ದ ಕಂಡಕ್ಟರನಿಗೆ, "ಆ ಎಣ್ಣೆ ಪಾರ್ಟಿ ಇಳ್ಸಾಕು, ಯಾರು ಯಾರಿಗೆ ದಾರಿ ಕಾಣಸ್ತಾರೆ ಅಂತ ಅವ್ರವ್ರೇ ಮಾತಾಡ್ಕಳ್ಲಿ" ಎಂದು ಮತ್ತೆ ನಕ್ಕ. ಈ ಸಲದ ನಗುವಿನ ಅಣಕದಲ್ಲಿ ಕಂಡಕ್ಟರನೂ ಸೇರಿಕೊಂಡ. ಈ ಉಢಾಪೆಯ ನಗು ಭಗೀರಥನಿಗೆ ಕಿರಿಕಿರಿ ಮಾಡಿತು. ಏನೋ ಹೇಳ ಹೊರಟವನು, "ಅದರ ಅವಶ್ಯಕತೆ ಇಲ್ಲ, ಊರಿನ ದಾರಿ ಗೊತ್ತು. ಥ್ಯಾಂಕ್ಸ್" ಎಂದಷ್ಟೇ ಹೇಳಿ ಅವರ ಮುಖ ನೋಡಲೂ ಮನಸ್ಸಾಗದೇ ಹೆಜ್ಜೆ ಹಾಕಿದ. ಕತ್ತಲಾಗಿದೆ ಎನ್ನುವುದನ್ನು ಆಗಷ್ಟೇ ಗಮನಿಸಿದವನಂತೆ ಮಾಬಲ ಶೆಟ್ಟರ ಅಂಗಡಿಯ ಹುಡುಗ ಮುಂದಿನ ನಾಲ್ಕೂ ಟ್ಯೂಬ್ ಲೈಟ್‌ಗಳನ್ನೂ ಒಟ್ಟಿಗೇ ಹೊತ್ತಿಸಿದ. ಅದರಿಂದ ಮುನಿಸಿಕೊಂಡ ಕತ್ತಲು, ಅಪರೂಪಕ್ಕೆ ಊರಿಗೆ ಬರುತ್ತಿರುವ ಊರ ಮಗನಿಗೆ ಜೊತೆಕೊಡುವ ಉಮೇದಿನಲ್ಲಿದ್ದಂತೆ ತಾನೂ ಭಗೀರಥನೊಡನೆ ಹೆಜ್ಜೆಹಾಕತೊಡಗಿತು.

– ೪ –

ಹಗಲಿಡಿ ಬಿಸಿಲಲ್ಲಿ ಕಾದ ಭೂಮಿ, ಅದರಲ್ಲಿಯೂ ಹೆಬ್ಬಾವಿನಂತೆ ಮಲಗಿದ ಆ ಡಾಂಬರು ರಸ್ತೆ ಕತ್ತಲಾಗುವುದಕ್ಕೇ ಕಾಯುತ್ತಿದ್ದಂತೆ ಶಾಖವನ್ನು ಹೊರಚೆಲ್ಲುತ್ತಿದ್ದುದರಿಂದ ಸೆಕೆ ಗುಂಜಿಯಷ್ಟೂ ಕಡಿಮೆಯಾಗಿರಲಿಲ್ಲ. ಗಾಳಿ ತನ್ನ ದಿನದ ಡ್ಯೂಟಿ ಮುಗಿಸಿ, ಬೀಸುವುದನ್ನು ಮರೆತು ನಿಂತುಬಿಟ್ಟಿತ್ತು. ಕತ್ತಲು ಬೆನ್ನಿಗೆಬಿದ್ದಿರುವುದನ್ನು ಮನಗಂಡ ಭಗೀರಥನ ನಡಿಗೆ ಬಿರುಸಾಗತೊಡಗಿತು.

ಸ್ವಲ್ಪ ದೂರ ನಡೆದಿರಬಹುದು, ಕತ್ತಲೆಯ ಆ ನಿರ್ಜನ ಪರಿಸರದ ಒಡಲಿನಿಂದ ಗಂಟೆ ಜಾಗಟೆಗಳ ಸದ್ದು ಕೇಳಬರತೊಡಗಿತು. ಮೊದಮೊದಲು ಕ್ಷೀಣವಾಗಿದ್ದ ದನಿ, ನಂತರ ನಿರ್ಲಕ್ಷಿಸಲಾರದಷ್ಟು ಸ್ಫುಟವಾದಾಗಲೇ ಊರು ಶುರುವಾಗುವುದು ಚಂಡಿಬೀರನ ದೇವಸ್ಥಾನದಿಂದ ಎನ್ನುವುದು ನೆನಪಾಗಿದ್ದು. ದೇವಸ್ಥಾನದ ಪಕ್ಕದಲ್ಲಿ ಮಳೆಗಾಲದಲ್ಲಿ ಮಾತ್ರ ಹರಿವ ಸಣ್ಣಕಾನಹಳ್ಳ, ಅದನ್ನು ದಾಟಲು ಸಂಕ, ಬಹುಶಃ ಅದೇ ಸಂಕವೇ ರಿಪೇರಿಯಲ್ಲಿದ್ದಿರಬಹುದೋ ಏನೋ, ನಂತರ ಎರಡೂ ಕಡೆ ಪ್ರತ್ಯಕ್ಷವಾಗುವ ಬಯಲು, ದಾಟಿದರೆ ಗಣಪತಣ್ಣನ ಮನೆ. ತಪ್ಪಿಸಿಕೊಳ್ಳಬೇಕೆಂದರೂ ಅಡ್ಡರಸ್ತೆಗಳಿಲ್ಲ. 'ಅಂತೂ ಊರಿಗೆ ಬಂದು ಮುಟ್ಟಿದೆ' ಎನ್ನುವ ಧೈರ್ಯ ಬಂತು. ದೇವಸ್ಥಾನ ತೆರೆದಿರುವುದು ತಿಳಿದ ಮೇಲೆ ಹೋಗದಿರುವುದು ಸಾಧ್ಯವಿರಲಿಲ್ಲ. ಅವನು ಕೇಳಿದ್ದ ಎಲ್ಲ ಕಥೆಗಳಲ್ಲೂ, ಈಗ ಸ್ವತಃ ಬರುವಂತೆ ಮಾಡಿದ ಅಪ್ಪನ ಮೌನದ ಹರತಾಳದಲ್ಲೂ ಈ ಚಂಡಿಬೀರನ

ಪ್ರವೇಶವಿತ್ತು. ಅವಸರದ ಭೇಟಿಯಲ್ಲಿ ಸಿಕ್ಕ ಈ ಅವಕಾಶಕ್ಕೆ ಖುಷಿಪಟ್ಟು ದೇವಸ್ಥಾನದ ದಣಪೆ ದಾಟಿದ.

– ೫ –

ಚಂಡೀಬೀರನಿಗೆ ಇಡೀ ಸೀಮೆಯಲ್ಲಿ ಶಕ್ತಿಶಾಲಿಯಾದ ದೈವ ಎನ್ನುವ ಬಿರುದು. ದೈವ ಎಂದರೆ ಸುಮ್ಮನೆ ಮಂಗಳಾರತಿಯ ದುಡ್ಡಿಗಾಗಿ, ಮುಕ್ಕೋಟಿಯ ಜತೆ ಇನ್ನೊಂದಿರಲಿ ಎಂದು ರಾತೋರಾತ್ರಿ ಹುಟ್ಟುಹಾಕಿದ್ದಲ್ಲ, ಅಲ್ಲಿಯದ್ದೇ ಮಣ್ಣಿನ ಮಗ. "ಊರ ಬಾಗಿಲಲ್ಲಿ ಏಕಾಕಿಯಾಗಿ ಮೂರು ಹಗಲು, ಮೂರು ರಾತ್ರಿ ಬೆವರೊರಸಿಕೊಳ್ಳದೇ ಯುದ್ಧ ಮಾಡಿ ಮಡಿದ ವೀರ" ಎಂದು ಬರೆದಿದ್ದ ವೀರಗಲ್ಲು ಇತ್ತೀಚಿನವರೆಗೂ ಇತ್ತು. ರಸ್ತೆ ಅಗಲ ಮಾಡಿ ಡಾಂಬರು ಹಾಕಬೇಕಾದರೆ ತೆಗೆದಿಟ್ಟ ಕಲ್ಲು ನಂತರ ನಾಪತ್ತೆಯಾಗಿತ್ತು. ಆ ವೀರಗಲ್ಲು ಕಾಣೆಯಾದ ಪ್ರಸಂಗವನ್ನು ಗಣಪತಣ್ಣ ಹೂಬೆಹೂಬು ವಿವರಿಸಿದ್ದ.

"ತಮ್ಮಾ, ರಸ್ತೆ ಅಗಲ ಮಾಡೂಕ ಬಂದವ್ರು ಆ ಕಲ್ಲು ತೆಗೆದ್ರು. ಅದೀಗ ಯಾರ ಮನೆ ಬಚ್ಚಲಿಗೆ ಹೋಗಿ ಸೇರ್ಕೊಳ್ತೋ ಏನೋ! ಆ ಕಲ್ಲ ತೆಗೆದದ್ದೇ ತೆಗದದ್ದು ನೋಡು, ಪೂಜಾರಿಗೆ ಅರ್ಧಾಂಗವಾಯು ಆಯ್ತು, ಅಂವ ಹಾಸಿಗಿ ಹಿಡ್ದ, ಬಾಗಿಲು ಕಟ್ಟುದ ನಿಂತುಹೋಯ್ತ. ಬಾಗಿಲು ಕಟ್ಟುವರ್ಯಾರ? ಚಂಡಿಬೀರನ ದೇವಸ್ಥಾನ ಅಂದ ಮೇಲೆ ಬಾಗಿಲು ಕಟ್ಟೂಕೆ ಆಗೂದಿಲ್ಲ ಅಂದ್ರೆ ಹ್ಯಾಂಗೆ? ಅಂತದ್ದರಲ್ಲಿ ನಿಮಗೆ ನಂಬಿಕೆ ಬರಲಿಕ್ಕಿಲ್ಲಾ, ಆದ್ರೆ ಬೇರೆಬೇರೆ ದೇಶದಿಂದ್ಲೂ ಜನಬಂದು ರೆಕಾರ್ಡ್ ಮಾಡ್ಕೊಂಡು ಹೋಗಿದ್ದಾರೆ. ಅವನ ಮಗನೋ, ನಾಲ್ಕಾಣಿಗೂ ಪ್ರಯೋಜನ ಇಲ್ಲ. ಒಂದು ಸಲ ಮಕ್ಳು ಕಾಲೇಜು ಮೆಟ್ಲು ಹತ್ತಿದ್ರೋ ಮುಗ್ದೋಯ್ತು, ಇಂಗ್ಲೀಷಲ್ಲಿ ನಾಕು ಸಲ ನಪಾಸಾದ್ರೂ ಮಾತು ಮಾತ್ರ ವಿಲಾಯಿತಿಯೇ. 'ದೇವರು ಮೈಮೇಲೆ ಬರೋದಂದ್ರೇನು? ಅಪ್ಪಣೆ ಕೊಡೂದು ಅಂದ್ರೇನು?' ಅನ್ನೋ ಉದ್ಧಟಬುದ್ಧಿ. ಹಣ್ಣುಕಾಯಿ ಮಾಡೋದಕ್ಕೆ ದೇವಸ್ಥಾನ ಕಡಿಮೆ ಇದ್ದಾವೇನು? ಹಾಗಾಗಿ ಜನ ಬರುದೂ ಕಡಿಮಿ ಆಯ್ತೇ ಹೋಯ್ತ. ದೇವಸ್ಥಾನ ಅನ್ನೂದ್ ನೋಡೂಕ್ ಆಗೂದಲ್ಲಾಗತ. ಈಗ ಮೂರು ವರ್ಷ ಆಯ್ತ ನೋಡು, ಅಷ್ಟಬಂಧ ಆಯ್ತು, ಮುಂಬೈನಲಿ ಚಿನ್ನದ ಕೆಲಸ ಮಾಡ್ಕೊಂಡಿರೋ ವೆಂಕಪ್ಪ ಶೆಟ್ರ ಮಕ್ಕಳು ಅಪ್ಪನ ಹೆಸರಲ್ಲಿ ಇಡೀ ದೇವಸ್ಥಾನಕ್ಕೆ ತಾಮ್ರದ ತಗಡಿನ ಗೋಪುರ ಹಾಕ್ಸಿದ್ದಾರೆ, ದೇವಸ್ಥಾನದ ಕಳೆ ಏನೇ ಕೇಳ್ತಿ, ಆದ್ರೂ ಮೊದಲಿನ ವೈಭವ ಇಲ್ಲ."

ಗಣಪತಣ್ಣ ಹಲುಬುವ ಆ ಗತವೈಭವ ಭಗೀರಥನಿಗೆ ಗೊತ್ತಿಲ್ಲದ್ದಲ್ಲ. ಆದರೆ ಅವನಿಗೆ ನೆನಪಾಗುವ ಚಿತ್ರಗಳೇ ಬೇರೆ. ಹಲವು ಎಕರೆ ಹರಡಿಕೊಂಡಿದ್ದ ಆ ದೇವಸ್ಥಾನದ ಕಾನಿನಲ್ಲಿ ಇರದ ಮರಗಳೇ ಇರಲಿಲ್ಲ. ಅಲ್ಲಿ ನಾಲ್ಕಾರು ಹರಕೆಯ ಕುರಿಗಳು ಮೇದುಕೊಂಡಿರುತ್ತಿದ್ದವು. ಅವುಗಳ ತಲೆಯಿಂದ ತರಡಿನವರೆಗೆ ಯಾವ ಭಾಗ ಯಾರಿಗೆ ಸೇರಬೇಕು ಎನ್ನುವುದು ಊರಲ್ಲಿ ಹಕ್ಕಿನ, ಕೆಲವೊಮ್ಮೆ ಮಾರಾಮಾರಿಯ ವಿಷಯವಾಗಿತ್ತು.

ಇನ್ನು ಹಬ್ಬದಲ್ಲಿ ಬಲಿಗೆಂದು ಊರವರು ತರುವ ಕೋಳಿಗಳದ್ದೋ ಆ ಚಂಡಿಬೀರನ ಎದೆಬಡಿತವನ್ನೂ ಹದಗೆಡಿಸಬಲ್ಲ ಸ್ಥಿತಿ. ಕುತ್ತಿಗೆ ಎಳೆದೆಳೆದು ಮೂಲದಲ್ಲಿಯೇ ಕತ್ತರಿಸುವ ಹುನ್ನಾರು. ಯಾಕೆಂದರೆ ತಲೆಯಷ್ಟೇ ಕತ್ತರಿಸುವ ಗುತ್ತಿಗೆ ಹಿಡಿದವರ ಪಾಲಿಗೆ. ಊರಲ್ಲಿನ ಎಲ್ಲ (ಅ)ವ್ಯವಸ್ಥೆಯಲ್ಲಿಯೂ ಈ ಚಂಡಿಬೀರನದ್ದು ದೊಡ್ಡ ಪಾಲು. ದೇವರ ಹೆಸರಲ್ಲಿ ಪೂಜಾರಿಯ ಮಾತು, ಗಣಪತಣ್ಣ ಹಪಹಪಿಸುವ ಬಾಗಿಲು ಕಟ್ಟಿದಾಗ ಸಿಗುವ ದೇವರ ಅಪ್ಪಣೆ, ಎಲ್ಲದಕ್ಕೂ ನಿರ್ಣಾಯಕವಾಗಿತ್ತು. ಅಪ್ಪ ಊರು ಬಿಡುವ ಹಿಂದೆಯೂ ಈ ಚಂಡಿಬೀರನ ಅಪ್ಪಣೆ ಇದೆ ಎನ್ನುವ ಸಂಶಯ ಮೊದಲಿನಿಂದಲೂ ಇದೆ. ಯಾಕೆಂದರೆ, ಊರು ಬಿಡುವ ಕೆಲವು ದಿನ ಮೊದಲು ಇಂತಹುದೇ ಒಂದು ಬಾಗಿಲು ಕಟ್ಟುವಿಕೆಗೆ ಸ್ವತಃ ಭಗೀರಥನೇ ಸಾಕ್ಷಿಯಾಗಿದ್ದ.

– ೬ –

"ಭಂ....ಭಕ್.....ಭೂಂ"
"ಭಂ....ಭಕ್.....ಭೂಂ"
"ಭಂ....ಭಕ್.....ಭೂಂ"

ಚಂಡೀಬೀರನ ದೇವಾಲಯದ ಗರ್ಭಗುಡಿಯ ಅರೆಮುಚ್ಚಿದ ಬಾಗಿಲಿನ ಅಲುಗಾಟಕ್ಕೆ ಲಯ ಜೋಡಿಸಿದ ಹೂಂಕಾರ, ಹೊರಗೆ ಮೈ ಮೇಲೆ ಬಂದವರಂತೆ ಭಕ್ತರು ತೂಗುತ್ತಿದ್ದ ಘಂಟೆಗಳ ಕಿವಿಗಡಚಿಕ್ಕುವ ಸದ್ದು, ಮೇಲೊಂದು ಬಲ್ಬು ಉರಿಯುತ್ತಿದ್ದರೂ, ಆಯುಷ್ಯವಿಡೀ ಮಿಂದ ಹೊಗೆಯಿಂದ ಮಂಕಾಗಿ ಹಬ್ಬಿದ್ದ ಅರೆಗತ್ತಲೆಯಲ್ಲಿ ಸುರಗೀ ಎಣ್ಣೆಯ ದೀಪ ಮತ್ತು ಕರ್ಪೂರದ ಬೆಂಕಿಗಳದ್ದೇ ದರ್ಬಾರು; ಸುತ್ತ ಗೋಡೆಯ ಮೇಲೆ ಕುದುರೆಯೇರಿ ವಿವಿಧ ಆಯುಧಗಳನ್ನು ಝಳಪಿಸುತ್ತಿದ್ದ ಚಂಡಿಬೀರ... ಭಗೀರಥನ ಪಾಲಿಗೆ ಇಂದಿಗೂ ಸಜೀವ ಚಿತ್ರಗಳು. ಗರ್ಭಗುಡಿಯ ಮುಂದೆ ಕಬ್ಬಿಣದ ಪಟ್ಟಿಗೆ ಜೋತುಬಿದ್ದ ಒಂದೊಂದು ಘಂಟೆಗಳದ್ದೂ ಒಂದು ಕಥೆ, ಮುಂದಿನ ಸಾಲಿನಲ್ಲಿ ಎರಡೂ ಪಕ್ಕಕ್ಕೆ ತೂಗುಬಿಟ್ಟವು ಮುರೂರು ಎಂಕ್ಟು ಗೌಡನ ಮೂರು ಎತ್ತುಗಳು ಒಂದೇ ದಿನ ಕಾಣೆಯಾದಾಗ ಹರಕೆ ಹೊತ್ತು, ಎರಡು ರಾತ್ರಿ ಕಳೆಯುವುದರೊಳಗೆ ತಾವೇತಾವಾಗಿ ವಾಪಸು ಬಂದಾಗ ಕಟ್ಟಿಸಿದವು. ಮಧ್ಯದಲ್ಲಿ ನೇತುಹಾಕಿದ ಪಂಚಲೋಹದ ದೊಡ್ಡ ಘಂಟೆ ದೊಡ್ಮನೆ ಹೊನ್ನಯ್ಯ ಗಾಂವಕರನ ಮಗನಿಗೆ ಗಂಡು ಸಂತಾನ ಆದಾಗ ಹಾಕಿಸಿದ್ದು, ಈಗಲೂ ಅವರು ವರ್ಷಕ್ಕೊಂದು ಸಲ ಕುಟುಂಬಸಮೇತ ಬಂದು ಪೂಜೆ ಕೊಟ್ಟು ಹೋಗುವುದನ್ನು ತಪ್ಪಿಸುವುದಿಲ್ಲವಂತೆ. ನಡೆದುಕೊಳ್ಳುವವರಿಗೆ ಅಭಯವನ್ನೂ, ತಪ್ಪಿತಸ್ಥರಿಗೆ ಶಿಕ್ಷೆಯನ್ನೂ ನೀಡುವ ಕ್ಷೇತ್ರದೇವತೆ ಚಂಡಿಬೀರ; ಆದರೆ ಅಪ್ಪ ಅಲ್ಲಿಗೆ ಆ ದಿನ ಹೋಗಿದ್ದೇಕೆ? ಅದೂ ತನ್ನನ್ನು ಕರೆದುಕೊಂಡು. ಆ ದಿನ ಹೂಂಕಾರ ನಿಂತು,

ತೂಗುತ್ತಿದ್ದ ಘಂಟೆಗಳ ಸದ್ದಡಗಿಸುವಂತೆ ಗರ್ಭಗುಡಿಯಿಂದ ಗಂಭೀರ ಧ್ವನಿಯಲ್ಲಿ ಬಂದ ಪ್ರಶ್ನೆ ಇಂದಿಗೂ ಕಾಡುವುದಿದೆ:

"ನನ್ನನ್ನು ಕರೆಸಿದಂತಾ ಕಾರಣ."

ಬಾಗಿಲು ಮರೆಯಲ್ಲಿ ಹುಟ್ಟಿ ಇಡೀ ಊರನ್ನು ಬಾಗಿಸುವ ಆ ಗೊಗ್ಗರು ದನಿ, ಕೈಕಟ್ಟಿ ನಿಂತ ಅಪ್ಪಂತ ಅಪ್ಪನ ಬೆದರುಮುಖ. ಅಗೆದಷ್ಟೂ ಆಳಕ್ಕಿಳಿವ ಆ ಭಯದ ಬೇರುಗಳು, ಸುತ್ತ ನಿಂತ ಜನರ ನೆರಳುಗಳ ಕಂಪನ... ಅಲ್ಲಿನ ಮಾತುಗಳು ಭಗೀರಥನಲ್ಲಿ ದಾಖಲಾಗಲೇ ಇಲ್ಲ. ದೇವರ ಹೂಂಕಾರ, ಕುಳಿತವರು ಎದ್ದು ಬಡಿಯಲಾರಂಭಿಸುವ ಗರ್ಭಗುಡಿಯ ಬಾಗಿಲ ಅಗಳಿಯನ್ನು ಹಿಡಿದುಕೊಳ್ಳುವುದೂ, ಅಪ್ಪ ಕೈಕಟ್ಟಿ ನಿಂತುಕೊಂಡೇ ಕೇಳಿಕೊಳ್ಳುವುದೂ. ಕರ್ಪೂರ ಮತ್ತು ಸುರಗೀ ಎಣ್ಣೆಯ ವಾಸನೆ ನೆತ್ತಿಗೇರಿದ ನೆನಪು ಈಗಲೂ ಕಾಡುವುದಿದೆ. ಅಲುಗಾಡುವ ಬೆಳಕಿನ ಮುಂದೆ ಕುಳಿತ ಮೂವರ ಮುಖದ ಮೇಲೆ ಪ್ರತಿಫಲಿಸಿ ಕಂಡ ಅವರ ಮುಖದ ಮೇಲಿನ ಬೆವರಿನ ಗೆರೆಗಳು ಮಿಂಚಿನ ಸೆಲೆಯಂತೆ ಜೀವಂತವಾಗಿ ಬಂದು ಇಂದಿಗೂ ಕನಸಿನಲ್ಲಿ ಬೆಚ್ಚಿಬೀಳಿಸುವುದಿದೆ. ಆದರೆ ಮುಖಗಳೀಗ ಗುರುತಿಸಲಾಗದಷ್ಟು ಅಸ್ಪಷ್ಟ. ನೋಡನೋಡುತ್ತಿದ್ದಂತೆ ಆ ಮುಖಗಳೆಲ್ಲ ಮರೆಯಾಗಿ ಬರೀ ಕಣ್ಣುಗಳಷ್ಟೇ ಮಿಂಚುತ್ತ, ಶಿಕಾರಿಗೆ ಬರುವ ಹೆಡ್ ಲೈಟಿನಂತೆ ದುರುಗುಟ್ಟತೊಡಗುತ್ತವೆ. ಅಪ್ಪನೂ ಆ ಧ್ವನಿಗೆ ಹೆದರಿಯೇ ಕನವರಿಸುತಿದ್ದರೇ?

ಬಾಗಿಲು ಮುಗಿದು, ಮೈಮೇಲಿನ ಭಾರ ಇಳಿದ ಮೇಲೆ ಪೂಜಾರಿ ದೇವಸ್ಥಾನದ ದಣಪೆಯವರೆಗೂ ಬಂದು, 'ಹೆದರ್ಕೋಬೇಡಿ, ನಮ್ಮ ಚಂಡಿಬೀರ ಯಾರಿಗೂ ಅನ್ಯಾಯ ಮಾಡುವವನಲ್ಲ. ಅವನು ಹೇಳಿದ ಹಾಗೆ ನಡ್ಕೊಳ್ಳಿ' ಎಂದು ಸಮಾಧಾನಮಾಡಿದ್ದ. ದೇವಸ್ಥಾನದಿಂದ ಹೊರಬಂದ ಅಪ್ಪನದ್ದು ಚಂಡಿಬೀರನನ್ನೆ ಕಟಕಟೆಯಲ್ಲಿ ನಿಲ್ಲಿಸಿ ಪ್ರಶ್ನಿಸುವಷ್ಟು ಸಿಟ್ಟು. ಮತ್ತೆ ಈ ಊರಿಗೆ ಕಾಲಿಡುವುದಿಲ್ಲ ಎಂದು ಆಣೆ ಮಾಡಿ ಹೊರಬಿದ್ದದ್ದು ಅದಾದ ಒಂದೆರಡು ದಿನಕ್ಕೇ. ಅದೊಂದು ಕನಸಂತೆ ಮರೆತುಬಿಡಲು ಪ್ರಯತ್ನಿಸಿದಷ್ಟೂ, ನಂತರದ ಎಲ್ಲದಕ್ಕೂ ಅದೇ ಕಾರಣವೆನಿಸಿ, ಈ ಚಂಡಿಬೀರನ ದೇವಸ್ಥಾನದ ಬಗ್ಗೆಯೇ ಭಯತಿರಸ್ಕಾರಗಳನ್ನು ಹುಟ್ಟಿಸಿದ್ದವು. ಚಂದವಾಗಿ ಕಥೆ ಹೇಳುವ ಗಣಪತಣ್ಣ ಆ ದಿನ ನಡೆದದ್ದೇನು ಎಂದು ಹೇಳದೆ, "ನಿಮ್ಮಪ್ಪನೇ ಹೇಳಲಿ. ನನ್ನ ಬಾಯಿಂದ ಬೇಡ" ಎಂದು ಸುಮ್ಮನಾಗಿದ್ದ. ಎಷ್ಟು ಕೇಳಿದರೂ ಅಪ್ಪ ತಮ್ಮ ಅಂತು ಬಿಟ್ಟುಕೊಟ್ಟಿರಲೇ ಇಲ್ಲ.

– ೭ –

ದೇವಸ್ಥಾನದ ಒಳಗೆ ಕಾಲಿಟ್ಟರೆ, ಕತ್ತಲಲ್ಲಿ ನಡೆದದ್ದಕ್ಕೋ ಏನೋ, ಕಣ್ಣು ಚುಚ್ಚುವ ಬೆಳಕು. ಆ ಬೆಳಕಿಗೆ ಕನ್ನಡಿ ಹಿಡಿಯುವ ಇಟಾಲಿಯನ್ ಟೈಲುಗಳ ಹೊಳಪು. ಗೋಡೆಗಳ ಮೇಲೆ ವಿವಿಧ ಭಂಗಿಯ ಚಂಡಿಬೀರರು ಆಯುಧ ಸಮೇತ ನಾಪತ್ತೆಯಾಗಿ ದಶಾವತಾರದ

ಉಬ್ಬುಚಿತ್ರಗಳು ಅವತರಿಸಿದ್ದವು. ಸ್ಪೀಕರುಗಳು ಮರೆಯಲ್ಲಿ ನಿಂತು ಮೆಲುದನಿಯಲ್ಲಿ ಚಂಡಿಬೀರನ ಗುಣಗಾನ ಮಾಡುತ್ತಿದ್ದವು. ಕನಸಿನಲ್ಲಿ ಹೆದರಿಸುವ ಚಂಡಿಬೀರ ಕಾಣಲೇ ಇಲ್ಲ. ಕಣ್ಣು ತೂಗುಬಿದ್ದ ಘಂಟೆಗಳನ್ನು ಹುಡುಕಿತು. ಅವು ಸ್ವಸ್ಥಾನದಲ್ಲಿ, ಇನ್ನಷ್ಟು ಸುಂದರ ಫ್ರೇಮಿನಲ್ಲಿ ಮಜಬೂತಾಗಿ ಸುರಕ್ಷಿತವಾಗಿದ್ದವು. ಶ್ಯಾಂಸುಂದರ್ ಹೇಳಿದ ಸಪಾಟು ಆಗುವುದೆಂದರೆ ಇದೇ ಇದ್ದೀತೇ? ಆದರೂ ಹಿತವೆನಿಸಿತು.

"ಬಾಗಿಲು ಹಾಕಿ ಹೋಗ್ವಾ ಅಂತಿದ್ದೆ. ದೇವಸ್ಥಾನಕ್ಕೆ ಬರುವವರು ಸ್ವಲ್ಪ ಮೊದ್ಲೇ ಬರ್ಬೇಕಲ್ಲಾ."

ಬದಲಾದ ದೇವಸ್ಥಾನ ನೋಡುವ ಸಂಭ್ರಮದಲ್ಲಿ ಕಳೆದುಹೋಗಿದ್ದವ ಪೂಜಾರಿ ಬಂದು ನಿಂತಿದ್ದನ್ನು ಗಮನಿಸಿರಲಿಲ್ಲ.

"ದೇವಸ್ಥಾನಕ್ಕೆ ಅಂತ ಬಂದದ್ದಲ್ಲಾ. ಗಂಟೆ ಸದ್ದು ಕೇಳಿಸಿತು. ಬೆಳಕು ನೋಡಿ ಒಳಬಂದೆ."

"ಅದು ಸೋಲಾರ್ LED. ಊರಿಗೆ ಕರಂಟ್ ಇಲ್ದಿದ್ರೂ ನಮಗೆ ಬೆಳಕಿನ ತೊಂದರೆ ಇಲ್ಲ. ಹಾಂಗೆ, ಯಾರ ಬರದಿದ್ದರೂ ಗಂಟೆ ತೂಗುವವರಿಗೂ ಕಮ್ಮಿಯಿಲ್ಲ" ಎಂದು, ಅದಕ್ಕಾಗಿಯೇ ಸ್ಥಾಪಿಸಿದ್ದ ಮೋಟರುಗಳನ್ನು ತೋರಿಸಿದ. ಆಶ್ಚರ್ಯದಲ್ಲಿ ಮುಳುಗಿದ್ದ ಭಗೀರಥನನ್ನು ಉದ್ದೇಶಿಸಿ, "ನಿಮಗೆ ಎಲ್ಲಿ ಆಯಿತು?" ಎಂದ.

"ಇದೇ ಊರು. ನಾವು ಗಾಂವಕಾರರ ಮನೆಯವರೇ. ಆದರೆ ಈ ಕಡೆ ಬರದೇ ಇಪ್ಪತ್ತು ಮುವತ್ತು ವರ್ಷನೇ ಆಯ್ತು."

"ಇಲ್ಲಿಯವ್ರೇಯಾ... ಮುಖ ನೋಡ್ದಾಗಲೇ ಅಂದುಕೊಂಡೆ, ಎಲ್ಲೋ ನೋಡಿದ್ದೀನಿ ಅಂತ... ಅರೆ! ಭಗೀರಥ! ಯಾವಾಗ ಬಂದದ್ದು? ಎಷ್ಟು ವರ್ಷ ಆಯ್ತು ನೋಡಿ! ಮನೆಯಲ್ಲಿ ಎಲ್ಲಾ ಆರಾಂ ಅಲ್ಲಾ...."

"ದೇವಸ್ಥಾನ ಒಳಗೆ ಗುರುತೇ ಹತ್ತದಷ್ಟು ಬದಲಾವಣೆ ಆಗಿದೆ!"

"ಹೊರಗೂ ಬದಲಾಗಿದೆ, ನೀವು ಹಗಲಲ್ಲಿ ಬಂದು ನೋಡಿ. ಬದಲಾವಣೆ ನಮಗಷ್ಟೇ ಅಂತ ಮಾಡಿದ್ರಿ? ನಿಮ್ಮನ್ನು ನೋಡಿದ್ರೆ ಯಾರೂ ಈ ಊರಿನ ಜನ ಎಂದು ಹೇಳುವ ಹಾಗಿಲ್ಲ. ಚಂಡಿಬೀರನೂ ಹಾಗೇಯಾ. ಇಲ್ಲಿ ಇದ್ದೇ ಬದಲಾಗಿದ್ದಾನೆ. ನಿಮ್ಮಂತವರ ಪ್ರೋತ್ಸಾಹನೂ ಇದೆ ಅನ್ನಿ."

ಒಳಗೆ ಹೋಗಿ, ಕಲ್ಲುಸಕ್ಕರೆ, ದ್ರಾಕ್ಷಿ ತಂದುಕೊಟ್ಟ. ಮುಖದ ಮೇಲೆ ಸಣ್ಣ ನಗು, ಅಚ್ಚುಕಟ್ಟಿನ ಮಾತು. ಅವನ ಆಶ್ಚರ್ಯ ಹದಕ್ಕೆ ಬಂದಿತ್ತು.

"ಮೊದಲಿನ ಹಾಗೆ ಬಾಗಿಲುಕಟ್ಟೂದು ಇಲ್ಲಾ ಈವಾಗ?"

"ಅವೆಲ್ಲ ನಮ್ಮಪ್ಪನ ಕಾಲಕ್ಕೆ ಮುಗೀತು. ಜನನೂ ನಂಬೂದು ಕಡಿಮೆಯಾಗಿದೆ. ಹೆದ್ರಿಕೆಯಂತೂ ಇಲ್ಲವೇ ಇಲ್ಲ. ನೀ ಅಂದ್ರೆ ನಿಮ್ಮಪ್ಪ ಅಂತ್ರು. ನಿಮ್ಮಂತವರು ಬಂದವರು ಹರಕೆ, ಹಿರಿಯರ ಹೆಸರಲ್ಲಿ ಅಂತ ಏನಾದ್ರೂ ಕೊಡ್ತಾನೆ ಇರ್ತಾರೆ. ಹಾಗಾಗಿ ನಮಗೂ

ತೊಂದ್ರೆ ಇಲ್ಲ. ಹಾಗಂತ ನಾನೂ ಇದರ ಮೇಲೆ ಅವಲಂಬಿಸ್ಕೊಂಡು ಇಲ್ಲಾರಿ. ಪೂರಾ ಭಾರ ಯಾರ ಮೇಲೂ ಹಾಕ್ಬಾರದು ನೋಡಿ, ದೇವ್ರಾದ್ರೇನಾಯ್ತು. ಹೌದಾದ್ರೆ ಹೌದನ್ನಿ, ಇಲ್ಲಾದ್ರೆ ಇಲ್ಲಾ ಅನ್ನಿ."

ಸ್ವಲ್ಪ ಹೊತ್ತು ಇಬ್ಬರೂ ಮಾತನಾಡಲಿಲ್ಲ. ಹೂವು, ವಸ್ತ್ರದ ಅಲಂಕಾರದಲ್ಲಿ ಚಂಡಿಬೀರ ಸರ್ವಾಂಗಸುಂದರನಾಗಿ ಕಂಡ. ಭಗೀರಥ ಕೈಗೆ ಸಿಕ್ಕ ಐನೂರರ ನೋಟೊಂದನ್ನು ಹುಂಡಿಯಲ್ಲಿ ತುರುಕಿದ. ಅಲ್ಲಿಯವರೆಗೂ ಅವನನ್ನೇ ನೋಡುತ್ತಿದ್ದ ಪೂಜಾರಿ, ದೇವರ ಮುಂದಲೆಗೆ ಸಿಕ್ಕಿಸಿದ್ದ ಕೇದಗೆಯನ್ನು ಕೊಟ್ಟು, ಮಾತು ಮುಂದುವರೆಸಿದ:

"ಮಾಬಲ ಶೆಟ್ಟರ ಅಂಗಡಿಯಿಂದ ನಡ್ಕೊಂಡು ಬಂದ್ರಿ ಅಂತ ಕಾಣ್ತದೆ. ಈ ಸಂಕದ ರಿಪೇರಿ ಅನ್ನೋದು ದೊಡ್ಡ ಕಿರಿಕಿರಿ, ಬಸ್ಸು ಇಲ್ಲಿಯವರೆಗೂ ಬರೋದಿಲ್ಲ, ಜನವೂ ಕಡಿಮೆ. ಈ ರಸ್ತೆ ರಿಪೇರಿ ಅನ್ನೋದು ಮುಗಿಯುದೇ ಇಲ್ಲಾ ನೋಡಿ. ಯಾರು ಬರ್ತಾರೋ, ಹೋಗತಾರೋ, ಯಾವಾಗ ನೋಡಿದರೂ ರಿಪೇರಿ. ಊರಲ್ಲಿ ಜನನೇ ಇಲ್ರಿ ಈವಾಗ. ನಿಮ್ಮ ಕೇರಿಯಲ್ಲಂತೂ ಒಂದು ನರಪಿಳ್ಳೆನೂ ಇಲ್ಲ. ಎಲ್ಲರ ಮನೆಗೂ ಬೀಗ. ನಿಮ್ಮ ಮನೆ ವೆಂಕಟ್ರಮಣನಿಗೂ ಪೂಜೆ ನಂದೆಯಾ. ನೀವೀಗ ಯಾರ ಮನೆಗೆ ಹೋಗ್ತೀರಿ?"

"ಗಣಪತಿ ನಾಯ್ಕರ ಮನೆಗೆ."

"ಅವ್ರೊಬ್ಬರು ಇದ್ದದಕ್ಕೇ ಊರು. ಆದರೆ ಸಂಕದ ಮೇಲೆ ಹೋಗೂ ಹಾಗಿಲ್ಲ. ಈ ಕಡೆ ದಣಪೆಯಲ್ಲೇ ಹೋಗಿ, ನಾಲ್ಕು ಹೆಜ್ಜೆ, ಎಡಕ್ಕೆ ತಿರುಗಿಕೊಂಡರೆ ಗಣಪತಿ ನಾಯ್ಕರ ಮನೆ."

ಭಗೀರಥ ಎದ್ದು ಹೊರಗೆ ಬರುವಾಗ, ಚಂಡಿಬೀರ ಹೊಸ ಫ್ರೇಮಿನಲ್ಲಿ ಪ್ರದರ್ಶನಕ್ಕಿಟ್ಟ ಹಳೆಯ ಕಲಾಕೃತಿಯಂತೆ ಕಂಡ.

– ೮ –

ದೇವಸ್ಥಾನದಿಂದ ಹೊರಬಿದ್ದು, ಮತ್ತೆ ಕತ್ತಲೆಗೆ ಹೊಂದಿಕೊಳ್ಳಲು ಪರದಾಡುತ್ತ ದಣಪೆ ದಾಟುತ್ತಿರುವಾಗಲೇ, ಇಬ್ಬರು ಅದೇ ದಿಕ್ಕಿನಲ್ಲಿ ಬರುತ್ತಿದ್ದರು. ಅವರಲ್ಲಿ ಟಾರ್ಚ್ ಇದ್ದುದರಿಂದ, ಮಿಣುಕಿಸಿದಾಗ ಆ ಸಣ್ಣ ಓಣಿ ಪೂರ್ತಿ ಕಾಣುತ್ತಿತ್ತು, ಕತ್ತಲಲ್ಲಿ ಕಣ್ಣೂರಿ ಹೆಜ್ಜೆಕೀಳಲು ಅನುಮಾನಿಸುತ್ತ ನಿಂತಿದ್ದ ಭಗೀರಥನೆಡೆಗೆ ಬೆಳಕು ಹಾಯಿಸಿ, "ಯಾರದು?" ಎಂದರು. ತೀರ ಹತ್ತಿರ ಬಂದಾಗ, ಅವರಲ್ಲೊಬ್ಬ ಬಸ್ಸಿನಲ್ಲಿದ್ದ ಅಮಲುದಾರ ಎನ್ನುವುದು ಖಾತ್ರಿಯಾಯಿತು.

"ಅಂಗಡಿ ಗಣಪತಿ ನಾಯ್ಕರ ಮನೆಗೆ", ಭಗೀರಥನೂ ಅವರನ್ನು ಸೇರಿಕೊಂಡ.

"ಗಣಪತಣ್ಣನ ಮನೆಗೆ? ಅಂದ್ರೆ ನಮ್ಮ ಮನೆಗೇ?"

ಅಮಲುದಾರ ಮತ್ತಷ್ಟು ಭಗೀರಥನ ಹತ್ತಿರ ಸರಿದು, ಸಂಗಡ ಇದ್ದವನನ್ನು ದೂರ ಸರಿಸಿ,

"ಇವ್ರೂ ನಮ್ಮ ಮನಿಗೇ, ನೀನು ಮತ್ತೂ ಮುಂದೆ ಬರೂದ ಬ್ಯಾಡ."

ಸಂಗಡ ಇದ್ದವ ಸ್ವಲ್ಪ ಅನುಮಾನಿಸಿ, ವಾಪಸು ತಿರುಗಿದ. ಇನ್ನೆರಡು ಹೆಜ್ಜೆ ಹಾಕುವಷ್ಟರಲ್ಲಿ ಕಣ್ಣು ಕತ್ತಲೆಗೆ ಹೊಂದಿಕೊಂಡಿತ್ತು. ಹಾಗೆಯೇ, ಹಾದು ಹೋಗುತ್ತಿದ್ದ ಮನೆಗಳು ಗುರುತು ಸಿಕ್ಕಂತೆ ಅನಿಸುತ್ತಿತ್ತು. ಒಂದು ಮನೆಯಲ್ಲಿ ಬೆಳಕೂ ಇತ್ತು ಮತ್ತು ಹೆಂಗಸೊಬ್ಬಳು ರಾಗವಾಗಿ ಹಾಡುತ್ತಿದ್ದಳು. ಭಗೀರಥನಿಗೆ ಮಾತಿಗೊಂದು ಎಳೆ ಸಿಕ್ಕಿತು:

"ಹಾಡುತ್ತಿರುವವರು ಯಾರಪ್ಪ ಈ ಅಪರಾತ್ರಿಯಲ್ಲಿ? ಇದು ದ್ಯಾಮಕ್ಕನ ಮನಿ ಅಲ್ಲಾ..."

"ದ್ಯಾಮಕ್ಕ ತೀರಿಕೊಂಡು ಬಾಳ ವರ್ಷ ಆಯ್ತು, ಇದು ದ್ಯಾಮಕ್ಕನ ದಿವ್ವ."

"ಅಂದ್ರೆ"

ಅಂತವುಗಳಲ್ಲಿ ನಂಬಿಕೆಯಿಲ್ಲದಿದ್ದರೂ ಒಂದು ಕ್ಷಣ ಗಾಬರಿಯಾಗದಿರಲಿಲ್ಲ. ದ್ಯಾಮಕ್ಕ ಭಗೀರಥನಿಗೂ ಪರಿಚಯದವಳೇ, ಎಲ್ಲರನ್ನೂ ಹೆದರಿಸಿಕೊಂಡೇ ಬದುಕು ಸವೆಸಿದ ಗಟ್ಟಿಗಿತ್ತಿ, ಅಥವಾ ಅವಳು ಮಾತಾಡುತ್ತಿದ್ದುದೇ ಹಾಗೆ. ಮಕ್ಕಳಿರಲಿಲ್ಲ. ಗಂಡನೂ ಜತೆಯಲ್ಲಿ ಇರಲಿಲ್ಲ. ಜೀವಂತ ಇರುವಾಗಲೇ ದೆವ್ವದಂತೆ ಬದುಕಿದವಳು. ಅವಳ ಬಾಯಿಗೆ ಊರೇ ಹೆದರುತ್ತಿತ್ತು. ಆ ಬೊಂ-ಬಾಯಿಗೆ ಹೆದರಿಯೇ ಗಂಡನೂ ಬಿಟ್ಟಿದ್ದ ಎನ್ನುವುದು ಅವಳ ಹಿಂದೆ ಆಡಿಕೊಳ್ಳುತ್ತಿದ್ದ ಮಾತು. ಹಣೆಯ ಮೇಲೆ ಹೆದರಿಕೆ ತರಿಸುವಷ್ಟು ದೊಡ್ಡ ಕುಂಕುಮ, ಆದರೆ ದಾರಿಯಲ್ಲಿ ಹೋಗುವವರನ್ನು ಮಾತಾಡಿಸಿ, "ನೀರಾದರೂ ಕುಡ್ಕೊಂಡು ಹೋಗ್ರೊ, ನಿಮ್ಮ ಗಂಟೇನು ಹೋಗೂದಿಲ್ಲ ಗುಲಾಮರ... ಈ ಬಿಸಿಲಲ್ಲಿ ಅದೇನು ತುಕ್ತೀರೋ" ಧೈರ್ಯ ಮಾಡಿ ಒಳ ಹೊಕ್ಕರೆ, ಮಡಿಕೆಯಲ್ಲಿನ ತಂಪು ನೀರು, ಒಂದು ಚೂರು ಬೆಲ್ಲ ಯಾವಾಗಲೂ ತಪ್ಪಿದ್ದಲ್ಲ. ಭಗೀರಥನ ಕೊನೆಯ ಭೇಟಿಯಲ್ಲಿ, ಅದೂ ದೊಡ್ಡಪ್ಪನ ಮಗನ ಮದುವೆಗೂ ಅಪ್ಪ ಬರುವದಿಲ್ಲ ಎಂದು ಹಟ ಹಿಡಿದಾಗ ಒಬ್ಬನೇ ಬಂದ ಭೇಟಿಯಲ್ಲಿ, ಅಂಗಳ ಗುಡಿಸುತ್ತಿದ್ದವಳು, ತನ್ನದೇ ಗತ್ತಿನಲ್ಲಿ ಸ್ವಾಗತಿಸಿದ್ದಳು.

"ಒಳಗೇ ಬಾರೋ ಗುಲಾಮ, ಬಂದ್ರೆ ನಿಂದೇನು ಗಂಟು ಕರ್ಗಿ ಹೋಗುದಿಲ್ವೋ. ನಿಮ್ಮ ಅಪ್ಪ ಒಂದು ಮುಖಹೇಡಿ, ನೀನೂ ಅವನಾಂಗೆ ಆಗೂದು ಬ್ಯಾಡವೋ. ಈ ಊರೇ ಹಾಂಗೆ. ಈ ಊರಲ್ಲ, ಸುಮ್ಮನಿದ್ರೆ ಎಲ್ಲಾ ಊರೂ ಹಾಂಗೆ. ಎಲ್ಲವರ ಮ್ಯಾಲೂ ಒಂದು ಅಪವಾದ ಕೂಡಿಸ್ದೇ ಇದ್ರೆ ಅವರ ಹಡಿಬಿಟ್ಟಿ ಹೊಟ್ಟಿ ತುಂಬಬೇಕಲ್ಲ."

ಕಲಸಿಟ್ಟ ಸಗಣಿಯನ್ನು ರೊಯ್ಯನೆ ಇಡೀ ಊರನ್ನು ಸಾರಿಸುವಂತೆ ಹರಡಿ, ಅದೇ ಕಸಬರಿಗೆಯಲ್ಲಿ ಹೊಡೆಯುತ್ತ,

"ಸೀತೆಗೆ ವನವಾಸ, ರಾಮಂಗೆ ಉಪವಾಸ", ರಾಗವಾಗಿ ಹಾಡುತ್ತ, ಅರ್ಧಕ್ಕೆ ನಿಲ್ಲಿಸಿ,

"ನಿಮ್ಮ ಅಪ್ಪ ಯಾಕೆ ಊರಿಗೆ ಬರೂದಿಲ್ಲ ಅಂತ ಹೇಳಿನೆ ನಿನ್ನ ಹತ್ರ. ಮೊನ್ನಪ್ಪ. ಬಾಯಿ ಇಲ್ದಿದ್ರೆ ಮನುಷ್ಯ ಅಷ್ಟೆ. ಗಂಡ್ಸು ಆದ್ರೆ ಏನಾಯ್ತು? ಹೋಗಿ ನಾನು ಕೇಳ್ದೆ ಅಂತ ಹೇಳ. ನೆನಪ ಮಾಡ್ಕೊಂಡು ಕೇಳ ಮತ್ತೆ..."

ದ್ಯಾಮಕ್ಕ ಒಬ್ಬಳೇ ಮಗಳು. ಚಿಕ್ಕವಳಿದ್ದಾಗಲೇ ಮದುವೆಯಾಗಿ ಗಂಡನನ್ನು ಬಿಟ್ಟು ತವರು ಸೇರಿದ್ದಳು. ದ್ಯಾಮಕ್ಕ ಶ್ರೀಮಂತ ಎದೆಯ ಹೆಂಗಸು. ರವಿಕೆಯಿರದ ಸೆರಗಿನೊಳಗೆ ತಿನ್ನುವ ತಿಂಡಿ ಅಡಗಿಸಿ ತಂದಿದ್ದಾಳೆ ಎಂದು ಚಿಕ್ಕ ಮಕ್ಕಳು ದುಂಬಾಲು ಬೀಳುತ್ತಿದ್ದವು. ಆ ಮಕ್ಕಳನ್ನು ಗದರುವ ಹೆಂಗಸರು, ಮುಸುಗುಡುವ ಗಂಡಸರನ್ನು "ನೀವೆಲ್ಲಾ ಏನು ಕುನ್ನಿ ಹಾಲ ಕುಡ್ದು ಬೆಳ್ದೀರೇನು?" ಎಂದು ಸಿಡುಕುತ್ತಿದ್ದಳು. ಆದರೆ ದ್ಯಾಮಕ್ಕನ ಕೈ ಅಡುಗೆಯ ರುಚಿ ಊರಿಗೇ ಪರಿಚಯ. ಹಬ್ಬ ತಿಥಿ ಎಲ್ಲದರಲ್ಲೂ ಅವಳೇ ಮುಂದೆ. ಊರಲ್ಲಿ ಎಲ್ಲರ ಬಗ್ಗೆಯೂ ಕತೆ ಹೇಳುವ ಅಪ್ಪ ಅವಳ ಕುರಿತು ಯಾವ ಕತೆಯನ್ನೂ ಹೇಳಿದ್ದೇ ಇಲ್ಲ. ಅದು ಏನಿದ್ದರೂ ಅಪ್ಪನ ಅನುಪಸ್ಥಿತಿಯಲ್ಲಿ ಗಣಪತಣ್ಣನ ಕಿತಾಪತಿ. ಯಾರೂ ಇಲ್ಲದಿದ್ದರೆ ಹಾದಿತಪ್ಪಲು ಹೊತ್ತೇನೂ ಹಿಡಿಯುತ್ತಿರಲಿಲ್ಲ.

"ಅಣ್ಣ ದಿವ್ವ ಅಂದ್ರೆ ಹೆದ್ರಿಕೊಳ್ಳುವಂತದ್ದೇನು ಇಲ್ವಾ. ಸಾಯುಕ್ಕಿಂತ ಮೊದ್ಲು ದ್ಯಾಮಕ್ಕಗೆ ಒಂದು ಸಾಕುಮಗಳು ಬಂದು ಸೇರ್ಕೊಂಡ್ಲು. ಅವಳ ಗಂಡನ ಮತ್ತೊಂದು ಹೆಂಡತಿಯ ಮಗಳಂತೆ. ಈಗ ಯಾರು ಬಂದ್ರೂ ತಾನೇ ದ್ಯಾಮಕ್ಕ ಅನ್ನೂ ಹಂಗೆ, ಕಾಯ್ ಕುಡ್ತೀ ಬಾ, ಬೆಲ್ಲ ಕುಡ್ತೀ ಬಾ ಅಂದ ಕರೀತಿದ. ಈಗ ಅದನ್ನು ತಿನ್ನೂವವರ್ಯಾರು. ಯಾರಿಗೆ ಬೇಕು ಇವಳ ಬೆಲ್ಲಾ, ಕಾಯಿ. ಒಂದ್ ರೂಪಾಯಿನೂ ಬಿಚ್ಚುವವಳಲ್ಲ ಮತ್ತೆ..."

ಅವನ ಹತ್ತಿರ ಮಾತು ಬೆಳೆಸಲು ಮನಸ್ಸಾಗದೇ ಸುಮ್ಮನಾದ. ದ್ಯಾಮಕ್ಕನ ಬಗೆಗಾಗಲೀ, ಅವಳ ಸಾಕುಮಗಳ ಬಗೆಗಾಗಲಿ ಲಘುವಾಗಿ ಮಾತಾಡುವುದು ಅಸಹನೀಯವೆನಿಸಿತು. ಹಾಗೆಯೇ, ದ್ಯಾಮಕ್ಕ ಈಗಿಲ್ಲದಿರುವುದು ನಿರೀಕ್ಷಿತವಾಗಿದ್ದರೂ ಮನಸ್ಸು ಭಾರವಾಗಿತ್ತು.

– ೯ –

ಮನೆ ಒಳಗೆ ಕಾಲಿಡುತ್ತಲೇ, ನಾಜೂಕಾಗಿ ಆರಾಂ ಕುರ್ಚಿಯ ಮೇಲೆ ಕುಳಿತಿದ್ದ ಗಣಪತಣ್ಣ ಕಣ್ಣಿಗೆ ಬಿದ್ದ. ಪೂರ್ತಿ ಇಳಿದುಹೋಗಿ, ಹಳೆ ಗಣಪತಣ್ಣನ ನೆರಳಂತೆ ಕಾಣುತ್ತಿದ್ದ. ಭಗೀರಥನೊಡನೆ ಒಳಬಂದ ಮಗನನ್ನು ನೋಡಿ ಆಶ್ಚರ್ಯವಾಯಿತೋ, ಮುಜುಗರವಾಯಿತೋ ಎನ್ನುವುದು ಅವನ ಮುಖದ ಸುಕ್ಕಿನ ಸುಳಿಗಳ ನಡುವೆ ತಿಳಿಯಲಿಲ್ಲ.

"ನೀ ಒಬ್ಬನೇ ಬರುವೆ ಅಂತ ಸಾಂತ ಪೋನ ಮಾಡಿದ್ದ. ಇಂವ ಎಲ್ಲಿ ಸಿಕ್ದ ನಿಂಗೆ?", ಗಣಪತಣ್ಣನ ಧ್ವನಿ ಅವನಿಗಿಂತಲೂ ಮುಪ್ಪಾಗಿತ್ತು.

"ನಾವಿಬ್ಬರೂ ಒಂದೇ ಬಸ್ಸಿಗೆ ಬಂದ್ವು."

ಉತ್ತರಕ್ಕೆ ಅಮಲುದಾರ, "ಚಂಡಿಬೀರನ ದೇವಸ್ಥಾನದವರೆಗೂ ಬಂದು ಮುಟ್ಟಿದ್ದರು. ನಂತರ ಸಿಕ್ಕಿದ್ರು" ಎಂದು ಸಮಜಾಯಿಷಿ ಸೇರಿಸಿದ. ಗಣಪತಣ್ಣ ಅಲುಗಾಡಲಿಲ್ಲ, ಕಣ್ಣೆವೆಯಿಕ್ಕದೇ, ಭಗೀರಥನನ್ನು ದಿಟ್ಟಿಸುತ್ತ, "ಒಳ್ಳೆದಾಯ್ತು. ಆದ್ರೆ ತಮ್ಮ, ನನ್ನ ಮಗಗೆ ದುಡ್ಡು ಮಾತ್ರ ಕೊಡ್ಬೇಡ ನೋಡು. ಹೊರಗಿನಿಂದ ಬಂದುಹೋದವ್ರು ದೊಡಸ್ತನ ತೋರಿಸಿಯೇ ಹಾಳ ಮಾಡಹಾಕರ" ಎಂದಾಗ ಮಗ ಮುನಿಸಿಕೊಂಡು ಒಳಗೆ ಹೋದ.

ಊಟ ಮುಗಿಸಿ ಬಂದು ಕುಳಿತ ಭಗೀರಥನನ್ನು ನೋಡುತ್ತ ಗಣಪತಣ್ಣ, ಯಾವ ಮಾತಿಗೂ ಕಾಯದೆ ಮಾತಿಗೆ ಶುರುಹಚ್ಚಿಕೊಂಡ. ಅವನೂ ಆ ಗಳಿಗೆಗಾಗಿಯೇ ಕಾಯುತ್ತಿದ್ದಂತಿತ್ತು.

"ನೀನು ಯಾಕೆ ಬಂದಿ ಅಂತ ಗೊತ್ತು ನನಗೆ. ನಿಮ್ಮ ಅಪ್ಪಂದು ಒಂದು ಕಥೆ. ಹೆಚ್ಚಿನಂಶ ಅವನೇ ಮಾಡ್ಕಂಡಿದ್ದು. ಗಂಡಿ ಬಲೆ ಹಾಕುದು ಜೋರು ಆವಾಗ. ಜಂತ್ರೋಡಿ ಗುತ್ತಾಯ್ತೆ? ಈಗ ರಿಪೇರಿ ಮಾಡ್ತೆ ಇವ್ರಲ್ಲ, ಅದೇ ಸಂಕ, ಈಗ ನಾಸ್ಟಾಲ್ಜಿಯ ಬರೀ ಸಂಕ ಅಷ್ಟೆ, ನೀರಿಲ್ಲ. ಭರತಕ್ಕೆ ನದಿಯಲ್ಲಿ ಬರೂ ಉಪ್ಪು ನೀರು ಗದ್ದೆಗೆ ಬರಬಾರ್ದು ಅಂತಹ ಬಾಗಲು ಹಾಕಿರ್ತಾರೆ. ಅದಕ್ಕ ಹಾಕು ಬಲೆಗೆ ಗಂಡಿ ಬಲೆ ಅಂತಾರೆ. ಇಳಿತಕ್ಕೆ ಬಲೆ ಕಟ್ಟಿ ಬಾಗಿಲು ತೆರೆದರೆ ಮೀನಿಗೆ ತಾವೇ ತಾವಾಗಿ ಬೀಳದೇ ಬೇರೆ ದಾರಿನೇ ಇಲ್ಲ. ತಿನ್ನುವಷ್ಟು ಮೀನು. ಆದ್ರೆ ಬಾಗಿಲು ಮತ್ತೆ ಹಾಕ್ದೆ ಇದ್ರೆ, ಭರತ ಬಂದಕೂಡ್ಲೇ ಇಡೀ ಗದ್ದೆಬಯಲಿಗೆ ಉಪ್ಪುನೀರು. ಒಂದು ದಿನ ರಾತ್ರಿ ಮೀನು ಹಿಡಿಯೋಕೆ ಹೋದವ್ರು ವಾಪಸು ಕದ ಹಾಕ್ದೇ. ಇಡೀ ಬಯಲು ಉಪ್ಪುನೀರು. ಆ ಬಲೆ ನಿಮ್ಮ ಮನೇಲೇ ಇತ್ತು, ಹಾಂಗಾಗಿ ಅನುಮಾನ ನಿಮ್ಮಪ್ಪನ ಮೇಲೆ ಬಂತು. ಆ ದಿನ ರಾತ್ರಿ ನಿಮ್ಮಪ್ಪ ಮನೇಲೆ ಇರಲಿಲ್ಲ. ತಾನು ಎಲ್ಲಿದ್ದೆ ಎಂದು ಹೇಳೂದಕ್ಕೆ ಅಂವ ತಯಾರಿಲ್ಲ, ಗಂಡಿಬಲೆ ಹಾಕಿದವ ತಾನಲ್ಲ ಅಂತ ದೇವ್ರಾಣೆ ಹಾಕೂಕೆ ಶುರುಮಾಡ್ದ. ಚಂಡಿಬೀರನತ್ರ ಬಾಗಿಲು ತಟ್ಟಿ ಕೇಳಿದರೆ, ನಿಮ್ಮಪ್ಪನೇ ಮಾಡಿದ್ದು ಅಪ್ಪಣೆಯಾಯ್ತು. ಗೊತ್ತಿದ್ದವ್ರಿಗೆ ಗೊತ್ತು, ಅಂವ ಎಲ್ಲಿಗೆ ಹೋಗಿದ್ದ ಅಂತ, ಇವಾಗ ನಾನು ಹೇಳೂಕೆ ಹೋಗುದಿಲ್ಲ, ಆ ಅಡಕತ್ತರಿಯಲ್ಲಿ ಸಿಕ್ಕಿಹಾಕಿಕೊಂಡು ಊರು ಬಿಟ್ಟ."

ಇಬ್ಬರೂ ಸ್ವಲ್ಪ ಹೊತ್ತು ಸುಮ್ಮನಿದ್ದರು. ಅವರ ಮೌನದ ಬಿಗುವನ್ನು ಕಡಿಮೆ ಮಾಡುವವಳಂತೆ, ಗಣಪತಣ್ಣ ಹೆಂಡತಿ ಪಾರತಕ್ಕ ಆ ದಿನಕ್ಕೆ ಮುಕ್ತಾಯ ಹಾಡಿದಳು.

"ಇಷ್ಟು ವರ್ಷ ಪಟ್ಟದ್ದು ಸಾಕು ಅಂತ ಹೇಳು ನಿಮ್ಮಪ್ಪಗೆ. ಬಹಳ ವರ್ಷದ ನಂತ್ರ ಬಂದಿ. ಈಗ್ಯಾಕೆ ಆ ಹಳೆ ಕಥೆ. ಕೆದರುತಾ ಹೋದರೆ ಎಲ್ಲರದೂ ರಾಮಾಯಣನೇ."

ಭಗೀರಥನಿಗೆ ಏನೊ ಒಂದು ಹೊಳೆದಂತಾಗಿ ಮುಜುಗರವಾಯಿತು.

*

# ಜನನೀ ಜನ್ಮಭೂಮಿಶ್ಚ

■ **ಶಂಕರ ಹೆಗಡೆ,** Naperville, IL.

ಒಬ್ಬ ವ್ಯಕ್ತಿಯ ಜೀವನವೇ ಇರಲಿ, ಸಮಾಜವೇ ಇರಲಿ ನಿಂತ ನೀರಲ್ಲ; ಹರಿಯುವ ನದಿ. ಪ್ರದೇಶದಿಂದ ಪ್ರದೇಶಕ್ಕೆ ಹರಿಯುತ್ತ ಮುಂದೆ ಸಾಗುತ್ತಿರುತ್ತದೆ. ಆಚೆ–ಈಚೆಯ ಪರಿಸರ ಬದಲಾದಂತೆ ನದಿಯ ವೇಗ, ಆಳ–ಅಗಲ, ದಂಡೆಗಳೂ ಬದಲಾಗುತ್ತ ಹೋಗುತ್ತವೆ. ಕೆಲವು ಬದಲಾವಣೆಗಳು ನೈಸರ್ಗಿಕ ಧರ್ಮ ಎನ್ನುವಷ್ಟು ಸಹಜವಾಗಿದ್ದರೆ ಇನ್ನು ಹಲವು ಬದಲಾವಣೆಗಳಿಗೆ ಚಾಲನೆ ಕೊಡಲು ಬಾಹ್ಯ ಒತ್ತಡದ ಅವಶ್ಯಕತೆಯಿರುತ್ತದೆ. ಒತ್ತಡ ಯಾವುದೇ ಘಟನೆ ಇರಬಹುದು ಅಥವಾ ವ್ಯಕ್ತಿಯಿರಬಹುದು. ಒಬ್ಬ ಬಲಾಢ್ಯ ನಾಯಕ, ಬದಲಾವಣೆಯ ವೇಗವನ್ನು ಇಮ್ಮಡಿಸಬಹುದು, ಅಥವಾ ದಿಕ್ಕನ್ನೇ ಬದಲಿಸಬಹುದು.

ಈಗ ನಾನು ಹೇಳ ಹೊರಟಿರುವದು ಉತ್ತರ ಕನ್ನಡ ಜಿಲ್ಲೆಯ ಪಶ್ಚಿಮ ಘಟ್ಟದ ಒಂದು ಚಿಕ್ಕ ಹಳ್ಳಿಯ ಕತೆ. ನಾನು ಹುಟ್ಟಿ ಬೆಳೆದ ಪರಿಸರದಲ್ಲಿ ಕಳೆದ ೫೦–೬೦ ವರ್ಷಗಳಲ್ಲಿ ನಾ ಕಂಡ, ಅನುಭವಿಸಿದ ಬದಲಾವಣೆ ಮತ್ತು ಅದರಿಂದ ಅಲ್ಲಿಯ ಜನಜೀವನದ ಮೇಲಾದ ಪರಿಣಾಮಗಳ ಕತೆ. ಇದು ನನ್ನ ಹಳ್ಳಿಗೆ ಮಾತ್ರ ಸೀಮಿತವಾದದ್ದು. ಭಾರತದಲ್ಲಿ ಅಥವಾ ಕರ್ನಾಟಕದಲ್ಲಿ ಆದ ಅಸಂಖ್ಯ ಬದಲಾವಣೆಗಳ ಪ್ರಸ್ತಾಪ ಇಲ್ಲಿಲ್ಲ. ನನ್ನ ಜನ್ಮಸ್ಥಳ ಉತ್ತರ ಕನ್ನಡ ಜಿಲ್ಲೆಯ ಶಿರಸಿಯಿಂದ ೨೫ ಕಿಲೋಮೀಟರ್ ದಕ್ಷಿಣಕ್ಕೆ, ಅರಬ್ಬೀ ಸಮುದ್ರದಿಂದ ಸುಮಾರು ೫೦ ಕಿಲೋಮೀಟರ್ ಪೂರ್ವಕ್ಕೆ ಇರುವ ತ್ಯಾರಗಲ್ ಎನ್ನುವ ಸಣ್ಣ ಊರು. ನಾನು ಹುಟ್ಟಿದಾಗ ಎರಡನೆಯ ಜಾಗತಿಕ ಮಹಾಯುದ್ಧ ಕೊನೆಯ ಹಂತದಲ್ಲಿತ್ತು. ಆಗ ಊರಿನಲ್ಲಿ ಏಳು ಮನೆಗಳಿದ್ದವು. ಜನಸಂಖ್ಯೆ ೫೨. ಇಂದು ಅದೇ ಏಳು ಮನೆಗಳು ಹತ್ತು ಮನೆಗಳಾಗಿ ಪರಿವರ್ತನೆಗೊಂಡರೂ ಜನಸಂಖ್ಯೆ ಹೆಚ್ಚಿಲ್ಲ.

ನಾನು ಕಳೆದ ೪೩ ವರ್ಷಗಳಿಂದಲೂ ಆಗಾಗ ಅಮೇರಿಕೆಯಿಂದ ನನ್ನ ಹಳ್ಳಿಗೆ ಹೋಗಿಬರುತ್ತಲಿದ್ದೇನೆ. "ಜನನೀ ಜನ್ಮಭೂಮಿಶ್ಚ, ಸ್ವರ್ಗಾದಪಿ ಗರೀಯಸಿ" ಎನ್ನುವಂತೆ,

ನನಗೆ ಇನ್ನೂ ಹುಟ್ಟಿ ಬೆಳೆದ ಮನೆ, ಊರುಗಳ ವ್ಯಾಮೋಹ ಹೋಗಿಲ್ಲ. ಇಂದು ನನ್ನ ಹಿರಿಯರೆಲ್ಲ ತೀರಿಕೊಂಡಿದ್ದರೂ ನಾನು ಹೋಗಿ-ಬರುವದನ್ನು ಬಿಟ್ಟಿಲ್ಲ. ಹೋದಾಗಲೆಲ್ಲ "ಇಲ್ಲಿದೆ ನನ್ನ ಮನೆ, ಅಲ್ಲಿ ಇರುವೆ ಸುಮ್ಮನೆ" ಎಂಬ ಭಾವನೆ ಬರುತ್ತದೆ. ಅದೇ ಅಡಿಕೆ ತೋಟಗಳ ಮಧ್ಯದಲ್ಲಿರುವ ದೊಡ್ಡ ಮನೆ, ನಿಧಾನವಾಗಿ ಸಾಗುವ ಒತ್ತಡ-ರಹಿತ ಶಾಂತ ಜೀವನ, ಪಕ್ಕದ ಮನೆಯವರೊಂದಿಗೆ ಅಂಗಳದಲ್ಲಿ ನಿಂತು ತಾಸುಗಟ್ಟಲೆ ಹರಟೆ, ಅಂದಿನಂತೆಯೇ ಹಬ್ಬ-ಹುಣ್ಣಿಮೆ, ಶ್ರಾದ್ಧ, ಮದುವೆ-ಮಂಗಳ ಕಾರ್ಯಗಳ ಆಚರಣೆ, ಎಲ್ಲವೂ ಹಳೆಯ ದಿನಗಳಂತೆಯೇ ಇವೆ. ಹೊಸ ಹಳ್ಳಿಗಳು ಹುಟ್ಟಿಲ್ಲ, ಹಳೆಯ ಹಳ್ಳಿಗಳೆಲ್ಲ ಇದ್ದಂತೆಯೆ ಇವೆ. ಹೊರನೋಟಕ್ಕೆ ನಮ್ಮೂರು ಏನೂ ಬದಲಾಗಿಯೇ ಇಲ್ಲ ಅನಿಸುತ್ತದೆ. ಆದರೆ ಆಗಿರುವ ಬದಲಾವಣೆ ಕೆಲವು ಸಲ ನಮಗೆ ಮೇಲ್ನೋಟಕ್ಕೆ ಕಾಣಿಸುವದಿಲ್ಲ. ದಿನಾಲು ನೋಡುತ್ತಿರುವ ನಮ್ಮ ಮಗುವಿನ ಬೆಳವಣಿಗೆಯನ್ನು ನಾವು ಗಮನಿಸುವದಿಲ್ಲ. ನಾನು ಕೆನಡಾಕ್ಕೆ ಬಂದು, ಹದಿನೈದು ತಿಂಗಳ ನಂತರ ನನ್ನ ಹೆಂಡತಿ, ಮಕ್ಕಳನ್ನು ಕರೆಸಿಕೊಂಡೆ. ವಿಮಾನ ನಿಲ್ದಾಣದಲ್ಲಿ ಬಂದಿಳಿದ ನನ್ನ ಆರು ಮತ್ತು ನಾಲ್ಕು ವರ್ಷಗಳ ಮಕ್ಕಳನ್ನು ಕಂಡಾಗ "ಅರೆ, ಹದಿನೈದು ತಿಂಗಳುಗಳಲ್ಲಿ ನನ್ನ ಮಕ್ಕಳು ಅದೆಷ್ಟು ಬೆಳೆದುಬಿಟ್ಟಿದ್ದಾರೆ" ಎಂದು ಆಶ್ಚರ್ಯಪಟ್ಟಿದ್ದೆ. ನನ್ನ ಬಾಲ್ಯದ ದಿನಗಳನ್ನು ಉದ್ದೇಶಪೂರ್ವಕವಾಗಿ ನೆನಪಿಸಿಕೊಂಡರೆ ಮಾತ್ರ ಇಂದು ಅಲ್ಲಿಯ ದಿನನಿತ್ಯದ ಜೀವನದಲ್ಲಿ, ಸೌಲಭ್ಯ-ಸೌಕರ್ಯಗಳಲ್ಲಿ, ಸಾರಿಗೆ-ಸಂಪರ್ಕದಲ್ಲಿ, ಜನರ ವಿಚಾರ ಸರಣಿಯಲ್ಲಿ ಆದ ದೊಡ್ಡ ಬದಲಾವಣೆಗಳ ಅನುಭವವಾಗುತ್ತದೆ.

ನಾನು ನನ್ನ ನಾಲ್ಕನೇ ಇಯತ್ತೆ ಮುಗಿಸಿದಾಗ ನಮ್ಮ ಶಾಲೆಯಲ್ಲಿ ಮುಂದೆ ಓದಲು ಸೌಲಭ್ಯಗಳಿರಲಿಲ್ಲ. ಊರಿನಲ್ಲಿ ಯಾರೂ ಹೆಚ್ಚು ಓದಿದ ಹಿರಿಯರಿರಲಿಲ್ಲ. ಇಂದು ಊರಿನಲ್ಲಿಯೇ ಇರುವ ಹೈಸ್ಕೂಲಿನಲ್ಲಿ, ಎಸ್.ಎಸ್.ಎಲ್.ಸಿ. ತನಕವಾದರೂ ಓದದ ಯುವಕರಿಲ್ಲ. ಅಂದು ನಮ್ಮೂರಿನಿಂದ ಶಿರಸಿಗೆ ಹೋಗಲು ಬಸ್ಸುಗಳಿರಲಿಲ್ಲ. ನನ್ನ ಬಾಲ್ಯದ ದಿನಗಳಲ್ಲಿ ಪ್ರೈವೇಟ್ ಮೋಟಾರುಗಳು ಕೂಡ ಇರಲಿಲ್ಲ. ಹನ್ನೆರಡು ಕಿಲೋಮೀಟರ್ ದೂರ ನಡೆದು, ಸರಕಾರಿ ಬಸ್ಸಿಗೆ ತಾಸುಗಟ್ಟಲೆ ಕಾಯ್ದು ೩-೪ ತಾಸುಗಳಲ್ಲಿ ಶಿರಸಿಗೆ ಸೇರಬೇಕಿತ್ತು. ಇಂದು ನಮ್ಮೂರಿನಿಂದ ಶಿರಸಿಗೆ ದಿನಕ್ಕೆ ಆರೇಳು ಬಸ್ಸುಗಳು ಓಡಾಡುತ್ತವೆ. ೪೦-೪೫ ಮಿನಿಟುಗಳ ಪ್ರಯಾಣ. ನಾನು ಹೈಸ್ಕೂಲಿನಲ್ಲಿದ್ದಾಗ ನನ್ನ ತಂದೆಯ ಜೊತೆ ಮೊದಲ ಸಲ ಬೆಂಗಳೂರಿಗೆ ಹೋಗಿದ್ದೆ. ಬಸ್ಸು, ಟ್ರೇನುಗಳ ಪ್ರಯಾಣ ಕೂಡಿ ೨೪ ಗಂಟೆಗಿಂತ ಹೆಚ್ಚು ಹಿಡಿದಿತ್ತು! ಇಂದು ಬೆಂಗಳೂರು ನೆರಮನೆಯಂತಾಗಿದೆ. ಶಿರಸಿಯಿಂದ ಬೆಂಗಳೂರಿಗೆ ಪ್ರತಿದಿನ, ವಿವಿಧ ಸೌಕರ್ಯಗಳುಳ್ಳ ಹತ್ತೆಂಟು ಸರಕಾರಿ ಮತ್ತು ಪ್ರೈವೇಟ್ ಬಸ್ಸುಗಳು ಓಡಾಡುತ್ತವೆ. ಕೆಲವರು ತಮ್ಮ ಸ್ವಂತ ವಾಹನದಲ್ಲಿಯೇ ೭-೮ ತಾಸುಗಳಲ್ಲಿ ಬೆಂಗಳೂರು ಸೇರುತ್ತಾರೆ. ನಾನು ಫೋನು ನೋಡಿದ್ದು ಶಿರಸಿಯಲ್ಲಿ ಹೈಸ್ಕೂಲು ಓದುತ್ತಿದ್ದಾಗ ದೊಡ್ಡ ಅಂಗಡಿಗಳಲ್ಲಿ ಮಾತ್ರ. ಆಗಿನ ಕಪ್ಪು ಬಣ್ಣದ ರೋಟರಿ

ಫೋನುಗಳು. ಮೊದಲ ಸಲ ಅಂಗಡಿಯೊಂದರ ಫೋನಿನಿಂದ ಕರೆ ಮಾಡಿದ್ದು ಇನ್ನೂ ಒಂದೆರಡು ವರ್ಷಗಳ ನಂತರ. ಇಂದು ನಮ್ಮೂರಿನ ಎಲ್ಲರ ಮನೆಗಳಲ್ಲಿಯೂ ಲ್ಯಾಂಡ್-ಲೈನ್ ಟೆಲಿಫೋನುಗಳಿವೆ. ಹಲವರ ಕೈಯಲ್ಲಿ ಸ್ಮಾರ್ಟ್ ಮೊಬೈಲುಗಳಿವೆ. ಮನೆಯಲ್ಲಿಯೇ ಇಂಟರನೆಟ್, ವೈ-ಫೈಗಳಿವೆ. ಅಡುಗೆ ಮಾಡಲು ಉಪಯೋಗಿಸುತ್ತಿದ್ದ ಕಟ್ಟಿಗೆ ಒಲೆಗಳು ಮಾಯವಾಗಿ ಎಲ್ಲರ ಮನೆಗಳಲ್ಲಿಯೂ ಗೋಬರ್ ಗ್ಯಾಸಿನ ಸೌಕರ್ಯಗಳಿವೆ. ಚಿಮಣಿ ದೀಪ, ಪೆಟ್ರೋಮ್ಯಾಕ್ಸ್ ದೀಪಗಳ ಬದಲು ವಿದ್ಯುತ್ ಸರಬರಾಜು ಬಂದು ಮೂವತ್ತು ವರ್ಷಗಳಾದವು. ಪ್ರಧಾನ ಮಂತ್ರಿ ಮೋದಿಯವರ "ಸ್ವಚ್ಛ ಭಾರತ" ಅಭಿಯಾನದ ಒಂದು ಮುಖ್ಯ ಧ್ಯೇಯ ಪ್ರತಿ ಹಳ್ಳಿಯ ಮನೆ ಮತ್ತು ಶಾಲೆಗಳಲ್ಲಿ ಶೌಚಾಲಯ ನಿರ್ಮಿಸುವದು. ನಮ್ಮ ಊರಿನ ಎಲ್ಲ ಮನೆಗಳಲ್ಲಿಯೂ ಸೆಪ್ಟಿಕ್ ಶೌಚಾಲಯಗಳು ಬಂದು ಕಾಲು ಶತಮಾನ ಸಂದಿದೆ. ಮಣ್ಣು ಗೋಡೆ, ಅಡಿಕೆ ದಬ್ಬೆಗಳಿಂದ ಮಾಡು ಕಟ್ಟಿ ಸೋಗೆ ಹೊದಿಸುತ್ತಿದ್ದ ಮನೆಗಳು ಎಂದೋ ಹೋಗಿ ಮಂಗಳೂರು ಹೆಂಚಿನ ಮನೆಗಳು ಬಂದಿವೆ. ಈಗೀಗ ತಾರಸಿ ಮನೆಗಳು ಬರುತ್ತಿವೆ. ಜೊತೆಗೆ ಹಲವು ಹೊಸ ಸಮಸ್ಯೆಗಳೂ ಹುಟ್ಟಿಕೊಂಡಿವೆ. ಊರಿನ ಬಹಳಷ್ಟು ಯುವಕರೆಲ್ಲ ಕೆಲಸ ಅರಸಿ ದೊಡ್ಡ ಪಟ್ಟಣಗಳಿಗೆ ವಲಸೆ ಹೋಗುತ್ತಿದ್ದಾರೆ. ಹಲವು ಹಳ್ಳಿಗಳು ವೃದ್ಧಾಶ್ರಮಗಳಂತಾಗಿವೆ. ಶಾಲೆಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಕುಗ್ಗುತ್ತಿದೆ. ಅಡಿಕೆ ಬೇಸಾಯಗಾರರಿಗೆ ಕೂಲಿಕಾರರ ಅಭಾವ ದಿನೇ-ದಿನೇ ಹೆಚ್ಚಾಗುತ್ತಿದೆ. ಕೆಲವು ನುರಿತ, ಕಷ್ಟಕರ ಕೂಲಿಗಳ ವೇತನ ಗಗನಕ್ಕೇರಿದೆ.

ಮುಂದಿನ ಪರಿಚ್ಛೇದಗಳಲ್ಲಿ ಈ ಬದಲಾವಣೆಗಳು ನಡೆದು ಬಂದ ದಾರಿಯನ್ನು ಗುರುತಿಸುವ ಪ್ರಯತ್ನ ಮಾಡಿದ್ದೇನೆ. ಮೊದಲು ನನ್ನ ಹಳ್ಳಿಯ ಪರಿಸರದ ಬಗ್ಗೆ ಒಂದೆರಡು ಮಾತುಗಳನ್ನು ಹೇಳುವದು ಸೂಕ್ತ. ನನ್ನ ಊರಿನಿಂದ ಮೂರು ಮೈಲು ಸುತ್ತಳತೆ ಕ್ಷೇತ್ರದಲ್ಲಿ ಸುಮಾರು ೩೦-೩೫ ಹಳ್ಳಿಗಳಿರಬಹುದು. ಎರಡರಿಂದ ಹದಿನೈದು ಕುಟುಂಬಗಳು ವಾಸಿಸುವ ಹಳ್ಳಿಗಳು. ಎರಡು ಹಳ್ಳಿಗಳ ನಡುವೆ ಒಂದು ಚಿಕ್ಕ ಗುಡ್ಡ ಅಥವಾ ಕೊಳ್ಳ. ಒಂದೆರಡು ಕೆಲಸಗಾರರ ಕೇರಿಗಳನ್ನು ಬಿಟ್ಟರೆ ಉಳಿದವರೆಲ್ಲ ಅಡಿಕೆ ಬೇಸಾಯ ಮಾಡಿಕೊಂಡಿರುವ ಹವ್ಯಕ ಬ್ರಾಹ್ಮಣರು. ಒಂದೇ ಅಪವಾದವೆಂದರೆ ಊರಿನಿಂದ ಎರಡು ಮೈಲು ದೂರದಲ್ಲಿರುವ ಹೇರೂರು ಎಂಬ ಚಿಕ್ಕ ಪೇಟೆ- ಒಂದು ಪುರಾತನ ಹಿಂದೂ ದೇವಾಲಯ, ಒಂದು ಮಸೀದಿ, ಏಳೆಂಟು ಸಣ್ಣ-ಪುಟ್ಟ ಅಂಗಡಿಗಳಿರುವ ಊರು. ಇಲ್ಲಿರುವ ಸುಮಾರು ಒಂದು ನೂರು ಕುಟುಂಬಗಳಲ್ಲಿ ಹೆಚ್ಚಿನವರು ಮುಸ್ಲಿಮರು, ಅಂಗಡಿ ಅಥವಾ ಚಿಕ್ಕ-ಪುಟ್ಟ ವ್ಯಾಪಾರಗಳಿಂದ ಜೀವನ ಮಾಡುತ್ತಿರುವವರು.

ಶಿರಸಿ ಪಟ್ಟಣ ಬಹಳ ವರ್ಷಗಳಿಂದ ಅಡಿಕೆ, ಏಲಕ್ಕಿ, ಕಾಳುಮೆಣಸುಗಳ ದೊಡ್ಡ ವ್ಯಾಪಾರ ಕೇಂದ್ರ. ಸುತ್ತಮುತ್ತಲಿನ ನೂರಾರು ಹಳ್ಳಿಗಳಿಂದ ಅಡಿಕೆ ಬೇಸಾಯಗಾರರು ತಮ್ಮ ಬೆಳೆಗಳನ್ನು ಮಾರಲು, ಹಾಗು ನಿತ್ಯಕ್ಕೆ ಬೇಕಾದ ಬಟ್ಟೆ-ಬರೆ, ದಿನಸಿ-ಧಾನ್ಯಗಳನ್ನು ಕೊಳ್ಳಲು ಶಿರಸಿಗೆ ಬರುತ್ತಾರೆ. ನಮ್ಮೂರಿನಿಂದ ಸುಮಾರು ಹತ್ತು ಕಿಲೋಮೀಟರ್

ದೂರದಲ್ಲಿ, ಶಿರಸಿ-ಕುಮಟಾ ರಹದಾರಿಗೆ ತಾಗಿ ಕೊಳಗೀಬೀಸ್ ಎಂಬ ಸ್ವಲ್ಪ ದೊಡ್ಡ ಹಳ್ಳಿಯಿದೆ. ನಮ್ಮೂರ ಕಡೆಯಿಂದ ಕೊಳಗೀಬೀಸ್ ಮುಖಾಂತರವೇ ಶಿರಸಿಗೆ ಹೋಗಬೇಕು. ನಾನು ಚಿಕ್ಕವನಿದ್ದಾಗ ಕೊಳಗೀಬೀಸಿಗೆ ಹೋಗಲು ಗುಡ್ಡದ ಮೇಲಿನ ಕಿರಿಯಗಲದ ಮಣ್ಣಿನ ರಸ್ತೆ ಬಿಟ್ಟರೆ ಬೇರೆ ಮಾರ್ಗವಿರಲಿಲ್ಲ. ನಾನು ಶಿರಸಿಯಲ್ಲಿ ಹೈಸ್ಕೂಲು ಓದುತ್ತಿದ್ದಾಗ ಅನೇಕ ಬಾರಿ ಈ ರಸ್ತೆಯಲ್ಲಿ ನಡೆದುಕೊಂಡು ಮನೆಗೆ ಹೋಗಿದ್ದೇನೆ. ಇಂದಿನ ಡಾಂಬರು ರಸ್ತೆಯ ಮೇಲೆ ಕಾರಿನಲ್ಲಿ ಹೋಗುತ್ತಿದ್ದಾಗ ಪ್ರತಿ ತಿರುವು-ಮುರುವೂ ಹಳೆಯ ಸವಿ ನೆನಪನ್ನು ತರುತ್ತದೆ.

**ನಮ್ಮೂರಿಗೊಂದು ಹೈಸ್ಕೂಲು ಬಂತು**

ನಮ್ಮೂರ ಸುತ್ತಮುತ್ತಲಿನ ಪ್ರದೇಶದಲ್ಲಿಯೇ ಅತ್ಯಂತ ಹಳೆಯ ಶಾಲೆ ಸರಕುಳಿ ಪ್ರಾಥಮಿಕ ಶಾಲೆ, ನಮ್ಮ ಮನೆಯಿಂದ ಅರ್ಧ ಮೈಲು ದೂರದಲ್ಲಿದೆ. ೧೮೮೪-೮೫ರಲ್ಲಿ ಚಿಕ್ಕ ಗುಡಿಸಲೊಂದರಲ್ಲಿ ಸ್ಥಾಪಿತವಾಗಿ, ೧೯೦೬ನೇ ಇಸ್ವಿಯಲ್ಲಿ ಇಟ್ಟಂಗಿ, ಮಂಗಳೂರು ಹೆಂಚುಗಳಿಂದ ನಿರ್ಮಿಸಿದ ಒಂದು ರೂಮಿನ ಕಟ್ಟಡಕ್ಕೆ ಸ್ಥಳಾಂತರವಾಯಿತು. ಸ್ಥಾಪನೆಯಾಗಿ ಸುಮಾರು ಎಪ್ಪತ್ತು ವರ್ಷಗಳ ಕಾಲ ಅಂದರೆ ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಿ ಎಂಟು ವರ್ಷಗಳವರೆಗೂ ನಮ್ಮ ಶಾಲೆ, ಒಂದೇ ಕೊಠಡಿಯಲ್ಲಿ, ಏಕ-ಶಿಕ್ಷಕ, ಕಿರಿಯ ಪ್ರಾಥಮಿಕ ಶಾಲೆಯಾಗಿಯೇ ಉಳಿದಿತ್ತು. ಅದರಿಂದಾಗಿ ನಾನು ನಾಲ್ಕನೇ ಇಯತ್ತೆ ಮುಗಿಸಿದ ಬಳಿಕ ಎರಡು ವರ್ಷ ಮನೆಯಲ್ಲಿಯೇ ಉಳಿಯಬೇಕಾಯಿತು.

ನನ್ನ ಶಿಕ್ಷಣ ಅಷ್ಟಕ್ಕೆ ನಿಲ್ಲದೆ ಮುಂದುವರಿದಿದ್ದಕ್ಕೆ ನಾನು ತಟ್ಟಿಕೈ ರಾಮಭಟ್ಟರಿಗೆ ಋಣಿಯಾಗಿರಬೇಕು. ಮಿಣಿ-ಮಿಣಿ ಉರಿಯುತ್ತಿರುವ ದೀಪವನ್ನು ದೊಡ್ಡದಾಗಿ ಬೆಳಗಿಸಲು ಎಣ್ಣೆ ಹಾಕಿ, ಬತ್ತಿ ಮುಂದೂಡುವ ವ್ಯಕ್ತಿಯೊಬ್ಬ ಬೇಕು. ನಮ್ಮೂರ ಶಿಕ್ಷಣ ಕ್ಷೇತ್ರದ ಪ್ರಗತಿಗೆ ಎಣ್ಣೆ ಹಾಕಿ ಚಾಲನೆ ಕೊಟ್ಟವರು ತಟ್ಟಿಕೈ ರಾಮಚಂದ್ರ ಅಣ್ಣಯ್ಯ ಭಟ್ಟ ಅವರು. ಊರಿನ ಹಲವು ಸುಧಾರಣೆಗಳಿಗೆ ರಾಮಭಟ್ಟರ ಮುಖಂಡತ್ವ, ಮುಂದಾಲೋಚನೆ ಅತಿ ದೊಡ್ಡ ಪಾತ್ರವಹಿಸಿದೆಯೆನ್ನಬೇಕು. ಜಿಲ್ಲಾ ಶಿಕ್ಷಣ ಕೇಂದ್ರದೊಡನೆ ರಾಮಭಟ್ಟರ ಹೋರಾಟದಿಂದಾಗಿ ೧೯೫೫ರಲ್ಲಿ ಬರಿಯ ಹತ್ತು ವಿದ್ಯಾರ್ಥಿಗಳಿಂದ ನಮ್ಮ ಸರಕುಳಿ ಶಾಲೆಯಲ್ಲಿ ಐದನೆಯ ಕ್ಲಾಸು ಪ್ರಾರಂಭವಾಯಿತು. ಆ ವರ್ಷ ಶಾಲೆಯಲ್ಲಿ ನಾಲ್ಕನೇ ಇಯತ್ತೆ ಮುಗಿಸಿದವರು ಆರು ಜನ ಮಾತ್ರ ಇದ್ದುದರಿಂದ ನಾಲ್ಕನೇ ಇಯತ್ತೆ ಮುಗಿಸಿ ಒಂದೆರಡು ವರ್ಷಗಳಿಂದ ಮನೆಯಲ್ಲಿಯೇ ಉಳಿದವರನ್ನು ಸೇರಿಸಿಕೊಂಡರು. ಅವರಲ್ಲಿ ನಾನೂ ಒಬ್ಬ. ಸರಕಾರಿ ಶಿಕ್ಷಕರು ಮಂಜೂರಾಗದೆ, ಪ್ರೈವೇಟ್ ಶಿಕ್ಷಕರೊಬ್ಬರನ್ನು ಕುಮಟೆಯಿಂದ ಕರೆಯಿಸಿಕೊಳ್ಳಲಾಗಿತ್ತು. ಅಂದಿನ ದಿನಗಳಲ್ಲಿ ಹೆಚ್ಚಿನ ಶಿಕ್ಷಕರು ಜಿಲ್ಲೆಯ ಕರಾವಳಿ ಪ್ರದೇಶಗಳಿಂದಲೇ ಬರಬೇಕಿತ್ತು. ಆ ವರ್ಷ ಐದನೆಯ ಇಯತ್ತೆಗೆ ಸೇರಿಕೊಳ್ಳುವ ಸುಸಂಧಿ ದೊರೆಯದೆ ನಾನು ಇನ್ನೂ ಒಂದೆರಡು ವರ್ಷ ಮನೆಯಲ್ಲಿಯೇ ಉಳಿದಿದ್ದರೆ, ನನ್ನ ಶಿಕ್ಷಣ ನನ್ನ ಅಣ್ಣಂದಿರಂತೆ ಅಲ್ಲಿಗೇ ಮುಗಿಯುತ್ತಿತ್ತು!

ಆರು ಮತ್ತು ಏಳನೆಯ ಇಯತ್ತೆಗಳಿಗೆ ಅನುಮತಿ ಕೊಡಲು, ಜಿಲ್ಲಾಧಿಕಾರಿಗಳು ಹೆಚ್ಚಿನ ಸ್ಥಳದ ವ್ಯವಸ್ಥೆ ಬೇಕೆಂದರು. ಅವಸರದಲ್ಲಿ ರಾಮಭಟ್ಟರು ಶಾಲೆಗೆ ತಾಗಿದಂತೆ ಮುಂದಿನ ಅಂಗಳದಲ್ಲಿ ಅಡಿಕೆ ದಬ್ಬೆ, ಸೋಗೆಗಳಿಂದ ಟೆಂಪೊರರಿ ರೂಮು ಕಟ್ಟಿಸಿದ್ದರು. ಊರವರ ಉತ್ಸಾಹ, ವಿದ್ಯಾರ್ಥಿಗಳ ಪ್ರಗತಿ ನೋಡಿ, ಅಧಿಕಾರಿಗಳು ಒಂದೋ, ಎರಡೋ ಸರಕಾರಿ ಶಿಕ್ಷಕರನ್ನು ಮಂಜೂರು ಮಾಡಿದ್ದರು. ಆಗಿನ ಶಿಕ್ಷಣ ಪದ್ಧತಿಯಂತೆ ಏಳನೆಯ ಇಯತ್ತೆಯ ಅಂತ್ಯದಲ್ಲಿ "ಮುಲ್ಕಿ" ಎಂದು ಕರೆಯುತ್ತಿದ್ದ ಜಿಲ್ಲಾ ಮಟ್ಟದ ಸಾರ್ವಜನಿಕ ಪರೀಕ್ಷೆ ತೆಗೆದುಕೊಳ್ಳಬೇಕಿತ್ತು. ನಾವೆಲ್ಲ ಹತ್ತಿರದ ಕೇಂದ್ರವಾದ ಶಿರಸಿಗೆ ಹೋಗಿ ಪರೀಕ್ಷೆ ಬರೆದೆವು. ಮುಲ್ಕಿ ಪರೀಕ್ಷೆಯಲ್ಲಿ ಹತ್ತಕ್ಕೆ ಹತ್ತೂ ಜನರು ಪಾಸಾಗಿದ್ದಲ್ಲದೆ, ಜಿಲ್ಲೆಗೆ ಪ್ರಥಮ, ಮತ್ತು ತೃತೀಯ ರ್‍ಯಾಂಕುಗಳು ಕೂಡ ನಮ್ಮ ಶಾಲೆಗೇ ಬಂದವು. ಪ್ರಥಮ ಬ್ಯಾಚಿನ ಈ ಅದ್ಭುತ ಯಶಸ್ಸು ಇಡೀ ಜಿಲ್ಲೆಯಲ್ಲಿ ದೊಡ್ಡ ಸುದ್ದಿಯಾಯಿತು.

ರಾಮಭಟ್ಟರ ಮುಂದಾಲೋಚನೆ ಅಷ್ಟಕ್ಕೆ ನಿಲ್ಲಲಿಲ್ಲ. ಏಳನೆ ಇಯತ್ತೆ ಮುಗಿಯುವದರೊಳಗೆ ಊರಲ್ಲಿಯೆ ಹೈಸ್ಕೂಲು ಪ್ರಾರಂಭಿಸುವ ಹಟ ತೊಟ್ಟರು. ಊರಿನ ಹಲವು ಮುಖಂಡರನ್ನು ಸೇರಿಸಿಕೊಂಡು "ಸರಕುಳಿ ಶಿಕ್ಷಣ ಸಮಿತಿ"ಯನ್ನು ಸ್ಥಾಪಿಸಿ, ಎರಡು ಕೊಠಡಿಗಳ ಇಮಾರತು ಕಟ್ಟಿಸಿ ಎಂಟನೆ ಕ್ಲಾಸು ಪ್ರಾರಂಭಿಸಲು ಅನುಮತಿ ಪಡೆದೇ ಬಿಟ್ಟರು. ಮುಲ್ಕಿ ಪರೀಕ್ಷೆಯಲ್ಲಿ ನಮ್ಮ ಅಸಾಧಾರಣ ರಿಜಲ್ಟ್ ಕೂಡ ಸಹಾಯ ಮಾಡಿತೆನ್ನಬೇಕು. ಅಂತೂ ೧೯೫೮ನೇ ಜೂನ್ ತಿಂಗಳಲ್ಲಿ ಕೇವಲ ಹತ್ತು ವಿದ್ಯಾರ್ಥಿಗಳು ಮತ್ತು ಏಕಮೇವ ಪ್ರೈವೇಟ್ ಶಿಕ್ಷಕರೊಂದಿಗೆ ಶ್ರೀ ಜಗದಂಬಾ ಹೈಸ್ಕೂಲು ಪ್ರಾರಂಭವಾಯಿತು. ಮುಂದಿನ ವರ್ಷ ಒಂಭತ್ತನೇ ಕ್ಲಾಸು ಕೂಡ ಅಲ್ಲಿಯೇ ಆಯಿತು. ಆದರೆ ಹತ್ತನೇ ಕ್ಲಾಸಿಗೆ ಸರಕಾರಿ ಅನುಮತಿ ದೊರೆಯಲಿಲ್ಲ.

ಮುಲ್ಕಿ ಪರೀಕ್ಷೆಯಲ್ಲಿ ನಾನು ಜಿಲ್ಲೆಗೆ ಪ್ರಥಮ ಸ್ಥಾನ ಪಡೆದಿದ್ದಲ್ಲದೆ, ಎಂಟು ಮತ್ತು ಒಂಭತ್ತನೆಯ ಕ್ಲಾಸುಗಳಲ್ಲಿ ಕೂಡ ಉತ್ತಮ ಗುಣಗಳನ್ನು ದೊರಕಿಸಿ ಪಾಸಾಗಿದ್ದೆ. ಇಷ್ಟಾದ ಮೇಲೆ ನಾನು ಮನೆಯಲ್ಲಿ ಉಳಿಯುವಂತಿರಲಿಲ್ಲ. ಹತ್ತು ವಿದ್ಯಾರ್ಥಿಗಳಲ್ಲಿ ನಾಲ್ವರು ಮಾತ್ರ ಶಿರಸಿಯ ಮಾರಿಕಾಂಬಾ ಹೈಸ್ಕೂಲು ಸೇರಿದೆವು. ನಾವು ಮೆಟ್ರಿಕ್ ಪರೀಕ್ಷೆ ಮುಗಿಸುವ ಹೊತ್ತಿಗೆ, ೧೯೬೨ರಲ್ಲಿ ಶಿರಸಿಯಲ್ಲಿಯೇ ಒಂದು ಹೊಸ ಕಲಾ-ವಿಜ್ಞಾನ ಮಹಾವಿದ್ಯಾಲಯ ಸ್ಥಾಪಿಸಲ್ಪಟ್ಟಿತು. ನಾವು ನಾಲ್ವರು ಹೊಸ ಕಾಲೇಜಿಗೆ ನೋಂದಾಯಿಸಿದೆವು. ಎರಡು ವರ್ಷಗಳ ನಂತರ ನಾನು ಮತ್ತು ಇನ್ನೊಬ್ಬ ಸಹಪಾಠಿ ಧಾರವಾಡಕ್ಕೆ ಹೋಗಿ ಶಿಕ್ಷಣ ಮುಂದುವರಿಸಿದೆವು.

ಜಗದಾಂಬಾ ಹೈಸ್ಕೂಲು ಪೂರ್ಣ ಪ್ರಮಾಣದ ಹೈಸ್ಕೂಲಾಗಲು ಮತ್ತೆ ಮೂರು ವರ್ಷ ಕಾಯಬೇಕಾಯಿತು. ಅಷ್ಟರಲ್ಲಿ ಶಿಕ್ಷಣ ಪದ್ಧತಿ ಬದಲಾಗಿ, ಮೂರು ವರ್ಷಗಳ ಹೈಸ್ಕೂಲು ಮತ್ತು ಎರಡು ವರ್ಷಗಳ ಪದವೀ ಪೂರ್ವ ಕಾಲೇಜುಗಳ ವ್ಯವಸ್ಥೆ ಜಾರಿಗೆ ಬಂದಿತ್ತು. ಇಂದು ಹೈಸ್ಕೂಲು ಐದು ಕೊಠಡಿಗಳು, ಒಂದು ಸಭಾಂಗಣ ಹೊಂದಿದ್ದಲ್ಲದೆ,

ನಿವೃತ್ತ ಮುಖ್ಯಾಧ್ಯಾಪಕರೊಬ್ಬರ ದೇಣಿಗೆಯಿಂದ ಕಟ್ಟಿಸಿದ ಬಯಲು ಸಭಾಂಗಣ ಕೂಡ ಒಳಗೊಂಡಿದೆ. ಊರಿನಲ್ಲಿಯೇ ಉಳಿದ ಹಳೆಯ ವಿದ್ಯಾರ್ಥಿಗಳು ಯುವಕ ಸಂಘವನ್ನು ಕಟ್ಟಿಕೊಂಡು ಬಯಲು ಸಭಾಂಗಣದಲ್ಲಿ, ಯಕ್ಷಗಾನ, ಸಂಗೀತ ಕಾರ್ಯಕ್ರಮ ಮುಂತಾದವುಗಳನ್ನು ಆಗಾಗ ಏರ್ಪಡಿಸುತ್ತಿರುತ್ತಾರೆ. ೨೦೦೯ರಲ್ಲಿ ಹೈಸ್ಕೂಲು ಸುವರ್ಣ ಮಹೋತ್ಸವವನ್ನು ಅದ್ದೂರಿಯಾಗಿ ಆಚರಿಸಿತು. ಹೈಸ್ಕೂಲಿನ ಪ್ರತಿ ವರ್ಷದ ಎಸ್.ಎಸ್.ಎಲ್.ಸಿ. ಪರೀಕ್ಷೆಯ ಫಲಿತಾಂಶ ಉತ್ತಮ ಮಟ್ಟದಲ್ಲಿಯೇ ಇದೆ. ೨೦೧೭ನೇ ಇಸ್ವಿಯಲ್ಲಿ ಶಾಲೆಯಿಂದ ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಕುಳಿತ ೪೫ ವಿದ್ಯಾರ್ಥಿಗಳಲ್ಲಿ ೪೪ ಜನ ಪಾಸಾಗಿದ್ದಲ್ಲದೆ, ಏಳು ವಿದ್ಯಾರ್ಥಿಗಳು ೯೦% ಕ್ಕಿಂತ ಹೆಚ್ಚು ಅಂಕ ಪಡೆದು ಉತ್ತೀರ್ಣರಾದರು. ಹೈಸ್ಕೂಲು ಮುಗಿಸಿದ ಬಹಳಷ್ಟು ಮಂದಿ ಕಾಲೇಜು ಶಿಕ್ಷಣ ಮುಂದುವರಿಸುತ್ತಿದ್ದಾರೆ. ಊರಿನಿಂದ ಶಿರಸಿಗೆ ಹೋಗಲು ಬಸ್ಸಿನ ಸೌಕರ್ಯ ಚೆನ್ನಾಗಿರುವುದರಿಂದ ಹಲವರು ಮನೆಯಿಂದಲೇ ಶಿರಸಿ ಕಾಲೇಜುಗಳಿಗೆ ಹೋಗಿ ಬರುತ್ತಾರೆ. ನಮ್ಮ ಹೈಸ್ಕೂಲಿನಲ್ಲಿ ಶಿಕ್ಷಣ ಪಡೆದ ಅನೇಕ ವಿದ್ಯಾರ್ಥಿಗಳು ಇಂದು, ಬೆಂಗಳೂರು, ಮುಂಬಯಿ, ಪುಣೆ ಮುಂತಾದ ದೊಡ್ಡ ನಗರಗಳಲ್ಲಲ್ಲದೆ ವಿದೇಶಗಳಲ್ಲಿಯೂ ನೆಲೆಸಿ ಉತ್ತಮ ಹುದ್ದೆಯಲ್ಲಿದ್ದು ಸೇವೆ ಸಲ್ಲಿಸುತ್ತಿದ್ದಾರೆ.

ಈ ವರ್ಷ ಹೈಸ್ಕೂಲಿಗೆ ಅರವತ್ತು ತುಂಬಿತು. ಆದರೆ ದುಃಖದ ಸಂಗತಿಯೆಂದರೆ ಕಳೆದ ಕಾಲು ಶತಮಾನದಿಂದ ನಾನು ನೋಡುತ್ತಿದ್ದಂತೆ ಹೆಚ್ಚಿನ ಪ್ರಗತಿ ಕಾಣುತ್ತಿಲ್ಲ. ಈಗಿನ ಕಂಪ್ಯೂಟರ್ ಯುಗದಲ್ಲಿ ಕೂಡ ಶಾಲೆಯಲ್ಲಿ ಒಂದು ಒಳ್ಳೆಯ ಕಂಪ್ಯೂಟರ್ ಲ್ಯಾಬೊರೇಟರಿ ಇಲ್ಲ. ಕಂಪ್ಯೂಟರ್ ಕ್ಲಾಸುಗಳ ಸವಲತ್ತಿಲ್ಲ. ಒಂದು ಒಳ್ಳೆಯ ಗ್ರಂಥಾಲಯವಿಲ್ಲ. ನನ್ನ ಶಾಲಾ ದಿನಗಳಲ್ಲಿ ಅತ್ಯಂತ ರೋಚಕ ಹವ್ಯಾಸವೆಂದರೆ ಅ.ನ.ಕೃ. ತರಾಸು, ಕಟ್ಟೀಮನಿ, ತ್ರಿವೇಣಿ, ಭೈರಪ್ಪ, ಕಾರಂತ ಮುಂತಾದವರ ಕಾದಂಬರಿಗಳನ್ನು ಓದುವುದಾಗಿದ್ದಿತು. ಇಂದಿನ ನಮ್ಮೂರ ಯುವಕರು ಕಥೆ–ಕಾದಂಬರಿಗಳನ್ನು ಓದುವುದನ್ನೇ ಕಂಡಿಲ್ಲ. ಸಮಯವನ್ನೆಲ್ಲ ಮೊಬೈಲ್ ಹಿಡಿದು ಸಾಮಾಜಿಕ ತಾಣಗಳಲ್ಲಿ ವಿಹರಿಸುವುದರಲ್ಲಿಯೇ ಕಳೆಯುತ್ತಾರೆ.

**ಎತ್ತಿನ ಗಾಡಿಯಿಂದ ಮಾರುತಿ ಕಾರಿನವರೆಗೆ**

ನಾನು ಚಿಕ್ಕವನಿದ್ದಾಗ ಬಹಳ ವರ್ಷಗಳವರೆಗೆ ಏಕಮೇವ ಸಾರಿಗೆ ಸಂಪರ್ಕವೆಂದರೆ ಎತ್ತಿನ ಗಾಡಿಗಳಾಗಿದ್ದವು. ನಮ್ಮೂರಿನಲ್ಲಿ ಎರಡು ಚಕ್ಕಡಿ ಗಾಡಿಗಳಿದ್ದವು: ಒಂದು ನನ್ನ ಹಿರಿಯ ಅಣ್ಣನದು, ಇನ್ನೊಂದು ಪಕ್ಕದ ಮನೆಯ ಮಾಬಲಣ್ಣನದು. ಈ ಎರಡು ಗಾಡಿಗಳು ಊರಿನ ಎಲ್ಲ ಮನೆಯವರ ಬೆಳೆಗಳನ್ನು ಶಿರಸಿಯ ಮಾರುಕಟ್ಟೆಗೆ ಸಾಗಿಸುವ ಮುಖ್ಯ ಸಾಧನಗಳಾಗಿದ್ದವು.

೧೯೫೭–೫೮ರ ತನಕವೂ ಪರಿಸ್ಥಿತಿ ಹಾಗೆಯೇ ಇದ್ದಿತ್ತು. ಆ ಸುಮಾರಿಗೆ ಪಕ್ಕದ ಹಳ್ಳಿಯ ಶ್ರೀಮಂತರೊಬ್ಬರು ಒಂದು ಟ್ರಕ್ಕು ಖರೀದಿಸಿ, ಅದನ್ನು ಅಡಿಕೆ ಸಾರಿಗೆಗೆ

ಅನುಕೂಲವಾಗುವಂತೆ ಮಾರ್ಪಡಿಸಿ ಬಾಡಿಗೆ ಸರ್ವೀಸು ಪ್ರಾರಂಭಿಸಿದರು. ಸುತ್ತಲಿನ ಎಲ್ಲ ಊರುಗಳ ಚಕ್ಕಡಿ ಗಾಡಿಗಳು ಮಾಯವಾದವು. ಅಡಿಕೆ ಮಾಲಿಕರು ಹಾಗೂ ಇತರ ಪ್ರಯಾಣಿಕರು ಕೂಡ ಅಡಿಕೆ ಮೂಟೆಗಳು ತುಂಬಿದ ಟ್ರಕ್ಕಿನಲ್ಲಿಯೇ ಮುದುಡಿ ಕುಳಿತು ಶಿರಸಿಗೆ ಪ್ರಯಾಣಿಸಹತ್ತಿದರು. ನಾನೂ ಕೂಡ ಒಂದೆರಡು ಬಾರಿ ಅದೇ ವಾಹನದಲ್ಲಿ ಶಿರಸಿಗೆ ಹೋಗಿದ್ದುಂಟು. ಕೊಳಗೀಬೀಸ್ ತನಕ ನಡೆದು ಸರಕಾರಿ ಬಸ್ಸು ಹತ್ತುವವರ ಸಂಖ್ಯೆ ಕಡಿಮೆಯಾಗಹತ್ತಿತು.

ಡಿಸೆಂಬರದಿಂದ ಮುಂದಿನ ಮೇ ತಿಂಗಳ ಅವಧಿ ಅಡಿಕೆ ವ್ಯಾಪಾರದ ಸೀಜನ್ನು. ಹೇರೂರಿನಿಂದ ಕೊಳಗೀಬೀಸ್ ತನಕದ ೧೫ ಕಿಲೋಮೀಟರ್ ಏರು-ಇಳಿವು, ತಿರುವು-ಮುರುವುಗಳ ಕಿರಿದಾದ ಕೆಂಪು ಮಣ್ಣಿನ ರಸ್ತೆ. ಮಧ್ಯ ಮಳೆಗಾಲದಲ್ಲಿ, ತುಂಬ ರಾಡಿಯಾಗಿ ವಾಹನಗಳ ಸಂಚಾರ ನಿಂತುಬಿಡುತ್ತಿತ್ತು. ಮಳೆಗಾಲದ ನಾಲ್ಕು-ಐದು ತಿಂಗಳಿಗೆ ಬೇಕಾಗುವ ಅಕ್ಕಿ ಮತ್ತು ಎಲ್ಲ ಕಿರಾಣಿ ಸಾಮಾನುಗಳನ್ನು ಜನರು ಬೇಸಿಗೆಯ ಅಂತ್ಯದೊಳಗೆ ಖರೀದಿಸಿ ಶೇಖರಿಸಿಡುತ್ತಿದ್ದರು.

ಸಾರ್ವಜನಿಕ ವಾಹನ ಸೌಕರ್ಯ ಪ್ರಾರಂಭವಾಗಲು ಇನ್ನೂ ಕೆಲವು ವರ್ಷ ಕಾಯಬೇಕಾಯಿತು. ಭಾರತದಲ್ಲಿ ಯಾವ ಸರಕಾರಿ ಸೌಲಭ್ಯಗಳೂ ರಾಜಕಾರಣಿಯೊಬ್ಬರ ಕೃಪೆ ಇಲ್ಲದೆ ಸಹಜವಾಗಿ ದೊರಕುವುದು ತುಂಬ ಅಪರೂಪ. ೧೯೬೦ರ ದಶಕದಲ್ಲಿ ನಮ್ಮೂರ ಸಾರಿಗೆ ಸಂಪರ್ಕದ ಸುಧಾರಣೆಗೆ ಈ ಕೃಪೆ ದೊರಕಿದ್ದು ಶ್ರೀ ರಾಮಕೃಷ್ಣ ಹೆಗಡೆ ಅವರಿಂದ ಎಂದರೆ ತಪ್ಪಾಗಲಾರದು.

ಸ್ವತಂತ್ರ ಭಾರತದ ಮುತ್ಸದ್ದಿ ರಾಜಕಾರಣಿಗಳ ಯಾದಿಯಲ್ಲಿ ರಾಮಕೃಷ್ಣ ಹೆಗಡೆಯವರ ಹೆಸರು ಮೊದಲ ಪುಟಕ್ಕೇ ಸೇರುತ್ತದೆ. ಮೂರು ಸಲ ಕರ್ನಾಟಕದ ಮುಖ್ಯ ಮಂತ್ರಿಯಾಗಿ, ಕೆಲವು ವರ್ಷಗಳ ಕಾಲ ಕೇಂದ್ರ ಸರಕಾರದ ಮಂತ್ರಿಯೂ ಆಗಿ ಸೇವೆ ಸಲ್ಲಿಸಿದ ಅವರು ಪ್ರಧಾನ ಮಂತ್ರಿಯೂ ಆಗುತ್ತಾರೆಂಬ ವದಂತಿ ಕೂಡ ಹಬ್ಬಿತ್ತು. ರಾಮಕೃಷ್ಣ ಹೆಗಡೆಯವರು ನಮ್ಮ ತಾಲೂಕಿನವರು. ನಮ್ಮೂರ ಹಲವು ಮುಂದಾಳುಗಳು ಅವರೊಂದಿಗೆ ನಿಕಟ ಸಂಬಂಧವಿದ್ದವರಾಗಿದ್ದರು. ೧೯೬೨ರಲ್ಲಿ ರಾಮಕೃಷ್ಣ ಹೆಗಡೆಯವರು ಆಗಿನ ಮುಖ್ಯಮಂತ್ರಿ ನಿಜಲಿಂಗಪ್ಪನವರ ಸರಕಾರದಲ್ಲಿ ಮಂತ್ರಿಯಾದ ಮೇಲೆ ನಮ್ಮ ತಾಲೂಕು ಅಷ್ಟೇಕೆ ಇಡೀ ಜಿಲ್ಲೆಯ ಅಭಿವೃದ್ಧಿಗೆ ಪುಟ ಸಿಕ್ಕಿತೆನ್ನಬಹುದು.

೧೯೬೭ರ ಬೇಸಿಗೆಯಲ್ಲಿ ಮೊದಲ ಸಲ ಶಿರಸಿಯಿಂದ ಹೇರೂರಿಗೆ ಸರಕುಳಿ ಶಾಲೆಯ ಮಾರ್ಗವಾಗಿ ಬಸ್ ಸಾರಿಗೆ ಆರಂಭವಾಯಿತು. ಮಣ್ಣು-ಕಲ್ಲುಗಳ ಕಿರಿ ರಸ್ತೆಯಲ್ಲೇನೂ ಹೆಚ್ಚಿನ ಸುಧಾರಣೆ ಆಗಿರಲಿಲ್ಲ. ಹಾಗಾಗಿ ಒಂದೆರಡು ವರ್ಷ ಬೇಸಿಗೆಯಲ್ಲಿ ಮಾತ್ರ ಪ್ರತಿದಿನ ಸಂಜೆ ಒಂದು ಬಸ್ಸು ಹೇರೂರಿನ ತನಕ ಬಂದು, ರಾತ್ರಿ ಉಳಿದು ಬೆಳಿಗ್ಗೆ ತಿರುಗಿ ಹೋಗುತ್ತಿತ್ತು. ನಮ್ಮೂರಿನ ಜನರು ಬೆಳಿಗ್ಗೆ ಬಸ್ಸಿನಲ್ಲಿ ಶಿರಸಿಗೆ ಹೋಗಿ ಸಂಜೆ ಬಸ್ಸಿಗೆ ತಿರುಗಿ ಬರಹತ್ತಿದರು.

ಕೆಲವು ವರ್ಷಗಳೊಳಗೆ ರಸ್ತೆಗೆ ಕಡಿ ಹಾಕಿದ ನಂತರ ಮಳೆಗಾಲದ ದಿನಗಳಲ್ಲಿಯೂ ಆಗಾಗ ಪ್ರೈವೇಟ್ ವಾಹನಗಳು ತಿರುಗಹತ್ತಿದವು. ಕೊಳಗಿಬೀಸ್ – ಹೇರೂರು ರಸ್ತೆಯನ್ನು ಸ್ವಲ್ಪ ಅಗಲ ಮಾಡಿ ಟಾರ್ ಹಾಕಿಸಿದ್ದು ಬಹುಶ ೧೯೯೦ರ ದಶಕದಲ್ಲಿ ಎಂದು ಕಾಣುತ್ತದೆ. ಅದಾದ ಮೇಲೆ ದಿನಕ್ಕೆ ನಾಲ್ಕು-ಐದು ಬಸ್ಸುಗಳು ವರ್ಷದಾದ್ಯಂತ ಓಡಾಡಲು ಪ್ರಾರಂಭಿಸಿದವು.

ಇಂದು ಶಿರಸಿಯಿಂದ ಮಂಗಳೂರು, ಕಲಬುರ್ಗಿ, ಬೆಂಗಳೂರು ಮುಂತಾದ ದೊಡ್ಡ ಪಟ್ಟಣಗಳಿಗೆ ಪ್ರಯಾಣ ಮಾಡಲು ಸರಕಾರಿ ಮತ್ತು ಪ್ರೈವೇಟ್ ಬಸ್ಸುಗಳ ಸೌಲಭ್ಯ ಎಷ್ಟೋ ಪಟ್ಟು ಸುಧಾರಿಸಿದೆ. ೧೯೯೮ರಲ್ಲಿ ಪ್ರಾರಂಭವಾದ ಕೊಂಕಣ ರೇಲ್ವೆ, ಮುಂಬಯಿಯಿಂದ ಕೇರಳದ ದಕ್ಷಿಣ ತುದಿಯ ತನಕ ಪಶ್ಚಿಮ ಕರಾವಳಿಗುಂಟ ಪ್ರಯಾಣ ಮಾಡಲು ಅನುಕೂಲ ಮಾಡಿಕೊಟ್ಟಿದೆ. ಬಹಳ ವರ್ಷಗಳಿಂದಿದ್ದ ತಾಳಗುಪ್ಪಾ ರೇಲ್ವೆ ಸ್ಟೇಷನ್ (೬೦ ಕಿ.ಮೀ. ದೂರ) ಬಳಿಕ ಇದೀಗ ನಮಗೆ ಕುಮಟಾ (೫೦ ಕಿ.ಮೀ. ದೂರ) ಹತ್ತಿರದ ಸ್ಟೇಷನ್ ಆಗಿದೆ.

ಸುಮಾರು ೧೯೭೫-೮೦ರ ತನಕವೂ ಅಡಿಕೆ ಬೆಳೆಗಾರರು ದಲ್ಲಾಳಿಗಳ ಮುಖಾಂತರ ಬೆಳೆಯನ್ನು ಮಾರಬೇಕಿತ್ತು. ಶಿರಸಿಯ ತೋಟಗಾರರ ಸಹಕಾರಿ ಸಂಘ ಪ್ರಾರಂಭವಾಗಿ ಪ್ರಬಲವಾದಂತೆ, ದಲ್ಲಾಳಿಗಳು ಕ್ರಮೇಣ ಕಡಿಮೆಯಾಗಹತ್ತಿದರು. ಹಲವಾರು ಕಾರಣಗಳಿಂದ ಅಡಿಕೆಯ ಬೆಲೆಯೂ ಹೆಚ್ಚುತ್ತ ಹೋಗಿ, ಊರ ಬೆಳೆಗಾರರ ಆರ್ಥಿಕ ಪರಿಸ್ಥಿತಿ ತುಂಬ ಸುಧಾರಿಸಿತು. ಹಲವರು ಸ್ವಂತ ಉಪಯೋಗಕ್ಕಾಗಿಯೇ ಕಾರು-ಜೀಪುಗಳನ್ನು ಖರೀದಿಸತೊಡಗಿದರು.

ಕಳೆದ ಫೆಬ್ರುವರಿಯಲ್ಲಿ ನಾನು ಊರಿಗೆ ಹೋದಾಗ, ಬೆಂಗಳೂರಿನಿಂದ ಹುಬ್ಬಳ್ಳಿಗೆ ಹೊಸದಾಗಿ ಪ್ರಾರಂಭವಾದ ವಿಮಾನದಲ್ಲಿ ಪ್ರಯಾಣ ಮಾಡಿದೆ. ಹುಬ್ಬಳ್ಳಿಯಿಂದ ನಮ್ಮೂರು ಸುಮಾರು ೧೦೦ ಕಿಲೋಮೀಟರ್ ದೂರ. ನನ್ನ ಅಣ್ಣನ ಮಗ, ತನ್ನದೇ ಕಾರಿನಲ್ಲಿ ನನ್ನನ್ನು ಕರೆದೊಯ್ಯಲು ಏರ್-ಪೋರ್ಟಿಗೆ ಬಂದಿದ್ದ. ಆರು ತಿಂಗಳ ಹಿಂದಷ್ಟೇ ಹೊಸ ಮಾರುತಿ ಕಾರನ್ನು ಖರೀದಿಸಿದ್ದ. ಈಗ ನಮ್ಮ ಮನೆಯಲ್ಲಿ ಎರಡು ಮೋಟರ್ ಬೈಕುಗಳಲ್ಲದೆ ಒಂದು ಕಾರು ಕೂಡ ಬಂದಿದೆ.

ಇತ್ತೀಚೆಗೆ ಊರಿಗೆ ಹೋದಾಗ ಒಂದು ದಿನ ನಾನು ವರಾಂಡದಲ್ಲಿ ಕುಳಿತಿದ್ದೆ. ನಮ್ಮ ಅಂಗಳದಲ್ಲಿ ಸುಮಾರು ೨೫-೨೮ ವಯಸ್ಸಿನ ಪ್ಯಾಂಟು, ಟಿ-ಶರ್ಟ್ ಧರಿಸಿದ ಹುಡುಗನೊಬ್ಬ ಮೋಟರ್ ಬೈಕಿನಲ್ಲಿ ಬಂದಿಳಿದ. ಯಾರೋ ಸಂಬಂಧಿಕರಿರಬೇಕೆಂದು ಒಳಗೆ ಹೋಗಿ ನನ್ನ ಸೊಸೆಗೆ ಸಮಾಚಾರ ತಿಳಿಸಿದೆ. ಆಕೆ ಹೊರಬಂದು "ಅಯ್ಯೋ ಮಾವ, ಅವನು ನಮ್ಮ ಮನೆ ಕೆಲಸದ ಆಳು" ಎಂದು ನಕ್ಕಳು. ಎಪ್ಪತ್ತರ ದಶಕದಲ್ಲಿ ಅಮೇರಿಕಾ ಎಂದರೆ ಸ್ವರ್ಗ ಎನ್ನುವ ಪರಿಕಲ್ಪನೆ ಇದ್ದಾಗ, "ಅಮೇರಿಕೆಯಲ್ಲಿ, ಕೆಲಸಗಾರರೂ ಕಾರಿನಲ್ಲಿಯೇ ಬರುತ್ತಾರಂತೆ" ಎಂದು ವಿಸ್ಮಯಪಡುತ್ತಿದ್ದರು. ಈಗ ನೋಡಿದರೆ,

ನಮ್ಮೂರಿನಂತ ಚಿಕ್ಕ ಹಳ್ಳಿಯಲ್ಲೂ ಕೆಲಸಗಾರರು ಕಾರಿನಲ್ಲಿ ಬರುವ ದಿನ ತುಂಬ ದೂರವಿಲ್ಲ ಎನಿಸುತ್ತದೆ.

**ಅಂದು ಆರು ವಾರ, ಇಂದು ಮೂರು ತಾಸು**

ಕಳೆದ ತಿಂಗಳು ಲೇಖನವೊಂದಕ್ಕೆ ನನಗೆ ನಮ್ಮ ಮನೆಯ ತೋಟದಲ್ಲಿ ಬೆಳೆಯುವ ಏಲಕ್ಕಿ ಗಿಡಗಳ ಫೋಟೊ ಬೇಕಿತ್ತು. ನಾನು ಊರಿಗೆ ಫೋನು ಮಾಡಿದ ಒಂದೆರಡು ಗಂಟೆಗಳಲ್ಲಿಯೇ ನನಗೆ ಬೇಕಿದ್ದಕ್ಕಿಂತ ಹೆಚ್ಚು ಫೋಟೊಗಳು ವಾಟ್ಸಾಪ್‌ನಲ್ಲಿ ಬಂದೇ ಬಿಟ್ಟವು. ನನ್ನ ಅಣ್ಣನ ಮೊಮ್ಮಗ ತನ್ನ ಮೊಬೈಲ್ ಫೋನಿನಿಂದ ಫೋಟೊಗಳನ್ನು ತೆಗೆದು ಕಳಿಸಿದ್ದ. ಇದೇ ಒಂದು ಹತ್ತು ವರ್ಷಗಳ ಹಿಂದೆ ಆಗಿದ್ದರೆ ಡಿಜಿಟಲ್ ಕೆಮರಾದಲ್ಲಿ ತೆಗೆದು, ಕಂಪ್ಯೂಟರಿಗೆ ಅಪ್‌ಲೋಡ್ ಮಾಡಿ ಮಿಂಚಂಚೆಯಲ್ಲಿ ಕಳಿಸಬೇಕಿತ್ತು. ಒಂದೆರಡು ದಿನಗಳೇ ಹಿಡಿಯುತ್ತಿತ್ತು. ಇನ್ನೂ ಹತ್ತು ವರ್ಷ ಹಿಂದೆ ಹೋದರೆ ಡಿಜಿಟಲ್ ಕೆಮರಾ ಆಗಲಿ, ಕಂಪ್ಯೂಟರ್ ಆಗಲಿ ಇರಲಿಲ್ಲ. ಟೆಲಿಫೋನು ಕರೆ ತುಂಬ ತುಟ್ಟಿಯಾಗಿತ್ತು. ನಾನು ಪತ್ರ ಬರೆದು, ಅವರಿಗೆ ತಲುಪಿ, ಅವರು ಸಾದಾ ಕೆಮರಾದಲ್ಲಿ ಫೋಟೋ ತೆಗೆದು, ಶಿರಸಿಗೆ ಹೋಗಿ ಅದನ್ನು ಪ್ರೊಸೆಸ್ ಮಾಡಿಸಿ ಅಂಚೆಯಲ್ಲಿ ಕಳಿಸಬೇಕಿತ್ತು. ಕಡಿಮೆ ಅಂದರೆ ಆರು ವಾರಗಳಾಗುತ್ತಿದ್ದವು.

೧೯೯೦ರ ದಶಕದ ಆದಿಯ ತನಕವೂ ಹಳ್ಳಿಯ ಮನೆಗಳಲ್ಲಿ, ಅದೇಕೆ ಅನೇಕ ಪಟ್ಟಣದ ಮನೆಗಳಲ್ಲಿ ಕೂಡ ಸ್ವಂತ ಟೆಲಿಫೋನು ಸೌಕರ್ಯ ಇರಲಿಲ್ಲ. ಆಗಿನ ದಿನಗಳಲ್ಲಿ ಅಮೇರಿಕೆಯಿಂದ ಊರಿಗೆ ಪತ್ರ ವ್ಯವಹಾರವೇ ಸಂಪರ್ಕ ಸಾಧನವಾಗಿದ್ದಿತು. ಏನಾದರೂ ಅರ್ಜೆಂಟಾಗಿ ಮಾತನಾಡಲೇ ಬೇಕೆಂದಾಗ, ಅಪರೂಪಕ್ಕೆ ಸಂಬಂಧಿಕರೊಬ್ಬರ ಆಫೀಸಿಗೆ ಕರೆ ಮಾಡುತ್ತಿದ್ದೆವು. ಮೊದಮೊದಲು ಅದೂ ಸುಲಭವಾಗಿರಲಿಲ್ಲ. ೧೯೭೮-೮೫ರ ಅವಧಿಯಲ್ಲಿ ನಾವು ಡಿಕ್ಯಾಲ್ಬ್ ಎಂಬ ಊರಿನಲ್ಲಿದ್ದೆವು. ಅಂದಿನ ದಿನಗಳಲ್ಲಿ ಆ ಊರಿನಲ್ಲಿ ಮನೆಯ ಫೋನಿನಿಂದ ಹೊರದೇಶಗಳಿಗೆ ನೇರವಾಗಿ ಕರೆ ಮಾಡುವ ಸವಲತ್ತು ಇರಲಿಲ್ಲ. ಮೊದಲು ಟೆಲಿಫೋನು ಆಫೀಸಿಗೆ ಕರೆದು ಬುಕ್ ಮಾಡಬೇಕು. ಅದು ಅವರ ಅಂತಾರಾಷ್ಟ್ರೀಯ ಕರೆಗಳ ಕ್ಯೂದಲ್ಲಿ ನೋಂದಾಯಿಸಲ್ಪಡುತ್ತಿತ್ತು. ನಮ್ಮ ಸರತಿ ಬಂದಾಗ, ಕೆಲವೊಮ್ಮೆ ಮಧ್ಯರಾತ್ರಿಯಲ್ಲಿ, ಟೆಲಿಫೋನು ಆಪರೇಟರು ನಮ್ಮನ್ನು ಕರೆದು, ಈಗ ನಮ್ಮ ಕರೆಯನ್ನು ಪ್ರಯತ್ನಿಸುತ್ತೇವೆ ಎಂದು ಹೇಳಿ, ಭಾರತಕ್ಕೆ ಕರೆಯುತ್ತಿದ್ದಳು. ಆ ಸಮಯದಲ್ಲಿ ೧೦-೧೨ ಕರೆಗಂಟೆ ಬಾರಿಸಿದರೂ ಯಾರೂ ಎತ್ತದಿದ್ದರೆ, ಮತ್ತೆ ನಮ್ಮ ಬುಕ್ಕಿಂಗು ಕೂಡ ಹಿಂದೆ ಹೋಗುತ್ತಿತ್ತು. ಮುಂದೆ ೧೯೮೬ರಲ್ಲಿ ನಾವು ಶಿಕಾಗೊ ಸಮೀಪ ಮನೆ ಬದಲಾಯಿಸಿದ ಮೇಲೆ, ಮನೆಯ ಫೋನಿನಿಂದ ಭಾರತಕ್ಕೆ ನೇರವಾಗಿ ಕರೆ ಮಾಡಬಹುದಿತ್ತು.

೧೯೮೫ರಲ್ಲಿ ಸ್ಯಾಮ್ ಪಿಟ್ರೋಡಾ ಎಂಬ ಉದ್ಯಮಿ ಮತ್ತು ಇಂಜಿನೀಯರ್ ಅಮೇರಿಕೆಯಿಂದ ಭಾರತಕ್ಕೆ ಹಿಂತಿರುಗಿ, ಸರಕಾರದ ಸಹಕಾರದೊಂದಿಗೆ Center for

Development of Telemetrics (C-DOT) ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಗ್ರಾಮೀಣ ಪ್ರದೇಶಗಳಿಗೆ ದೂರ ಸಂಪರ್ಕ ಸಾಧನಗಳನ್ನು ಒದಗಿಸುವುದು ಸಿ–ಡೋಟ್'ನ ಮುಖ್ಯ ಉದ್ದೇಶ. ಇದಕ್ಕಾಗಿ ಸಿ–ಡೋಟ್ ಸಂಸ್ಥೆ, ಚಿಕ್ಕಚಿಕ್ಕ ಟೆಲಿಫೋನ್ ಸ್ವಿಚ್'ಗಳನ್ನು ಉತ್ಪಾದಿಸಿ ಗ್ರಾಮೀಣ ಪ್ರದೇಶಗಳಲ್ಲಿ ಸ್ಥಾಪಿಸಿ, ಹಳ್ಳಿಯ ಮನೆಗಳಿಗೆ ಟೆಲಿಫೋನ್ ಕನೆಕ್ಷನ್ ಕೊಡಲಾರಂಭಿಸಿತು. ೧೯೮೭–೮೮ರಲ್ಲಿ ಊರಿಗೆ ಹೋದಾಗ ನಾನೇ ನಮ್ಮ ಮನೆಗೆ ಟೆಲಿಫೋನ್ ಕನೆಕ್ಶನ್ ಸಲುವಾಗಿ ಅರ್ಜಿ ಹಾಕಿ ಬಂದಿದ್ದೆ. ೧೯೯೨–೯೩ರ ಸುಮಾರಿಗೆ ಊರಿನ ೩–೪ ಮನೆಗಳಿಗೆ ಟೆಲಿಫೋನ್ ಕನೆಕ್ಶನ್ ಸಿಕ್ಕಿತೆಂದು ನೆನಪು.

೨೦೦೦ನೇ ಇಸ್ವಿಯ ನಂತರ ವಾಜಪೇಯಿ ಸರಕಾರ, ಅಂತರರಾಷ್ಟ್ರೀಯ ಕಂಪನಿಗಳಿಗೆ ಭಾರತದಲ್ಲಿ ಬಂಡವಾಳ ಹೂಡಲು ಸವಲತ್ತುಗಳನ್ನು ಹೆಚ್ಚಿಸಿದ ಮೇಲೆ, ಅನೇಕ ಮೊಬೈಲ್ ಕಂಪನಿಗಳು ಹುಟ್ಟಿಕೊಂಡು ಫೋನುಗಳ ಬಳಕೆ ಅತಿ ಶೀಘ್ರವಾಗಿ ಬೆಳೆಯಹತ್ತಿತು. ಹಳ್ಳಿ–ಹಳ್ಳಿಗಳಿಗೆ ಮೊಬೈಲ್ ಸೌಕರ್ಯ ದೊರೆಯಹತ್ತಿತು. ನಮ್ಮೂರು ಇದಕ್ಕೆ ಅಪವಾದವಲ್ಲ. ಇದೇ ಸಮಯದಲ್ಲಿ ಭಾರತದ ಆರ್ಥಿಕ ಮಟ್ಟವೂ ಶೀಘ್ರವಾಗಿ ಸುಧಾರಿಸಹತ್ತಿತ್ತು. ಹೊಸಹೊಸ ಮಾದರಿಯ ಫೋನುಗಳು ಬಂದಂತೆ ಜನರು ಕೊಳ್ಳಲಾರಂಭಿಸಿದರು. ಉಳಿದ ದೇಶಗಳಿಗೆ ಹೋಲಿಸಿದರೆ, ಮೊಬೈಲ್ ಫೋನುಗಳ ಬೆಲೆ ಮತ್ತು ಕರೆ–ವೆಚ್ಚ ಭಾರತದಲ್ಲಿ ತುಂಬ ಕಡಿಮೆ. ಅಲ್ಲದೆ ಭಾರತೀಯರು ಹೊಸ ತಾಂತ್ರಿಕ ಉಪಕರಣಗಳಿಗೆ ಕ್ಷಿಪ್ರವಾಗಿ ಹೊಂದಿಕೊಳ್ಳುತ್ತಿರುವುದನ್ನು ನೋಡಿದರೆ ಆಶ್ಚರ್ಯವಾಗುತ್ತದೆ.

ಬಹಳ ವರ್ಷಗಳತನಕ, ಇಡೀ ಊರಿನಲ್ಲಿ ಒಬ್ಬರು ಮಾತ್ರ ರೇಡಿಯೋ ಇಟ್ಟುಕೊಂಡಿದ್ದರು. ನಮ್ಮ ಮನೆಯಲ್ಲಿ ರೇಡಿಯೋ ಇರಲಿಲ್ಲ. ನಾನು ಧಾರವಾಡದಲ್ಲಿ ನೌಕರಿಗೆ ಸೇರಿದ ಮೇಲೆ ೧೯೭೯–೮೦ರ ಸುಮಾರಿಗೆ ಒಂದು ಟ್ರಾನ್ಸಿಸ್ಟರ್ ರೇಡಿಯೋ ತೆಗೆಸಿಕೊಟ್ಟಿದ್ದೆ. ಪ್ರತಿ ಭಾನುವಾರ ಮಧ್ಯಾಹ್ನ ರೇಡಿಯೋದಲ್ಲಿ ಬರುತ್ತಿದ್ದ ಸಿನೆಮಾ ಕಥೆ ಕೇಳಲು ಅಕ್ಕ–ಪಕ್ಕದ ಮನೆಯವರೆಲ್ಲ ಬರುತ್ತಿದ್ದರು. ನಮ್ಮೂರ ಜನ ಟಿ.ವಿ. ಖರೀದಿಸಹತ್ತಿದ್ದು ೧೯೯೫ರ ಸುಮಾರಿಗೆ ಇರಬಹುದು. ನಮ್ಮ ಮನೆಯಲ್ಲಿ ಬಹಳ ವರ್ಷಗಳ ತನಕ ಹಳೆಯ ಮಾದರಿಯ ಟಿ.ವಿ. ಇತ್ತು. ಇಂದು ಬಹುಶಃ ಎಲ್ಲ ಮನೆಗಳಲ್ಲಿಯೂ ೩೨–೩೬ ಇಂಚುಗಳ ಫ್ಲ್ಯಾಟ್ ಸ್ಕ್ರೀನ್ ಟಿ.ವಿ. ಬಂದಿವೆ. ಶಿರಸಿಯ ಕೇಬಲ್ ಕಂಪನಿಯೊಂದು ಹಲವಾರು ಚಾನಲ್ಲುಗಳನ್ನು ಬಿತ್ತರಿಸುತ್ತಿದೆ.

ಸುಮಾರು ಏಳೆಂಟು ವರ್ಷಗಳ ಹಿಂದೆ, ಬಿ.ಎಸ್.ಎನ್.ಎಲ್. ಸಂಸ್ಥೆ ಗ್ರಾಮೀಣ ಪ್ರದೇಶಗಳಿಗೆ ಅರ್ಧ ದರದಲ್ಲಿ ಇಂಟರ್ನೆಟ್ ಕನೆಕ್ಷನ್ ಕೊಡಲಾರಂಭಿಸಿತು. ಅದರ ಲಾಭವನ್ನು ಪಡೆದು, ನಮ್ಮ ಮನೆಯಲ್ಲಿ ಕಂಪ್ಯೂಟರ್ ಖರೀದಿಸಿ ಇಂಟರ್ನೆಟ್ ಕನೆಕ್ಷನ್ ಹಾಕಿಸಿಕೊಂಡರು. ಮುಂದಿನ ಸಲ ನಾನು ಊರಿಗೆ ಹೋದಾಗ ವೈ–ಫೈ ಮೋಡಮ್ ಜೋಡಿಸಿದೆ. ಎಲ್ಲರ ಹತ್ತಿರ ಸ್ಮಾರ್ಟ್ ಮೊಬೈಲ್ ಬಂದ ನಂತರ ಕಂಪ್ಯೂಟರ್ ಬಳಕೆ

ನಿಂತಿದೆ. ವೈ-ಫೈ ಮಾತ್ರ ತುಂಬ ಉಪಯೋಗವಾಗುತ್ತಿದೆ. ನನಗೆ ತಿಳಿದಮಟ್ಟಿಗೆ ಈಗ ಊರಿನ ಎಲ್ಲ ಮನೆಗಳಲ್ಲಿ ಇಂಟರ್ನೆಟ್ ಮತ್ತು ವೈ-ಫೈ ಕನೆಕ್ಷನ್ ಇದೆ.

ಇಂದು ಈ ಚಿಕ್ಕ ಹಳ್ಳಿಯ ಮನೆಗಳಲ್ಲಿ ಮೇಲು ನೋಟಕ್ಕೆ ಅಮೇರಿಕೆಯ ನನ್ನ ಮನೆಯಲ್ಲಿರುವ ಸೌಲಭ್ಯಗಳಿಗಿಂತ ಏನೂ ಕಡಿಮೆ ಇಲ್ಲ ಅನ್ನಿಸುತ್ತದೆ. ಆದರೆ ಈ ಎಲ್ಲ ಸಲಕರಣೆ, ಸೌಲಭ್ಯಗಳು ಎಷ್ಟರಮಟ್ಟಿಗೆ ಪರಿಣಾಮಕಾರಿ ಮತ್ತು ಕೆಲಸ ಕೊಡುತ್ತವೆ ಎನ್ನುವದು ಬೇರೆಯೇ ವಿಚಾರ.

**ಅಜ್ಜನ ಅಡಿಕೆ ತೋಟ; ಮೊಮ್ಮಗನ ಪರದಾಟ**

ನಾನು ಚಿಕ್ಕವನಿದ್ದಾಗ ತಂಡದ ಬಿಡಾರದಿಂದ ಬಂದ ಕೋಳಿಯ ಕೂಗು ಬೆಳಗಾಯಿತೆಂದು ಎಚ್ಚರಿಸುತ್ತಿತ್ತು. ಬಿಡಾರ ಊರಿನಿಂದ ಸುಮಾರು ೫೦೦ ಅಡಿ ದೂರ ಇದ್ದರೂ ಬೆಳಗಿನ ಶಾಂತ ವಾತಾವರಣದಲ್ಲಿ ಕೋಳಿಯ ಕೂಗು ನಿಚ್ಚಳವಾಗಿ ಕೇಳಿಸುತ್ತಿತ್ತು. ತಂಡದವರು ಎಂದರೆ ಕುಂದಾಪುರದ ಕಡೆಯಿಂದ ಅಡಿಕೆ ತೋಟದಲ್ಲಿ ಕೆಲಸ ಮಾಡಲು ಬರುವ ಕೂಲಿಕಾರರ ಗುಂಪು. ಹತ್ತು-ಹದಿನೈದು ಕೂಲಿಕಾರರ ಮುಖಂಡನಿಗೆ "ಶೇರೂಗಾರರು" ಎನ್ನುತ್ತಿದ್ದೆವು. ಅವರನ್ನು ಎಲ್ಲರೂ ಯಾವಾಗಲೂ ಬಹುವಚನದಲ್ಲಿಯೇ ಸಂಬೋಧಿಸುತ್ತಿದ್ದರು. ನಮ್ಮಲ್ಲಿ ಶಾಲಾ ಶಿಕ್ಷಕರು, ಸರಕಾರಿ ಆಫೀಸರರುಗಳನ್ನು ಬಿಟ್ಟು ಉಳಿದ ಯಾರಿಗೂ ಬಹುವಚನದಲ್ಲಿ ಕರೆಯುವ ರೂಢಿಯಿಲ್ಲ. ಶಿವರಾಮ ಕಾರಂತರ "ಚೋಮನ ದುಡಿ"ಯ ಚೋಮನ ಮಕ್ಕಳು ಕೆಲಸ ಹುಡುಕಿಕೊಂಡು "ಘಟ್ಟಕ್ಕೆ ಹೋಗುವ" ಕತೆಯನ್ನು ಓದಿದಾಗೆಲ್ಲ ನನಗೆ ನಮ್ಮೂರ ತಂಡದವರ ನೆನಪಾಗುತ್ತಿತ್ತು.

ತಂಡದವರು ಕೋಳಿಗಳನ್ನು ಸಾಕುತ್ತಿದ್ದರು. ವಿಶೇಷ ದಿನಗಳಲ್ಲಿ, ಕೋಳಿಯನ್ನು ಕಡಿದು ಅದರ ಮಾಂಸದ ಅಡುಗೆ ಮಾಡುತ್ತಿದ್ದರೆಂದು ಕಾಣುತ್ತದೆ. ಬೇಸಿಗೆಯ ಕೆಲಸದ ಸೀಜನ್ ಮುಗಿದು ತಿರುಗಿ ಕುಂದಾಪುರಕ್ಕೆ ಹೋಗುವ ಮೊದಲು "ಕುರಿ ಹಬ್ಬ" ಅಂದರೆ ಕುರಿ ಮಾಂಸದ ವಿಶೇಷ ಭೋಜನದ ದಿನ ಆಚರಿಸುತ್ತಿದ್ದರು. ಕುರಿಯನ್ನು ಹೆಚ್ಚಾಗಿ ನೋಡದ ನಾವು ಶಾಲೆಯ ಮಕ್ಕಳು, ಸುಮಾರು ಒಂದು ವಾರದ ಮೊದಲೇ ಬಿಡಾರದ ಹೊರಗೆ ಕಟ್ಟಿದ ಕುರಿಯೊಂದನ್ನು ವಿಸ್ಮಯದಿಂದ ನೋಡುತ್ತಿದ್ದೆವು. ಕುರಿ ಹಬ್ಬದ ದಿನ ಕುರಿಯ ಕತ್ತನ್ನು ಒಂದೇ ಏಟಿನಿಂದ ಕತ್ತರಿಸಲು ವಿಶೇಷ ವ್ಯಕ್ತಿಯೊಬ್ಬನನ್ನು ಕರೆಸುತ್ತಿದ್ದರೆಂದು ಹೇಳುತ್ತಿದ್ದರು. ಮಾರನೆ ದಿನ ನಾವು ಬಿಡಾರದ ಹಿಂದಿನ ಗುಡ್ಡಕ್ಕೆ ಹೋಗಿ ಕುರಿಯನ್ನು ಕತ್ತರಿಸಿದ ಜಾಗಕ್ಕಾಗಿ ಹುಡುಕುತ್ತಿದ್ದೆವು. ಆ ದಿನ ಕುರಿಯ ಅಡುಗೆಗೆ ಖಾರದ ಮಸಾಲೆ ಬೀಸಲು ತಂಡದ ಹೆಂಗಸರು ನಮ್ಮ ಮನೆಯ ಹಿಂದಿನ ವರಾಂಡದಲ್ಲಿದ್ದ ಬೀಸುವ ಕಲ್ಲಿಗೆ ಬರುತ್ತಿದ್ದರು.

ಕುಂದಾಪುರದಿಂದ ಕೂಲಿಕಾರರ ತಂಡ ಬರುವದು ನಿಂತು ಕಾಲು ಶತಮಾನಕ್ಕಿಂತ ಹೆಚ್ಚಾಗಿದೆ. ಈಗ ಕೆಲವು ಕೂಲಿಕಾರರು ಉತ್ತರ ಕರ್ನಾಟಕದ ಬಯಲು ಸೀಮೆಯಿಂದ

ಬರುತ್ತಾರಂತೆ. ಆದರೆ ಅವರು ಬರುವದು ಒಂಟಿ-ಒಂಟಿಯಾಗಿ. ತಂಡವೂ ಇಲ್ಲ, ಶೇರೂಗಾರರೂ ಇಲ್ಲ. ಹಾಗೆ ಬಂದ ಕೆಲವರು ಖಾಯಂ ಆಗಿ ನಮ್ಮೂರಿನಲ್ಲೇ ವಾಸವಾಗಿಬಿಟ್ಟಿದ್ದಾರೆ. ಆಗಿನ ಕಾಲದ ಬೆಳಗಿನ ಕೋಳಿ ಕೂಗು, ಕುರಿ ಹಬ್ಬಗಳ ಮಜ ಈಗ ಇದ್ದಂತಿಲ್ಲ. ಕೆಲವು ಬಿಡಾರಗಳು ಮೊದಲಿನಂತೆ, ಅಡಿಕೆ ದಬ್ಬೆ, ಸೋಗೆಗಳ ಸೂರು, ಮಣ್ಣು ನೆಲದ ಗುಡಿಸಲುಗಳಾಗಿ ಉಳಿಯದೆ, ಇಟ್ಟಂಗಿ, ಹೆಂಚು, ಸಿಮೆಂಟುಗಳ ಮನೆಗಳಾಗಿವೆ.

ಹೊರಗಿನಿಂದ ಬಂದ ಕೂಲಿಕಾರರು, ಕುಂದಾಪುರದವರೇ ಇರಲಿ, ಬಯಲು ಸೀಮೆಯವರೇ ಇರಲಿ, ನೆಲದ ಮೇಲಿನ ಕೆಲಸವನ್ನಷ್ಟೇ ಮಾಡುತ್ತಿದ್ದರು. ಕೊಟ್ಟಿಗೆಯ ಪಕ್ಕದ ಗೊಬ್ಬರ ಗುಂಡಿಯಿಂದ ಗೊಬ್ಬರ ತೆಗೆದು ತೋಟಕ್ಕೆ ಸಾಗಿಸಿ, ಮರಗಳಿಗೆ ಹಾಕುವದು, ತೋಟದ ಹಿಂದಿನ ದರೆಯಿಂದ ಮಣ್ಣು ತೆಗೆದು ತೋಟದಲ್ಲಿ ಹರವುವುದು ಇತ್ಯಾದಿ ಕೆಲಸಗಳಿಗೆ ಮಾತ್ರ ಸೀಮಿತವಾಗಿದ್ದಿತು. ಅಡಿಕೆ ಮರ ಹತ್ತಿಯೇ ಮಾಡುವ ಕೆಲಸ ಸಾಮಾನ್ಯವಾಗಿ ಸ್ಥಳೀಯ ಕೆಲಸಗಾರರದು. ಎರಡು ಕೆಲಸಗಳನ್ನು ಮಾತ್ರ ಇಂದಿಗೂ ಮರ ಹತ್ತಿ ಮಾಡಬೇಕು; ಮಳೆಗಾಲದ ಪ್ರಾರಂಭದಲ್ಲಿ ಆಗತಾನೆ ಬೆಳೆಯುತ್ತಿರುವ ಅಡಿಕೆ ಗೊನೆಗಳನ್ನು ರೋಗಗಳಿಂದ ರಕ್ಷಿಸಲು ರಾಸಾಯನಿಕ ಮದ್ದು ಸಿಂಪಡಿಸುವುದು, ಮತ್ತು ಬೆಳೆದ ಗೊನೆಗಳನ್ನು ಕೊಯ್ಯುವುದು. ಈ ಕೆಲಸಗಳು ನಿರ್ದಿಷ್ಟ ಅವಧಿಯಲ್ಲಿಯೇ ಆಗಬೇಕು. ಈ ಕೆಲಸ ಮಾಡುವವನಿಗೆ ನಮ್ಮ ಕಡೆ "ಕೊನೆ ಗೌಡ" ಎಂದು ಕರೆಯುತ್ತಾರೆ. ತುಂಬ ಕಷ್ಟದ ಕೆಲಸ. ಕೆಲವೇ ಜನರಿಂದ ಸಾಧ್ಯ. ನಾಲ್ಕಾರು ಹಳ್ಳಿಗಳನ್ನು ಕೂಡಿ ಒಬ್ಬ ಅಥವಾ ಇಬ್ಬರು ಕೊನೆಗೌಡರು ಸಿಗುತ್ತಾರೆ. ಅವರ ಸಮಯ ಹಿಡಿದು, ಸರಿಯಾದ ಸಮಯದಲ್ಲಿ ಕೆಲಸ ಮಾಡಿಸಿಕೊಳ್ಳುವುದು ಕಷ್ಟಕರವಾಗುತ್ತಿದೆ. ಕೊನೆ ಗೌಡನ ಕೂಲಿ, ಇತರರ ಕೂಲಿಗಿಂತ ಮೂರು-ನಾಲ್ಕು ಪಟ್ಟು ಹೆಚ್ಚು. ಕೊನೆ ಗೌಡ ಅನ್ನುವುದು ಒಂದು ತರಹದ ದಂತಕತೆಯಂತಾಗಿ, ಹಲವಾರು ಕೊನೆ ಗೌಡ ಜೋಕುಗಳು ವಾಟ್ಸಾಪ್‌ನಲ್ಲಿ ಆಗಾಗ ಬರುತ್ತಿರುತ್ತವೆ.

ರಾಸಾಯನಿಕ ಮದ್ದು ಸಿಂಪಡಿಸುವ ರೂಢಿ ಬರುವ ಮೊದಲು, ಅಡಿಕೆಹಾಳೆಯಿಂದ ತಯಾರಿಸಿದ ಕೊಟ್ಟೆಗಳನ್ನು, ಬಾಳೆ ಮರಗಳ ಕಾಂಡದ ಸಿಪ್ಪೆಗಳನ್ನು ಒಣಗಿಸಿ ಮಾಡಿದ ಹಗ್ಗಗಳಿಂದ ಕಟ್ಟಿ ಗೊನೆಗಳನ್ನು ಮುಚ್ಚುತ್ತಿದ್ದರು. ಮರಗಳಿಂದ ಒಣಗಿ ಬಿದ್ದ ಎಲೆಗಳನ್ನು ಹೊಂದಿಸಿ ಇಡಲು, ತೋಟದ ಮಧ್ಯೆ ಅಲ್ಲಲ್ಲಿ ಸೋಗೆ ಅಟ್ಟಣಿಗೆಗಳು ಇರುತ್ತವೆ. ಬೇಸಿಗೆಯ ಕೊನೆಯಲ್ಲಿ, ಎಲೆಗಳನ್ನು ಕಡಿದು ಹಾಳೆ ಮತ್ತು ಸೋಗೆಗಳನ್ನು ಬೇರ್ಪಡಿಸಿ ದೊಡ್ಡ-ದೊಡ್ಡ ಕಟ್ಟುಗಳನ್ನು ಮಾಡಿ ಶೇಖರಿಸಿ ಇಡುತ್ತಾರೆ. ಅಂದಿನ ದಿನಗಳಲ್ಲಿ ಹಾಳೆಗಳನ್ನು ಕೊಟ್ಟೆ ಮಾಡಲಿಕ್ಕೆ ಮತ್ತು ಸೋಗೆಗಳನ್ನು ಮನೆಗೆ ಹೊದಿಸಲಿಕ್ಕೆ ಉಪಯೋಗಿಸುತ್ತಿದ್ದರು. ಇಂದು ಸೋಗೆಗಳ ಉಪಯೋಗ ಅಪರೂಪಕ್ಕೆ ಬೇಕಾದ ಚಪ್ಪರ, ಗುಡಿಸಲುಗಳಿಗೆ ಮಾತ್ರ. ಹಾಳೆಗಳಿಂದ ಊಟದ ತಟ್ಟೆ, ಬಟ್ಟಲುಗಳನ್ನು ತಯಾರಿಸಿ ಮಾರುವ ಹೊಸ ಉದ್ಯಮವೊಂದು ಜಾರಿಗೆ ಬಂದಿದೆ.

ನನ್ನ ಚಿಕ್ಕಂದಿನ ದಿನಗಳಲ್ಲಿ ಹಾಳೆ ಕತ್ತರಿಸಿ ಕೊಟ್ಟೆಗಳಿಗೆ ಅಣಿ ಮಾಡುವದು ನನ್ನ ಅಬ್ಬೆಯ ಕೆಲಸವಾಗಿದ್ದಿತು. ಕತ್ತರಿಸಿದ ತುಂಡುಗಳನ್ನು ಜೋಡಿಸಿ ಕೊಟ್ಟೆ ಮಾಡಿ, ಬಾಳೆ ಹಗ್ಗವನ್ನು ಸುರಿದಿಡುವದು ಹೆಚ್ಚಾಗಿ ಮಕ್ಕಳ ಕೆಲಸವಾಗಿದ್ದಿತು. ಆಗಿನ ದಿನಗಳಲ್ಲಿ ನನ್ನ ಎರಡು ಹಿರಿಯ ಅಣ್ಣಂದಿರೇ ಕೊನೆ ಗೌಡನ ಕೆಲಸ ಮಾಡುತ್ತಿದ್ದರು.

ನಿಗದಿತ ಸಮಯಕ್ಕೆ ಮಾಡಬೇಕಾದ ಇನ್ನೊಂದು ಕೆಲಸವೆಂದರೆ, ಅಡಿಕೆಯ ಸಿಪ್ಪೆಯನ್ನು ಸುಲಿದು ಒಳಗಿನ ಅಡಿಕೆಯನ್ನು ಬೇರ್ಪಡಿಸುವದು. ಅದೂ ಕೂಡ ಸಮಯ ತಿನ್ನುವ ಕೆಲಸ. ಇದಕ್ಕೂ ಈಗ ಕೆಲಸಗಾರರ ಅಭಾವ ತುಂಬ ಆಗಿದೆ. ಮೊದಮೊದಲು ಕೆಲಸಗಾರರೇ ಮನೆಗೆ ಬಂದು ಅಡಿಕೆ ಸುಲಿಯುತ್ತಿದ್ದರು. ಇತ್ತಿತ್ತಲಾಗಿ ಕೆಲಸಗಾರರ ಮನೆಗೇ ಅಡಿಕೆ ಗೊನೆಗಳನ್ನು ಒಯ್ದು ಇಟ್ಟು ಬರಬೇಕು. ಅವರು ತಮ್ಮ ಮನೆಕೆಲಸಗಳ ಮಧ್ಯೆ, ಪುರಸೊತ್ತಾದಂತೆ ಸುಲಿಯುತ್ತಾರೆ. ಒಂದು ಕಾಲದಲ್ಲಿ ಅಡಿಕೆ ಸುಲಿಯುವ ಕೆಲಸವನ್ನು ಕೂಡ ಮನೆಯವರೇ ಮಾಡಿಕೊಳ್ಳುತ್ತಿದ್ದರು. ಸುಲಿಯುವ ಕೆಲಸ ಒಂದೆರಡು ದಿನಗಳಲ್ಲಿಯೇ ಆಗಬೇಕಾದ್ದರಿಂದ ಅಕ್ಕ-ಪಕ್ಕದ ಮನೆಯವರು ಒಬ್ಬರಿಗೊಬ್ಬರು ಸಹಾಯ ಮಾಡುತ್ತಿದ್ದರು. ಈ "ಮುರಿಯಾಳು" ಪದ್ಧತಿ ಎಂದೋ ಮಾಯವಾಗಿದೆ.

ಇಂದು ಅಡಿಕೆಗೆ ಒಳ್ಳೆಯ ಬೆಲೆಯೇನೋ ಬಂದಿದೆ. ಆದರೆ ಕೂಲಿಕಾರರ ಅಭಾವದಿಂದಾಗಿ, ಬೇಸಾಯ ಕಷ್ಟಕರವಾಗುತ್ತಿದೆ. ಅಲ್ಲದೆ ಅಡಿಕೆ ಜೀವನಾವಶ್ಯಕ ಬೆಳೆ ಅಲ್ಲ; ಐಶಾರಾಮಿನ ಬೆಳೆ. ಹಾಗಾಗಿ ಅಡಿಕೆ ಬೇಸಾಯದ ದೀರ್ಘ-ಕಾಲಿಕ ಭವಿಷ್ಯ ಅನಿಶ್ಚಿತವೆಂದೇ ಹೇಳಬೇಕು. ಮರ ಹತ್ತಲು ಮತ್ತು ಅಡಿಕೆ ಸುಲಿಯಲು ಯಾಂತ್ರಿಕ ಉಪಕರಣಗಳ ಪ್ರಯೋಗಗಳು ನಡೆಯುತ್ತಿವೆ. ಅಡಿಕೆಯಿಂದ ಕೆಲ ದಿನೋಪಯೋಗಿ ವಸ್ತು ಮತ್ತು ಪಾನೀಯಗಳನ್ನು ತಯಾರಿಸುವ ಪ್ರಯತ್ನಗಳೂ ನಡೆದಿವೆ. ಇಷ್ಟರತನಕ ಯಾವುದೂ ಸಂಪೂರ್ಣ ಸಫಲವಾಗಿಲ್ಲ.

**ಜನಜೀವನ: ಇಂದು, ಮುಂದೆ**

ಇಂದು ಹಳ್ಳಿಯ ಅಡಿಕೆ ಬೇಸಾಯಗಾರರ ಆರ್ಥಿಕ ಪರಿಸ್ಥಿತಿ ಉಚ್ಚ ಮಟ್ಟದಲ್ಲಿದ್ದು ಜೀವನ ಹಿಂದಿಗಿಂತ ಹೆಚ್ಚು ಸುಖಕರವಾಗಿದೆ. ಇದರಿಂದಾಗಿ ಜನರ ಸ್ವಂತ ದುಡಿಮೆ ಕಡಿಮೆ ಆಗಿ, ಕೂಲಿಕಾರರ ಮೇಲಿನ ಅವಲಂಬನೆ ಹೆಚ್ಚಾಗುತ್ತಿದೆ. ಎಷ್ಟೋ ಬಡವರು ಊರ ಸಾವುಕಾರರಿಂದ ಸಾಲ ಮಾಡಿ, ಅವರು ಹಾಕಿದಷ್ಟು ಬಡ್ಡಿ ತೆತ್ತು, ಜೀವನವಿಡೀ ಸಾಲ ತೀರಿಸಲಾಗದೆ ಒದ್ದಾಡುವ ದಿನಗಳು ಕಳೆದಿವೆ. ಹೇರೂರಿನಲ್ಲಿಯೇ ವಿಜಯಾ ಬ್ಯಾಂಕಿನ ಶಾಖೆ ಇರುವುದರಿಂದ ಬಹಳ ಕುಟುಂಬಗಳು ಬ್ಯಾಂಕಿನ ಮೂಲಕ ಬಹುಮಟ್ಟಿನ ಹಣಕಾಸು ವ್ಯವಹಾರ ಮಾಡುತ್ತವೆ. ಹಿಂದಿನಂತೆ ದಲ್ಲಾಳಿಗಳ ಹತ್ತಿರವೋ, ಸಹಕಾರಿ ಸಂಘದಲ್ಲೋ ಬೆಳೆಯ ಹಣ ಬಿಟ್ಟು, ಖರ್ಚಿಗೆ ಬೇಕಾದಷ್ಟೆ ಹಣವನ್ನು ಆಗಾಗ ತಂದುಕೊಳ್ಳುವ ಪದ್ಧತಿ ನಿಂತಿದೆ. ಹಳೆಯ ದಿನಗಳ ಬಾಯಿಮಾತಿನ ಹಣಕಾಸಿನ

ವ್ಯವಹಾರಗಳು ಕಡಿಮೆಯಾಗಿವೆ. ಇಂದು ಜನರು ಮನೆಯ ಆಯ-ವ್ಯಯಗಳ ಲೆಕ್ಕ ಬರೆದಿಡುವ ರೂಢಿ ಮಾಡಿಕೊಂಡಿದ್ದಾರೆ.

ಮನೆಯ ಹೆಣ್ಣು ಮಕ್ಕಳ ಜೀವನವೂ ಮೊದಲಿಗಿಂತ ಎಷ್ಟೋ ಪಟ್ಟು ಸುಧಾರಿಸಿದೆಯೆನ್ನಬೇಕು. ನಾನು ಚಿಕ್ಕವನಿದ್ದಾಗ ನನ್ನ ಅಬ್ಬೆ, ಅತ್ತಿಗೆಯಂದಿರು ಮನೆಕೆಲಸದೊಂದಿಗೆ, ಗದ್ದೆ ನೆಟ್ಟಿ, ಕಳೆ ತೆಗೆಯುವುದು ಮುಂತಾದ ಹೊರಕೆಲಸಗಳಲ್ಲಿ ಕೂಡ ಭಾಗವಹಿಸುತ್ತಿದ್ದರು. ಮಳೆಗಾಲದ ಒದ್ದೆ ಕಟ್ಟಿಗೆ ಒಲೆಯಲ್ಲಿ, ದೊಡ್ಡ ಕುಟುಂಬಕ್ಕೆ ದಿನಕ್ಕೆ ಮೂರು ಹೊತ್ತು ಅಡಿಗೆ ಮಾಡುವುದು ಸುಲಭದ ಕೆಲಸವಾಗಿರಲಿಲ್ಲ. ಇಂದು ಅವರಿಗೆ ಹೆಚ್ಚು ಬಿಡುವು ಸಿಗುತ್ತಿರುವುದರಿಂದ ಟಿ.ವಿ.ಯಲ್ಲಿ ಬರುತ್ತಿರುವ ಹತ್ತೆಂಟು ತರಹದ ಧಾರಾವಾಹಿ, ಚಲನಚಿತ್ರಗಳನ್ನು ನೋಡಿ ಆನಂದಿಸುವ ಅವಕಾಶವಿದೆ. ಅಲ್ಲದೆ ಇಂದು ಹೆಂಗಸರು ಕೂಡ ವಿದ್ಯಾವಂತರು. ಅನೇಕರು ವಾಟ್ಸಾಪ್, ಫೇಸ್‌ಬುಕ್ ಮೂಲಕ ಹಳೆ-ಹೊಸ ಸ್ನೇಹಿತರೊಂದಿಗೆ ಸಂಪರ್ಕವಿಟ್ಟುಕೊಳ್ಳುತ್ತಿದ್ದಾರೆ. ಇಂದಿನ ಮಕ್ಕಳು ನನ್ನ ಚಿಕ್ಕಂದಿನ ಆಟಿಕೆಗಳಾದ ನಾವೇ ತಯಾರಿಸಿಕೊಳ್ಳುತ್ತಿದ್ದ ಗಿರಗಿಟ್ಟಿ, ಪೆಟ್ಲಂಡೆಗಳ ಹೆಸರೇ ಕೇಳಿಲ್ಲ. ಆಡಲು ಚೀನಾ-ನಿರ್ಮಿತ ಹಲವಾರು ಗ್ಯಾಜೆಟ್ಟುಗಳಿವೆ. ಊರ ಮಕ್ಕಳೆಲ್ಲ ಒಟ್ಟಾಗಿ ಆಡುತ್ತಿದ್ದ ಚಿಣ್ಣಿ-ದಾಂಡು ಆಟ ಮಾಯವಾಗಿ ಕ್ರಿಕೆಟ್ ಬಂದಿದೆ. ಹಳೆಯ ಕಾಲದ ಎಷ್ಟೋ ಹಳ್ಳಿಯ ಆಟಗಳು ನಶಿಸಿಹೋಗಿವೆ.

ಊರಿನ ಸುತ್ತಮುತ್ತಲೇ ಇರಲಿ, ಪಟ್ಟಣಗಳಿಗೇ ಇರಲಿ, ಪ್ರಯಾಣ ತುಂಬ ಸುಲಭವಾಗಿದೆ. ಒಂದೆರಡು ಮೈಲು ದೂರದ ಸಂಬಂಧಿಕರ ಮನೆಗೂ ಕೂಡ ಕಾಲು ನಡಿಗೆಯಲ್ಲಿ ಹೋಗುವವರು ವಿರಳವಾಗಿದ್ದಾರೆ. ವಾಹನ ಸೌಕರ್ಯದ ದೊಡ್ಡ ಲಾಭವಾದದ್ದು ಸಾರ್ವಜನಿಕ ಆರೋಗ್ಯದಲ್ಲಿ. ಅಂದು ಯಾರಾದರೂ ಕಾಯಿಲೆ ಬಿದ್ದರೆ ಹಳ್ಳಿಯ ಮದ್ದೇ ಗತಿಯಾಗಿತ್ತು. ಇಂದು ಹುಬ್ಬಳ್ಳಿಗೋ, ಮಂಗಳೂರಿಗೋ ಕಾರಿನಲ್ಲಿ ತಕ್ಷಣ ಕರೆದೊಯ್ಯುತ್ತಾರೆ. ಶಿರಸಿಯಲ್ಲಿ ಕೂಡ ಇಂದು ಕೆಲವು ಸುಸಜ್ಜಿತ ಆಸ್ಪತ್ರೆಗಳು, ಪರೀಕ್ಷಾ ಕೇಂದ್ರಗಳು ಬಂದಿವೆ. ಬೇಸಾಯಗಾರರಿಗೆ ಸರಕಾರ ರಿಯಾಯಿತಿ ದರದಲ್ಲಿ ಆರೋಗ್ಯ ವಿಮೆ ಸವಲತ್ತನ್ನು ಒದಗಿಸಿದೆ.

೧೯೬೦-೭೦ರ ದಶಕಗಳಲ್ಲಿ ಯಾರಾದರೂ ಪರದೇಶಕ್ಕೆ ಹೋಗುತ್ತಾರೆಂದರೆ ಅದು ಅತಿದೊಡ್ಡ ಸುದ್ದಿಯಾಗಿತ್ತು. ಇಂದು ನಮ್ಮೂರಿನಂತಹ ಚಿಕ್ಕ ಹಳ್ಳಿಯಿಂದ ಕೂಡ ಅರ್ಧ ಡಜನ್ ಜನ ಪರದೇಶದಲ್ಲಿ ವಾಸವಾಗಿದ್ದಾರೆ. ಹಲವು ಹಿರಿಯರು ಮಕ್ಕಳನ್ನು ನೋಡಿ ಬರಲು ಅಮೇರಿಕೆಗೆ ಬಂದು ಹೋಗಿದ್ದಾರೆ.

ಜನರ ವಿಚಾರಸರಣಿ ಕೂಡ ಇಂದು ಬದಲಾಗಿದೆ. ಪ್ರತಿದಿನ ಟಿ.ವಿ. ಸಮಾಚಾರ ನೋಡಿ, ಕನ್ನಡ ದಿನಪತ್ರಿಕೆಗಳನ್ನು ಓದಿ ಜನ ದೇಶ-ವಿದೇಶಗಳ ಆಗು-ಹೋಗುಗಳನ್ನು, ಮುಖ್ಯವಾಗಿ ರಾಜಕೀಯ ಸುದ್ದಿಗಳನ್ನು ತಿಳಿದುಕೊಳ್ಳುತ್ತಾರೆ; ಆಗಾಗ ಚರ್ಚಿಸುತ್ತಾರೆ. ವ್ಯವಹಾರ ಚತುರರಾಗಿದ್ದಾರೆ. ಬೇಸಾಯದಲ್ಲಿ ಹೊಸ ಪ್ರಯೋಗಗಳನ್ನು ಮಾಡಲು

ಹಿಂಜರಿಯುವುದಿಲ್ಲ. ಆದರೆ ಟಿ.ವಿ. ಸಾಮಾಜಿಕ ತಾಣ, ಮತ್ತು ಪಟ್ಟಣಗಳ ಪ್ರಭಾವದಿಂದ ಯುವಕರು ಸಾಂಪ್ರದಾಯಿಕ, ನಿತ್ಯಕಾಲಿಕ ಮೌಲ್ಯಗಳನ್ನು ಕಡೆಗಣಿಸಿ, ಬೇಡದ ಅಂಥ ಪಾಶ್ಚಿಮಾತ್ಯ ಅನುಕರಣೆಗಳಿಗೆ ಮಾರುಹೋಗುತ್ತಿದ್ದಾರೆ.

ಬಹಳ ವರ್ಷಗಳಿಂದ ನಡೆದುಬಂದ ಸಂಪ್ರದಾಯ, ಕರ್ಮಾಂಗಗಳ ಆಚರಣೆಯಲ್ಲಿ ಹೆಚ್ಚಿನ ಬದಲಾವಣೆ ಕಾಣುವುದಿಲ್ಲ. ಚೌಲ, ಉಪನಯನ ಮುಂತಾದ ಸಂಸ್ಕಾರಗಳು, ಹಬ್ಬ ಹುಣ್ಣಿಮೆಗಳ ಆಚರಣೆ, ಅಂತ್ಯಕ್ರಿಯೆ, ಶ್ರಾದ್ಧ ಇವುಗಳೆಲ್ಲ ಎಂದಿನಂತೆ ನಡೆದು ಬಂದಿವೆ. ಹಲವು ಆಚರಣೆಗಳು ಮೊದಲಿಗಿಂತ ಸ್ವಲ್ಪ ಸಂಕ್ಷಿಪ್ತವಾಗಿವೆ. ಆದರೆ ಮದುವೆ ಸಮಾರಂಭಗಳು ಒಂದು ದಿನಕ್ಕೆ ಇಳಿದಿದ್ದರೂ ವಿಜೃಂಭಣೆಯಲ್ಲಿ ಏನೂ ಕಡಿಮೆ ಆಗಿಲ್ಲ. ಹೆಚ್ಚು ಮದುವೆಗಳು ಕಲ್ಯಾಣ ಮಂಟಪ, ದೇವಸ್ಥಾನಗಳಲ್ಲಿ ಆಗುತ್ತಿವೆ, ಇತ್ತೀಚೆಗೆ ಹಲವು ಮದುವೆಗಳು ಮನೆಯಲ್ಲಿಯೇ ಜರುಗುತ್ತಿವೆ. ನೆಲದಲ್ಲಿ ಕೂತು ಊಟ ಮಾಡುವ ರೂಢಿ ಹೋಗಿ, ಖುರ್ಚಿ–ಮೇಜುಗಳ ಊಟ ಬಂದಿದೆ. ಎಂಥ ಸಣ್ಣ ಮದುವೆಗೂ ೪೦೦–೫೦೦ ಜನ ಊಟಕ್ಕೆ ಸೇರುವುದರಿಂದ, ಅಡುಗೆ ಮಾಡಿ, ಊಟ ಬಡಿಸಿ, ಸ್ವಚ್ಛ ಮಾಡುವ ಎಲ್ಲ ಕೆಲಸಗಳನ್ನು ಯುವಕ ಸಂಘಗಳಿಗೆ ಕಾಂಟ್ರಾಕ್ಟ್ ಕೊಡುವುದು ಸರ್ವೇಸಾಮಾನ್ಯವಾಗಿದೆ. ಮನೆಗಳಲ್ಲಿ ಕೂಡ ನೆಲದ ಮೇಲೆ ಕುಳಿತು ಬಾಳೆ ಎಲೆಗಳ ಮೇಲೆ ಊಟ ಮಾಡುವ ಪದ್ಧತಿ ಕಡಿಮೆಯಾಗಿ, ಊಟಕ್ಕೆ ಮೇಜು–ಖುರ್ಚಿಗಳು, ಸ್ಟೀಲಿನ ತಟ್ಟೆಗಳು ಬಂದಿವೆ.

ನಲವತ್ತು–ಐವತ್ತು ವರ್ಷಗಳ ಹಿಂದೆ ನಮ್ಮೂರ ಸುತ್ತಮುತ್ತಲಿನ ಎಲ್ಲವೂ ಅವಿಭಕ್ತ ಕುಟುಂಬಗಳಾಗಿದ್ದವು. ಇಂದು ಬಹುಮಟ್ಟಿನ ಕುಟುಂಬಗಳೆಲ್ಲ ಒಡೆದು ಗಂಡ–ಹೆಂಡಿರ ಚಿಕ್ಕ ಸಂಸಾರಗಳು ಹೆಚ್ಚಿವೆ. ಊರಿನ ಹಲವು ವಿದ್ಯಾವಂತ ಯುವಕರು ಇಂದು ಬೆಂಗಳೂರಿನಲ್ಲಿ ನೆಲೆಸಿದ್ದಾರೆ. ಇನ್ನು ಕೆಲವು ಯುವಕರು ಮನೆಯಲ್ಲಿಯೇ ಉಳಿದು ತೋಟ–ಗದ್ದೆಗಳ ಸಾಗುವಳಿ ಮಾಡುತ್ತಿದ್ದರೆ, ಅವರನ್ನು ಮದುವೆಯಾಗಲು ಯಾವ ಸ್ಥಳೀಯ ಹುಡುಗಿಯರೂ ಒಪ್ಪುತ್ತಿಲ್ಲ. ಎಲ್ಲರಿಗೂ ಬೆಂಗಳೂರಿನ ವರ ಬೇಕು. ಹಾಗಾಗಿ ಹಳ್ಳಿಯಲ್ಲಿ ನಲವತ್ತು ವರ್ಷದ ಕೆಲವು ಅವಿವಾಹಿತ ಯುವಕರಿದ್ದಾರೆ. ಇನ್ನು ಕೆಲವರು ಏಜೆಂಟರುಗಳ ಮುಖಾಂತರ ಲಕ್ಷಗಟ್ಟಲೆ ಹಣ ಸುರಿದು, ಬಯಲು ಸೀಮೆಯಿಂದ ಹೆಣ್ಣು ತಂದು ಮದುವೆ ಮಾಡಿಕೊಂಡ ಉದಾಹರಣೆಗಳಿವೆ!

“ಹೆಚ್ಚು ಸಂಗತಿಗಳು ಬದಲಾದಂತೆ, ಹೆಚ್ಚು ಹಾಗೆಯೇ ಇರುತ್ತವೆ” ಎಂಬ ಹೇಳಿಕೆಯಂತೆ ನಮ್ಮೂರಿನ ಪರಿಸ್ಥಿತಿಯೂ ಆಗಿದೆ. ಈ ಎಲ್ಲ ಅಭಿವೃದ್ಧಿಗಳು, ಆಧುನಿಕ ಸೌಕರ್ಯಗಳು ಹೊರನೋಟಕ್ಕೆ ಚೆನ್ನಾಗಿಯೇ ಕಾಣುತ್ತವೆ. ಆದರೆ ನಮ್ಮೂರು ಅಮೇರಿಕೆಯಲ್ಲಿಲ್ಲ. ಬೆಂಗಳೂರು ಕೂಡ ಅಲ್ಲ. ರಾಜಧಾನಿಯಿಂದ ಬಹುದೂರ ಉತ್ತರ ಕನ್ನಡ ಜಿಲ್ಲೆಯ ಸಣ್ಣ ಹಳ್ಳಿ. ಮಳೆಗಾಲದ ದಿನಗಳಲ್ಲಿ ಎಲ್ಲಿಯೋ ಒಂದು ಮರ ಬಿದ್ದೋ, ಇನ್ನಾವುದೋ ಸಣ್ಣ ಕಾರಣಕ್ಕಾಗಿ ಮೇಲಿಂದ ಮೇಲೆ ಮೂರು–ನಾಲ್ಕು ದಿನಗಳವರೆಗೆ

ವಿದ್ಯುತ್ ಸರಬರಾಜು ನಿಂತುಹೋಗುತ್ತದೆ. ಸರಕಾರಿ ನೌಕರರಿಗೆ ತಕ್ಷಣ ರಿಪೇರಿ ಮಾಡಬೇಕೆಂಬ ಅವಸರವಿಲ್ಲ. ಚಿಕ್ಕ ಕೆಲಸಕ್ಕೂ ಕನಿಷ್ಠ ಎರಡು–ಮೂರು ದಿನಗಳನ್ನು ತೆಗೆದುಕೊಳ್ಳುತ್ತಾರೆ. ಜನರೂ ಒತ್ತಾಯಿಸುವ ಗೋಜಿಗೆ ಹೋಗುವುದಿಲ್ಲ. ಬಹಳಷ್ಟು ಮನೆಯವರು ಜನರೇಟರ್ ಇಟ್ಟುಕೊಂಡಿದ್ದಾರೆ. ಕೆಲದಿನಗಳ ಹಿಂದೆ ನಮ್ಮ ಮನೆಯಲ್ಲಿ ಕರೆಂಟು ಇಲ್ಲದ ದಿನ ಜನರೇಟರ್ ಕೂಡ ಕೆಟ್ಟುಹೋಗಿ, ಮೂರು ರಾತ್ರಿ ಚಿಮಣಿ ದೀಪದ ದಿನಗಳಿಗೆ ಹಿಂತಿರುಗಬೇಕಾಯಿತಂತೆ. ಕರೆಂಟು ಇಲ್ಲದಾಗ ಟೆಲಿಫೋನು ಸಹ ಇರುವುದಿಲ್ಲ. ಇಂಟರ್ನೆಟ್ ಕನೆಕ್ಷನ್ನಿನ ಪರಿಸ್ಥಿತಿಯೂ ಇದಕ್ಕೆ ಹೊರತಾಗಿಲ್ಲ.

ಮನೆಯ ಎಲ್ಲರ ಹತ್ತಿರ ಮೊಬೈಲ್ ಫೋನುಗಳೇನೋ ಇವೆ. ಆದರೆ ಮನೆಯೊಳಗೆ ಸಿಗ್ನಲ್ ಸಿಗುವುದಿಲ್ಲ. ಬೂಸ್ಟರ್ ಹಾಕಿಸಿಕೊಂಡರೂ ಹೆಚ್ಚಿನ ಪ್ರಯೋಜನವಿಲ್ಲ. ಮೊಬೈಲ್ ಉಪಯೋಗ ಹೆಚ್ಚಾಗಿ ಪಟ್ಟಣಕ್ಕೆ ಹೋದಾಗ ಮಾತ್ರ. ಮನೆಯ ಲ್ಯಾಂಡ್ ಫೋನು ಕೆಟ್ಟು, ಕರೆ ಮಾಡುವುದು ಅವಶ್ಯವಿದ್ದಾಗ ಕೆಲವೊಮ್ಮೆ ಮನೆಯ ಹಿಂದಿನ ಗುಡ್ಡಕ್ಕೆ ಹೋದರೆ ಸ್ವಲ್ಪ ಮಟ್ಟಿಗೆ ಸಿಗ್ನಲ್ ಸಿಗುತ್ತದಂತೆ.

ಅಂತೂ ಎಲ್ಲಾ ಸೌಕರ್ಯಗಳು ಇದ್ದಾಗ ಇವೆ, ಇಲ್ಲದಾಗ ಇಲ್ಲ. "ಗಾಳಿ ಬಂದಾಗ ತೂರಿಕೋ" ಎಂಬಂತೆ ಇದ್ದಾಗ ಅನುಭೋಗಿಸು, ಇಲ್ಲದಿದ್ದಾಗ ಸ್ವೀಕರಿಸು ಎಂಬ ಮನೋಭಾವಕ್ಕೆ ಜನರು ಹೊಂದಿಕೊಂಡುಬಿಟ್ಟಿದ್ದಾರೆ. ಜನರಿಗೆ ತಾಳ್ಮೆ ಜಾಸ್ತಿ. ಯಾವುದಕ್ಕೂ ಅವಸರವಿಲ್ಲ. ಬೆಳಗಾಯಿತೆಂದರೆ ಎದ್ದು ಓಡಬೇಕಾಗಿಲ್ಲ. ಇದು ಇರುವುದೇ ಹೀಗೆ ಎಂದು ಸುಲಭವಾಗಿ ಸ್ವೀಕರಿಸಿಬಿಡುವ ತತ್ತ್ವಜ್ಞಾನದ ಸಮಾಧಾನ ಬೇರೆ. ನನಗೆ ಊರಿಗೆ ಹೋದಾಗ ಒಮ್ಮೊಮ್ಮೆ ನಮ್ಮೂರಿನ ಜನರ ಮನೋಭಾವ ಈ ಆರೇಳು ದಶಕಗಳಲ್ಲಿ ಬದಲಾಗಿಯೇ ಇಲ್ಲ ಅನ್ನಿಸಿಬಿಡುತ್ತದೆ.

*

# ಕಾಲಾಯ ತಸ್ಮೈ ನಮಃ

■ ಮೀನಾ ಸುಬ್ಬರಾವ್, Salinas, CA.

ಕಾಲಚಕ್ರ ಉರುಳುತಿದೆ, ಜನಜೀವನ ಬದಲಾಗಿದೆ. ನಾವು ಕಾಲಕ್ಕೆ ತಕ್ಕಂತೆ ನಡೆಯಬೇಕು, ತಾಳಕ್ಕೆ ತಕ್ಕಂತೆ ಕುಣಿಯಬೇಕು ಎನ್ನುವ ಉಕ್ತಿ ಜೀವನದ ಉಳಿವಿಗೆ ಅತ್ಯವಶ್ಯಕವಾಗಿದೆ. ಆದರೂ ಕಾಡತಾವ ಸವಿನೆನಪುಗಳು. ಈ ನೆನಪುಗಳದು ಒಂದು ಸುಂದರ ಹಂದರ; ಉಲ್ಲಾಸದ ಉತ್ಕಂಠತೆಯನ್ನು ಯಶಸ್ವಿಯಾಗಿ ತರುತ್ತದೆ. ಇದರ ಉತ್ಸಾಹಕ್ಕೆ ಯಾರೂ ಹೊರತಾಗಿಲ್ಲ ಅನ್ನೋ ಸತ್ಯವೇ ಇದರ ಸಂಭವಿಸುವಿಕೆಗೆ ಸಾಧ್ಯವಾಗಿದೆ. ಕುವೆಂಪು ಅವರ ಒಂದು ಗೀತೆ ನೆನಪಿಗೆ ಬರುತ್ತಿದೆ – ಬಾ ಇಲ್ಲಿ ಸಂಭವಿಸು. ಬೇಕಾದಾಗಲೂ ಬೇಡವಾದಾಗಲೂ ಕಾಡುತ್ತವೆ ನೆನಪುಗಳು ಎಂಬುದೊಂದು ವಿಸ್ಮಯವಾಗಿದೆ.

ಒಂದು ವಾರದಿಂದ ಪ್ರವಾಸದಲ್ಲಿದ್ದ ಇವರು ಬಂದ ಕೂಡಲೇ "ಮೇಲ್ ಚೆಕ್ ಮಾಡಿದ್ಯಾ" ಅಂತ ಕೇಳಿದಾಕ್ಷಣ ನನ್ನ ಮನಸ್ಸಿನಾಳದಲ್ಲಿ ಸುರುಳಿಯಾಗಿ ಹುದುಗಿದ್ದ ಸವಿನೆನಪು ಎಳೆಎಳೆಯಾಗಿ ಬಿಚ್ಚಿಕೊಂಡಿತ್ತು. ಬಾಲ್ಯವನ್ನು ಕಳೆದ ಕಡೂರಿನಲ್ಲಿ ಬೆಳಗ್ಗೆ ಏಳು ಘಂಟೆಗೆಲ್ಲ ಎದ್ದು ಪೋಸ್ಟ್ ಆಫೀಸ್ ಹತ್ತಿರನೇ ಹೋಗಿ ಪೋಸ್ಟ್ ಮ್ಯಾನ್ ಹತ್ತಿರ ನಮಗೆ ಬಂದ ಕಾಗದ, ಪತ್ರ, ಟಪಾಲುಗಳನ್ನೆಲ್ಲಾ ತಂದು ಅಣ್ಣನಿಗೆ ಒಪ್ಪಿಸುವುದು ನಮ್ಮ ದಿನಚರಿಯಾಗಿತ್ತು. ಅದರ ಮಜಾನೇ ಬೇರೆ. ನಡೆದು ಹೋದರೂ ಆಯಾಸ ಕಾಣದೇ ಹುಮ್ಮಸ್ಸಿನಿಂದ ಹೋಗಿ ತರುತ್ತಿದ್ದೆವು. ಆ ಪತ್ರಗಳನ್ನು ನೋಡಿದಾಕ್ಷಣ ಆನಂದವೋ ಆನಂದ. ಆ ಸಂತೋಷಕ್ಕೆ ಹಲವಾರು ಕಾರಣಗಳು, ಪೋಸ್ಟ್ ಮ್ಯಾನಿನ ತಮಾಷೆಗಳು ಒಂದಾ, ಎರಡಾ, ಹಲವಾರು – 'ಅಜ್ಜೀ, ನಿನ್ ಮಗನ ಕಾಗದ ಇವತ್ ಬಂದಿಲ್ಲ, ನಾಳೆ ಬರತ್ತೆ;', 'ಶೆಟ್ರೇ, ಇಲ್ಲಿ ನೋಡಿ. ನಿಮ್ಮ ತಂಗಿ ಮಗಳ ಮದುವೆ ಲಗ್ನ ಪತ್ರಿಕೆ.', 'ಸಾರ್, ನಿಮ್ಮ ಮಗಳ ಪರೀಕ್ಷೆ ಫಲಿತಾಂಶ ಬಂದಿರಬೇಕು,', 'ತಾತ ನಿಮಗೆ ಮನಿ ಆರ್ಡರ್ ಹಬ್ಬಕ್ಕೆ ಸರಿಯಾಗಿ ಬಂದಿದೆ.'... ಇತ್ಯಾದಿ ಹೇಳಿ ಎಲ್ಲರನ್ನೂ ನಗಿಸುತ್ತಿದ್ದ. ನಮ್ಮ ಪತ್ರಗಳನ್ನೆಲ್ಲಾ

ಕೊಟ್ಟ ಮೇಲೆ ಸೈಕಲ್ ಹತ್ತಿ ಮಿಕ್ಕ ಪತ್ರಗಳನ್ನು ವಿತರಿಸಲು ಸಾಗುತ್ತಿದ್ದ. ಕೆಲವು ಪತ್ರಗಳು ತುಂಬಾ ಖುಷಿಯನ್ನು ತರುತ್ತಿದ್ದವು– ನಮ್ಮ ಅತ್ತೆ ಬೆಂಗಳೂರಿನಿಂದ ಪತ್ರ ಬರೆದು "ಮಕ್ಕಳಿಗೆಲ್ಲ ಶಾಲೆಗೆ ರಜೆ ಬಂದಿದ್ದರೆ ಬೇಸಿಗೆ ರಜಕ್ಕೆ ಬೆಂಗಳೂರಿಗೆ ಕಳಿಸುವುದು" ಎಂದಿದ್ದರೆ, ಅದನ್ನು ನೋಡಿದ ತಕ್ಷಣವೇ ನಮ್ಮ ಕುಣಿತ ಶುರುವಾಗಿರುತ್ತಿತ್ತು, ಇನ್ನು ಹೋಗುವುದಿರಲಿ. ಮದುವೆ, ಮುಂಜಿ ಆಹ್ವಾನ ಪತ್ರಿಕೆಗಳು ನೋಡಿದರೆ, ಹೋದರೂ ಸರಿ, ಇಲ್ಲದಿದ್ದರೂ ಸರಿ ತುಂಬಾ ಆನಂದವನ್ನು ಕೊಡುತ್ತಿದ್ದವು. ಪತ್ರ ಬಾರದೇ ಇದ್ದರೂ ನಮಗೆಲ್ಲಾ ಮುಂಜಾವಿನ ವಾಯು ವಿಹಾರವಾಗುತ್ತಿತ್ತು. ಹೀಗೆ ನಮ್ಮ ಆರೋಗ್ಯ ಕಾಪಾಡಿಕೊಳ್ಳಲು ಒಂದು ಅವಕಾಶವೂ ಸಿಗುತ್ತಿತ್ತು. ಆದರೆ ಇಲ್ಲಿ, ಪೋಸ್ಟ್ ಮ್ಯಾನ್ ಜೀಪ್ನಲ್ಲಿ ಬಂದು ನಮ್ಮ ಪತ್ರಗಳನ್ನೆಲ್ಲ ಮನೆಗೇ ತಂದು ಕೊಡುವುದರಿಂದ ನಡೆದು ಹೋಗುವ ಅವಕಾಶ ತಪ್ಪಿತು. ಜೊತೆಗೆ ಮನಸ್ಸು ಹಗುರಾಗುವ ಕ್ಷಣಗಳನ್ನೂ ಕಸಿದುಕೊಂಡಿತು. ಮೈಲ್ ಬಾಕ್ಸ್ ತುಂಬಾ ಕೆಲಸಕ್ಕೆ ಬಾರದ (ಜಂಕ್) ಪತ್ರಗಳು ದೊಡ್ಡದೊಡ್ಡ ಲಕೋಟೆಯಲ್ಲಿ, ಹೊತ್ತು ತಂದು ರೀಸೈಕಲ್‌ಗೆ ಎಸೆಯಬೇಕು. ಇದು ಒಂದು ಬೇಡವಾದ ಕೆಲಸವಾದಂತಾಗಿದೆ. ಮೈಲ್ ಚೆಕ್ ಮಾಡಲು ಯಾವ ಉತ್ಸಾಹವೂ ಇಲ್ಲ, ಕಾತರವೂ ಇಲ್ಲದಂತಾಗಿದೆ. ಇದರಿಂದಾಗಿ, ಒಂದು ಅಮೂಲ್ಯವಾದ ವಸ್ತುವನ್ನು ಕಳೆದುಕೊಂಡಂತಾಗಿದೆ.

ಮೈಲ್ ಏನ್ ಬಂತು ಅಂತ ಇವರು ಇನ್ನೊಂದು ಸಾರಿ ಕೇಳಿದ ಮೇಲೇ ನಾನು ನೆನಪಿನ ಸುರುಳಿಯಿಂದ ಹೊರಬಂದಿದ್ದು. ಕಾಗದಗಳ ಕಥೆ ಇದಾದರೆ, ಜನರನ್ನು (ಬಂಧು, ಮಿತ್ರರನ್ನು) ಭೇಟಿ ಮಾಡುವ ಪರಿಯೇ ಬದಲಾಗಿದೆ. ಮೊದಲಿನಂತಿಲ್ಲ ಈಗ. ಮೊದಲಾದರೋ, ಪೇಟೆಗೆ, ಮಾರುಕಟ್ಟೆಗೆ, ಎಲ್ಲಿಗೆ ಹೋದರೂ ಅಲ್ಲೇ ಹತ್ತಿರ ಇರುವ ಆತ್ಮೀಯರನ್ನು ನೋಡಿ, ಮಾತಾಡಿಸಿ, ಪರಸ್ಪರ ವಿಚಾರ ವಿನಿಮಯ ಮಾಡಿ, ನಕ್ಕು, ಕಾಫಿ, ಚಹ ಕುಡಿದ ನಂತರವೆ ಅಲ್ಲಿಂದ ಕಾಲ್ತೆಗೆಯುತ್ತಿದ್ದಿದ್ದು. ಕೆಲವೊಮ್ಮೆ ನಾವು ಹೋದ ಉದ್ದೇಶವನ್ನೂ ಸಹ ಮರೆತು ಸ್ನೇಹಿತರೊಡಗೂಡಿ ಸವಿಯಾದ ಸಮಯವನ್ನು ಕಳೆದು ಬಂದದ್ದೂ ಅಚ್ಚರಿಯ ಸಂಗತಿಯಾಗಿರಲಿಲ್ಲ. ಅಮ್ಮನೇ ಎಷ್ಟೋ ಸಾರಿ, "ಅಣ್ಣನಿಗೆ ಕಾಫಿ ಪುಡಿ ತರಲು ಕಳಿಸಿದ್ದೆ, ಒಲೆಯ ಮೇಲೆ ನೀರು ಕುದಿತಾ ಇದೆ, ನೀನೇ ಹೋಗಿ ಅವರ ಕೈಯಿಂದ ಕಾಫಿಪುಡಿ ಇಸ್ಕೊಂಡು ಬಾ. ಯಾರೋ ಸಿಕ್ಕಿರ್ತಾರೆ, ಅದಕ್ಕೇ ಇನ್ನೂ ಬರಲಿಲ್ಲ ಅಂತ ಕಾಣತ್ತೆ" ಅನ್ನುತ್ತಿದ್ದರು. ಇದು ಮಾಮೂಲಿಯ ವಿಷಯವಾಗಿತ್ತು. ಈಗ ಜನ ಮಾತಾಡೋಕೆ ಸಿಗೋದೇ ತುಂಬಾ ಅಪರೂಪ, ಅಪಾಯಿಂಟ್ಮೆಂಟ್ ತಗೊಂಡೇ ಆದರೂ. ಒಬ್ಬರ ಮನೆಗೆ ಇನ್ನೊಬ್ಬರು ಕಾಲ್ ಮಾಡಿ ಮಾತಾಡದೇ, ಅನುಮತಿ ಇಲ್ಲದೇ ಹೋಗುವಂತಿಲ್ಲ. ಅಪ್ಪಿತಪ್ಪಿ ಹೋದರೂ ಅವರನ್ನು ಭೇಟಿ ಮಾಡುವಂತಿಲ್ಲ. ಇದು ಸ್ನೇಹಿತರಿಗಷ್ಟೇ ಅಲ್ಲ, ಬಂಧು–ಮಕ್ಕಳಿಗೂ ಅನ್ವಯವಾಗಿದೆ. ನಾವೆಲ್ಲ ಈಗ ಒಂದು ತರಹ ಯಾಂತ್ರಿಕತೆಯ ಜೀವನ ನಡೆಸುತ್ತಿದ್ದೇವೆ ಎಲ್ಲ ವಿಷಯಗಳಲ್ಲೂ ಎಂಬುದು

ಒಂದು ವಿಪರ್ಯಾಸವೇ ಸರಿ. ಮನಸ್ಸಿಗೆ ಮುದ ನೀಡಿ, ಮನೋಲ್ಲಾಸ ಪಡೆಯುವಂತಹ ಕ್ಷಣಗಳಿಗೆ ಕಾಲಾವಕಾಶ ಮಾಡಿಕೊಳ್ಳದೇ ಕತ್ತರಿ ಹಾಕಿ, ಮನೋರೋಗವನ್ನು ಬರಮಾಡಿಕೊಂಡು, ಅದರ ನಿವಾರಣೆಗೆ ಮದ್ದನ್ನು ಹುಡುಕುತ್ತಿರುವುದು ಮರಳಗಾಡಿನಲ್ಲಿ ನೀರಿಗೆ ಹುಡುಕುವಂತಾಗಿದೆ. ಇದೊಂದು ಅವನತಿಯ ಬದಲಾವಣೆ ಎಂದರೆ ತಪ್ಪಾಗಲಾರದು ಎಂದು ನನ್ನ ಅನಿಸಿಕೆ.

ಮೊದಲಿನ ಜೀವನ ಒಂದು ಸ್ವಲ್ಪಕ್ಕಾದರೂ ತ್ಯಾಗಮಯವಾಗಿತ್ತು. ಎಲ್ಲರಲ್ಲೂ ಸಹೃದಯತೆ ಮನೆಮಾಡಿತ್ತು. ಆದಲ್ಲಿ, ಉಳ್ಳಲ್ಲಿ, ಸಹಾಯವೆಸಗುವುದು ಸರ್ವೇ ಸಾಮಾನ್ಯವಾಗಿತ್ತು. ಉಪ್ಪು ತಿಂದಲ್ಲಿಗೆ ವಂಚಕತನ ತೋರಿಸುತ್ತಿರಲಿಲ್ಲ. ಹಿರಿಯರು ಇದನ್ನು ಮಾಡಿ ತೋರಿಸಿ ಮಕ್ಕಳಿಗೆ ಕಲಿಸುತ್ತಿದ್ದರು. ಮುಂದಿನ ಪೀಳಿಗೆಗೆ ಕಲಿಸುವ ಯೋಗ್ಯತೆಯನ್ನು ಈಗಿನವರು ಸಂಪೂರ್ಣವಾಗಿ ಪಡೆದಿಲ್ಲ ಎಂಬುದು ಒಂದು ವಿಷಾದಕರವಾದ ಸಂಗತಿಯಾಗಿದೆ.

ಸಂಬಂಧಗಳ ಕೊಂಡಿ ನಿಧಾನವಾಗಿ ಕಳಚಿಕೊಳ್ಳುತ್ತಿದೆ. ಜನರಷ್ಟೇ ಏಕೆ, ತಮ್ಮ ಒಡಹುಟ್ಟಿದ ಸಂಬಂಧಿಗಳನ್ನೂ ಸಹಿಸಿಕೊಳ್ಳುವ ಸೌಜನ್ಯ ಮತ್ತು ಚೈತನ್ಯ ನಮ್ಮೆಲ್ಲರಲ್ಲಿ ಕಾಣೆಯಾಗುತ್ತಿದೆ. ಹುಡುಕಿದರೂ ಸಿಗುವಂತಿಲ್ಲ. ನಮ್ಮ ಕಷ್ಟಗಳನ್ನೆಲ್ಲಾ ಮನಸ್ಸಿನಲ್ಲೇ ಇಟ್ಟು, ಸಾಕಿ, ನೋಡಲು ಆನಂದವಾಗಿದ್ದೇವೆ ಎನ್ನುವ ಅಭಿಪ್ರಾಯವನ್ನು ಬೇರೆಯವರಿಗೆ ಬರಿಸುವುದೇ ಒಂದು ಚಮತ್ಕಾರದ ನಟನೆಯಾಗಿದೆ ಬದುಕಿನಲ್ಲಿ. ಸಣ್ಣ ವಿಷಯಗಳಿಗೆ ನೆಂಟರು – ಇಷ್ಟರ ಜೊತೆ ಕಾದಾಡಿ ಸಂಬಂಧಗಳಿಗೆ ಕಡಿವಾಣ ಹಾಕುತ್ತಾ, ನಮ್ಮ ದೊಡ್ಡಸ್ತಿಕೆಯನ್ನು ಕಾಪಾಡಿಕೊಳ್ಳುವುದೇ ಮುಖ್ಯ ಎಂದು ತಿಳಿದಿರುವುದು ತಪ್ಪಾಗಿದೆ. ಇದರ ಪರಿಣಾಮ ನೂರಾರು ಕಷ್ಟಗಳನ್ನು ನಮ್ಮಷ್ಟಕ್ಕೆ ನಾವೇ ಬರಮಾಡಿಕೊಂಡಿದ್ದೇವೆ. ಯಾರ ಮುಂದೆಯೂ ಕೈಚಾಚದೇ, ಇರುವಷ್ಟರಲ್ಲೇ ನೆಮ್ಮದಿಯ ಬಾಳನ್ನು ಬದುಕಿದರೆ ಅದು ಸಾರ್ಥಕವಾದ ಬದುಕಲ್ಲವೇ? ಆಗ ಆನಂದವೂ, ಮನಸ್ಸಿಗೆ ನೆಮ್ಮದಿಯೂ ತಾನೇ ತಾನಾಗಿ ಅನುಸರಿಸುತ್ತದೆ. ನಮ್ಮ ಪೂರ್ವಜರು ಹೀಗೆ ಸಾಮಾನ್ಯವಾದ, ಸಂತೋಷದ ನೆಮ್ಮದಿಯ ಬಾಳನ್ನು ಈ ತರಹ ಆಧುನಿಕತೆಯ ಸೌಕರ್ಯ ಇಲ್ಲದಿದ್ದರೂ ಬಾಳಿ ತೋರಿಸಿದವರು. ನಮಗೆ ಈ ಕಾಲದಲ್ಲಿ ಸಿಗುವ ಸೌಕರ್ಯಗಳನ್ನೆಲ್ಲಾ ಉಪಯೋಗಿಸಿ ಸಂತೋಷದ, ನೆಮ್ಮದಿಯ ಜೀವನ ನಡೆಸುವುದು ನಾವಿನ್ನೂ ಕಲಿಯಬೇಕಾಗಿದೆ. ಕಾಲ ಬದಲಾಗಿ, ಸೌಕರ್ಯಗಳು ಬೆಳೆದಿರುವುದನ್ನು ಸದುಪಯೋಗಿಸಿಕೊಂಡು (ಕಾಲಾಯ ತಸ್ಮೈ ನಮಃ ಎಂದು) ಬದುಕು ನಡೆಸುವುದು ಉನ್ನತಿ ಎಂದೆನಿಸಿಕೊಳ್ಳುತ್ತದೆ. ಇಲ್ಲದಿದ್ದರೆ, ಅವನತಿಗೆ ಕಾರಣವಾಗಬಹುದು.

*

# ಬಪ್ಪುದೇ ಒಪ್ಪುದು

■ **ಅನಿಲ್ ದೇಶಪಾಂಡೆ,** Palatine, IL.

ಎಲ್ಲರಂತೆ ನಾನೂ ಅನೇಕ ಬಾರಿ ಬದುಕನ್ನು ಗ್ರಹಿಸಲು ಪ್ರಯತ್ನಿಸಿರುವೆ. ಆದರೆ ನನ್ನ ಗ್ರಹಿಕೆಗಿಂತಲೂ ಅಗಾಧವಾದುದು ಎನ್ನಿಸಿದೆ. ಅಲ್ಲಿ, ಇಲ್ಲಿ ಒಂದು ಚೂರು ಅರಿತಂತೆ ಅನ್ನಿಸಿದರೂ ಪೂರ್ಣ ಪ್ರಮಾಣದ "ಇದು ಹೀಗೆ" ಅನ್ನುವಂತೆ ಅರ್ಥವಾಗಿಲ್ಲ ! ಏನೋ ಕೆಲವೊಂದು ಆಯಾಮಗಳು (dimensions) ಹೊಳೆದಿರಬಹುದು. ವೈದಿಕ ಸಾಹಿತ್ಯದಲ್ಲಿ ಭಗವಂತನ ವರ್ಣನೆಯಂತೆ, ಬದುಕೂ ಕೂಡ "ಸಹಸ್ರಾಕ್ಷ ಸಹಸ್ರಪಾತ್". ಒಮ್ಮೆ ಜೀವನ "ಪಾಠ ಶಾಲೆ" ಎನ್ನಿಸಿದರೆ, ಇನ್ನೊಮ್ಮೆ "ನಶ್ವರ" ಎನ್ನಿಸಿದ್ದಿದೆ. ಮತ್ತೊಮ್ಮೆ "ಸುಂದರ", "ಕಠಿಣ", "full of compromises" ಇನ್ನೂ ಏನೇನೊ ಅನ್ನಿಸಿದ್ದಿದೆ. ಸಂದರ್ಭಾನುಸಾರ ಬದಲಾವಣೆ ಆಗುತ್ತದೆ. ಹಾಗೆ ನೋಡಿದರೆ ನಿರಂತರ ಬದಲಾವಣೆಯೇ ಬದುಕು ಅಂದರೂ ಸರಿಯೆ! ಇಷ್ಟೆಲ್ಲಾ ಯೋಚಿಸುವ ಈ ಮಾನವ ಕೂಡ ಮಂಗನಿಂದ ಬದಲಾವಣೆಯಾಗಿ (ವಿಕಾಸ) ಮಾನವನಾಗಿದ್ದಲ್ಲವೆ? ಜೀವ ಹಾಗು ನಿರ್ಜೀವ ಎಲ್ಲ ವಸ್ತುಗಳಿಗೂ ಬದಲಾವಣೆ ಅನಿವಾರ್ಯ ಮತ್ತು ನಿರಂತರ. ಪ್ರತಿ ಅಣುವಿನಲ್ಲಿ ನಿರಂತರ ಚಲನೆ ಇರುತ್ತದಂತೆ. ಹಾಗೆ ಮಹತ್ತಿನಲ್ಲೂ ಈ ಭೂಮಿ, ಸೂರ್ಯ, ಚಂದ್ರ– ಇಡಿ ಖಗೋಳವೇ ನಿರಂತರ ಚಲನೆಯಲ್ಲಿದೆ. ಅದೇ ರೀತಿ ಈ ಮನಸ್ಸೂ ಕೂಡ ಹುಟ್ಟಿನಿಂದ ಸಾಯುವವರೆಗೂ ನಿರಂತರ ಯೋಚನೆಯಲ್ಲಿರುತ್ತದೆ. ಯೋಚನೆಗಳು ಬದಲಾಗುತ್ತಿರುತ್ತವೆ. "ಕಾಲವು" ಬದಲಾವಣೆಗೆ ಸಾಪೇಕ್ಷವಾಗಿ ನಿಲ್ಲುತ್ತದೆ. ಆದರೆ ನಾವು "ಕಾಲ ಬದಲಾಯಿತು" ಎನ್ನುತ್ತೇವೆ. ನಿಜವಾಗಿ ಬದಲಾದದ್ದು ಕಾಲವೆ? ಕಾಲಕ್ಕೆ ಅನ್ವಯಿಸಿ ವಸ್ತು ಸ್ಥಿತಿ ಬದಲಾಗುವದು. ಪರಿಸ್ಥಿತಿಗೆ ತಕ್ಕಂತೆ ನಮ್ಮ ಪ್ರತಿಕ್ರಿಯೆ ಬದಲಾಗುವದು. ಅನಿವಾರ್ಯವಾದ ಈ ಬದಲಾವಣೆ ಯಾರನ್ನೂ ಬಿಡುವದಿಲ್ಲ. ವಸ್ತು, ವ್ಯಕ್ತಿ, ಸಮಾಜ, ಕಂಪನಿ, ದೇಶ ಇತ್ಯಾದಿ ಯಾವುದನ್ನೂ ಬದಲಾವಣೆ ಮಣಿಸದೆ ಬಿಟ್ಟಿಲ್ಲ. KODAK, Xerox, Block Buster, Motorolaನಂಥ ಮಹಾ ಕಂಪನಿಗಳು, ಕಾಲಕ್ಕೆ ತಕ್ಕಂತೆ ಬದಲಾಗದೆ ಸರಿದು

ಹೋದವು. ಬದುಕಬೇಕೆಂದರೆ ಬದಲಾಗಲೇಬೇಕು. ಇಲ್ಲವೇ ನಶಿಸಬೇಕು. ಭಾರತದಂಥ ಸಮೃದ್ಧ ದೇಶ–ಕಾಲಕ್ಕೆ ತಕ್ಕಂತೆ ಬದಲಾಗಿ ಒಗ್ಗಟ್ಟಾಗಿ ಹೋರಾಡದೆ ನೂರಾರು ವರುಷಗಳ ಕಾಲ ಗುಲಾಮಗಿರಿ ಅನುಭವಿಸಬೇಕಾಯಿತು. ಇಂಥ ಉದಾಹರಣೆಗಳಿಂದ ಪಾಠ ಕಲಿಯುವುದಿದೆ. ಋತುಗಳು ಬದಲಾಗದಿದ್ದರೆ, ಕಾಲಕ್ಕೆ ತಕ್ಕಂತೆ ಮಳೆ, ಬಿಸಿಲು ಬಾರದೆ ಇದ್ದರೆ ಬೆಳೆ ಬೆಳೆಯುವದಿಲ್ಲ, ಮನೆಯಲ್ಲಿ ಬೇಳೆ ಬೇಯುವದಿಲ್ಲ. ಹೀಗಾಗಿ ಬದಲಾವಣೆ ಬದುಕಿಗೆ ಚಾಲಕ ಶಕ್ತಿಯೂ ಕೂಡ. ಬದಲಾವಣೆಯನ್ನು ಬಯಸುವದಕ್ಕೂ, ಬದಲಾವಣೆಗೆ ಒಪ್ಪುವದಕ್ಕೂ ವ್ಯತ್ಯಾಸವಿದೆ. ಬಯಸಿದ ಬದಲಾವಣೆ ಸಂತೋಷ, ನೆಮ್ಮದಿ ಕೊಡಬಹುದು. ಒಪ್ಪದ ಬದಲಾವಣೆ ಬೇಜಾರು ತರಿಸಬಹುದು. ಆದರೆ ಅದು ಬದಲಾವಣೆಯ ತಪ್ಪಲ್ಲ ಅಲ್ಲವೆ? "ಬಾರದು ಬಪ್ಪುದು, ಬಪ್ಪುದು ತಪ್ಪದು" ಎನ್ನುವ ಶರಣರ ವಾಕ್ಯಕ್ಕೆ ಇನ್ನೊಂದು "ಬಪ್ಪುದೇ ಒಪ್ಪುದು" ಎನ್ನುವ ಸಾಲನ್ನು ಸೇರಿಸಿ ಬದಲಾಯಿಸಬೇಕು. ಇದೂ ಕೂಡ ಬದಲಾವಣೆಯೇ! ಎಲ್ಲ ಬದಲಾವಣೆಗೆ ಒಪ್ಪಿದ ಮನಸ್ಸು ಸದಾನಂದದ ಮನಸು. ಇದು ಬದಲಾವಣೆಯಿಂದ ನಾವು ಕಲಿಯಬೇಕಾದ ಅಧ್ಯಾತ್ಮದ ಪಾಠ! ಅಧ್ಯಾತ್ಮ ಸಾಧನೆಗೆ ಬದಲಾವಣೆ ಸಾಧನ. ಆಗ ಬದುಕು ಬಂಗಾರ.

ಇತ್ತೀಚಿನ ತಾಂತ್ರಿಕ ಬದಲಾವಣೆಗಳು ನಮ್ಮ ಅನುಭವಕ್ಕೂ ಮೀರಿ ವೇಗದಿಂದ ಸಾಗಿವೆ. ಕಾಲು ನಡಿಗೆಯಿಂದ ಕುದುರೆ ಸವಾರಿ, ಜಟಕಾ ಬಂಡಿ, ಬಸ್ಸು, ಕಾರು, ವಿಮಾನ... ಈ ರೀತಿ ಸಾರಿಗೆ ಸಾಧನಗಳಲ್ಲಾದ ಬದಲಾವಣೆಗಿಂತ, Electronic ಮಾಧ್ಯಮದಲ್ಲಿ ತೀವ್ರ ಬದಲಾವಣೆ ಕಾಣಬಹುದು. ಉದಾಹರಣೆಗೆ ಧ್ವನಿಮುದ್ರಣ (Audio recording)ದ ತಂತ್ರಜ್ಞಾನದ ಬದಲಾವಣೆಗಳು: Paleo phone, gram phone, Wax Cylinder, flat disc, cassettes, CD, mp3, ipod, podcast... ಹೀಗೆ ಒಂದು ಆವಿಷ್ಕಾರ ಮಾರುಕಟ್ಟೆಗೆ ಬರುವ ಹಿಂದೆಯೇ ಇನ್ನೊಂದು ಬಂದಾಗಿದೆ! ಈ ತೀವ್ರ ಬದಲಾವಣೆಗೆ ನಾವು ಹೇಗೆ ಸ್ಪಂದಿಸಿದೆವು ಎನ್ನುವದನ್ನು ಒಮ್ಮೆ ತಿರುಗಿ ನೋಡುವಾಸೆ ನನ್ನದು. ಈ ಸೃಷ್ಟಿಯ ಹುಟ್ಟಿನಿಂದ ಪ್ರಾರಂಭವಾದ ಬದಲಾವಣೆ ನನ್ನ ಅನುಭವಕ್ಕೆ ಬರುವದು ನನ್ನ ಹುಟ್ಟಿನಿಂದ ಮಾತ್ರ ಅಲ್ಲವೆ? ಉಳಿದದ್ದೆಲ್ಲ ಗಳಿಕೆಯ ಜ್ಞಾನ. ಈ ೫೦ ವರ್ಷಗಳಲ್ಲಾದ ಬದಲಾವಣೆಗಳೆಲ್ಲವನ್ನೂ ಟಿಪ್ಪಣಿ ಮಾಡಲು ಸಾಧ್ಯವಿಲ್ಲ. ಅದರ ಬದಲು ನನ್ನ ಬದುಕಿನ ಯಾತ್ರೆಯ ಮೈಲುಗಲ್ಲುಗಳನ್ನು ಗುರುತಿಸುತ್ತಾ ಹೋದರೆ ಅದರ ಜೊತೆಗೆ ಬದಲಾವಣೆಗಳನ್ನು ಮತ್ತು ನಾವು ಸ್ಪಂದಿಸಿದ ರೀತಿಯನ್ನು ಅರಿಯಬಹುದು. ಬದಲಾವಣೆಯ ಕಥೆ ಕೂಡ ರೋಚಕ ಅನ್ನಿಸಬಹುದು.

ನನ್ನ ಕಥೆ ಪ್ರಾರಂಭಿಸುವ ಮೊದಲು ಹೇಳಬೇಕಾದ ಮಾತು: ಈ ಮೊದಲೇ ಹೇಳಿದಂತೆ ನಾನು ನನ್ನ ಬದುಕನ್ನು ಯಾವುದೇ ಹಂತದಲ್ಲಿ ಹಿಂತಿರುಗಿ ನೋಡಿದಾಗಲೂ "ಇಂದಿನಕ್ಕಿಂತ ಹಿಂದೆ ಚೆನ್ನಾಗಿತ್ತು" ಅಂತ ಎಂದೂ ಅನ್ನಿಸಿಲ್ಲ! "ಹಿಂದಿನದೂ ಚೆಂದ, ಈಗಿನದು ಅದಕ್ಕಿಂತ ಚೆಂದ" ಅಂತ ಅನ್ನಿಸಿದ್ದೇ ಜಾಸ್ತಿ. ಅದು ನಾನು ಬದಲಾವಣೆಗೆ

ಸ್ಪಂದಿಸುವ ಬಗೆ ಇರಬಹುದು. ಆದರೆ ಈಗಿನದ್ದು ಇನ್ನೂ ಚೆನ್ನಾಗಿರಬಹುದಿತ್ತೇನೋ ಎನ್ನುವ ಭಾವ ಬಂದುದು ಇದೆ, "ಇಷ್ಟು ದೊರಕಿದರೆ ಇನ್ನಷ್ಟು ಬೇಕೆಂಬಾಸೆ, ಕಡು ಸುಖವ ಕಾಂಬಾಸೆ" ಎನ್ನುವಂತೆ.

ನನ್ನ ನೆನಪಿನ ಆಳಕ್ಕೆ ಇಳಿದಂತೆ ನೆನಪೆಲ್ಲ ಮಸುಕು ಮಸುಕು! ಕಾರಣ ನನ್ನ ಹಳ್ಳಿಯಲ್ಲಿ ವಿದ್ಯುತ್ ಇನ್ನೂ ಬಂದಿರದ ಕಾಲವದು! ಅದು ಬಂದ ಮೇಲೂ ಊರಲ್ಲಿ ಹೆಚ್ಚು ಇರಲಿಲ್ಲ. ಮಧ್ಯಾಹ್ನವೆಲ್ಲ ಆಟ ಆಡಿ ಕತ್ತಲಾಗುವ ಮುಂಚೆ, ಗೋಧೂಳಿ ಹೊತ್ತಿಗೆ ಅಂದರೆ ದನಗಳು ತಮ್ಮ ಮನೆ ಸೇರುವ ಹೊತ್ತಿಗೆ ನಾನು ನಮ್ಮ ಮನೆ ಸೇರಲು ಹೊರಡುತ್ತಿದ್ದೆ. ದಾರಿಯಲ್ಲಿ ಬರುವಾಗ ನಮ್ಮ ಆಕಳು, ಎಮ್ಮೆಕರುಗಳನ್ನು ಕಂಡರೆ ಏನೋ ಸಂಭ್ರಮ. ಅವುಗಳ ಬಾಲವನ್ನು ತಿರುವಿದೊಡನೆ ಅವು ಓಡುತ್ತಿದ್ದವು, ಅದರೊಂದಿಗೆ ನಮ್ಮ ಓಟ, ಅದುವೆ ನಮಗೆ ಆಟ. ಓಟದೊಂದಿಗೆ ಮಣ್ಣಿನ ರಸ್ತೆಯಲ್ಲಿ ಏಳುವ ಧೂಳಿನ ಮೋಡದಲ್ಲಿ ನಾರದನಂತೆ ನಾವು. ಆಟ ಆಡಿದ್ದರಿಂದ ಬೆವರಿ ನಾರುವ ನಾವು, ನಾರದರೆ ಸರಿ. ಇವತ್ತಿಗೂ ಆ ಗೋಧೂಳಿನಲ್ಲಿ ಓಡಿದ್ದು ನೆನಪಾದರೆ, ಹವಾ ನಿಯಂತ್ರಿತ ಮನೆಯಲ್ಲಿ ಕುಳಿತಿರುವ ನನ್ನ ಮನ ಪುಳಕಗೊಳ್ಳುತ್ತದೆ. ಅಮೇರಿಕೆಯಲ್ಲಿ ಗೋವುಗಳು ಕಾಣೆ, ಧೂಳು ಕಾಣೆ. ನನ್ನ ನೆನಪಿನಂತೆ ನಮ್ಮ ಮನೆಯಲ್ಲಿ ಆಗ ಮೂರು ಆಕಳುಗಳು, ಎರಡು ಕರುಗಳು, ಒಂದು ಎಮ್ಮೆ ಅದಕ್ಕೊಂದು ಕರು (ಎಮ್ಮೆ ಕರು). ಆದರೆ ಆಕಳು ಎಮ್ಮೆಗಳಿಗೆ ಭೇದಭಾವ ಇರಲಿಲ್ಲ. ಎಲ್ಲವು ಒಟ್ಟಿಗೆ ಇರುವವು. ಅಲ್ಪಸಂಖ್ಯಾತರೆನ್ನುವ ಭಾವನೆಯಾಗಲಿ, ಮೀಸಲಾತಿಯಾಗಲಿ, ಕಪ್ಪು-ಬಿಳುಪೆನ್ನುವ ಭೇದವಾಗಲಿ ಇರಲಿಲ್ಲ. ಬಹುಶಃ ಅವು ಕೊಡುವ ಹಾಲೆಲ್ಲ ಬಿಳುಪಾಗಿದ್ದರಿಂದ ಇರಬಹುದೇನೊ? ಆ ಆಕಳು, ಎಮ್ಮೆಕರುಗಳೊಂದಿಗೆ ಮನೆಗೆ ಓಡಿಬರುವ ನಾನು ಮತ್ತು ನನ್ನ ಅಣ್ಣ, ನಾ ಮೊದಲು ಆಕಳು ಕಟ್ಟಬೇಕೆನ್ನುವ ಅವಸರದಲ್ಲಿ ಚಿಕ್ಕದಾದ ಕೊಟ್ಟಿಗೆ ಬಾಗಿಲೊಳಗೆ ಕರುವಿನೊಂದಿಗೋ ಆಕಳದೊಂದಿಗೋ ನುಗ್ಗಿ, ಬಾಗಿಲಲ್ಲಿ ಸಿಕ್ಕಿಬಿದ್ದು ಒದ್ದಾಡಿದ್ದಿದೆ. ಕೆಲವೊಮ್ಮೆ ಅವುಗಳ ಗೊರಸಿನಿಂದ ಕಾಲು ತುಳಿಸಿಕೊಂಡು ಅತ್ತದ್ದೂ ಇದೆ. ಆಕಳನ್ನು ಕಟ್ಟಿ ಗೋದಲಿಗೆ ಮೇವು ಹಾಕುವದು, ಹಾಳು ಮಾಡದೆ ಹಿಡಿದಿಟ್ಟ (recycled) ಕಲಗಚ್ಚಿನ ನೀರನ್ನು ದನಗಳಿಗೆ ಕುಡಿಯಲು ಹಾಕುವದು, ಅವುಗಳನ್ನು ನೋಡುತ್ತ ಕೂಡುವದು ನಮಗೊಂದು ಸಂಭ್ರಮದ ಆಟ. ನೀರಡಿಸಿದ ದನಗಳು ಸುರ್ ಎಂದು ನೀರನ್ನು ಹೀರುವುದನ್ನು ನೋಡಲು ಮೋಜು. ನೀರು ಮುಗಿದಾಗ ಇನ್ನಷ್ಟು ಬೇಕೆನ್ನುವಂತೆ ನನ್ನ ಕಾಲನ್ನು ತನ್ನ ಅಳಿದುಳಿದ ಮುಸುರೆ ನೀರು ತೊಟ್ಟಿಕ್ಕುವ ನಾಲಗೆಯಿಂದ ಆಕಳು ನೆಕ್ಕುವಾಗ, ಏನೋ ಕಚಗುಳಿ ಇಟ್ಟಂತೆ, ಅದೊಂದು ಮಧುರ ಕ್ಷಣ. ಭಾಷೆಗೂ ಮೀರಿದ ಮೌನ ಸಂಭಾಷಣೆ. ಇದೆಲ್ಲ ಮುಗಿಸಿ ಮನೆ ಒಳಗೆ ಹೋಗಬೇಕೆಂದರೆ ಬೇಜಾರು. ಒಳಗೆ ಹೋದರೆ ಓದಬೇಕಲ್ಲವೆ? ಒಳಗೆ ಹೋದಾಗ ಸಾಯಂಕಾಲ ದೀಪ ಹಚ್ಚಲು ಅಮ್ಮ ಕಂದೀಲುಗಳ ಗಾಜಿನ ಪಾವಿಗೆ ಅಂಟಿದ ಕಪ್ಪು ತೆಗೆಯುವದು, ಕಂದೀಲಿಗೆ ಸೀಮೆ ಎಣ್ಣೆ ತುಂಬುವಲ್ಲಿ ನಿರತಳಾಗಿರುವಳು.

ಅವಳಿಗೆ ಸಹಾಯ ಮಾಡಲು ಮುಂದಾಗಿ, ಮತ್ತೆ ಅರ್ಧಗಂಟೆ ಓದನ್ನು ಮುಂದೆ ಹಾಕಲು ಪ್ರಯತ್ನಿಸುತ್ತಿದ್ದೆವು. ದೀಪ ಹಚ್ಚಿದ ನಂತರ ಅದರ ಮುಂದೆ ಓದಲು ಕುಳಿತರೆ ನಿದ್ದೆಯ ಕಾಟ. ಎಷ್ಟೋ ಬಾರಿ ಹಾಗೆ ಕಂದೀಲಿನ ಮುಂದೆ ಮಲಗಿದ್ದುಂಟು. ಅಮ್ಮ ಎಬ್ಬಿಸಿ ಊಟಕ್ಕೆ ಹಾಕಿದ ನಂತರ, ಹೋಗಿ ಅಜ್ಜಿಯನ್ನು ಅಪ್ಪಿ ಮಲಗಿದರೆ ಸ್ವರ್ಗ ಸುಖ. ಅಜ್ಜಿ ಹೇಳುವ ರಾಜ-ರಾಣಿ ಕಥೆ ಅಥವಾ ಗುಡ್ಡದ ಮೇಲಿನ ರಾಕ್ಷಸನ ಕಥೆ ಕೇಳುತ್ತ ಮಲಗಿದರೆ ಸಂತೃಪ್ತ ಭಾವನೆ. ಆದರೆ ಈಗ ಊರಿಗೆ ವಿದ್ಯುತ್ ಬಂದಿದೆ, fanದಿಂದ ಹಿಡಿದು mobile phoneಗಳವರೆಗೆ ನೂರಾರು ವಿದ್ಯುತ್ ಉಪಕರಣಗಳು ಬಂದಿವೆ. ಬದುಕಿನಲ್ಲಿ ಕಷ್ಟಪಡುವ ಅವಶ್ಯಕತೆ ಇಲ್ಲ. ಈಗ ಆಕಳುಗಳಿಲ್ಲ, ಎಮ್ಮೆಗಳಿಲ್ಲ ಅವುಗಳ ಕರುಗಳಿಲ್ಲ. ಆದರೆ Fridge ತುಂಬ packet ಹಾಲುಗಳಿವೆ. ಆಕಳು ಕಟ್ಟುವ ಕೊಟ್ಟಿಗೆ ತೆಗೆದು ಈಗ ಪ್ರತಿಯೊಬ್ಬರಿಗೆ ಒಂದರಂತೆ ಮಲಗುವ ಕೊಠಡಿ ಮಾಡಲಾಗಿದೆ. ಅಜ್ಜಿಯ ಕೋಣೆಯೇ ಬೇರೆ, ಮಕ್ಕಳ ಕೋಣೆಯೇ ಬೇರೆ. ಅಪ್ಪಿಕೊಂಡು ಮಲಗುವ ಅವಶ್ಯಕತೆ ಇಲ್ಲ, ಆ ಮನಸ್ಸೂ ಇಲ್ಲ. ಕಥೆ ಕೇಳಬೇಕೆನ್ನಿಸಿದರೆ, ಒಂದಲ್ಲ ನೂರಾರು ಕಥೆಗಳನ್ನು ಹೇಳುವ ಜೊತೆಗೆ ಚಿತ್ರಸಹಿತ ತೋರಿಸಲು ಬಣ್ಣದ TV ತಯಾರಿದೆ. ಅಜ್ಜಿ ಮಮ್ಮೊಕ್ಕಳು ಒಟ್ಟಿಗೆ ಮಾತಾಡದೆ ಕುಳಿತು ರಾತ್ರಿಯೆಲ್ಲ ನಿದ್ದೆಗೆಟ್ಟು TV ನೋಡಬಹುದು!! ಇಬ್ಬರಿಗೂ ಮೋಜಿದೆ ಆದರೆ ಆ ಮೋಜಿನಲ್ಲಿ ಸಹಭಾಗಿತ್ವ ಇಲ್ಲ. Cup cakeತರಹದ್ದು full cake ಅಲ್ಲ. ಬದಲಾದದ್ದು ಕಾಲವೋ ಅಥವಾ ಭಾವನೆಯೋ? ನಾನರಿಯೆ.

ಇದೇ ತರಹದ ಅನುಭವವನ್ನು ನಾವು ಹಿಂದೆ ನೀರಿಗಾಗಿ ಪಟ್ಟ ಬವಣೆ ಮತ್ತು ಈಗ ದೊರೆತಿರುವ ನೀರಿನ ಸೌಕರ್ಯ, ಮತ್ತದರಿಂದಾದ ಪರಿಣಾಮಗಳಲ್ಲಿ ಗುರುತಿಸಬಹುದು. ನೀರು ಎಲ್ಲ ಪ್ರಾಣಿಗಳಿಗೂ ಮೂಲಭೂತ ಅವಶ್ಯಕತೆ. ಆದರೆ ನನ್ನೂರಿನ ಕತೆ ಬೇರೆ, ಇಲ್ಲಿ ನೀರಿನ ಮೂಲ ಹುಡುಕುತ್ತ ಒಂದು ಮೈಲಿ ದೂರದ ಕಲ್ಲಿನ ಬೆಟ್ಟದ ಅಡಿಯಲ್ಲಿರುವ ಬಾವಿಗೆ ಹೋಗಬೇಕಾಗುತ್ತಿತ್ತು. ಊರಲ್ಲೊಂದು ಮೂರು ಸುತ್ತಿನ ಕಲ್ಲಿನ ಕೋಟೆ. ವಿಜಯನಗರ ಸಾಮ್ರಾಜ್ಯದ ಕಾಲದ್ದು. ಕೋಟೆ ಒಳಗಡೆ ಒಳ್ಳೆಯ ಸಿಹಿನೀರಿನ ಬಾವಿಗಳಿವೆ. ನೀರಿನ ಸೌಕರ್ಯವಿದೆ. ಕೋಟೆಯ ಹೊರಗೆ ಬಹುಶಃ ಯುದ್ಧಭೂಮಿ ಇತ್ತೇನೊ, ಎಲ್ಲಿ ತೋಡಿದರೂ ಸವಳು ನೀರು. ಆದರೆ ನಿಜಾಮರ ಕಾಲದಲ್ಲಿ ಊರು ಬೆಳೆದದ್ದು ಕೋಟೆಯ ಹೊರಗಡೆಯೇ!! ನಿಜಾಮರಲ್ಲವೆ ಹಾಗಾಗಿ, ಒಳ್ಳೆಯ ಯೋಜನೆ ಮಾಡಿ ಊರು ಕಟ್ಟಿದಂತೆ ಕಾಣೆ. ಊರಲ್ಲಿರುವ ಎಲ್ಲ ಬಾವಿಗಳು ಸವಳು ನೀರಿನವು. ಹೊರಗಿನ ಬಳಕೆಗೆ ಮಾತ್ರ ಉಪಯೋಗ. ಅಡಿಗೆಗೆ ಹಾಗು ಕುಡಿಯಲು ಸಿಹಿ ನೀರಿಗಾಗಿ ಪರದಾಟ. ಊರಿನಿಂದ ಒಂದು ಮೈಲಿ ದೂರ ಬೆಟ್ಟದ ಅಡಿಯ ಬಾವಿಯ ಪಾತಾಳದಲ್ಲೊಂದಿಷ್ಟು ನೀರು. ಬೇಸಿಗೆ ಬಂತೆಂದರೆ ನೀರು ಮಾಯ. ಯಾರು ಬೇಗ ಹೋಗಿ ನೀರು ತರುವರೊ ಅವರಿಗೆ ಅಂದು ಕುಡಿಯಲು ನೀರು, ಇಲ್ಲದಿದ್ದರೆ ಉಪ್ಪು ನೀರೇ ಗತಿ. ಬ್ರಾಹ್ಮಣ್ಯ ಬೇರೆ, ಉಳಿದವರಂತೆ ನೀರು ಮಾರುವವರ ಹತ್ತಿರ ನೀರು

ಕೊಳ್ಳುವಂತಿಲ್ಲ. ಅದು ಮಡಿಗೆ ಬಾರದು. ಅದಕ್ಕೆ ಉಳಿದದ್ದು ಒಂದೇ ಉಪಾಯ; ಮಧ್ಯ ರಾತ್ರಿಯ ನಂತರ ಓಣಿಯಲ್ಲಿಯ ನಾಲ್ಕಾರು ವೀರ ಮಹಿಳೆಯರು ಜೊತೆಯಾಗಿ, ತಮ್ಮ ಮಾತು ಕೇಳುವ ನಾಲ್ಕಾರು ಮಕ್ಕಳನ್ನು ಕರೆದುಕೊಂಡು, ಕೈಯಲ್ಲಿ ಕಂದೀಲು ಹಿಡಿದು ಬಾವಿಗೆ ಪಯಣ ಬೆಳೆಸುವರು. ಆಗಿನ ಕಾಲದಲ್ಲಿ ನೀರು ತರುವದು, ಅಡಿಗೆ ಮಾಡುವದು ಗಂಡಸಿನ ಕೆಲಸ ಅಲ್ಲವಲ್ಲಾ. ಗಂಡು ಅನ್ನಿಸಿಕೊಂಡವರೆಲ್ಲ ಗೊರಕೆಯಲ್ಲಿ ನಿರತರು. ಅದು ಆ ಕಾಲದಲ್ಲಿ. ಆದರೀಗ ಅದೂ ಬದಲಾಗಿದೆಯನ್ನಿ. ಹೀಗೆ ಎಲ್ಲರಿಗಿಂತ ಮೊದಲು ಹೋಗಿ ನೀರು ತರಲು ಹೋದಾಗ, ನಮಗಿಂತ ಮುಂಚೆ ಹೋದ ತಾಯಿ ತನ್ನ ಮಗನನ್ನು ನೀರಿಲ್ಲದ ಇಪ್ಪತ್ತು ಅಡಿ ಆಳದ ಬಾವಿಯಲ್ಲಿ ಇಳಿಸಿರುವಳು, ಅವನು ಸೆಲೆಯಿಂದ ಬರುವ ನೀರನ್ನು ಬಟ್ಟಲಿನಿಂದ ಕೊಡಕ್ಕೆ ಹಾಕುತ್ತ ಬಾವಿಯ ತಳದಲ್ಲಿ ಕುಳಿತಿರುವ. ಇದು ಪ್ರತಿ ಬೇಸಿಗೆಯ ಪಾಡು. ನಾವೇ ಮೊದಲಿಗರು ಎಂದುಕೊಂಡು ಹೋಗಿರುವ ನಮಗೆ ಅದು ಆಘಾತ. ಈಗೇನು ಮಾಡಲು ಸಾಧ್ಯ ಹೇಳಿ. ನನ್ನ ತಾಯಿ ಆ ಮೊದಲು ಬಂದ ಮಹಿಳೆಯೊಂದಿಗೆ "ನಿನ್ನ ಕೊಡ ತುಂಬಿದ ಮೇಲೆ, ನಿನ್ನ ಮಗನಿಗೆ ನನ್ನ ಕೊಡವನ್ನು ತುಂಬಿಸಲು ಹೇಳು" ಎಂದು ದೈನ್ಯದಿಂದ ಕೇಳುವಳು. "ಅದಕ್ಕೇನಂತೆ, ತುಂಬಿಕೊಡುವ" ಎನ್ನುವಳು ಆ ಮಗನನ್ನು ಬಾವಿಗೆ ಇಳಿಸಿದ ಮಹಾತಾಯಿ. "ಏ ಗುರಾಜ, ನಮ್ಮದಾದ ಮೇಲೆ ದೊಡ್ಡಮ್ಮನ ಕೊಡವನ್ನು ತುಂಬಲೆ" ಎನ್ನುವಳು. ಆ ಗುರಾಜ ನನ್ನ ಸಹಪಾಠಿ!! ನಾನು ಅವನನ್ನು ಸಲುಗೆಯಿಂದ ಕೇಳುವೆ. "ಗುರ್ಯಾ, ಒಳಗ ತಣ್ಣಗ ಅದ ಏನಲೆ?" ಅವನು ಕೆಳಗಿಂದಲೆ ಉತ್ತರಿಸುವ "ಮಗನೇ ಬಾವ್ಯಾಗ ಇಳಿ ಗೊತ್ತಾಗ್ತದ". ಕೊಡಗಳು ತುಂಬುವವರೆಗೆ ನಮ್ಮ ಸಂಭಾಷಣೆ. ಬಾವಿಯ ಒಳಗಿಳಿದ ಅವನಿಗೂ ಧೈರ್ಯ. ಇತ್ತ ನಮ್ಮಿಬ್ಬರಿಗೆ ನೀರು ತುಂಬುವ ಕೆಲಸ ಒಪ್ಪಿಸಿ. ತಾಯಂದಿರು ಬಾವಿಕಟ್ಟೆಗೆ ಕುಳಿತು ಗಾಳಿಮಾತುಗಳಲ್ಲಿ ನಿರತರಾಗುವರು. ನಿಮಗೆ ನೆನಪಿರಲಿ ಈ ಥರದ ಘಟನೆ ನಡೆಯುತ್ತಿದ್ದುದು ಬೇಸಿಗೆಯ ಮಧ್ಯರಾತ್ರಿಯಲ್ಲಿ. ಅದೂ ಊರಿನಿಂದ ಒಂದು ಮೈಲಿ ದೂರದ ಬೆಟ್ಟದ ಅಡಿಯ ಬಾವಿಯ ಹತ್ತಿರ. ಆಗೊಮ್ಮೆ ಈಗೊಮ್ಮೆ "ತೋಳ ಬಂದಿತ್ತೆಂದೊ" ಅಥವಾ "ಹಾವು ಕಂಡಿತ್ತೆಂದೊ" ಸುದ್ದಿ ಕೇಳಿದ್ದಿದೆ. ಆದರೆ ಯಾವ ಭಯವು ಇಲ್ಲದ ಬದುಕು ಅದು. Fast forward: ಕಾಲಕ್ಕೆ ತಕ್ಕಂತೆ ಊರು ಬದಲಾಯಿತು ವಿದ್ಯುತ್ ದೊರೆತಂತೆ ಊರಿಗೆ ದೂರದ ಹಳ್ಳದಿಂದ ನೀರು ಸರಬರಾಜು ಮಾಡುವ ವ್ಯವಸ್ಥೆ ಆಯಿತು. ಪ್ರತಿ ಓಣಿಗೆ ಒಂದರಂತೆ ಸಾರ್ವಜನಿಕ ನಳಗಳ ವ್ಯವಸ್ಥೆ ಆಯಿತು. ದಿನಕ್ಕೆ ಬೆಳಗಿನ ಒಂದು ಗಂಟೆ ಮಾತ್ರ ನಳಗಳಲ್ಲಿ ನೀರು ಬಿಡುವ ಪದ್ಧತಿ ಪ್ರಾರಂಭವಾಯಿತು. ಎಲ್ಲರಿಗೂ ಸಂಭ್ರಮವೊ ಸಂಭ್ರಮ. ಶತಶತಮಾನದ ಬವಣೆಗೆ ಅಂದು ಪರಿಹಾರ. ಆದರೆ, ಕೇವಲ ಕುಡಿಯುವ ನೀರಿಗಾಗಿ ಪರದಾಡುತ್ತಿದ್ದ ಜನರು ಈಗ ಸಾಮಾನ್ಯ ಬಳಕೆಗೂ ನಳದ ನೀರನ್ನೆ ಬಳಸತೊಡಗಿದರು. ಏಕೆಂದರೆ ಬಾವಿಗೆ ಹೋಗಿ ಸವಳು ನೀರು ತರುವದಕ್ಕಿಂತ ಮನೆಯ ಪಕ್ಕದಲ್ಲಿ ನಳದಲ್ಲಿ ದೊರೆಯುವ

ನೀರನ್ನು ಹಿಡಿದರಾಯಿತು ಅಲ್ಲವೆ? ಎಲ್ಲರಿಗಿಂತ ಮುಂಚೆ, ನೀರು ಬರುವದಕ್ಕಿಂತ ಮುಂಚೆ ನಳದ ಮುಂದೆ ನಿಂತರಾಯಿತು ನಮ್ಮದೆ ಸಾಮ್ರಾಜ್ಯ! ನೀರಿನೊಂದಿಗೆ ನೀರೆಯರ ಮಧ್ಯ ಜಗಳ ಪ್ರಾರಂಭವಾಯಿತು. ಮೊದಲೇನೊ ಹಂಚಿಕೊಳ್ಳುವ ಅಥವಾ ಪರ್ಯಾಯದ ವ್ಯವಸ್ಥೆ ಮಾಡಿಕೊಂಡರೂ ಓಣಿಯಲ್ಲಿ ದಿನನಿತ್ಯ ನೀರಿಗಾಗಿ ಜಗಳ ನಡೆಯತೊಡಗಿತು. ತಾಯಂದಿರ ಜೊತೆಗೆ ಮಕ್ಕಳು ಗೆಳೆತನ ಮರೆತು ಹಗೆತನ ಬೆಳೆಸಿದರು!! ನೀರು ತರಲಿಕ್ಕೆ ಬಾರದಿದ್ದ ಗಂಡಸರೆಲ್ಲ ಜಗಳಕ್ಕೆ ತಯಾರಾದರು. ದೂರದ ಹಳ್ಳದಿಂದ ನೀರು ಸರಬರಾಜೇನೋ ಆಯಿತು, ಅದರ ಜೊತೆಗೆ ಕದನವು ಕೊಳವೆಗಳಿಲ್ಲದೆಯೇ ಹರಿಯತೊಡಗಿತು. ಈ ರೀತಿ ದಶಕಗಳ ಕಾಲ ಜಲಕ್ಕಾಗಿ ಜಲಜಾಕ್ಷಿಯರ ಜಗಳ ಮನೆ–ಮನಗಳಲ್ಲಿ ನೆಲಸಿತು. "ಯುದ್ಧ ಭೂಮಿ" ತನ್ನ ಶತಮಾನಗಳ ತೃಷೆ ತೀರಿಸಿಕೊಂಡಿತು. ಈಗ ಆ ಬೆಟ್ಟದಡಿಯ ಬಾವಿಗೆ ಹೋಗುವವರಿಲ್ಲ. ನಾನೊಮ್ಮೆ ಸುಮ್ಮನೆ ನೋಡುವ ಎಂದು ಹೋಗಿದ್ದೆ. ಬಾವಿ ತುಂಬ ನೀರಿದೆ. ಬಾಗಿ ತುಂಬಬಹುದು. ಆದರೆ ಕೇಳುವವರಿಲ್ಲ. ದಶಕಗಳ ನಂತರ ಇನ್ನೂ ಹೆಚ್ಚಿನ ವ್ಯವಸ್ಥೆ ಆಯಿತು. ಈಗ ಹತ್ತಿರದಲ್ಲಿ ಕೃಷ್ಣಾ ನದಿಗೆ ಅಣೆಕಟ್ಟಾಗಿದೆ, ಅಲ್ಲಿಂದ ನಮ್ಮೂರಿಗೆ ನೀರು ಸರಬರಾಜಾಯಿತು. ಈಗ ಮನೆಯ ಒಳಗೆ ನಳದ ವ್ಯವಸ್ಥೆ. ಆದರೆ ಅದೂ ಕೂಡ ದಿನಕ್ಕೆ ಒಂದು ಗಂಟೆ. ಜನರೆಲ್ಲ ಮೊದಲು ಮನೆ ಒಳಗೆ ತೊಟ್ಟಿಗಳಲ್ಲಿ ನೀರು ಶೇಖರಿಸುತ್ತಿದ್ದರು. ಈಗ ಮನೆಯ ಮೇಲೆ ಎರಡು over-head tankಗಳನ್ನು ಸ್ಥಾಪಿಸಿ ಮನೆಯ ಒಳಗೆ ಬರುವ ನಳಕ್ಕೆ ಮೋಟಾರು ಹಚ್ಚಿ ನೀರೆಳೆಯ ತೊಡಗಿದರು. ಮೋಟಾರು ವ್ಯವಸ್ಥೆ ಇಲ್ಲದ ಮನೆಯ ಎಲ್ಲಾ ನೀರನ್ನು ಎಳೆದು ಪೈಪೋಟಿಯಲ್ಲಿ overhead tank ತುಂಬಿಸತೊಡಗಿದರು. ಆದರೂ ದಾಹ ತೀರದಾಯ್ತು. ಈ ತೊಂದರೆ ನಿವಾರಿಸಲು, ಪಂಚಾಯತಿಯವರು ನೀರು ಬರುವ ಹೊತ್ತಿನಲ್ಲಿ ಮೋಟಾರುಗಳನ್ನು ಹಚ್ಚದಂತೆ ಮಾಡಲು ವಿದ್ಯುತ್ ತೆಗೆದರು. ಅದಕ್ಕೆ ಜನಗಳು generator ತಂದಿಟ್ಟುಕೊಂಡು ಮತ್ತೆ ನೀರಿನ ಕೊಳವೆಗೆ ಮೋಟಾರು ಹಚ್ಚಿದರು. ಮನೆಯಲ್ಲಿ ನೀರೆಳೆಯುವ ಮೋಟಾರು ಕೆಲಸ ಮಾಡದ ದಿನ, ಕೊಡದಿಂದ ನೀರು ತುಂಬಿ ತೊಟ್ಟಿಗೆ ಹಾಕಬೇಕು. ಈಗಾಗಲೆ ಎಲ್ಲರಿಗೂ ಸೌಲಭ್ಯ ಹೆಚ್ಚಾಗಿ ದೇಹಾಲಸ್ಯ ಬೆಳೆದಿದೆ, ಮನೆಯಲ್ಲಿ ಪ್ರತಿಯೊಬ್ಬರು ಇನ್ನೊಬ್ಬರು ಆ ಕೆಲಸ ಮಾಡಲಿ ಎಂದು ಇಚ್ಛಿಸುತ್ತಾರೆ. ಈಗ ನೀರಿಗಾಗಿ ಮನೆ ಹೊರಗಡೆ ನಡೆಯುತ್ತಿದ್ದ ಕಲಹ, "ನೀ ಹರಿದಲ್ಲಿ ನಾನು" ಎನ್ನುತ್ತ ನೀರಿನೊಂದಿಗೆ ತಾನೂ ಮನೆ ಹೊಕ್ಕಿದೆ! ಅತ್ತೆ–ಸೊಸೆ, ಅಕ್ಕ–ತಂಗಿ, ಅಣ್ಣ–ತಮ್ಮ ಎಲ್ಲರ ಮಧ್ಯ ಈ ನೀರು ತುಂಬುವ ಕೆಲಸಕ್ಕಾಗಿ ವೈಮನಸ್ಸು ಉದ್ಭವಿಸಿದೆ! ಹೀಗಿದೆ ನೀರಿನ ಬದಲಾವಣೆಯ ಕಥೆ. ನೀರಿನ ಬವಣೆಯಿಂದ ಪರಿಹಾರ ದೊರಕಿದೆ. ಆದರೆ ಈ ಬದಲಾವಣೆ ಪರಿಣಾಮ, ಬಾಣಲೆಯಿಂದ ಬೆಂಕಿಗೆ ಬಿದ್ದಂತಾಗಿದೆ.

ಅತಿಹೆಚ್ಚು ಪರಿಣಾಮಕಾರಿ ಬದಲಾವಣೆ ಎಂದರೆ TV ಮತ್ತು smart phoneಗಳದ್ದು. ಅದರಲ್ಲಿ social media ಸೇರಿದೆ. ನಾನು ಇಂಜಿನಿಯರಿಂಗ್ ಓದುತ್ತಿದ್ದ ದಿನಗಳಲ್ಲಿ ನಮ್ಮ

ಊರಲ್ಲಿ ಪೋಸ್ಟ್ ಆಫೀಸಿನಲ್ಲಿ ಮಾತ್ರ ಫೋನು ಸೌಲಭ್ಯ ಇತ್ತು. ಹೆಚ್ಚಾಗಿ ನಾನು ಅಪ್ಪ, ಅಮ್ಮ, ಅಣ್ಣಂದಿರಿಗೆ ಪತ್ರದ ಮೂಲಕವೇ ವ್ಯವಹರಿಸುತ್ತಿದ್ದೆ. ತಿಂಗಳಿಗೆರಡು ಪತ್ರ ಬರೆಯುವದು ಅಥವಾ ಪಡೆಯುವದು. ಅದರಿಂದಲೇ ಊರಲ್ಲಿ ನಡೆದ ಎಲ್ಲ ವಿಷಯಗಳ ಮಾಹಿತಿ. Inland letterನ ಪ್ರತಿ ಖಾಲಿ ಜಾಗದಲ್ಲಿ ಚಿಕ್ಕ ಚಿಕ್ಕ ಅಕ್ಷರಗಳಲ್ಲಿ ಸಾಧ್ಯವಾದಷ್ಟು ವಿಷಯ ತುಂಬಿಸಿ ಪತ್ರ ಬರೆಯುವ ಜಾಣ್ಮೆಯ ಕಾಲವದು. ಯಾರದೊ ಮದುವೆ, ಮುಂಜಿವೆ, ಹುಟ್ಟು ಅಥವಾ ಸಾವು ಯಾವ ವಿಷಯ ತಿಳಿದರೂ ಪತ್ರದ ಮೂಲಕವೆ. ಅಂಥ ಅವಸರ ಏನು ಇರಲಿಲ್ಲ. ತಿಂಗಳಾದರೂ ಪತ್ರ ಬರಲಿಲ್ಲವಾದರೆ ಸ್ವಲ್ಪ ಬೇಜಾರು. ರಜೆಯಲ್ಲಿ ಊರಿಗೆ ಬಂದೆನೆಂದರೆ ಒಂದು ವಾರದ ಕಾಲ ಎಲ್ಲರೊಂದಿಗೆ ಮಾತಾಡಿದ್ದೆ ಆಡಿದ್ದು, ಎಲ್ಲ ವಿಷಯಗಳು ಹೇಳಿ ಕೇಳಿ ಮುಗಿಯಬೇಕಲ್ಲವೆ?

ಎಲ್ಲ ಮಿತ್ರರು ಬಂಧುಗಳ ಮನೆಯಲ್ಲಿ ತಿಂಡಿ ಊಟ ಮುಗಿಯುವದರೊಳಗೆ ರಜೆ ಮುಗಿಯುತ್ತಿತ್ತು. ಈಗ ಕೈಯಲ್ಲಿ mobile phone ಇದೆ. ಯಾವುದೇ ವಿಷಯ ಕ್ಷಣಾರ್ಧದಲ್ಲಿ whatsapp ಅಥವಾ facebook ಮೂಲಕ ತಿಳಿಯುತ್ತದೆ. ವಿಷಯಕ್ಕೆ ತಕ್ಕಂತೆ emojiಗಳನ್ನು ಹಾಕಿದರಾಯಿತು. ಇಲ್ಲವೆ ಹೆಚ್ಚೆಂದರೆ Congratulations ಅಥವಾ RIP ಎಂದು message ಕಳಿಸಿದರೆ ನಮ್ಮ ಉಭಯ ಕುಶಲೋಪರಿ ಅಲ್ಲಿಗೆ ಮುಗಿದಂತೆ. ಈಗ ಊರು ಬಿಟ್ಟು ದೂರದ ದೇಶದಲ್ಲಿ ನೆಲೆಸಿರುವೆ. ವರ್ಷಕ್ಕೊಮ್ಮೆ ದೂರ ದೇಶದಿಂದ ಊರಿಗೆ ಹೋದರೂ ಯಾರೂ ಕೇಳುವವರಿಲ್ಲ. ಅಕಸ್ಮಾತ್ ಭೇಟಿಯಾಗುವ ಎಂದು ಅವರ ಮನೆಗೆ ಹೋದರೆ ಮಾತನಾಡಲು ಹೊಸ ವಿಷಯಗಳಿಲ್ಲ. ಎಲ್ಲ whatsappನಲ್ಲಿ ದಿನನಿತ್ಯ good morning ನಿಂದ ಹಿಡಿದು good nightವರೆಗೆ share ಮಾಡಿಯಾಗಿದೆ. ಬಂದದ್ದಕ್ಕೆ ಒಂದು ಕಪ್ ಚಹ ಸೇವಿಸಿ ಮತ್ತೆ ನಮ್ಮ ನಮ್ಮ Mobileಗಳನ್ನು ನೋಡುತ್ತಾ ಕುಳಿತು ಅರ್ಧ ಗಂಟೆ ಕಳೆದು ಹೊರಟಾಗ "ಸರಿ ಮತ್ತೆ ಬರುವದು ಯಾವಾಗ?" ಎಂದು ಕೇಳಿ ಬೀಳ್ಕೊಡುವದು ಸಾಮಾನ್ಯವಾಗಿಬಿಟ್ಟಿದೆ. ಅಷ್ಟೇ ಏಕೆ ಮನೆಯಲ್ಲಿರುವ ನಾಲ್ಕು ಮಂದಿಗೂ ನಾಲ್ಕು mobile phoneಗಳು. ಎಲ್ಲರೂ ಒಟ್ಟಿಗೆ ಕುಳಿತಿದ್ದರೂ ಮಾತನಾಡದೆ ಖಂಡಾಂತರದ friends ಜೊತೆಗೆ ಚಾಟ್ ಮಾಡುವದಾಗಲಿ, ಇಲ್ಲವೆ facebook ಅಥವಾ face timeನಲ್ಲಿ ನಿರತರಾಗುವದು ಈಗ ಮನೆಮಾತಾಗಿದೆ. ಅಷ್ಟೊಂದು ಸಂಪರ್ಕ ಸಾಧನೆಗಳ ಸಿದ್ಧಿಯಾಗಿದೆ. ಎಲ್ಲ ವಿಷಯಗಳನ್ನು share ಮಾಡುವರು ಆದರೆ ಒಬ್ಬರ phone ಇನ್ನೊಬ್ಬರು ಮುಟ್ಟುವಂತಿಲ್ಲ. Phoneಗಳಿಗೆ ಈಗ high security lockಗಳು. ಮನೆಯ ಬಾಗಿಲನ್ನು ಸುಲಭವಾಗಿ ತೆಗೆಯಬಹುದು ಆದರೆ mobile ನಲ್ಲೇ ಇರುವ ಮನದ ಬಾಗಿಲು ಮಾತ್ರ ಭದ್ರ!

ಒಟ್ಟಿನಲ್ಲಿ ರೊಟ್ಟಿ ಅಥವಾ ಹೋಳಿಗೆಯ ಜಾಗದಲ್ಲಿ ಈಗ ಅದೇ ಆಕಾರದ ಮತ್ತು ಅದೇ ಸೈಜಿನ ಪಿಜ್ಜಾ ಆಕ್ರಮಿಸಿದೆ. ಅದನ್ನೇ ಒಪ್ಪಿ ಪಿಜ್ಜಾವನ್ನೆ ಸವಿಯುವದು, ಬಪ್ಪುದೇ ಒಪ್ಪುದು ಸರಿ ಏನೊ?

*

## ಹೆಡೆ ಎತ್ತಿ ಬುಸುಗುಟ್ಟಿದಳು ಹೆಣ್ಣು

■ ನಳಿನಿ ಮೈಯ, Darien, IL.

'ಪ್ರಭು ಪನ್ನಗರಾಯ ಪೊರೆ ಶರಣು, ಪತಿ ಸೇವೆಯ ಸತಿಗುಳಿಸೋ' (ಚಿತ್ರ: ಆದರ್ಶ ಸತಿ).

'ಪಯಣಿಸುವ ವೇಳೆಯಲಿ ಬಂದು ಅಡಿಗೆರಗಿ ಮುಂದೆ ನಿಂದಳು ನನ್ನ ಕೈ ಹಿಡಿದ ಹುಡುಗಿ' (ಭಾವಗೀತೆ).

'ದೇವರು ನೀವು, ದಾಸಿಯು ನಾನು, ತನು ಮನ ನಿಮದೆ ಇನ್ನೇನು' (ಚಿತ್ರ: ಬೆಳ್ಳಿ ಮೋಡ).

'ಬಾಳ ಬಂಗಾರ ನೀನು, ಹಣೆಯ ಸಿಂಗಾರ ನೀನು, ನಿನ್ನ ಕೈಲಾಡೊ ಬೊಂಬೆ ನಾನಯ್ಯಾ' (ಚಿತ್ರ: ಬಂಗಾರದ ಮನುಷ್ಯ).

ಈ ಮೇಲಿನ ಗೀತೆಗಳಲ್ಲಿ ಎದ್ದು ಕಾಣುವ ಅಂಶವೇನು? ಹೆಣ್ಣಿನ ಸರ್ವ ಸಮರ್ಪಣ ಮನೋಭಾವ. ಸುಮಾರು ನಲವತ್ತು-ಐವತ್ತು ವರ್ಷಗಳ ಹಿಂದಿನ ಈ ಗೀತೆಗಳು ಅಂದಿನ ಸಮಾಜಕ್ಕೆ ಹಿಡಿದ ಕನ್ನಡಿಯಾಗಿವೆ. ನನ್ನ ಅಮ್ಮನೂ ಹೊಸ ಸೀರೆ ಉಟ್ಟಾಗ ತಂದೆಯವರಿಗೆ ನಮಸ್ಕಾರ ಮಾಡುತ್ತಿದ್ದಳು. ನಮ್ಮ ತಂದೆಯವರು ಎಲ್ಲಿಗಾದರೂ ಪ್ರಯಾಣ ಹೊರಟರೂ ನಮಸ್ಕಾರ. ಅಮ್ಮ ಹೊರಟರೂ ನಮ್ಮ ಅಪ್ಪನಿಗೆ ನಮಸ್ಕಾರ. ಹಬ್ಬದ ದಿನ ನಮಸ್ಕಾರ. ವಿಶೇಷ ಸಮಾರಂಭಗಳಲ್ಲಿ ನಮಸ್ಕಾರ. ಹೆಂಡತಿಯ ಸ್ಥಾನ ಗಂಡನಿಗಿಂತ ಒಂದು ಹಂತ ಕೆಳಗೆ ಎಂಬ ಸಮಾಜದ ಅಲಿಖಿತ ನಿಯಮವನ್ನು ಬಿಂಬಿಸುವ ನಮಸ್ಕಾರ. ಎಲ್ಲವನ್ನೂ ನೆನಪಿಸಿಕೊಂಡರೆ ಕಳೆದ ನಲವತ್ತು-ಐವತ್ತು ವರ್ಷಗಳ ಅವಧಿಯಲ್ಲಿ ಹೆಣ್ಣು-ಗಂಡಿನ ಸಂಬಂಧ ಅದೆಷ್ಟು ಬದಲಾಗಿದೆ ಅಂತ ಆಶ್ಚರ್ಯವಾಗುತ್ತದೆ! ಈಗ ಗಂಡನಿಗೆ ನಮಸ್ಕಾರ ಮಾಡುವ ಹೆಂಗಸರನ್ನು ದುರ್ಬೀನು ಹಿಡಿದು ಹುಡುಕಬೇಕು!

ನನ್ನ ಆಪ್ತ ಗೆಳತಿಯ ಹುಟ್ಟುಹಬ್ಬವನ್ನು ಆಚರಿಸಿದಾಗ "ಈಗ ಗಂಡನಿಗೆ ನಮಸ್ಕಾರ ಮಾಡಿ" ಅಂತ ಚುಡಾಯಿಸಿದರು ಹಿರಿಯ ಮಿತ್ರ ಐತಾಳರು. ಅವಳು "ಖಂಡಿತ ಮಾಡಲ್ಲ" ಅಂತ ಹಟ ಹಿಡಿದಳು.

"ಮದುವೆ ದಿನ ಮಾಡಿರಲಿಲ್ವಾ? ಈಗ ಯಾಕೆ ಬೇಡ?" ಅಂದರು ಐತಾಳರು.

"ಆಗ ನನಗೆ ಬುದ್ಧಿ ಇರಲಿಲ್ಲ. ಈಗ ಬುದ್ಧಿ ಬಂದಿದೆ" ಎಂದಳು ಆಕೆ. ಈ ಹಾಸ್ಯ ಸನ್ನಿವೇಶದ ಹಿಂದೆ ಬದಲಾಯಿಸಿದ ಗಂಡು-ಹೆಣ್ಣಿನ ಸಂಬಂಧ ಹೇಗೆ ಕಣ್ಣುಮುಚ್ಚಾಲೆಯಾಡುತ್ತಿದೆ, ಅಲ್ವಾ? ಹೌದು, ಈಗ ಹೆಣ್ಣಿಗೆ 'ಬುದ್ಧಿ' ಬಂದಿದೆ. ಸಮಾನತೆಯನ್ನು ಬೇಡುವ, ನಿರೀಕ್ಷಿಸುವ, ಅದಕ್ಕಾಗಿ ಹೋರಾಡುವ ಛಾತಿಯೂ ಬಂದಿದೆ.

ಸಮಾಜದಲ್ಲಿ ಹೆಣ್ಣಿನ ಸ್ಥಾನವನ್ನು ಅಂದು ರೂಢಿಯಲ್ಲಿದ್ದು, ಇಂದು ಕಣ್ಮರೆಯಾಗಿರಬಹುದಾದ ಕೆಲವು ಸಂಪ್ರದಾಯಗಳು ಚೆನ್ನಾಗಿ ವಿಶದಪಡಿಸುತ್ತವೆ. ಮನೆಯಾಕೆ ಎಲ್ಲರಿಗೂ ಬಡಿಸಿ ಇತರ ಎಲ್ಲರ ಊಟ ಆದ ಮೇಲೆ ತಾನು ಊಟಕ್ಕೆ ಕೂರಬೇಕಾಗಿತ್ತು. ಅದಾದರೂ ನೆಲದ ಮೇಲೆ ಕುಳಿತು ಊಟ ಮಾಡಬೇಕಾದಾಗ ಬಡಿಸುವವರೊಬ್ಬರು ಬೇಕಾಗಿತ್ತು. ಹಾಗೂ ಮನೆಯಾಕೆ ಸಂತೋಷದಿಂದ ಈ ಕೆಲಸ ಮಾಡುತ್ತಿದ್ದಳು ಎನ್ನಬಹುದು. ಆದರೆ ಉಣ್ಣಲು ಗಂಡ ಊಟ ಮಾಡಿದ ಎಂಜಲು ತಟ್ಟೆಯನ್ನೇ ತೊಳೆಯದೆ ಹಾಗೆಯೇ ಉಪಯೋಗಿಸುತ್ತಿದ್ದರು. ತೊಳೆಯಲು ನೀರಿಲ್ಲವೆಂದಲ್ಲ, ಅನುಕೂಲವಿಲ್ಲವೆಂದಲ್ಲ. ಅದೇ ತನ್ನ ಸ್ಥಾನವೆಂದು ಒಪ್ಪಿಕೊಳ್ಳುವ ಕ್ರಮ!

ಗಂಡಸರು ಜಗುಲಿ ಅಥವಾ ಕುರ್ಚಿ ಮುಂತಾದ ಎತ್ತರದ ಸ್ಥಾನದಲ್ಲಿ ಕುಳಿತಿದ್ದರೆ ಹೆಂಗಸರು ಅವರಿಗಿಂತ ಕೆಳಗೆ ನೆಲದಲ್ಲಿ ಚಾಪೆಯ ಮೇಲೆ ಕುಳಿತುಕೊಳ್ಳುತ್ತಿದ್ದರು. ಮೇಲೆ ಕುಳಿತ ಗಂಡಸರಿಗಿಂತ ಹಿರಿಯರಾದ ಹೆಂಗಸರೂ ಸಹ ನೆಲದ ಮೇಲೇ ಕೂರುತ್ತಿದ್ದರು. ಹಳೆಯ ಫೋಟೊಗಳನ್ನು ನೋಡಿದರೆ ಅಲ್ಲಿ ಗಂಡಸು ಕುರ್ಚಿಯ ಮೇಲೆ ಕುಳಿತು ಹೆಣ್ಣು ಅವನ ಹಿಂದೆ ಅಥವಾ ಪಕ್ಕದಲ್ಲಿ ನಿಂತಿರುವ ಚಿತ್ರ ಕಾಣುತ್ತದೆ. ಗ್ರೂಪ್ ಫೋಟೋ ಆದರೆ ಅಲ್ಲಿ ಕೆಳಗೆ ಕುಳಿತವರೆಲ್ಲ ಹೆಂಗಸರು, ಮಕ್ಕಳೇ ಆಗಿರುತ್ತಿದ್ದರು. ಮೇಲೆ ಕುಳಿತವರಲ್ಲಿ ಬಹುತೇಕ ಮಂದಿ ಗಂಡಸರಾಗಿರುತ್ತಿದ್ದರು.

ಯಾವುದೇ ಮನೆಯ ಅಥವಾ ಕೋಣೆಯ ಬಾಗಿಲಿನ ಮೂಲಕ ಒಳಗೆ ಮೊದಲ ಪ್ರವೇಶ ಗಂಡಸಿಗೆ; ಗಂಡ, ಹೆಂಡತಿ ಇಬ್ಬರೂ ಒಟ್ಟಿಗೆ ಬಂದರೂ ಕೂಡಾ. ಹೆಣ್ಣು ಪಕ್ಕಕ್ಕೆ ಸರಿದು ಗಂಡನಿಗೆ ಒಳಗೆ ಹೋಗಲು ಅನುವು ಮಾಡಿಕೊಡುತ್ತಿದ್ದಳು. ಗಂಡಸನ್ನು ಹೇಡಿ ಅಂತ ಲೇವಡಿ ಮಾಡಬೇಕಾದರೆ "ಕೈಗೆ ಬಳೆ ಹಾಕ್ಕೊಂಡಿದ್ದೀಯಾ?" ಅನ್ನುತ್ತಿದ್ದರು. ವಾಸ್ತವದಲ್ಲಿ ತನ್ನ ಸಂಸಾರಕ್ಕಾಗಿ ಅದರ ಉಳಿವು, ಏಳಿಗೆಗಾಗಿ ಹೆಣ್ಣು ಸುರಿಸಿದ ಬೆವರು, ಕಣ್ಣೀರುಗಳಿಗೆ ಯಾವ ಮೌಲ್ಯವೂ ಇರುತ್ತಿರಲಿಲ್ಲ. ಅವಳ ಸ್ಥೈರ್ಯವನ್ನು ಮೆಚ್ಚಿ ಹೊಗಳುವ ವ್ಯವಧಾನವೂ ಇರಲಿಲ್ಲ. ಗಂಡ ಹೆಂಡತಿಗೆ ಹೊಡೆಯುವುದು ಸರ್ವೇಸಾಮಾನ್ಯವಾಗಿತ್ತು.

ಹಾಗೆ ಹೊಡೆದಾಗ ಬೇರೆಯವರೂ 'ತನ್ನ ಹೆಂಡತಿಗೆ ತಾನು ಹೊಡೀತಾನೆ. ಅಷ್ಟೇ ತಾನೆ?' ಅಂತ ಸುಮ್ಮನಿರುತ್ತಿದ್ದರು. ಯಾರಾದರೂ ರಕ್ಷಿಸಲು ಬಂದರೂ ಹೆಂಡತಿಯೇ 'ನನ್ನ ಗಂಡ ನನಗೆ ಏನು ಮಾಡಿದರೆ ನಿಮ್ಮದೇನು ಹೋಯಿತು?' ಅಂತ ಹೇಳುತ್ತಿದ್ದಳು! ಅಂಥಾದ್ದಾಗಿ ಗಂಡನ ಜೊತೆ ಬಾಳಲಾಗದೆ ವಿಚ್ಛೇದನ ಪಡೆದರೂ ಅವಳನ್ನು 'ಗಂಡ ಬಿಟ್ಟವಳು' ಎಂದು ಸಮಾಜ ಹೀನಾಯವಾಗಿ ಕಾಣುತ್ತಿತ್ತು.

ಹೀಗೆ ಹೇಳುವಾಗ ನನಗೆ ನಮ್ಮ ಕುಟುಂಬದಲ್ಲಿ ನಡೆದ ಹಳೆಯ ಕಥೆಯೊಂದು ನೆನಪಾಗುತ್ತಿದೆ. ನನ್ನ ಚಿಕ್ಕಮ್ಮ ಒಬ್ಬರನ್ನು ಅವರ ಗಂಡ ಸಿಟ್ಟಿನಿಂದ ಹೊಡೆಯಲು ಅಟ್ಟಿಸಿಕೊಂಡು ಬಂದರಂತೆ. ಆಕೆ ಹತ್ತಿರವೇ ಇದ್ದ ತವರುಮನೆಯ ಕಡೆ ಓಡಿದರು. ಅರ್ಧ ದಾರಿಯವರೆಗೂ ಅಟ್ಟಿಸಿಕೊಂಡು ಬಂದ ಗಂಡ ಆಮೇಲೆ ತಮ್ಮ ಮನೆಗೆ ವಾಪಸಾದರು. ಗಂಡ ವಾಪಾಸು ಹೋಗಿದ್ದನ್ನು ಕಂಡ ಹೆಂಡತಿ ಅಳುತ್ತಾ ತಾನೂ ಗಂಡನನ್ನು ಹಿಂಬಾಲಿಸಿ ಅವನ ಮನೆಗೆ ಹೋದರಂತೆ! ಇದನ್ನು ಕೇಳಿದ ಹೆಣ್ಣಿನ ತಾಯಿ "ಸಧ್ಯ ದೇವರೇ ಅವಳಿಗೆ ಬುದ್ಧಿ ಕೊಟ್ಟ. ಇಲ್ಲಿಗೆ ಬಂದಿದ್ದರೆ ಆಮೇಲೆ ಅವರು ಗಂಡನ ಮನೆಯೊಳಗೆ ಸೇರಿಸಿಕೊಳ್ಳದಿದ್ದರೆ ಏನು ಮಾಡಬೇಕಾಗಿತ್ತು?" ಅಂದರಂತೆ! ಹೆಣ್ಣಿನ ಸ್ಥಾನ ಯಾವ ಮಟ್ಟದಲ್ಲಿತ್ತು! ಮತ್ತು ಗಂಡ-ಹೆಂಡತಿಯ ಸಂಬಂಧದ ರೂಪ-ರೇಷೆ ಹೇಗಿತ್ತು? ಎಂಬುದನ್ನು ಈ ಘಟನೆ ಎಷ್ಟು ಚೆನ್ನಾಗಿ ಹೇಳುತ್ತದೆ ಅಲ್ಲವೆ? ಕಾರಂತರ 'ಮರಳಿ ಮಣ್ಣಿಗೆ', ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಮುಂತಾದ ಕಾದಂಬರಿಗಳಲ್ಲಿ ಅಂದಿನ ಹೆಣ್ಣಿನ ಪರಿಸ್ಥಿತಿ ಬಹಳ ಚೆನ್ನಾಗಿ ಚಿತ್ರಿತವಾಗಿದೆ. ಕಾರಂತರು 'ಮರಳಿ ಮಣ್ಣಿಗೆ'ಯಲ್ಲಿ ಆಕಾಶದಲ್ಲಿ ಕಾಣುವ ಚಂದ್ರನ ಉಪಮೆಯೊಡನೆ ಹೆಣ್ಣಿನ ಸ್ಥಾನವನ್ನು ಹೇಗೆ ಚಿತ್ರಿಸಿದ್ದಾರೆ ನೋಡಿ-

"ಗಂಜಿ ಕುಡಿದ ಎಮ್ಮೆ ಕರುವಿನಂತೆ ತಿಂಗಳು ಮಾವ ಬಾನಿನಲ್ಲಿ ಮುಂದೆ ಸರಿಯಲೋ ಬೇಡವೊ ಎಂದು ಚಿಂತಿಸುತ್ತಿದ್ದ. ಅವನಿದ್ದಾನೆ ಬಾನಂಗಳದ ಮೂರನೇ ಅಂಕಣದಲ್ಲಿ. ಇನ್ನು ಒಂದು ಅಂಕಣ ದಾಟಿದರೆ ಮರೆಯನ್ನು ಸೇರಬಹುದು. ಅಷ್ಟೆಲ್ಲ ಸಂಚಾರ ಯಾಕೆ ಮಾಡಬೇಕು? ಹೇಗೂ ತನ್ನನ್ನು ನಂಬಿ ಜಗತ್ತು ಸಾಗುತ್ತಲಿಲ್ಲ. ತಾನಿಲ್ಲದ ರಾತ್ರಿಗಳಲ್ಲಿ ಪ್ರಪಂಚದ ಸಂಚಾರ ನಿಲ್ಲುತ್ತದೆಯೆ? ಪ್ರಪಂಚದಲ್ಲಿ ಗಂಡ ಸೂರ್ಯನಾದರೆ ತಾನು ಹೆಂಡತಿ. ಗಂಡನಿಲ್ಲದೆ ಮನೆ ಸಾಗದು. ಹೆಂಡತಿ ಇಲ್ಲದೆ ಅಂಥ ಗಡಿಬಿಡಿ ಏನೂ ಆಗದು-ಅನ್ನುತ್ತಿರಬೇಕು ಆ ಚಂದ್ರ."

ನಮ್ಮ ಜನಪದ ಗೀತೆಗಳಲ್ಲೂ ಸಹ ಹೆಣ್ಣು ತಗ್ಗಿ ಬಗ್ಗಿ ಬಾಳಬೇಕು ಎಂಬ ಸಂದೇಶವೇ ಕೇಳಿಬರುತ್ತದೆ. ಮಗಳನ್ನು ಮದುವೆ ಮಾಡಿ ಗಂಡನ ಮನೆಗೆ ಕಳಿಸುವ ಸಂದರ್ಭದಲ್ಲಿ ತಾಯಿ ಹೇಳುವ ಬುದ್ಧಿವಾದ "ಅತ್ತೆ ಮಾವರಿಗಂಜಿ, ಸುತ್ತೇಳು ನೆರೆಗಂಜಿ ಮತ್ತೆ ಆಳುವ ದೊರೆಗಂಜಿ (ಗಂಡನಿಗೆ ಅಂಜಿ) ಅತ್ತೆ ಮನೆಯಾಗೆ ಬಾಳಮ್ಮ" ಎಂದು.

ಅಷ್ಟೇಕೆ? ಹೆಣ್ಣಿಗೆ ಪ್ರಪಂಚಜ್ಞಾನ ಬರುವುದಕ್ಕೂ ಮುಂಚೆ, ದಾಂಪತ್ಯ ಅಂದರೇನು ಎಂಬ ತಿಳುವಳಿಕೆ ಬರುವ ಮೊದಲೇ ಅವಳು ಋತುಮತಿಯಾಗುವ ಮುನ್ನ ಮದುವೆಯಾಗುತ್ತಿತ್ತು. ಕೆ.ಎಸ್.ನ. ಅವರ 'ಶಾನುಭೋಗರ ಮಗಳು' ಕವನದಲ್ಲಿ ಬರುವ 'ಹನ್ನೆರಡು ತುಂಬಿಹುದು ಮದುವೆ ಇಲ್ಲ' ಸಾಲು ನೆನಪಾಗುತ್ತಿದೆ.

ಪಾಶ್ಚಾತ್ಯ ದೇಶಗಳಲ್ಲೂ ಹೆಣ್ಣಿನ ಸ್ಥಾನ ಒಂದು ಹಂತ ಕೆಳಗೇ ಇತ್ತು. 'ಕೀಪ್ ದೆಮ್ ಬೇರ್ ಫೂಟ್ ಅಂಡ್ ಪ್ರೆಗ್ನೆಂಟ್' ಎಂಬ ಧೋರಣೆ ಹೆಣ್ಣಿನ ಬಗ್ಗೆ! ಕಳೆದ ಶತಮಾನದ ಇಪ್ಪತ್ತನೆಯ ದಶಕದವರೆಗೂ ಹೆಣ್ಣಿಗೆ ಮತ ಚಲಾಯಿಸುವ ಹಕ್ಕು ಇರಲಿಲ್ಲ. ಅದಕ್ಕಾಗಿ ಒಂದು ಹೋರಾಟವನ್ನೇ ಮಾಡಬೇಕಾಯಿತು ಹೆಂಗಳೆಯರು. ಯಾರಾದರೂ ಅಡ್ಡಾದಿಡ್ಡಿ ಕಾರು ಚಲಾಯಿಸುತ್ತಿದ್ದರೆ "ವುಮನ್ ಡ್ರೈವರ್" ಎಂದು ಗಂಡಸರು ತಮ್ಮಲ್ಲಿಯೇ ಜೋಕು ಮಾಡಿಕೊಳ್ಳುತ್ತಿದ್ದರು. ಮನೆಗೊಂದು ಕಾರು ಇದ್ದು ಅದನ್ನು ಚಲಾಯಿಸುವವನು ಗಂಡಸು ಮಾತ್ರ ಆಗಿದ್ದ ಕಾಲವದು. ಟೀವಿಯಲ್ಲಿ ನ್ಯೂಸ್ ಆಂಕರ್ ಮತ್ತು ಟಾಕ್ ಶೋ ಹೋಸ್ಟ್ ಎಲ್ಲ ಗಂಡಸರೇ ಆಗಿದ್ದರು. ಎಲ್ಲೋ ಒಬ್ಬ ಬಾರ್ಬರಾ ವಾಲ್ಟರ್ಸ್ ಇದಕ್ಕೆ ಅಪವಾದವೆಂಬಂತೆ ಇದ್ದರು. ಹೆಣ್ಣುಗಳು ಟೀವಿಯಲ್ಲಿ ಕಾಣಿಸಿಕೊಂಡರೆ ಅದು ಮನರಂಜನೆಗೆ ಮಾತ್ರ! ಹೆಣ್ಣಿನ ಬಗ್ಗೆ ಹಳೆಯ ಚಿತ್ರಗಳಲ್ಲಿ ಒಂದು ಬಗೆಯ ಪೇಟ್ರನೈಸಿಂಗ್ ಭಾವ ಕಾಣಬಹುದು. ಹೆಣ್ಣಿಗೆ ಸಿಗರೇಟು ಹಚ್ಚಲು ಲೈಟರು ನೀಡುವುದರಿಂದ ಹಿಡಿದು, ಕಾರಿನ ಬಾಗಿಲು ತೆಗೆಯುವವರೆಗೆ ಉದಾರತೆಯ ಹಿಂದೆ 'ಹೆಣ್ಣು ಅಬಲೆ, ಏನೂ ಮಾಡಲಾರಳು' ಎಂಬ ಭಾವವೊಂದು ಇಣುಕುತ್ತಿತ್ತು. 'ಬ್ರೆಡ್ ವಿನ್ನರ್' ಎಂಬ ನುಡಿಗಟ್ಟು ಗಂಡಿಗೆ ಮೀಸಲಾಗಿತ್ತು. ಹೆಂಗಸರು ನರ್ಸ್, ಟೀಚರ್ ಅಥವಾ, ಸೆಕ್ರೆಟರಿ ಕೆಲಸ ಮಾಡಿಕೊಂಡಿದ್ದರೂ ಅದಕ್ಕೆ ಅವರಿಗೆ ಸಿಕ್ಕುವ ಸಂಬಳ ಗಂಡಸಿಗೆ ಅದೇ ಕೆಲಸಕ್ಕೆ ಸಿಕ್ಕುವ ಸಂಬಳಕ್ಕಿಂತ ಕಡಿಮೆ!

ಹೌದು, ಈ ಬ್ರೆಡ್ ವಿನ್ನರ್ ಎಂಬ ನುಡಿಗಟ್ಟಿಗೆ ಎಷ್ಟೊಂದು ಶಕ್ತಿ ಇದೆ! ಈಗ ಹೆಣ್ಣಿನ ಸ್ಥಾನಮಾನ ಸಮಾಜದಲ್ಲಿ ಬದಲಾಗಿರುವುದಕ್ಕೆ ಮುಖ್ಯ ಕಾರಣ ಅವಳೂ ಬ್ರೆಡ್ ವಿನ್ನರ್ ಆಗಿರುವುದು! ಕಳೆದ ಐವತ್ತು ವರ್ಷಗಳಲ್ಲಿ ಹೆಣ್ಣಿಗೆ ವಿದ್ಯಾಭ್ಯಾಸ ಮತ್ತು ಉದ್ಯೋಗಗಳಲ್ಲಿ ಹೊಸ ಅವಕಾಶಗಳು ಪ್ರಾಪ್ತವಾಗಿವೆ. ಬದಲಾಗುತ್ತಿರುವ ಸಮಾಜದಲ್ಲಿ ತಾವಾಗಿ ಬಂದ ಅವಕಾಶಗಳು ಕೆಲವಾದರೆ ಹೆಣ್ಣು ಹೋರಾಡಿ ಪಡೆದುಕೊಂಡವು ಹಲವು. ಈಗ ಮಧ್ಯಮ ವರ್ಗದ ಬಹುತೇಕ ಸಂಸಾರಗಳಲ್ಲಿ ಹೆಣ್ಣಿನ ದುಡಿಮೆಯ ಹಣವೂ ಆದಾಯದ ಒಂದಂಶವಾಗಿರುತ್ತದೆ. ಜೊತೆಗೇ ಅವಳ ಸ್ಥಾನವೂ ಬದಲಾಗಿದೆ. ಈಗಲೂ ಅವಳಿಗೆ ಸಮಾನತೆ ಸಿಕ್ಕಿದೆ ಎಂದು ಹೇಳಲಾಗದು. ಹೊರಗೆ ದುಡಿದು ಮನೆಗೆ ಬಂದ ಮೇಲೆ ಸಂಸಾರ ನಿಭಾಯಿಸುವ ಹೊಣೆ ಹೆಚ್ಚಾಗಿ ಹೆಣ್ಣಿನ ಹೆಗಲ ಮೇಲೇ ಇರುತ್ತದೆ. ಆದರೂ ದಿನ ಬೆಳಗಾದರೆ ಗಂಡನ ಕಾಲಿಗೆ ನಮಸ್ಕಾರ ಮಾಡುವ, ಆತ ಉಂಡ ಎಂಜಲು ತಟ್ಟೆಯಲ್ಲಿ ಉಣ್ಣುವ ಕಾಲ ಹೋಯಿತು!

ಈ ಎಲ್ಲ ಬದಲಾವಣೆಗಳು ಹೆಣ್ಣು-ಗಂಡಿನ ಸಂಬಂಧದಲ್ಲಿ ಹೇಗೆ ವ್ಯಕ್ತವಾಗಿವೆ ! ಈಗ ಜೀವನ ಕಳೆಯಲು ಹೆಣ್ಣು ಗಂಡಿನ ಮೇಲೆ ಪೂರ್ತಿಯಾಗಿ ಅವಲಂಬಿಸುವ ದಿನಗಳಲ್ಲವಾದ್ದರಿಂದ ಅವರಿಬ್ಬರ ಸಂಬಂಧಕ್ಕೆ ಬೇರೆಯೇ ರೂಪ ಬಂದಿದೆ. ಪರಸ್ಪರ ಅರ್ಥ ಮಾಡಿಕೊಂಡು ಸೌಹಾರ್ದದಲ್ಲಿ ಬಾಳಲಾಗದ ಪರಿಸ್ಥಿತಿ ಬಂದರೆ ಹೆಣ್ಣು ಗಂಡನಿಂದ ಡೈವರ್ಸ್ ಪಡೆಯಲು ಹಿಂಜರಿಯಬೇಕಾಗಿಲ್ಲ. ಹಾಗೆ ಡೈವರ್ಸ್ ಪಡೆದ ಹೆಣ್ಣನ್ನು 'ಗಂಡ ಬಿಟ್ಟವಳು' ಎಂದು ಸಮಾಜ ತುಚ್ಛವಾಗಿ ಕಾಣುವುದಿಲ್ಲ! ದಾಂಪತ್ಯದ ಸಾಫಲ್ಯವು ಗಂಡಸಿನ ಸ್ವೀಕಾರದಲ್ಲಿ ಸಿಕ್ಕುವಂಥದ್ದಲ್ಲ, ಸಮಾನ ಸಂಗಮದಲ್ಲಿ ಸಿಕ್ಕುವಂಥದ್ದು ಎಂಬ ಅರಿವು ಸಮಾಜದಲ್ಲಿ ಮೂಡುತ್ತಿದೆ. ಕೆಲವೊಮ್ಮೆ ಈ ಬದಲಾವಣೆಗಳನ್ನು ಜೀರ್ಣಿಸಿಕೊಳ್ಳುವುದು ಗಂಡಿಗೆ ಕಷ್ಟವಾಗುತ್ತಿದೆ. ಇದನ್ನು ಕಾವ್ಯಾ ಕಡಮೆ ನಾಗರಕಟ್ಟೆ ಅವರು 'ಬರುತ್ತೇನೆ' ಎಂಬ ಒಂದು ಕವನದಲ್ಲಿ ಬಹಳ ಚೆನ್ನಾಗಿ ಸೆರೆ ಹಿಡಿದಿದ್ದಾರೆ-

**ಹುಬ್ಬು ತೀಡದೆ, ಗೆಜ್ಜೆ**
**ಕುಣಿಸದೆ, ಬಳೆಯ**
**ಕಿಂಕಿಣಿ ಇಲ್ಲದೆ, ಮುಂಗುರುಳ**
**ನೇವರಿಸದೆ, ವ್ಯಾಕ್ಸ್ ಮಾಡದೆ**
**ಪಿಸು ನುಡಿಯದೆ, ಉಗುರಿಗೆ**
**ರೆಪ್ಪೆಗೆ-ಕೆನ್ನೆಗೆ-ತುಟಿಗೆ ಬಣ್ಣ**
**ತಾಗಿಸದೆ, ಕಣ್ಣ ಕಾಡಿಗೆಯಿಲ್ಲದೆ**
**ಹುಬ್ಬಿನ ನಡುವೆ ಪುಟ್ಟ ಕುಂಕುಮವಿಡದೆ**
**ನತ್ತನ್ನು ನಗುವಾಗ ತೋರದೆ, ಸೀಳ**
**ಹುರಿಗೊಳಿಸದೆ,**
**ನಾಚದೆ, ನುಲಿಯದೆ, ಬಳುಕದೆ**
**ಹಾರದೆ, ತಣಿಯದೆ, ಓಲೈಸದೆ**
**ಒಮ್ಮೆ**
**ನಿನ್ನ ಮುಂದೆ ಬರುತ್ತೇನೆ**
**ಎಂದರೆ**
**ನೀನೇಕೆ ಹೀಗೆ ಬೆವರಬೇಕು?**

('ಧ್ಯಾನಕ್ಕೆ ತಾರೀಖಿನ ಹಂಗಿಲ್ಲ' ಕವನ ಸಂಕಲನ, ಪುಟ ೪೬)

ಸಂಚಿ ಹೊನ್ನಮ್ಮನ ಕಾಲದಿಂದಲೂ ಸಮಾಜ ತನ್ನ ಮೇಲೆ ಹೇರಿದ ಒತ್ತಡವನ್ನು ಪ್ರಶ್ನಿಸುತ್ತಲೇ ಬಂದಿದ್ದಾಳೆ ಹೆಣ್ಣು. "ಹೆಣ್ಣು ಹೆಣ್ಣೆಂದೇಕೆ ಬೀಳುಗಳೆವರು ಕಣ್ಣು ಕಾಣದ ಗಾವಿಲರು" ಎಂದು ಅವಳು ಅಂದೇ ಸವಾಲೆಸೆದಿದ್ದಳು. ಅಂದಿನಿಂದ ಇಂದಿನವರೆಗೂ ಸಮಾಜದಲ್ಲಿ ಹೆಣ್ಣಿನ ಬಗ್ಗೆ ಇರುವ ಸಾಮಾನ್ಯ ಗ್ರಹಿಕೆಗಳನ್ನು,

ಪೂರ್ವಾಗ್ರಹಗಳನ್ನು ಒಡೆಯುವ ಕೆಲಸ ಹಲವಾರು ಲೇಖಕಿಯರಿಂದ ಆಗುತ್ತಲೇ ಇದೆ. ಪುರುಷ ಪ್ರಧಾನವಾದ ಸಮಾಜದಲ್ಲಿ ಅತಿ ನಿಧಾನವಾಗಿಯಾದರೂ ಆ ನಿಟ್ಟಿನಲ್ಲಿ ಬದಲಾವಣೆಗಳು ಕಂಡುಬರುತ್ತಿವೆ.

ಹೀಗೆ ಹೇಳುವಾಗ ಮನೆಮನೆಗಳಲ್ಲೂ ಅದರದೇ ಆದ ಕಥೆ ಇರುತ್ತದೆ ಎಂದು ಒಪ್ಪಿಕೊಳ್ಳುತ್ತಾ ಇಡೀ ಸಮಾಜದಲ್ಲಿ ಸ್ಥೂಲವಾಗಿ ಕಂಡುಬರುವ ಅಂಶಗಳನ್ನು ಮಾತ್ರ ವಿವರಿಸುತ್ತಿದ್ದೇನೆ. ಆ ಕಾಲದಲ್ಲೂ ಹೆಣ್ಣಿಗೆ ಬೆಲೆ ಕೊಟ್ಟು ಗೌರವದಿಂದ ಕಾಣುವ ಕುಟುಂಬಗಳಿದ್ದವು. ಈ ಕಾಲದಲ್ಲೂ ವರದಕ್ಷಿಣೆ ತಂದಿಲ್ಲವೆಂದು ವಧುವನ್ನು ಹತ್ಯೆ ಮಾಡುವ ಕುಟುಂಬಗಳಿವೆ ಎಂಬುದನ್ನು ಒಪ್ಪಿಕೊಳ್ಳಲೇಬೇಕು. ಆದರೆ ಈಗ ಇನ್ಫೋಸಿಸ್‌ನ ಸುಧಾ ಮೂರ್ತಿ, ಪೆಪ್ಸಿಕೊದ ಇಂದ್ರ ನೂರಾಣಿ, ಭಾರತದ ಕೇಂದ್ರ ಸರಕಾರದ ಮಂತ್ರಿ ಸುಷ್ಮಾ ಸ್ವರಾಜ್ ಎಲ್ಲರೂ ಹೆಣ್ಣು ಸಮಾಜದಲ್ಲಿ ಸಾಧಿಸಿದ ಪ್ರಗತಿಯ ಜ್ವಲಂತ ಸಂಕೇತವಾಗಿದ್ದಾರೆ! ಐವತ್ತು ವರ್ಷಗಳ ಹಿಂದೆ ಅಮೆರಿಕಾದಲ್ಲಿ ಕೂಡಾ ಪೆಪ್ಸಿಕೊದಂಥ ಕಂಪನಿಯ ಮುಖ್ಯಸ್ಥೆ ಒಬ್ಬ ಹೆಣ್ಣಾಗಿರುವುದು ಸಾಧ್ಯವಿರಲಿಲ್ಲ. ಮಗಳಿಗೆ ವರ ಹುಡುಕುವ ಸಲುವಾಗಿ ಗೋಗರೆಯುವ ಕನ್ಯಾಪಿತೃಗಳ ಕಾಲ ಹೋಗಿ ಈಗ ಹೆಣ್ಣುಗಳೇ 'ಅತ್ತೆ ಮಾವ ಇರುವ ಮನೆಗೆ ನಾನು ಹೋಗಲಾರೆ' ಅಂತ ಹಟ ಹಿಡಿದು ಸೆಲೆಕ್ಟಿವ್ ಆಗಿ ಗಂಡನ್ನು ಆಯ್ಕೆ ಮಾಡುವ ಕಾಲ ಬಂದಿದೆ.

ಒಮ್ಮೊಮ್ಮೆ ಐವತ್ತು ವರ್ಷಗಳ ಹಿಂದೆ ಸಮಾಜ ನನ್ನ ಮೇಲೆ ಹೇರಿದ ಸಂಕೋಲೆಗಳಿಂದ ನಾನು ಇನ್ನೂ ಮಾನಸಿಕವಾಗಿ ಮುಕ್ತಳಾಗಿಲ್ಲ ಅನ್ನಿಸಿಬಿಡುತ್ತದೆ. "ನಾನು ಅಮೆರಿಕಾಗೆ ಬಂದಿದ್ದರಿಂದ ಸೈಕಲ್ ತುಳಿಯುವುದಕ್ಕೆ ಕಲಿತೆ, ಕಾರ್ ಡ್ರೈವಿಂಗ್ ಕಲಿತೆ. ಇಂಡಿಯಾದಲ್ಲಿ ಹೆಂಗಸರಿಗೆ ಈ ಅವಕಾಶಗಳು ಇಲ್ಲ" ಅಂತ ಪಾರ್ಟಿಯಲ್ಲಿ ಹೇಳುತ್ತಿದ್ದೆ. ಅಲ್ಲಿದ್ದ ಚಿಕ್ಕ ಪ್ರಾಯದ ತರುಣಿಯೊಬ್ಬಳು "ಯಾಕಿಲ್ಲ ಆಂಟಿ? ನಾನು ಇಂಡಿಯಾದಲ್ಲೇ ಇದನ್ನೆಲ್ಲ ಕಲಿತೆ" ಅಂದಳು! ಹೌದಲ್ಲಾ! ಇದೀಗ ಐವತ್ತು ವರ್ಷಗಳ ಹಿಂದೆ ನಾನು ಬಿಟ್ಟು ಬಂದ ಇಂಡಿಯಾ ಅಲ್ಲ ಅಂತ ಜ್ಞಾನೋದಯವಾಯಿತು!

ನಮ್ಮ ಪರಿಚಿತರೊಬ್ಬರ ಮಗಳು ತುಂಬ ಬುದ್ಧಿವಂತೆ! ಅಮೆರಿಕಾಗೆ ಬಂದು ಪಿಎಚ್.ಡಿ. ಮಾಡಿ ಕೆಲಸದಲ್ಲಿದ್ದಾಳೆ. ಮದುವೆಯೂ ಆಯಿತು ಆದರೆ ಅವರ ಮನೆಯ ಗಂಡು ಮಕ್ಕಳು ಯಾರೂ ಅಷ್ಟು ಮುಂದೆ ಬರಲಿಲ್ಲ. ಅವಳ ಹತ್ತಿರ ಮಾತನಾಡುತ್ತಾ "ನೀನು ಗಂಡಾಗಿದ್ದರೆ ಅದರ ಕಥೆಯೇ ಬೇರೆಯಾಗುತ್ತಿತ್ತು. ಅಲ್ವಾ?" ಅಂದೆ.

"ಯಾಕೆ? ಹೆಣ್ಣಾಗಿ ಆದ ನಷ್ಟವೇನು?" ಎಂದು ಅವಳಿಂದ ಬಂದ ಉತ್ತರ ನನ್ನನ್ನು ತಬ್ಬಿಬ್ಬಾಗಿಸಿತು.

"ಅಲ್ಲ, ಗಂಡಾಗಿದ್ದರೆ ನೀನು ಅಪ್ಪ, ಅಮ್ಮನಿಗೆ ಇನ್ನೂ ಹೆಚ್ಚು ಸಹಾಯ ಮಾಡಬಹುದಿತ್ತು" ಅಂದೆ.

"ಈಗಲೂ ನಾನು ಸಹಾಯ ಮಾಡುವುದಕ್ಕೆ ಯಾರೂ ಆಕ್ಷೇಪಣೆ ಮಾಡುವುದಿಲ್ಲ. ನನ್ನ ಗಳಿಕೆ. ನನ್ನ ನಿರ್ಧಾರ" ಅಂದಳು.

ಇನ್ನೂ 'ಅಂದಿನ ಹೆಣ್ಣಿನ ಮನಃಸ್ಥಿತಿ'ಯಲ್ಲೇ ಇದ್ದ ನನಗೆ 'ಹೌದಲ್ವಾ? ಕಾಲ ನಿಜಕ್ಕೂ ಬದಲಾಗಿದೆ ಈಗ' ಅನ್ನಿಸಿಬಿಟ್ಟಿತು! ಗಂಡ ಸತ್ತಾಗ ಹೆಂಡತಿ ಸಹಗಮನ ಮಾಡುತ್ತಿದ್ದ ಕಾಲ ಒಂದಿತ್ತು ಅಂತ ನೆನೆಸಿಕೊಂಡಾಗ ಆಶ್ಚರ್ಯವಾಗುತ್ತದೆ. ಕೇವಲ ಐವತ್ತು ವರ್ಷಗಳ ಹಿಂದೆ ಗಂಡ ಸತ್ತರೆ ವಿಧವೆಯರ ತಲೆ ಬೋಳಿಸಿ ಕೆಂಪು ಸೀರೆ ಉಡಿಸುತ್ತಿದ್ದರು ! ಈಗಾದರೋ ಸ್ಯಾನಿಟರಿ ಪ್ಯಾಡ್ ಮೇಲೆ ತೆರಿಗೆ ವಿಧಿಸಿದ್ದನ್ನು ಖಂಡಿಸಿ ಹೋರಾಟ ಮಾಡುವ ನಿರ್ಭಿಡೆಯ ಕಾಲ! ಶಬರಿಮಲೆ ಉತ್ಸವಕ್ಕೆ ತಾನು ಕೂಡಾ ಹೋಗಬೇಕೆಂದು ಕೋರ್ಟಿನಲ್ಲಿ ದಾವಾ ಹಾಕಿ ಹೆಣ್ಣು ಗೆದ್ದ ಕಾಲ. ಲೈಂಗಿಕ ದೌರ್ಜನ್ಯಕ್ಕೆ ಒಳಗಾದ ಹೆಂಗಳೆಯರಿಗೆ ಸೇವೆ ಸಲ್ಲಿಸುತ್ತಿರುವ ಇಬ್ಬರಿಗೆ ನೊಬೆಲ್ ಪಾರಿತೋಷಕ ನೀಡಿದ ಕಾಲ.

ವಿಷಾದದ ಸಂಗತಿ ಎಂದರೆ ಈ ಸ್ವಾತಂತ್ರ್ಯ ಕೆಲವೊಮ್ಮೆ ಸ್ವೇಚ್ಛೆಯ ರೂಪಕ್ಕೆ ತಿರುಗುವುದೂ ಉಂಟು. ಭಾವೀ ಪತಿಯ ತಂದೆ ತಾಯಿಯರನ್ನು 'ಓಲ್ಡ್ ಫರ್ನಿಚರ್' ಎಂದೋ 'ರಾಹು, ಕೇತು' ಎಂದೋ ಕರೆಯುವುದನ್ನು ಸ್ವಾತಂತ್ರ್ಯವೆನ್ನಬೇಕೆ! ಅದು ಈಗ ನಡೆಯುತ್ತಿರುವ ತಲೆ ತಗ್ಗಿಸಬೇಕಾದ ಸಂಗತಿ. ಒಮ್ಮೆ ಮಾರ್ಚ್ ತಿಂಗಳ ಮಹಿಳಾ ದಿನಾಚರಣೆಯಂದು ಬೆಂಗಳೂರಿನ ಒಂದು ಕಾಲೇಜಿನಲ್ಲಿ ನನ್ನನ್ನು ಆಮಂತ್ರಿಸಿದ್ದರು. ಇತರ ಬರಹಗಾರ್ತಿಯರೂ ಅಲ್ಲಿದ್ದರು. ಅವರಲ್ಲಿ ಒಬ್ಬ ಸಾಕಷ್ಟು ಹೆಸರು ಮಾಡಿದ ಕವಯಿತ್ರಿ ಆಡಿದ ಮಾತುಗಳು ನನ್ನನ್ನು ದಿಗ್ಭ್ರಮೆಗೊಳಿಸಿದವು. ಭಾಷಣ ಮಾಡುತ್ತಾ ಆಕೆ ಆಗ ತಾನೆ ಕಾಲೇಜ್ ವಿದ್ಯಾರ್ಥಿಗಳು ಹಾಡಿದ್ದ ಶಿವರುದ್ರಪ್ಪನವರ ಕವನ 'ಸ್ತ್ರೀ ಎಂದರೆ ಅಷ್ಟೇ ಸಾಕೆ' ಬಗ್ಗೆ ಆಕ್ಷೇಪಣೆ ವ್ಯಕ್ತಪಡಿಸಿದರು! ಅದರಲ್ಲೂ 'ಮನೆಮನೆಯಲಿ ದೀಪ ಮುಡಿಸಿ, ಹೊತ್ತುಹೊತ್ತಿಗೆ ಅನ್ನ ಉಣಿಸಿ, ತಂದೆ ಮಗುವ ತಬ್ಬಿದಾಕೆ' ಎಂಬ ಸಾಲಿನ ಬಗ್ಗೆ ತಕರಾರು ಮಾಡಿದ ಅವರು "ಹೆಣ್ಣು ಅಂದ್ರೆ ಅಷ್ಟೇನಾ? ಅದನ್ನು ಮೀರಿದ ವ್ಯಾಪ್ತಿ ಆಕೆಗಿಲ್ಲವೆ?" ಅಂತ ಏನೇನೋ ಹೇಳಿದರು! ಹೆಣ್ತನದ, ತಾಯ್ತನದ ವಾತ್ಸಲ್ಯಕ್ಕೆ, ಕಾರುಣ್ಯಕ್ಕೆ ತಲೆಬಾಗಿ ವಂದಿಸುವ ಈ ಮಾತಿಗೆ ಆಕ್ಷೇಪಣೆ ಎಂದರೆ ಅದು 'ಸ್ವಾತಂತ್ರ್ಯ'ವೆ? ಶೋಷಣೆಗೂ, ಕೃತಜ್ಞತೆಗೂ ವ್ಯತ್ಯಾಸ ಉಂಟಲ್ಲವೆ! ಆ ವ್ಯತ್ಯಾಸವನ್ನು ಅರ್ಥಮಾಡಿಕೊಳ್ಳುವ ವಿವೇಚನೆ ಇಲ್ಲದೆ ಮಾತನಾಡಿದರೆ ಅದು 'ಪ್ರಗತಿ'ಯೆ!

ವಿಪರ್ಯಾಸವೆಂದರೆ ಇಂಥ ಭರವಸೆಯ ದಿನಗಳಲ್ಲೂ ಕೂಡಾ ಕರ್ನಾಟಕದ ಎಷ್ಟೋ ಬಡವರ ಮನೆಗಳಲ್ಲಿ ಕೇವಲ ಕೆಲವು ರೂಪಾಯಿಗಳಿಗಾಗಿ ಮನೆಯ ಮಗಳನ್ನು ಉತ್ತರ ಭಾರತದ ಯಾವುದೋ ಊರಿಗೆ ಮದುವೆ ಮಾಡಿ ಕಳಿಸಿಕೊಟ್ಟು ಅಲ್ಲಿ ಮನೆಯ ಗಂಡಸರೆಲ್ಲ ಅವಳನ್ನು ತೃಷೆ ಹಿಂಗಿಸಲು ಬಳಸಿಕೊಂಡು ಕೊನೆಗೆ ಆಕೆ ರೋಗಗ್ರಸ್ತಳಾದ

ಮೇಲೆ ತವರಿಗೆ ತಂದು ಬಿಡುವ ಭೀಕರ ಘಟನೆಗಳು ನಡೆಯುತ್ತಿವೆ. ಇಂದಿಗೂ ಗರ್ಭಿಣಿಯೊಬ್ಬಳು ಅಲ್ಟ್ರಾಸೌಂಡ್ ಮಾಡಿಸಿಕೊಂಡಾಗ ಸರಕಾರದ ಕಾಯಿದೆಯನ್ನು ಉಲ್ಲಂಘಿಸಿ 'ದೇವಿ ನಿಮ್ಮನ್ನು ಕಾಪಾಡ್ತಾಳೆ' ಅಂತಲೋ 'ಕೃಷ್ಣನೇ ಮನೆಯ ದೇವರಾಗ್ತಾನೆ' ಅಂತಲೋ ಮಗುಮ್ಮಾಗಿ ನರ್ಸ್ ಮಗುವಿನ ಲಿಂಗದ ಸೂಚನೆ ಕೊಡುವುದುಂಟು. ಹೆಣ್ಣು ಗರ್ಭವನ್ನು ತೆಗೆಸುವುದುಂಟು. ಹೆಣ್ಣಿನ ಸ್ಥಾನಮಾನದ ಬಗ್ಗೆ ಆಗಿರುವ ಪ್ರಗತಿಯ ವಿಷಯವಾಗಿ ಹೆಮ್ಮೆಪಡುವ ಜೊತೆಯಲ್ಲೇ ಇನ್ನೂ ಸಾಧಿಸಲಾಗದ ಹೆಣ್ಣಿನ ಮೂಲಭೂತ ಸ್ವಾಸ್ಥ್ಯದ ರಕ್ಷಣೆಯನ್ನು ನೆನೆದು ನಿಟ್ಟುಸಿರು ಇಡಬೇಕಾಗಿದೆ, ಮಂಗಳೂರಿನಲ್ಲಿ ಬಾರಿಗೆ ಹೋಗಿ ಹೆಂಗಳೆಯರನ್ನು ಥಳಿಸಿದ ಹಿಂದೂ ಮೂಲಭೂತವಾದಿಗಳ ಸುದ್ದಿ ಬೆಚ್ಚಿ ಬೀಳಿಸುತ್ತಿದೆ! ಈ ಬಗ್ಗೆ ನಾನು ಬರೆದ ಒಂದು ಕವನ ಇಲ್ಲಿದೆ–

**ಶಾಪಗ್ರಸ್ತರು**

**ಒಂದಾನೊಂದು ಕಾಲದಲ್ಲಿ...**
**ಮುಟ್ಟಾದ ಹೆಣ್ಣು ದೂರ ಕೂರಬೇಕಾಗಿತ್ತು**
**ಚಾಪೆ, ಚೊಂಬುಗಳೊಡನೆ**
**ಅಡಿಗೆ ಮನೆಗಂತೂ ಪ್ರವೇಶವಿಲ್ಲ**
**ದೇವರ ಮನೆಯ ಮೇಲೆ ಆಕೆಯ**
**ನೆರಳೂ ಸುಳಿಯುವಂತಿಲ್ಲ**
**ಅಷ್ಟೇ ಯಾಕೆ? ಕೊಳೆ ತೊಳೆಯುವ**
**ಬಚ್ಚಲು ಮನೆಯಲ್ಲೂ ಅವಳಿಗೆ ಪ್ರವೇಶವಿಲ್ಲ**
**ತೊಳೆಯಲಾಗದಂತಹ ಕೊಳಕಿಯೆ ಅವಳು ?**
**ದೇವರಿಂದಲೂ ಪರಿತ್ಯಕ್ತಳೆ ?**

**ತಾಳು, ಇದನ್ನೆಲ್ಲ ನಾನು ಇನ್ನೆಲ್ಲಿಯೋ ಕೇಳಿದ್ದೆ !**
**ಯಾರೂ ಮುಟ್ಟುವಂತಿಲ್ಲ**
**ಮುಟ್ಟಿದರೆ ಬಟ್ಟೆ ಬಿಚ್ಚಿ ಮೈ ತೊಳೆದು ಆಗಬೇಕು ಶುದ್ಧಿ**
**ಹೌದು, ಕೇಳಿದ್ದುಂಟು ಹೊಲೆಯರನ್ನು ಕುರಿತು !**

**ಹೆಣ್ಣಿಗೆ ತಿಂಗಳಲ್ಲಿ ಮೂರು ದಿನದ ಶಾಪ. ಯಾಕೆ ?**
**ಅವಳ ದೇಹ ಹೆಣ್ತನದ ಕರೆಗೆ ಓಗೊಟ್ಟಿದ್ದಕ್ಕೆ**
**ಅಸ್ಪೃಶ್ಯನಿಗೋ ಜೀವನ ಪೂರ್ತಿ ಶಾಪ. ಯಾಕೆ ?**
**ಅವನ ಅಪ್ಪ, ಅಮ್ಮ ಅವನನ್ನು ಹುಟ್ಟಿಸಿದ್ದಕ್ಕೆ**

**ಇಂದು ಸಂಕೋಲೆಗಳನ್ನು ಕಳಚಿ**
**ನಿಂತಿದ್ದಾಳೆ ಹೆಣ್ಣು ಎಂಬ ಸುದ್ದಿ**
**ಮುಟ್ಟು ಮೈಲಿಗೆ ಎಲ್ಲ ಗತಕಾಲದ ಲದ್ದಿ**

**ಆದರೂ ಅಲ್ಲಿ ಇಲ್ಲಿ ಇಣಿಕಿ ತಲೆ ಹಾಕಿ**
**'ನಾನಿಲ್ಲೇ ಇದ್ದೇನೆ' ಎನ್ನುತ್ತಿದೆ**
**ಹೆಣ್ತನಕ್ಕೆ ಅಂಟಿ ಬಂದ ಶಾಪ**

**ಇಗೊ ಇಲ್ಲಿ ಒಂದು ವರದಕ್ಷಿಣೆ ತಾರದ**
**ಮುಗ್ಧ ಬಾಲೆಯ ಕೊಲೆ**
**ಅಗೊ ಅಲ್ಲಿ ದಾರಿಗೆ ಬಾರದವಳ**
**ಮುಖದ ಮೇಲೆ ಎಸೆದ ಆಮ್ಲದ ಕಲೆ**
**ಮೊನ್ನೆ ತಾನೆ ಬಾರಿನಲ್ಲಿ**
**ಹೆಂಗಳೆಯರ ಥಳಿಸಿದ ಹಿಂದೂವಾದಿಗಳ ದ್ವೇಷ ಜ್ವಾಲೆ**

**ಇನ್ನೂ ಇದೆ ಹೋಗಿಲ್ಲ ಸಮಾಜದಲ್ಲಿ**
**ಮುಟ್ಟಿನ ಮೈಲಿಗೆಯ ವಾಸನೆ**
**ಮೈ ಮೇಲೆ ಒಂದಿಷ್ಟು ಪರ್ಫ್ಯೂಮು**
**ಚಿಮುಕಿಸಿಕೊಂಡು ನಗುತ್ತಿದೆ, ಅಷ್ಟೆ**

('ಚಂದನ' ಟೀವಿಯ 'ಬೆಳಗು' ಕಾರ್ಯಕ್ರಮದಲ್ಲಿ ಓದಿದ ಕವನ)

ಪ್ರಪಂಚದ ಎಲ್ಲ ರಾಷ್ಟ್ರಗಳಲ್ಲೂ ಹೆಣ್ಣಿನ ಮೇಲೆ ದಬ್ಬಾಳಿಕೆ, ದೌರ್ಜನ್ಯ ನಡೆಯುತ್ತಲೇ ಇದ್ದು ಇತ್ತೀಚೆಗೆ ಬಹುತೇಕ ಎಲ್ಲ ದೇಶಗಳಲ್ಲೂ ನಿಧಾನವಾಗಿ ಪರಿಸ್ಥಿತಿ ಸುಧಾರಿಸುತ್ತಿದೆ. ಚೀನಾದಲ್ಲಿ ಹೆಣ್ಣು ಮಕ್ಕಳಿಗೆ ಬಿಗಿಯಾದ ಶೂ ತೊಡಿಸಿ, ಅವಳ ಪಾದಗಳು ಬೆಳೆಯದಂತೆ ಮಾಡುತ್ತಿದ್ದರು– ಪುಟ್ಟ ಪಾದಗಳೇ ಲಕ್ಷಣ ಎಂಬ ಕುರುಡು ನಂಬಿಕೆಯಿಂದ. ಪಾಪ ಆ ಹೆಣ್ಣುಮಕ್ಕಳು ನೋವಿನಲ್ಲಿ ಎಷ್ಟು ವಿಲಿವಿಲಿ ಒದ್ದಾಡಿದ್ದರೋ! ಅರೇಬಿಯನ್ ದೇಶಗಳಲ್ಲಿ ನೀತಿಬಾಹಿರವಾದ ಸಂಬಂಧ ಹೊಂದಿದ ಅಪವಾದಕ್ಕೆ ಹೆಣ್ಣನ್ನು ಕಲ್ಲು ತೂರಿ ಸಾಯಿಸುತ್ತಿದ್ದರು. ಸೌದಿಯಲ್ಲಿ ಇಂದಿಗೂ ಅಂತಹ ಹೆಣ್ಣುಗಳನ್ನು ನಡುಪೇಟೆಯಲ್ಲಿ ತಲೆ ಕಡಿದು ಕೊಲ್ಲುತ್ತಾರೆ! ಆ ಸಂಬಂಧದಲ್ಲಿ ಸಹಭಾಗಿಯಾದ ಗಂಡಿಗೆ ಯಾವ ಶಿಕ್ಷೆಯೂ ಇಲ್ಲ! ಎಷ್ಟೋ ಮುಸ್ಲಿಂ ದೇಶಗಳಲ್ಲಿ ವರ್ಷಾನುಗಟ್ಟಲೆ ಜೊತೆಯಲ್ಲಿ ಬಾಳಿದ ಹೆಂಡತಿಯನ್ನು ತ್ರಿವಳಿ ತಲ್ಲಾಕ್ ಕೊಟ್ಟು ನಿರ್ಗತಿಕಳನ್ನಾಗಿ ಮಾಡುವ ಕ್ರಮ ಈಗಲೂ ಜಾರಿಯಲ್ಲಿದೆ! ಹೀಗೆ ಎಲ್ಲ ದೇಶಗಳಲ್ಲೂ ಶತಮಾನಗಳಿಂದ ಮೌನವಾಗಿ ಶೋಷಣೆಯನ್ನು ಸಹಿಸಿಕೊಂಡು ಬಂದಿದ್ದಾಳೆ ಹೆಣ್ಣು. ಆದರೂ ನಿರಂತರವಾಗಿ ಮನುಜಕುಲಕ್ಕೆ ವಾತ್ಸಲ್ಯ ಧಾರೆ ಎರೆಯುತ್ತಲೇ ಇದ್ದಾಳೆ. ವಿಷವನ್ನು ನುಂಗಿ ಅಮೃತವನ್ನು ಎರೆಯಲು ಬೇಕಾದ ಧೀಶಕ್ತಿಯಾದರೂ ಎಂಥದು?

ಎಲ್ಲೋ ಕೇಳಿದ ಕಥೆ– ಒಂದು ಸರ್ಪ ಸಾಧುವೊಬ್ಬನ ಉಪದೇಶ ಕೇಳಿದ ಮೇಲೆ ಕಚ್ಚುವುದನ್ನು ಬಿಟ್ಟಿತಂತೆ. ಅದನ್ನು ತಿಳಿದ ಜನ ಅದಕ್ಕೆ ಹೊಡೆಯುವುದು, ಬಡಿಯುವುದು ಮಾಡಿ ಹಿಂಸೆ ಕೊಡುತ್ತಿದ್ದರಂತೆ. ಮತ್ತೆ ಅದೇ ದಾರಿಯಾಗಿ ಬಂದ ಸಾಧು ಇದನ್ನು

ನೋಡಿ – "ನೀನು ಕಡಿಯಬಾರದು ನಿಜ. ಆದರೆ ಬುಸುಗುಟ್ಟಬಾರದು ಅಂತ ಹೇಳಿಲ್ಲವಲ್ಲ. ಹೆಡೆ ಎತ್ತಿ ಬುಸುಗುಟ್ಟು, ನಿನ್ನ ರಕ್ಷಣೆ ಮಾಡಿಕೊ" ಅಂದನಂತೆ. ಹಾಗೆಯೇ ಇದೀಗ ಹೆಣ್ಣು ಹೆಡೆ ಬಿಚ್ಚಿದ್ದಾಳೆ, ಬುಸುಗುಟ್ಟಿ ಎದ್ದು ನಿಂತಿದ್ದಾಳೆ!

ಕವಿ ಬಂಕಿಮ್ ಚಂದ್ರ ಚಟರ್ಜಿ ಅವರು ಬರೆದ 'ವಂದೇಮಾತರಂ' ಗೀತೆಯಲ್ಲಿ ಯಾರೂ ಅಷ್ಟಾಗಿ ಹಾಡದಿರುವ ಇನ್ನೊಂದು ನುಡಿಯಲ್ಲಿ ಈ ಕೆಳಕಂಡ ಸಾಲು ಬರುತ್ತದೆ.

"ಅಬಲೆ? ಮಾ ತುಮಿ ಅಬಲೆ, ಬಹುಬಲಧಾರಿಣಿ"

(ಅಬಲೆಯೆ? ನೀನು ಅಬಲೆಯಲ್ಲ ಬಹುಬಲಧಾರಿಣಿ) ಎಂದು. ಹೆಣ್ಣು ಬಹುಬಲಧಾರಿಣಿ ಎಂಬ ನಿತ್ಯಸತ್ಯವನ್ನು ಸಮಾಜ ತಡವಾಗಿಯಾದರೂ ಈಗ ಅರಿತುಕೊಳ್ಳುತ್ತಿದೆ. ಬಹುಶಃ ಇತ್ತೀಚೆಗೆ ಉಂಟಾದ ಎಲ್ಲ ಬದಲಾವಣೆಗಳ ಪೈಕಿ ಇದು ಅತ್ಯಂತ ಮಹತ್ವಪೂರ್ಣವಾದ ಬದಲಾವಣೆ.

*

# ಚಿರಜೀವಿನೀ

■ ಮಾನಸ ವೆಂಕಟಸುಬ್ಬಯ್ಯ, Pleasanton, CA.

“ನಿನ್ನ ಮರೆಯಲಿಲ್ಲ ನಾವು !”
“ಇಗೋ, ನನ್ನ ಮತ ನಿನಗಾಗಿ !”
“ಕ್ಷಮಿಸು ಗೆಳತಿ ಸವಿತಾ,
ನಮ್ಮೀ ಕಾಲ ಮೀರಿದ ಅರಿವಿಗೆ –
ತಡವಾಗಿ ಆದ ಸುಷುಪ್ತಿಯ ಹರಿವಿಗೆ,”
– ಕಂಬನಿಗರೆದರು ಐರ್ಲೆಂಡಿಗರು

ಪ್ರಕೃತಿಯೇ ನೀಡಿತ್ತಲ್ಲ
ಎಳೆಗರ್ಭಕೆ ಅಳಿವಿನಾದೇಶ
ಇರಲಿಲ್ಲ ಅಂಕುರಕೆ ಚಿಗುರುವಾದೇಶ
ಅದಕೇಕೆ ಆರೈಕೆಯ ವಿಶೇಷ ?

ಅರೆರೆ, ಆದದ್ದೇನು ?
“ಭ್ರೂಣಕ್ಕೆ ಹೃದಯದ ಬಡಿತವಿದೆ,”
– ಕೂಗಿ ಬೊಬ್ಬಿಟ್ಟರಲ್ಲ
ನಂಜು ನಿನ್ನ ನೆಕ್ಕಿ ಹೀರುತ್ತಿದ್ದರೂ
ಮೌನವಾದರಲ್ಲ
ನಿನಗಿರಲಿಲ್ಲವೇ ಹೃದಯದ ಬಡಿತ !
ಬಾಳಿಬದುಕುವ ತುಡಿತ
ಪ್ರೀತಿಸುವ ಮನಗಳ ಮಿಡಿತ

ಕೇಳದಾಯ್ತು ಯಾವುವೂ
ಕಾಣದಾಯ್ತು ಎಲ್ಲವೂ

**ಅಧಿಕಾರಶಾಹಿಗೆ**
**ಅಮಾನವೀಯ ಸಂವಿಧಾನಕ್ಕೆ**
**ಕುರುಡು ಧಾರ್ಮಿಕತೆಗೆ**

**ಮಲಗಿನ್ನು ನೀನು**
**ತಬ್ಬಿಕೊಳ್ಳಲಿ ಚಿರಶಾಂತಿ**
**ಎಚ್ಚೆತ್ತಿದೆ**
**ಐರ್ಲೆಂಡಿನ ಅಂತಃಸಾಕ್ಷಿ**
**ಜಾಗೃತವಾಗಿದೆ**
**ವಿಶ್ವನಾರೀಸಮೂಹ**
**ಅರಿವಾಗಿದೆ**
**ಬೇಕು ಧಾರ್ಮಿಕತೆಗೆ ಮಾನವೀಯತೆಯ ಎಲ್ಲೆ**
**ನಿಂತಿದೆ ಆಗಸದೆತ್ತರಕೆ**
**ನಿನ್ನ ಬಲಿದಾನ**
**ನೀನಾದೆ ಕ್ರಾಂತಿಯ ಕರ್ತೃ –**
**ಬದಲಾವಣೆಯ ಸವಿತೃ**
**ನೀನಾದೆ ಚಿರಜೀವಿನೀ**

*

.........................................................................................

ಸವಿತಾ ಹಾಲಪ್ಪನವರ, ೨೦೧೨ರಲ್ಲಿ ಐರ್ಲೆಂಡಿನ ಅತಿ ನಿರ್ಬಂಧಿತ ಗರ್ಭಪಾತ ನಿಷೇಧ ಕಾಯ್ದೆಗೆ ಬಲಿಯಾದ ಕನ್ನಡಿತಿ. ಭ್ರೂಣಕ್ಕೂ ತಾಯಿಗಿರುವಷ್ಟೇ ಬದುಕಿನ ಹಕ್ಕಿದೆಯೆಂದು ಸಾರುವ ಅಲ್ಲಿನ ಸಂಪ್ರದಾಯವಾದಿ ಕ್ಯಾಥೊಲಿಕ್ ಧಾರ್ಮಿಕ ಕಾನೂನು ವೈದ್ಯಕೀಯ ತುರ್ತು ಪರಿಸ್ಥಿತಿಯಲ್ಲೂ ಗರ್ಭಪಾತಕ್ಕೆ ಅವಕಾಶ ನೀಡುವುದಿಲ್ಲ. ಆರೋಗ್ಯ ಹದಗೆಟ್ಟು ಸವಿತಾ ಸಾವಿನಂಚಿಗೆ ಜಾರುತ್ತಿದ್ದರೂ ಭ್ರೂಣಕ್ಕೆ ಹೃದಯದ ಬಡಿತವಿದೆ, ನಾವಿದನ್ನು ಮುಟ್ಟುವುದಿಲ್ಲ ಎಂದು ಬೆನ್ನು ತಿರುಗಿಸಿದ ವೈದ್ಯರ ನಿರ್ಲಕ್ಷ್ಯದಿಂದ ಗತಿಸಿದ ಸವಿತಾಳ ದುರಂತ, ಐರ್ಲೆಂಡಿನ ಕಠೋರ ಕಾನೂನಿನತ್ತ ಇಡೀ ವಿಶ್ವವೇ ಬೆದರುಗಣ್ಣಿನಿಂದ ನೋಡುವಂತೆ ಮಾಡಿತು. ಅನೇಕ ಹೆಣ್ಣುಮಕ್ಕಳ ಸಾವಿಗೆ ಕಾರಣವಾದ ಕಾನೂನು ಬದಲಾಯಿಸಲು ಆ ದೇಶದಲ್ಲಿ ಹೋರಾಡುತ್ತಿದ್ದವರಿಗೆ ಸವಿತಾಳ ಮರಣ ಪ್ರಧಾನ ಚಾಲನ ಶಕ್ತಿಯಾಯಿತು. ಈ ವರ್ಷ, ಮೇ ೨೫ ರಂದು ಆ ಅಮಾನುಷ ಕಾನೂನಿನ ರದ್ದತಿಗೆ ಐರ್ಲೆಂಡ್ ಜನತೆ ತಮ್ಮ ಬಹುಮತದ ಬೆಂಬಲ ನೀಡಿದರು. ನೂರಾರು ಜನರು ಡಬ್ಲಿನ್ ನಗರದಲ್ಲಿರುವ ಸವಿತಾಳ ಭಿತ್ತಿಚಿತ್ರದ ಮುಂದೆ ನಿಂತು "ನಿನ್ನ ಮರೆಯಲಿಲ್ಲ ನಾವು," ಎಂದು ಶ್ರದ್ಧಾಂಜಲಿ ಸಲ್ಲಿಸಿದರು.

# ಜಡೆಬಿಲ್ಲೆ

■ ಮಂಗಳಾ ಕುಮಾರ್, San Jose, CA.

ಬೈತಲೆ ಇಲ್ಲದೆ ಕೂದಲೆಲ್ಲ ಮೇಲೆತ್ತಿ ನಾರದ ಮುನಿ ಶೈಲಿಯ ತುರುಬು ಕಟ್ಟಲೋ ಇಲ್ಲ ಬೈತಲೆ ತೆಗೆದು, ಭುಜಗಳ ಮಧ್ಯೆ ಕತ್ತಿನ ಮೇಲೆ ನೀಟಾಗಿ ಕೂರುವ ಬನ್ನಿನ ಹಾಗೆ ಸುತ್ತಿಕೊಳ್ಳಲೋ. ಸ್ಟೈಲಿಂಗ್ ಐರನ್ನಿಂದ ಕರ್ಲ್ ಮಾಡಿ ಇಳಿಬಿಡೋದೆ ಚೆಂದ. ಮಿಹಿರ್ ಯಾವಾಗ ಇಷ್ಟು ದೊಡ್ಡೋನಾಗಿಬಿಟ್ಟ. ಅಲ್ಲೋ ಇಲ್ಲೋ ಒಂದೊಂದ್ ಬಿಳಿ ಕೂದ್ಲು, ಡೈ ಮಾಡಕ್ಕೆ ಶುರು ಮಾಡಿ ಎಷ್ಟೋ ವರ್ಷ ಆಗಿದ್ರೂ ವಯಸ್ಸಾಯ್ತು ಅಂತ ಅನ್ನಿಸ್ತಾ ಇರ್ಲಿಲ್ಲ. ಮಿಹಿರ್ ಮದುವೆ ಮಾಡ್ಕೊಂಡು ಇನ್ನೊಂದೆರಡ್ ವರ್ಷಕ್ಕೆ ಮಗು ಆದ್ರೆ ಅಜ್ಜಿ ಅನ್ನಿಸ್ಕೋತೀನಿ. ಮಗೂಗೆ ಅಜ್ಜಿ ಅನ್ಬೇಡ, ಗ್ರ್ಯಾಂಡ್ ಮಾ ಖಂಡಿತ ಬೇಡ, "ಪೂರ್ವಿ ಅಜ್ಜಿನ ಶಾರ್ಟ್ ಮಾಡಿ ಪೂಜಿ ಅನ್ನು ಅಂತ ಹೇಳ್ತೀನಿ. ಮಗು ನೋಡಕ್ಕೆ ಹೇಗಿರತ್ತೆ? ಜನನಿ ಮಗಳು ನಿಕಿತಾ, ಅವಳ ಬಿಳೀ ಗಂಡ ಬೆನ್, ಮಕ್ಕಳ ಬೇಬಿ ಬ್ಲೂ ಐಸ್, ಗೋಲ್ಡನ್ ಹೇರ್ ಅಥವಾ ದೀಪಕ್-ಅಲೀಶಾರ ಮಕ್ಕಳ ಹಾಗೆ ಕಪ್ಪು ಕೂದಲು, ತಿದ್ದಿದ ಹಾಗೆ ಕಣ್ಣು, ಹುಬ್ಬು. ಕಂದು ಬಣ್ಣದ ಅಮ್ಮ-ಬಿಳೀ ತಂದೆ, ಅಥವಾ ಕಂದು ಬಣ್ಣದ ಅಪ್ಪ-ಬಿಳೀ ತಾಯಿ ಕಾಂಬಿನೇಷನ್, ಮುದ್ದಾದ ಮಕ್ಕಳು. ಮಿಹಿರನ ಮಕ್ಕಳೂ ಕೂಡ...

ತಲೆ ಬಾಚಿಕೊಳ್ಳುತ್ತ ಪೂರ್ವಿ ಯೋಚಿಸುತ್ತಿದ್ದಳು. ಕಣ್ಣಿನ ಕೆಳರೆಪ್ಪೆಯ ಸುತ್ತ ಎಳೆದ ಕಾಡಿಗೆಯ ಗೆರೆ ದಪ್ಪವಾಗಿಬಿಟ್ಟಿತು. ಅದನ್ನು ಸರಿಪಡಿಸಲು ಮೇಕಪ್ ಪ್ಯಾಡ್ ಎಲ್ಲಿದೆ ಎಂದು ತಡಕುತ್ತಿದ್ದಾಗ ಅಲ್ಲೇ ಕನ್ನಡಿಯ ಸುತ್ತ ಇಟ್ಟಿದ್ದ ಲಿಪ್‌ಸ್ಟಿಕ್ ಟ್ಯೂಬು, ಫೌಂಡೇಶನ್ ಎಲ್ಲ ಉರುಳಿ ಹರಡಿಕೊಂಡವು. ಟೈ ಕಟ್ಟಿಕೊಳ್ಳುತ್ತ ಪಕ್ಕದ ಕನ್ನಡಿಯ ಮುಂದೆ ಬಂದು ನಿಂತ ಮೋಹನ್ ಅವಳ ಹೆಗಲು ತಟ್ಟುತ್ತ "ಟೆನ್ಷನ್ ಮಾಡಿಕೋಬೇಡ. ಟೇಕ್ ಇಟ್ ಈಸಿ" ಎಂದ. ಯಾವ ಒಡವೆಗಳನ್ನು ಹಾಕಿಕೊಳ್ಳಲಿ ಎಂದು ಇರುವುದೆಲ್ಲ ಹೊರತೆಗೆದಾಗ ಜಡೆಬಿಲ್ಲೆಯೂ ಹೊರಬಂತು.

ಎರಡು ವರ್ಷಗಳ ಹಿಂದಿನ ಮಾತು. "ಮಾಮ್, ಡ್ಯಾಡ್, ಈ ಸಲ ಮೆಮೋರಿಯಲ್ ವೀಕೆಂಡಿಗೆ ಅಲ್ಲೇ ಬರ್ತೀನಿ. ಜೊತೆಗೆ ಸ್ಟೆಫನೀನ ಕರ್ಕೊಂಡ್ ಬಂದ್ರೆ ಪರವಾಗಿಲ್ವಾ? ಅವಳಿಗೆ ಅಲ್ಲೇ ನೀವೆಲ್ಲ ಇರೋವಾಗ ಪ್ರೊಪೋಸ್ ಮಾಡೋಣ ಅನ್ಕೊಂಡಿದೀನಿ. ಒಂದು ವರ್ಷದಿಂದ ಹಿಂಟ್ ಕೊಡ್ತಾ ಬಂದಿದಾಳೆ. ಐ ಫೀಲ್ ರೆಡಿ ಟು ಕಮಿಟ್". ಅವಳು ಅಲ್ಟಿಮೇಟಂ ಕೊಟ್ಟಿರಬೇಕು. ಅಮೆರಿಕನ್ ಡ್ರೀಮ್ ಅಂದ್ರೆ ಅದೇ ತಾನೆ. ಗಂಡ, ಹೆಂಡತಿ, ಎರಡು ಮಕ್ಕಳು, ಡ್ರೈವ್ ವೇನಲ್ಲಿ ಎರಡು ಕಾರು, ಸಬರ್ಬಿನಲ್ಲಿ ವೈಟ್ ಪಿಕೆಟ್ ಫೆನ್ಸ್ ಇರೋ ಒಂದು ಮನೆ. ಆಮೇಲೆ ಒಂದೊಂದಾಗಿ ಇನ್ನೂ ಬೇರೆ ಬೇರೆ ಕನಸುಗಳು ನನಸಾಗಬೇಕು. ಮಕ್ಕಳಿಗೆ ಪ್ರೈವೇಟ್ ಸ್ಕೂಲು, ಲಿಟ್ಲ್ ಲೀಗ್ ಸಾಕರ್, ಆಮೇಲೆ ಹೈಸ್ಕೂಲು, ಕಾಲೇಜು, ಅವರ ಮದುವೆ, ಮಕ್ಕಳು ಚಕ್ರ ಪೂರ್ತಿ ಒಂದು ಸುತ್ತು ಸುತ್ತಿ ಹೊಸ ಚಕ್ರ ಶುರು. ಅಮೆರಿಕನ್ ಡ್ರೀಮ್ ಏನು ಬಂತು, ಪ್ರಪಂಚದಲ್ಲಿ ಎಲ್ಲಾ ಕಡೇನೂ ಹೀಗೆ ಅಲ್ಲವಾ. ನಾವೂ ಇದೇ ಕನಸುಗಳನ್ನ ಹುಟ್ಟಿಸಿ, ಬೆಳೆಸಿ, ದೊಡ್ಡದು ಮಾಡ್ತಾ ಬರ್ತೀವಿ. ನಮಗೆಷ್ಟು ಒಳ್ಳೇದಾಗಿದೆಯೋ ಅದಕ್ಕಿಂತ ಸಾವಿರಪಟ್ಟು ಒಳ್ಳೇದು ಮಕ್ಕಳಿಗಾಗ್ಲಿ ಅಂತ ದೇವರನ್ನ ಬೇಡ್ಕೋತೀವಿ. ಬಿದ್ದು ಪೆಟ್ಟು ಮಾಡ್ಕೊಳ್ದೆ ದೊಡ್ಡೋರಾಗೋದಕ್ಕೆ ಆಗಲ್ಲ ಅಂತ ಗೊತ್ತಿದ್ರೂ ಬೀಳದೇ ಇರೋ ಹಾಗೆ ಕಣ್ಣಲ್ಲಿ ಕಣ್ಣಿಟ್ಟು ನೋಡ್ತಾ ಸಾಕ್ತೀವಿ. ಸೀನು, ನೆಗಡಿ, ಕೆಮ್ಮು, ಚಿಕನ್‌ಪಾಕ್ಸ್, ಕಿವಿ ನೋವು ಎಲ್ಲ ಸಹಿಸಿಕೊಂಡು ದೊಡ್ಡೋರಾದ್ರೆ ಸಾಕಪ್ಪ ಅಂತ ನಿದ್ದೆಗೆಡ್ತೀವಿ. ಯಾರ ಕೆಟ್ಟ ಕಣ್ಣೂ ಬೀಳ್ದೇ ಇರಲಿ ಅಂತ ದೃಷ್ಟಿ ನಿವಾಳಿಸಿ ಹಾಕ್ತೀವಿ. "ಐ ಆಮ್ ರೆಡಿ ಟು ಕಮಿಟ್" ಕೇಳಿ ಒಂಥರಾ ನಡುಕ ಯಾಕೆ? ಬಿಳೀ ಹುಡುಗಿಯೊಬ್ಬಳು ಒಂದಲ್ಲ ಒಂದು ದಿನ ಸೊಸೆಯಾಗಿ ಬರಬಹುದು ಎಂದು ಮನಸ್ಸಿನ ಆಳದಲ್ಲಿ ಒಮ್ಮೊಮ್ಮೆ ಮೂಡಿದ್ದರೂ ಸಹ, ಮಗ ಕನ್ನಡದವರು ಹೋಗಲಿ, ನಮ್ಮ ದೇಶದ ತಂದೆತಾಯಿಗೆ ಹುಟ್ಟಿದ ಹುಡುಗಿಯನ್ನು ಮದುವೆ ಮಾಡಿಕೊಳ್ಳಲಿ ಎನ್ನುವ ಒಂದು ಆಸೆಯೂ ಇತ್ತು. ಜಡೆಬಿಲ್ಲೆಯನ್ನು ಎದೆಗೊತ್ತಿಕೊಂಡು ಪೂರ್ವಿ ಹಾಗೇ ನಿಂತಳು.

ಗರ್ಭಿಣಿಯಾಗಿದ್ದಾಗ ಪೂರ್ವಿಯ ಆರೋಗ್ಯದಲ್ಲಿ ಹಲವಾರು ಏರುಪೇರುಗಳಾಗಿದ್ದವು. ಅವಳಿಗೇನಾಗುವುದೋ, ಮಗುವಿಗೆ ಏನಾಗುವುದೋ ಎನ್ನುವ ಹೆದರಿಕೆಯಿಂದ ಅವಳ ತಾಯಿ ಲಲಿತೆ ಮೊರೆಹೋಗದ ಜ್ಯೋತಿಷಿಯೇ ಇರಲಿಲ್ಲ. ನನ್ನ ಜಾತಕವನ್ನು ಪರಿಶೀಲಿಸಿದವರಿಗೆ, ನಮ್ಮ ಮನೆಯ ಒಂದು ಕೊಂಬೆ ಊಹಿಸಿಕೊಂಡೂ ಇರದಿದ್ದಂತ ಇನ್ಯಾವುದೋ ವಂಶದ ಬಳ್ಳಿಯ ಜೊತೆ ಬೆಸೆದುಕೊಂಡು ಹೋಗಬಹುದು ಎಂದು ಗೊತ್ತಿತ್ತೆ? ಕೈ ನೋಡಿ "ಮಕ್ಕಳ ಯೋಗ, ಮನೆ ಕಟ್ಟುವ ಯೋಗ" ಎಂದೆಲ್ಲ ಭವಿಷ್ಯವಾಣಿ ಹೇಳಿದ್ದ ಹಸ್ತಸಾಮುದ್ರಿಕರಿಗೆ ಕೈಯ ಗೆರೆಗಳಲ್ಲಿ ಈ ಹೊಸ ಚಿತ್ರ ಕಾಣಿಸಿರಲೇ ಇಲ್ಲ. ಕವಡೆಗಳ ಗಣಿತ "ಇದು ನಡೆಯುತ್ತೆ" ಅಥವಾ "ತಿಪ್ಪರಲಾಗ ಹಾಕಿದ್ರೂ ಇದು ಆಗಲ್ಲ" ಎಂದು ತೋರಿರಲಿಲ್ಲ. ಗಿಣಿಶಾಸ್ತ್ರದವನು ಜಿಡ್ಡುಗಟ್ಟಿದ್ದ ಕಾರ್ಡುಗಳ ಕಡತ

ತೆಗೆದು "ಗಿಣಿ ರಾಮಾ, ಸರಿಯಾಗಿ ಹೇಳಪ್ಪ" ಎಂದು ಹೇಳಿದ್ದಾಗ, ಗಿಣಿ "ಈ ಕಡತದಲ್ಲಿ ಇಲ್ಲದಿರುವ ವಿಶೇಷ ಇನ್ನೇನೋ ಇದೆ" ಎಂದು ಕಡತವನ್ನು ಪಕ್ಕಕ್ಕೆ ತಳ್ಳಿ ಸೂಚಿಸಿರಲಿಲ್ಲ. ಕಾಲಚಕ್ರ ಉರುಳಿ ಬಂದಿರುವ ದಾರಿಯಲ್ಲಿ ಈ ಜಡೆಬಿಲ್ಲೆ ಎಲ್ಲೆಲ್ಲಿ ಹೋಗಬಹುದು ಅನ್ನುವುದನ್ನ ಯಾರು ಕನಸು ಕಂಡಿದ್ದರು? ಪೂರ್ವಿಯ ತಲೆಯಲ್ಲೂ ಚಕ್ರಗಳು ಉರುಳುತ್ತಿದ್ದವು.

ಆ ಜಡೆಬಿಲ್ಲೆ ಮೂಲತಃ ಪೂರ್ವಿಯ ಮುತ್ತಜ್ಜಿ ಪಾರ್ವತಿಯದಾಗಿದ್ದು, ನಂತರ ಅವಳ ಅಜ್ಜಿ ಲಕ್ಷ್ಮಿ ಮತ್ತು ತಾಯಿ ಲಲಿತೆಯರ ಜಡೆಗಳನ್ನೂ ಏರಿ ಮೆರೆದಿತ್ತು. ಮುತ್ತಜ್ಜಿ, ಅಜ್ಜಿ ಇಬ್ಬರೂ ಅದನ್ನು ದಿನಾ ಧರಿಸುತ್ತಿದ್ದು, ಅಮ್ಮನೂ ಚಿಕ್ಕ ವಯಸ್ಸಿನಲ್ಲಿ ಅದನ್ನು ಬಹಳಷ್ಟು ಉಪಯೋಗಿಸುತ್ತಿದ್ದಳಂತೆ. ಲಲಿತೆಯ ಒಬ್ಬಳೇ ಹೆಣ್ಣುಮಗಳಾದ ಪೂರ್ವಿ ನಾಲ್ಕು ವರ್ಷದವಳಿದ್ದಾಗ ಜರಿಲಂಗ ತೊಟ್ಟು, ಮಲ್ಲಿಗೆ ಮೊಗ್ಗಿನ ಜಡೆ ಹಾಕಿಸಿಕೊಂಡು, ಆ ಜಡೆಬಿಲ್ಲೆಯನ್ನು ತಲೆಗೇರಿಸಿ ತೆಗೆಸಿಕೊಂಡಿದ್ದ ಫೋಟೋ ಇನ್ನೂ ಇದೆ. ಆದರೆ ನಂತರ ಕಾನ್ವೆಂಟ್ ಸ್ಕೂಲುಗಳ ಪ್ರಭಾವದಿಂದ ಬಾಬ್ ಕಟ್ ಮಾಡಿಸಿಕೊಂಡಿದ್ದ ಕೂದಲನ್ನು ಉದ್ದಕ್ಕೆ ಬೆಳೆಸಿರಲೇ ಇಲ್ಲ. ಹಾಗಾಗಿ, ಬಾಲ್ಯದ ದಿನಗಳಲ್ಲಿ ಆ ಜಡೆಬಿಲ್ಲೆ ತುಂಬ ಅಪರೂಪವಾಗಿ ಆಗೊಮ್ಮೆ ಈಗೊಮ್ಮೆ ಹೊರಬಂದು, ಆಮೇಲೆ ಭದ್ರವಾಗಿ ಬೀರುವಿನಲ್ಲಿ ಅಡಗಿ ಕುಳಿತಿರುತ್ತಿತ್ತು. ತನ್ನ ತಾಯಿ ಮತ್ತು ಅಜ್ಜಿಯರ ನೆನಪಿನ ಕುರುಹು ಎನ್ನುವ ಭಾವುಕತೆಯಿಂದ ಪೂರ್ವಿಯ ತಾಯಿ ಲಲಿತಾ ಯಾವತ್ತೂ ಅದನ್ನು ಕರಗಿಸಿ ಇನ್ನೇನೋ ಒಡವೆ ಮಾಡಿಸುವ ಯೋಚನೆ ಮಾಡಿರಲಿಲ್ಲ. ಅದರಲ್ಲಿದ್ದ ಹಳೆಯ ಕಾಲದ ಮುತ್ತುರತ್ನಗಳು ಬಹಳ ಬೆಲೆಯುಳ್ಳದ್ದಾಗಿ, ಅಂತಹ ಗುಣಮಟ್ಟವುಳ್ಳ ಆಭರಣಗಳು ಸಿಗುವುದೇ ಕಷ್ಟ ಎಂದು ಪೂರ್ವಿಗೆ ಕಿವಿಮಾತು ಯಾವಾಗಲೂ ಕೇಳುತ್ತಿತ್ತು. ಆ ಹಳೆಯ ಕಾಲದ ಜಡೆಬಿಲ್ಲೆಯನ್ನು ಮತ್ತೆ ಪೂರ್ವಿ ಧರಿಸುವ ಸಂದರ್ಭ ಬಂದಿದ್ದು ಅವಳ ಮದುವೆಯಲ್ಲೇ. ಮುತ್ತಜ್ಜಿಯ ಆಶೀರ್ವಾದದ ಜೊತೆಗೆ ಹಿರೀ ಮುತ್ತೈದೆಯೊಬ್ಬರ ಒಡವೆಯೊಂದನ್ನು ತೊಡುವುದು ಸಂಪ್ರದಾಯ ಎಂದು ಅದನ್ನು ಅವಳು ಧರಿಸಲೇಬೇಕು ಎಂದು ತಾಯಿ ಲಲಿತೆಯ ಅಭಿಪ್ರಾಯವಾಗಿತ್ತು. ಆದರೆ ಹಳೆಯ ಕಾಲದ ವಧುವಿನಂತೆ ಹೂವಿನ ಜಡೆಯ ಅಲಂಕಾರ ಮಾಡಿಕೊಳ್ಳಲು ಖಂಡಿತ ಒಪ್ಪದಿದ್ದ ಅವಳು ಅದನ್ನು ಜಡೆಗೇರಿಸುವ ಬದಲು ಒಂದು ಸರಕ್ಕೆ ಪದಕದಂತೆ ಹಾಕಿ ಅದನ್ನು ಕತ್ತಿಗೆ ತೂಗು ಹಾಕಿಕೊಂಡಿದ್ದಳು.

ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ದಾಟಿ ಬಂದಿದ್ದ ಈ ಜಡೆಬಿಲ್ಲೆ ಕೇವಲ ಒಂದು ಆಭರಣ ಮಾತ್ರ ಎನಿಸಿಕೊಂಡಿರಲಿಲ್ಲ. ಆ ಜಡೆಬಿಲ್ಲೆಯನ್ನು ಹೊರತೆಗೆದಾಗೆಲ್ಲ ಅಮ್ಮ ಅದನ್ನು ಕಣ್ಣಿಗೆ ಒತ್ತಿಕೊಳ್ಳುತ್ತಿದ್ದಳು. "ಅದನ್ನ ಯಾಕೆ ಕಣ್ಣಿಗೆ ಒತ್ತಿಕೊಳ್ತೀಯ? ದೇವರಾ ಅದು?" ಐದೋ ಆರೋ ವರ್ಷದವಳಾದ ಪೂರ್ವಿಯ ಪ್ರಶ್ನೆಗೆ ಅಮ್ಮ ಉತ್ತರಿಸಿದ್ದಳು "ಇದು ದೇವ್ರಲ್ಲ ಪುಟ್ಟಿ. ಆದರೆ ದೇವರಂತ ಅಜ್ಜಿ ನನಗೆ ಕೊಟ್ಟಿರೋ ವಸ್ತು. ಅಜ್ಜೀನ ಎಲ್ರೂ ದೇವತೆ ಅಂತಾನೇ ಕರೀತಾ ಇದ್ರಂತೆ. ಅವರ ಆಶೀರ್ವಾದ

ಇದು. ನಮ್ಮನ್ನ ಯಾವಾಗ್ಲೂ ಕಾಪಾಡ್ಲಿ ಅಂತ ಕಣ್ಣಿಗೆ ಒತ್ತಿಕೊಳ್ಳೋದು". ದೇವರ ಮುಂದೆ ನಿಲ್ಲಿಸಿ, ಶ್ಲೋಕಗಳನ್ನು ಹೇಳಿಸಿ, "ವಿದ್ಯೆ ಕೊಡು, ಬುದ್ಧಿ ಕೊಡು, ಆರೋಗ್ಯ, ಐಶ್ವರ್ಯ ಎಲ್ಲಾ ಕೊಟ್ಟು ಕಾಪಾಡು" ಎಂದು ಹೇಳಿಸುತ್ತಿದ್ದ ಅಮ್ಮನಿಂದ ಅಷ್ಟು ಹೊತ್ತಿಗೆ ಪೂರ್ವಿಗೆ ದೇವರು, ಕಾಪಾಡು, ಎನ್ನುವ ಪದಗಳ ಬಳಕೆಯೂ, ಅರ್ಥವೂ ಸ್ವಲ್ಪ ಆಗಿತ್ತು. ಅಮ್ಮ ಜಡೆಬಿಲ್ಲೆಯನ್ನು ಕಣ್ಣಿಗೆ ಒತ್ತಿಕೊಂಡಾಗೆಲ್ಲ ಅವಳೂ ಹಾಗೇ ಮಾಡುತ್ತಿದ್ದಳು.

ಬಳಗದವರ ಮನೆಗಳಲ್ಲಿ, ಮದುವೆ, ಮುಂಜಿಗಳಿಗೆ ಹೋದಾಗೆಲ್ಲ, ಪಾರ್ವತಿ ಅಜ್ಜಿಯ ಗುಣಗಾನ ತಪ್ಪದೆ ನಡೆಯುತ್ತಿತ್ತು. "ಆಗಿನ ಕಾಲದಲ್ಲಿ ಯಾವುದೋ ಒಂದು ಸಣ್ಣ ಹಳ್ಳೀಲಿದ್ದುಕೊಂಡು, ತನ್ನ ಪಾಡಿಗೆ ತಾನು ಮಕ್ಕಳನ್ನ ಸಾಕಿಕೊಂಡು ಇರ್ತಿದ್ದ ಹೆಂಗಸೊಬ್ಬಳು ಸ್ವಂತ ಮಹಾರಾಜರ ಕೈಲೇ ಸನ್ಮಾನ ಮಾಡಿಸಿಕೊಳ್ಳೋದು ಅಂದ್ರೆ ಹುಡುಗಾಟವೇ? ನಮ್ ವಂಶದಲ್ಲಿ ಓದಿ, ಬರದೂ ಮಾಡಿ ಮುಂದೆ ಬಂದೋರಿದಾರೆ, ದೊಡ್ ದೊಡ್ ಅಧಿಕಾರದಲ್ಲಿರೋರಿದಾರೆ, ದಾನಧರ್ಮ ಮಾಡಿ ಹೆಸರು ತೊಗೊಂಡೋರಿದಾರೆ. ಆದ್ರೆ, ಪಾರ್ವತಿ ಥರ ಆಗಿನ ಕಾಲ್ದಲ್ಲಿ ಹೆಂಗಸರು ಇಷ್ಟೊಂದ್ ಹೆಸ್ರು ತೊಗೊಂಡಿದ್ದು ಯಾರೂ ಕೇಳಿಲ್ಲ."

"ಪಾರ್ವತಿ ತುಂಬ ಅನುಕೂಲಸ್ಥರ ಮನೇಲಿ ಹುಟ್ಟಿ ಬೆಳೆದೋಳು. ಆಗಿನ ಕಾಲದ ಪದ್ಧತಿ ಹಾಗೆ ಅವಳಿಗೆ ಏಳು ವರ್ಷಕ್ಕೇ ಮದುವೆ ಮಾಡಿಬಿಟ್ಟಿದ್ರು. ಮನೇಲೇ ತಾಯಿ, ಅಜ್ಜಿ, ಅಕ್ಕಪಕ್ಕ ಹಿರೀ ಹೆಂಗಸರಿಂದ ಅಡಿಗೆ, ಸಂಗೀತ, ಕಸೂತಿ ಎಲ್ಲ ಕಲ್ತು ಪಾರ್ವತಿ ತುಂಬ ಜಾಣೆ ಅನ್ನಿಸಿಕೊಂಡಿದ್ಳು".

ಸ್ಥಿತಿವಂತರಾಗಿದ್ದ ತಂದೆ ಶಂಕರನಾರಾಯಣ ಭಟ್ಟರ ಮನೆಯಲ್ಲಿ ದಿನವೂ ಮೂವತ್ತರಿಂದ ನಲವತ್ತು ಜನ ವಾರಾನ್ನದ ಹುಡುಗರು, ಇತರ ಬಡ ಬ್ರಾಹ್ಮಣರು ಬಂದು ಊಟ ಮಾಡುತ್ತಿದ್ದರಂತೆ. "ಮನೇಲಿ ದಿನಾ ಅತಿಥಿದೇವೋಭವ ಅಂತ ಅವರಿಗೆಲ್ಲ ಶುಚಿರುಚಿಯಾಗಿ, ತುಂಬಾ ಶ್ರದ್ಧೆಯಿಂದ ಅಡಿಗೆ ಮಾಡಿ ಬಡಿಸ್ತಾ ಇದ್ರು. ತಾಯಿ, ಅಜ್ಜಿ ಇಬ್ಬರ ಜೊತೇನೂ ಸೇರ್ಕೊಂಡು ಅಡಿಗೆಮನೇಲಿ ಪಳಗಿದ್ಳು ಪಾರ್ವತಿ. ದೇವರು ಅವಳಿಗೆ ಯಾವ ವರ ಕೊಟ್ಟಿದ್ನೋ ಗೊತ್ತಿಲ್ಲ, ಹದಿನಾಕು ವರ್ಷದ ಹುಡುಗಿ ಗಂಡನ ಮನೇಗೆ ಸೇರೋ ಅಷ್ಟರಲ್ಲಿ ಸೊಗಸಾಗಿ ಅಡಿಗೆ ಮಾಡೋದನ್ನ ಕಲಿತಿದ್ಳು."

"ಬಾಯಲ್ಲಿಟ್ರೆ ಕರಗಿಹೋಗೋ ಹಾಗೆ ಗರಿಗರಿ ಜಿಲೇಬಿ, ಪಾರ್ವತಿ ಮಾಡೊ ಹಾಗೆ ಮಾಡೋರು ಯಾರೂ ಇರ್ಲಿಲ್ಲ. ದೊಡ್ ದೊಡ್ ಮನುಷ್ರೆಲ್ಲ ಮಗಳ ಮದುವೆಗೆ ಜಿಲೇಬಿ ಮಾಡ್ಕೊಡ್ತೀರಾ? ಮಗನ ಹುಟ್ಟಿದ ಹಬ್ಬಕ್ಕೆ ಜಿಲೇಬಿ ಮಾಡ್ಕೊಡ್ತೀರ? ಅಂತ ಹುಡುಕ್ಕೊಂಡ್ ಬರ್ತಿದ್ರಂತೆ. ಗಂಡನ ಮನೆಯೋರೂ ಸ್ಥಿತಿವಂತರೇ ಆಗಿದ್ರು. ಅದಕ್ಕೆ ಅವಳೆಲ್ಲೂ ಯಾರ ಮನೇಗೂ ಹೋಗ್ತಿರಲಿಲ್ಲ. ತುಂಬಾ ಗೊತ್ತಿರೋರ ಮನೇಲಿ ಮದುವೆ, ಮುಂಜಿ ಅಂತ ಆದ್ರೆ ಮನೇಲೇ ಮಾಡಿ ಕೊಟ್ಟು ಕಳಿಸೋಳು."

"ಒಂದ್ ಕಾಲ್ದಲ್ಲಿ ಪಾರ್ವತಿ ಮನೇಲಿ ವಾರಾನ್ನ ಮಾಡ್ಕೊಂಡು ಮುಂದೆ ಬಂದಿದ್ದೋರು ಒಬ್ರು ಮೈಸೂರು ಮಹಾರಾಜರಿಗೆ ಪರ್ಸನಲ್ ಡಾಕ್ಟರ್ ಆಗಿ, ಅವರು ಎಲ್ಲಿ ಹೋದ್ರೂ ಅವರ ಜೊತೆ ಹೋಗ್ತಾ ಇದ್ರಂತೆ. ಅವರ ಕೈಗುಣದಲ್ಲಿ ಮಹಾರಾಜರಿಗೆ ತುಂಬಾ ವಿಶ್ವಾಸ ಇತ್ತಂತೆ. ಒಂದಿನ ಅವ್ರು ಮಹಾರಾಜರ ಹತ್ರ ಪಾರ್ವತಿ ಮಾಡ್ತಾ ಇದ್ದಿದ್ದ ಜಿಲೇಬೀನ ಹೊಗಳಿದ್ರಂತೆ. ಅರಮನೆಯಿಂದ ಬುಲಾವ್ ಬಂತಂತೆ. ಪಾರ್ವತಿ ಮಾಡಿ ಕೊಟ್ಟಿದ್ದ್ ಜಿಲೇಬಿ ತಿಂದು, ಸಾಕ್ಷಾತ್ ಅನ್ನಪೂರ್ಣೆ ಅಂತ ತುಂಬಾ ಹೊಗಳಿ ಮಹಾರಾಜರು ಆ ಜಡೆಬಿಲ್ಲೆ ಕಾಣಿಕೆ ಕೊಟ್ರಂತೆ."

"ಪಾರ್ವತೀನ ಎಲ್ಲ ದೇವತೆ ಅನ್ನೋರು. ಯಾರಿಗೋ ಹೆರಿಗೆ ಕಷ್ಟ ಆಗ್ತಿದೆ, ಇನ್ಯಾವ್ದೋ ಬಸರೀಗೆ ಹೆರಿಗೆ ನಿಲ್ತಾ ಇಲ್ಲ ಅಂತ ಊರಲ್ಲಿ ಒಬ್ರಲ್ಲ ಒಬ್ರು ಇರ್ತಿದ್ರು. ಆಗೆಲ್ಲ ಎಲ್ಲಾ ಊರಲ್ಲೂ ಡಾಕ್ಟರೂಂತ ಎಲ್ಲಿರ್ತಿದ್ರು? ಮಿಡ್ ವೈಫ್ಗಳೂ ಇರ್ತಾ ಇರ್ಲಿಲ್ಲ. ಸಣ್ ಸಣ್ ಊರುಗಳಲ್ಲಿ ಹೆಂಗಸ್ರು ತುಂಬ ಕಷ್ಟಪಡೋರು. ಆ ಸಮಯ್ದಲ್ಲಿ ಪಾರ್ವತಿ ತುಂಬಾ ಜನಕ್ಕೆ ಸಹಾಯ ಮಾಡ್ತಿದ್ಳು. ಅವಳ ಕೈಗುಣವೋ ಏನೋ, ಬರೀ ನೀರು ಕಾಸಿ, ನಾರು–ಬೇರು–ತುಳಸಿ–ಅರಿಸಿನ–ಹರಳೆಣ್ಣೆ–ಬೇವಿನೆಣ್ಣೆ ಅಂತ ಮನೇವೈದ್ಯ ಏನೋ ಮಾಡೋಳು, ಅವ್ರೆಲ್ಲ ಗಂಡಾಂತರ ತಪ್ಪಿ ಸುಖವಾಗಿ ಮಕ್ಳು ಹೆರೋರು. ಅವ್ಳ್ ಹೆಸ್ರನ್ನೇ ಮಕ್ಕಳಿಗೆ ಇಟ್ಟಿರೋರು ಬೇಕಾದಷ್ಟ್ ಜನ ಇದಾರೆ."

ಈ ಜಡೆಬಿಲ್ಲೆ ಮಾತ್ರವಲ್ಲದೇ ಬೇರೆ ಆಭರಣಗಳೂ ಅವಳ ಮುತ್ತಜ್ಜಿ ಪಾರ್ವತಿಯಿಂದ ಅಜ್ಜಿ ಲಕ್ಷ್ಮಿಗೆ, ಮತ್ತು ಅಜ್ಜಿಯಿಂದ ತಾಯಿ ಲಲಿತೆಗೆ ಸೇರಿದ್ದವು. ಆದರೆ, ಇನ್ನಾವ ಆಭರಣದ ಬಗೆಗೂ ಇಲ್ಲದ ಕಳಕಳಿ ಆ ಜಡೆಬಿಲ್ಲೆಯ ಬಗ್ಗೆ ಅಜ್ಜಿಗೂ, ಅಮ್ಮನಿಗೂ ಇದ್ದುದು ಸುಳ್ಳಲ್ಲ. ಅಮ್ಮ, ಅಜ್ಜಿ, ಇಬ್ಬರೂ ಇದನ್ನು ಪ್ರಾಣಕ್ಕಿಂತ ಹೆಚ್ಚಾಗಿ ಕಾಪಾಡಿಕೊಂಡು ಬಂದಿದ್ದರು. ಅದನ್ನು ಪೂರ್ವಿಯ ಕೈಗೆ ಒಪ್ಪಿಸಿದ್ದ ಅಮ್ಮ, "ಯಾವುದೇ ಸಂದರ್ಭದಲ್ಲೂ ಅದನ್ನು ಜೋಪಾನವಾಗಿ ಇಟ್ಟುಕೊಳ್ಳುತ್ತೇನೆ" ಎಂದು ಪೂರ್ವಿಯ ಕೈಲಿ ಹೇಳಿಸಿ ಆಣೆ ಮಾಡಿಸಿಕೊಂಡಿದ್ದಳು. ಮುಂದೆ ಮಗಳಿಗೆ ಸೇರಬಹುದಾಗಿದ್ದ ಜಡೆಬಿಲ್ಲೆ ಎಂದು ಅದನ್ನು ಭದ್ರವಾಗಿ ಇಟ್ಟುಕೊಂಡಿದ್ದಳು ಪೂರ್ವಿ. ಮಿಹಿರ್ ಹುಟ್ಟಿದ ಮೇಲೆ ಮತ್ತೆ ಮಕ್ಕಳ ಯೋಚನೆ ಮಾಡಿರಲಿಲ್ಲ.

"ನಾಗಮಂಗಲದಲ್ಲಿ ನರಸಿಂಹಸ್ವಾಮಿ ದೇವಸ್ಥಾನ ಅಂತೆ ರೀ. ಮಿಹಿರನ ಮುಂಜಿ ಅಲ್ಲೇ ಮಾಡು ಅಂತ ಅಣ್ಣ ಅತ್ತಿಗೆ ಹೇಳ್ತಿದಾರೆ. ಆ ದೇವಸ್ಥಾನದಲ್ಲಿರೋ ಸಾಲಿಗ್ರಾಮಗಳನ್ನ ಮೆಟ್ಟಿರೋ ಫಳಫಳ ಕಣ್ಣುಗಳ ಏಳುಹೆಡೆ ನಾಗಪ್ಪ, ಸುದರ್ಶನ ಚಕ್ರ ಬೇರೆಲ್ಲೂ ಇಲ್ಲ ಅಂತ ಸ್ಥಳ ಮಹಿಮೆ, ಸ್ಥಳ ಪುರಾಣ ಎಲ್ಲ ಜಾಲಾಡಿ ಮೆಚ್ಕೊಂಡು, ಅಣ್ಣ ಅತ್ತಿಗೆ ಪಾಪ ತಾವೇ ಓಡಾಡಿ ಎಲ್ಲಾ ವ್ಯವಸ್ಥೇನೂ ಮಾಡ್ತಾರಂತೆ." ಮೋಹನನ ಹತ್ತಿರ ಹೇಳಿ ಖುಷಿಪಟ್ಟಿದ್ದು ಇನ್ನೂ ನಿನ್ನೆ ಮೊನ್ನೆ ನಡೆದ ಹಾಗೆ. ಯಾರಿಗೆ ಜರೀ ಸೀರೆ, ಜರತಾರಿ ಪಂಚೆ, ಎಷ್ಟು ಜನನ್ನ ಬಸ್ಸಿನಲ್ಲಿ ನಾಗಮಂಗಲಕ್ಕೆ ಕರಕೊಂಡು ಹೋಗಬೇಕು, ಅಲ್ಲಿ ತಿಂಡಿಗೆ ಇಡ್ಲಿ,

ಚಟ್ನಿ, ಊಟಕ್ಕೆ ಚಿರೋಟಿ, ಫೋನ್ ಕಾಲುಗಳಲ್ಲಿ ಉತ್ಸಾಹದಿಂದ ಮಾತಾಡಿದ್ದೇ ಮಾತಾಡಿದ್ದು. ಮಿಹಿರನಿಗೆ ಗಾಯತ್ರಿ ಮಂತ್ರದ ವಿಶೇಷ, ಉಚ್ಚಾರ ಮಾಡೋ ವಿಧಾನ, ಸಂಧ್ಯಾವಂದನೆ, ಬ್ರಹ್ಮಚರ್ಯ ಎಲ್ಲದರ ಕ್ರ್ಯಾಶ್ ಕೋರ್ಸ್ ಕೊಟ್ಟಿದ್ದು ಒಂದು ಥರಾ ಸಡಗರ. ಬಾರ್ ಮಿಟ್ಸ್‌ವಾಹ್, ಬ್ಯಾಪ್ಟಿಸಮ್ ಪರಿಚಯವಿದ್ದ ತನ್ನ ಕ್ಲಾಸ್ ಮೇಟುಗಳ ಹತ್ತಿರ ಇದೊಂದು "ಕಮಿಂಗ್ ವಾಹ್ ಏಜ್ ಹಿಂದು ರಿಚುವಲ್" ಎಂದು ಮಿಹಿರ್ ಹೇಳಿಕೊಂಡಿದ್ದ. ಹನ್ನೆರಡು ವರ್ಷದ ಅವನಿಗೂ ಖುಶಿಯಾಗಿತ್ತು. "ಅಮೇರಿಕಾಲಿ ನಿನ್ ಗಂಡಾನೇ ಸಂಧ್ಯಾವಂದನೆ ಮಾಡಲ್ಲ ಅಂತೀಯ. ಮಗನಿಗೆ ಮುಂಜಿ ಬೇರೆ ಮಾಡ್ತೀಯಾ?" ಎಂದು ಅಣ್ಣ ಅತ್ತಿಗೆ ನಕ್ಕಿರಲಿಲ್ಲ. ಮಿಹಿರ "ರ" ಎಂದರೆ "ವ್ರ" ಎನ್ನುವ ಹಾಗೆ ಕೇಳುವ ಉಚ್ಚಾರಣೆ ಸಂಸ್ಕೃತ ಮಂತ್ರಗಳನ್ನು ಯಾವ ಮಟ್ಟಕ್ಕೆ ಇಳಿಸಬಹುದು ಎಂದು ಆಡಿಕೊಂಡು ನಕ್ಕಿರಲಿಲ್ಲ. ಈಗಿನ ಕಾಲದಲ್ಲಿ ಬ್ರಾಹ್ಮಣಿಕೆ ಎನ್ನುವುದನ್ನು ಉಳಿಸಿಕೊಳ್ಳುವುದೇ ಪುಣ್ಯ ಎಂದು ಹೆಮ್ಮೆಪಟ್ಟಿದ್ದರು.

"ಕ್ಲಾಸಲ್ಲಿರೋ ಹುಡುಗ ಹುಡುಗೀರೆಲ್ಲ ಬಾಯ್ ಫ್ರೆಂಡ್ ಗರ್ಲ್ ಫ್ರೆಂಡ್ ಜೊತೆ ಓಡಾಡ್ತಾರೆ. ನನಗೂ ಒಬ್ಳು ಗರ್ಲ್ ಫ್ರೆಂಡ್ ಇಲ್ಲಾಂದ್ರೆ, ದೆ ವಿಲ್ ಲಾಫ್ ಅಟ್ ಮಿ. ಇನ್ನೂ ಏನೇನೂ ರೂಮರ್ಸ್ ಶುರು ಮಾಡ್ತಾರೆ. ಇಂಡಿಯಾಲಿ ಬೆಳ್ದೋರು ನಿಮಗೆ ಇದೆಲ್ಲ ಅರ್ಥವೇ ಆಗಲ್ಲ. ಟ್ರೈ ಟು ಅಂಡಸ್ಟ್ಯಾಂಡ್ ಮೈ ಪ್ರಾಬ್ಲಮ್ಸ್." ಮಿಹಿರ್ ಹೈಸ್ಕೂಲಿನಲ್ಲಿ ಓದುತ್ತಿದ್ದಾಗ ಡೇಟಿಂಗ್, ಮೀಟಿಂಗ್ ಎಲ್ಲ ಕಂಟ್ರೋಲಿನಲ್ಲಿತ್ತು. ತಾನು ಬೆಳೆಯುತ್ತಿದ್ದ ಪ್ರಪಂಚ ಅಪ್ಪ ಅಮ್ಮನಿಗೆ ಪೂರ್ತಿ ಅರ್ಥವಾಗುವುದಿಲ್ಲ ಎನ್ನುವ ಸಂಶಯ, ಹತಾಶೆ ಅವನಿಗೆ. ಎಲ್ಲಾ ಕಂಟ್ರೋಲ್ ಮಾಡಿ, ಇಂಡಿಯಾಗೆ ಕರೆದುಕೊಂಡು ಹೋಗಿ ಮುಂಜಿ ಮಾಡಿಸಿದ ಹಾಗೆ ಮದುವೇನೂ ಮಾಡಿಕೋ ಅಂತ ಶುರು ಮಾಡಿಬಿಟ್ಟರೆ? "ವೀ ನೋ ಹೌ ಯು ಫೀಲ್. ನಮ್ ಹಾಗೆ ಮ್ಯಾರೇಜ್ ವಿದೌಟ್ ಡೇಟಿಂಗ್, ಅಪ್ಪ ಅಮ್ಮನ ಮ್ಯಾಚ್ ಮೇಕಿಂಗ್ ಎಲ್ಲ ನಿನಗೆ ಸರಿಹೋಗಲ್ಲ, ನಾವೂ ಫೋರ್ಸ್ ಮಾಡಲ್ಲ. ಕಾಲೇಜು ಮುಗ್ಸಿ, ನಿನ್ನ ಕಾಲ ಮೇಲೆ ನಿಂತ್ಕೊಳೋವರೆಗೂ ಹುಡುಗೀರ ವಿಷಯದಲ್ಲಿ ಸೀರಿಯಸ್ ಆಗಿ ಇನ್ವಾಲ್ವ್ ಆಗೋದು ನಮಗಿಷ್ಟವಿಲ್ಲ. ನಾವು ಇಲ್ಲಿ ಬೆಳೀಲಿಲ್ಲ ಸರಿ. ಆದ್ರೆ ನಿನ್ನ ಸಿಚುವೇಶನ್ ಅರ್ಥ ಆಗಲ್ಲ ಅಂತ ತಿಳ್ಕೋಬೇಡ." ದೇವರೇ, ಇಲ್ಲಿ ಮಕ್ಕಳನ್ನ ಬೆಳೆಸೋದು ಸುಲಭ ಅಂತ ಯಾರಂದಿದ್ದು? ಯಾರದೋ ಮಗ ಮನೆ ಬಿಟ್ಟು ಓಡಿಹೋಗಿದ್ದು, ಇನ್ಯಾರದೋ ಮಗಳು ಹೈಸ್ಕೂಲಲ್ಲೇ ಪ್ರೆಗ್ನೆಂಟ್ ಆಗಿದ್ದು, ದೇವರೇ, ಮಗ ಈ ಸ್ಟೇಜು ದಾಟಿ ದೊಡ್ಡವನಾದ್ರೆ ಸಾಕಪ್ಪ. ಆಮೇಲೆ ಯಾರನ್ನಾದ್ರೂ ಡೇಟ್ ಮಾಡ್ಲಿ, ಯಾರನ್ನಾದ್ರೂ ಮದ್ವೆ ಆಗ್ಲಿ. ಸುಖವಾಗಿದ್ರೆ ಸಾಕು.

ಕಾಲೇಜು ಮುಗಿಸಿ, ಕೆಲಸ ಶುರು ಮಾಡಿದ ಮೇಲೆ ಮಿಹಿರ್ ಸ್ಟೆಫನಿಯ ಜೊತೆ ಎರಡು ವರ್ಷಗಳಿಂದ ಒಂದೇ ಮನೆಯಲ್ಲಿ ವಾಸವಾಗಿದ್ದ. ಅವನು ಹುಡುಗಿಯರನ್ನು ಡೇಟ್ ಮಾಡಲು ಶುರು ಮಾಡಿದಾಗಲೇ ಪೂರ್ವಿ ಹೇಳಿದ್ದಳು "ನಮ್ ಫ್ರೆಂಡ್ಸ್ ಸರ್ಕಲ್ಲಲ್ಲಿ,

ಮಕ್ಕಳಿಗೆ ಮ್ಯಾಚ್ ಮೇಕಿಂಗ್, ಅರೇಂಜ್ಡ್ ಮ್ಯಾರೇಜ್ ಎಲ್ಲ ಉಳಿಸಿಕೊಂಡಿರೋರು ಇದಾರೆ. ಯಾವ್ದಾದ್ರೂ ಹುಡುಗೀ ಮನೆಯಿಂದ ಪ್ರೊಪೋಸಲ್ ಬಂದ್ರೆ..." ಅವಳ ಮಾತನ್ನು ಅರ್ಧಕ್ಕೇ ತುಂಡರಿಸಿ ಮಿಹಿರ್ "ನೋ ವೇ. ಆ ವಿಷ್ಯ ಯೋಚ್ನೇನೇ ಮಾಡ್ಬೇಡ" ಎಂದು ಖಡಾಖಂಡಿತವಾಗಿ ಹೇಳಿಬಿಟ್ಟಿದ್ದ. "ದೆ ಆರ್ ಲಿವಿಂಗ್ ಟುಗೆದರ್" ಅನ್ನೋದನ್ನ ಅಣ್ಣ, ಅತ್ತಿಗೆಗೆ ಹೇಳಿದಾಗ ಅವರಿಗೆ ಎಷ್ಟು ಅರ್ಥವಾಯಿತು, ಏನೆಂದುಕೊಳ್ಳುತ್ತಾರೋ ಎಂದು ಪೂರ್ವಿ ಅಳುಕಿದ್ದಳು. "ಈಗ ಇಲ್ಲೂ ಅದೆಲ್ಲ ಯಾರೂ ಕೇರ್ ಮಾಡಲ್ಲ ಪೂರ್ವಿ. ಮಕ್ಕಳು ನಾವ್ ಹೇಳಿದಾಗೆ ಕೇಳ್ತಾರೆ, ನಾವು ತೋರಿಸಿದೋರನ್ನ ಮದ್ವೆ ಮಾಡ್ಕೋತಾರೆ ಅಂತ ಯಾವ ಗ್ಯಾರಂಟೀನೂ ಇಲ್ಲ. ಲಿವಿಂಗ್ ಟುಗೆದರ್ ಎಲ್ಲ ಹೈಯರ್ ಸೊಸೈಟೀಲಿ ಶುರು ಆಗಿ, ಅವರನ್ನ ಯಾರೂ ಹುಬ್ಬೇರಿಸಿ ನೋಡಲ್ಲ. ತುಂಬಾ ದುಡ್ಡಿದ್ದೋರು ಮಾಡಿದ್ರೆ ಫ್ಯಾಶನ್ನು, ದುಡ್ಡೇ ಇಲ್ದೋರು ಮಾಡಿದ್ರೆ ಕೇಳೋರಿಲ್ಲ. ನಮ್ಮಂತ ಮಿಡ್ಲ್ ಕ್ಲಾಸ್ ಫ್ಯಾಶನ್ ಫ್ಯಾಮಿಲಿಯಲ್ಲಿ ಇದೆಲ್ಲ ಅಷ್ಟೊಂದು ನಡಿಯಲ್ಲ. ಮಾನ, ಮರ್ಯಾದೆ, ಪ್ರತಿಷ್ಠೆ, ಜನ ಏನಂತಾರೆ, ಬೀದೀಲಿ ತಲೆ ಎತ್ಕೊಂಡು ಓಡಾಡೋದ್ ಹೇಗೆ ಅಂತೆಲ್ಲ ತಲೆ ಕೆಡಿಸ್ಕೊಳೋ ಮಿಡ್ಲ್ ಕ್ಲಾಸ್ ಬೂರ್ಜ್ವಾ ಲೈಫ್ ಸ್ಟೈಲು ತಾನೆ ನಮ್ದೆಲ್ಲ." ಅತ್ತಿಗೆಯೂ ಪರಿಸ್ಥಿತಿಯನ್ನು ಅರ್ಥ ಮಾಡಿಕೊಂಡಿದ್ದಳು. "ಆಮೇಲೆ ಅವಳನ್ನೇ ಮದ್ವೆ ಮಾಡಿಕೊಂಡ್ರೆ ಒಂದ್ ತರದಲ್ಲಿ ಒಳ್ಳೇದೇ ಅಲ್ವ, ಅಪ್ಪ-ಅಮ್ಮಾನೇ ನಿಂತು ಮಾಡಿದ್ರೂ ಎಷ್ಟೋ ಸಲ ಡೈವೋರ್ಸ್ ಆಗತ್ತಲ್ಲ." ತಮ್ಮ ನಗೆಯಾಡಿದ್ದ. "ಈಗ ಲಿವಿಂಗ್ ಟುಗೆದರ್ ಒಂದೇ ಅಲ್ಲ, ಮದುವೆ ಬೇಡ, ಗಂಡನೂ ಬೇಡ. ಮಗು ಮಾತ್ರ ಬೇಕು ಅಂತ ಮಕ್ಕಳು ಮಾಡಿಕೊಂಡಿರೋರು ಇದಾರೆ." ನಾವು ಬಿಟ್ಟು ಬಂದ ಇಂಡಿಯಾ ಎಲ್ಲಿ ಹೋಯ್ತು?

ಅಮೇರಿಕಾದಲ್ಲಿ ಯಾರಿಗೂ ಏನೂ ವಿವರಿಸಿ ಹೇಳುವ ಅಗತ್ಯವಿಲ್ಲ. ಯಾರಿಗೂ ಹೆದರಿ, ಅಳುಕಿ, ತಲೆ ಎತ್ತಿ ತಿರುಗೋದು ಹೇಗೆ ಅನ್ನೋದೆಲ್ಲ ತಲೆ ಕೆಡಿಸಿಕೋಬೇಕಿಲ್ಲ. ಇಲ್ಲಿಯ ಯೋಚನೆಯೇ ಇನ್ನೊಂದು ಥರ. "ಆರತಿ ಮಗಳು ಸ್ನೇಹಾ ಯಾರೋ ಚೈನೀಸ್ ಹುಡುಗನ ಜೊತೆ ಓಡಾಡ್ತಿದಾಳಂತೆ. ಅವನ ಫ್ಯಾಮಿಲಿ ಮುತ್ತಜ್ಜನ ಕಾಲ್ದಿಂದ ಇಲ್ಲೇ ಇದ್ದುಬಿಟ್ಟಿದಾರೆ. ಚೈನಾ ಅಂದ್ರೆ ಎಲ್ಲಿದೆ ಅನ್ನೋ ಮಟ್ಟಿಗೆ ಅವರು ಅಮೆರಿಕನ್ನೈಜ಼್ಡ್ ಆಗಿದಾರಂತೆ". ನಾವು ಚಿಂಕ್, ಚಂಕ್, ಪಿಂಗ್, ಪಾಂಗ್ ಅಂತೆಲ್ಲ ಅವರ ಬೆನ್ನ ಹಿಂದೆ ಆಡಿಕೊಳ್ಳೋದು, ನಗೋದು ಎಲ್ಲಾ ಆರತಿಗೂ ಗೊತ್ತು. ಇಪ್ಪತ್ನಾಲ್ಕರ ವಯಸ್ಸಿನ ಮಗಳು ಚೈನೀಸ್ ಹುಡುಗನ ಜೊತೆ ಓಡಾಡುವುದನ್ನು ತಪ್ಪಿಸಲು ಆಗಿರಲಿಲ್ಲ. ಅವಳಿಗೆ ಬೇಜಾರಾಗದೇ ಇರಲಿ ಅಂತ "ನಾವು ಇಂಡಿಯನ್ಸ್ ಸರದಾರ್ಜಿ ಜೋಕುಗಳನ್ನೇ ಬಿಟ್ಟಿಲ್ಲ. ನಮ್ ದೇಶ್ದೋರನ್ನ ನಾವೇ ಅಣಕಿಸ್ಕೊಂಡು ನಗ್ತೀವಿ. ನಮ್ ಮಕ್ಳು ನಮ್ ಥರ ನ್ಯಾರೋ ಮೈಂಡೆಡ್ ಆಗಿಲ್ಲ ಅಂತ ಖುಶಿ ಪಡ್ಬೇಕು" ಅಂತ ಸಮಾಧಾನ ಹೇಳಿದ್ದೇವೆ. "ಜಿಲಿಯನ್-ಅಭಿಜಿತ್ ಇಬ್ರೂ ಸೆಪರೇಟ್ ಆಗಿದಾರಂತೆ. ಅವನು ಪ್ರೊಪೋಸ್ ಮಾಡಿರೊ

ಸೆಟ್ಲ್‌ಮೆಂಟ್ ಸಾಲ್ದು, ಫಿಫ್ಟೀ-ಫಿಫ್ಟೀ ಬೇಕು ಅಂತ ತಗಾದೆ ಮಾಡ್ತಿದಾಳಂತೆ". ಹೈಸ್ಕೂಲ್ ನಂತರ ಮಗ ಹನ್ನೆರಡು ವರ್ಷ ಕಣ್ಣಿಗೆ ಎಣ್ಣೆ ಬಿಟ್ಟುಕೊಂಡು ಓದಿ, ಮನೆಯ ಎದುರಲ್ಲೇ ಇದ್ದ ಹುಡುಗಿಯ ಮೋಹಪಾಶಕ್ಕೆ ಬಿದ್ದು ಮದುವೆಯಾಗಿದ್ದನ್ನು, ನಾಲ್ಕು ವರ್ಷಗಳ ನಂತರವೂ ಅರಗಿಸಿಕೊಂಡೇ ಇರದಿದ್ದ ಮೈತ್ರಿಯ ಸಂಕಟ ನೋಡಿಕೊಂಡು ನಾವೇನೂ ಸುಮ್ಮನೇ ಇರಲಿಲ್ಲ. ಕಾಲೇಜು ಮೆಟ್ಟಿಲೇ ಹತ್ತಿರದಿದ್ದ ಹುಡುಗಿ "ನಮ್ಮ" ಡಾಕ್ಟರ್ ಹುಡುಗನ್ನ ಬಲೆಗೆ ಹಾಕಿಕೊಂಡಿದ್ದು, ನಮ್ಮ ಸ್ನೇಹಿತರ ಬಳಗದಲ್ಲಿ ಹೆಣ್ಣುಮಕ್ಕಳಿದ್ದ ಕೆಲವರಿಗೆ ಪೆಚ್ಚಾಗಿತ್ತು. "ದುಡ್ಡಿನ ಆಸೆಗೆ ಮದುವೆ ಮಾಡ್ಕೊಂಡ್ಳು. ಒಬ್ನೇ ಮಗ, ಡಾಕ್ಟ್ರು, ಕೈತುಂಬಾ ಸಂಪಾದಿಸ್ತಿದ್ದ. ದುಡ್ಡು ಹಾಳಾಗ್ಲಿ, ಪೀಡೆ ಕಳೀತು ಅಂತ ಅಭಿ ಕೈತೊಳಕೊಳ್ಲಿ ಬಿಡು" ಎಂದು ಸಮಾಧಾನ ಹೇಳಿದ್ದೆವು. ಇಲ್ಲೇ ಹುಟ್ಟಿ ಬೆಳೆದ ಹೆಣ್ಣುಮಕ್ಕಳ ಪಟ್ಟಿಯೇ ಬೇರೆ – ಡೈವೋರ್ಸ್ ಆಗಿರೋರು ಬೇಡ, ಮೊದಲನೇ ಮದುವೆಯಿಂದ ಮಕ್ಕಳಿರೋರು ಬೇಡ, ಗ್ರೀನ್ ಕಾರ್ಡಿನ ಆಸೆಗೆ ಮದುವೆ ಮಾಡಿಕೊಳ್ಳೋರು ಬೇಡ, ಇಂಡಿಯಾಗೆ ವಾಪಸ್ ಹೋಗ್ತೀನಿ, ನೀನೂ ಅಲ್ಲೇ ಬಾ ಅಂತ ಮಕ್ಕಳನ್ನ ಇಕ್ಕಟ್ಟಿಗೆ ಸಿಕ್ಕಿಸೋ ಎಫೊಬ್ ಆಗಿ ಬಂದು ಸಿಟಿಜ಼ೆನ್ ಆದೋರು ಬೇಡ... ನಾವು ಮದುವೆಯಾದಾಗ ಇಷ್ಟೆಲ್ಲ ಹೆದರಿಕೆ ಉಂಟು ಮಾಡುವ ವಿಷಯಗಳು ಇವೆ ಎಂದೇ ಯೋಚಿಸಿರಲಿಲ್ಲ!

ಸ್ಟೆಫನಿ ಮಿಹಿರನಷ್ಟೇ ಓದಿದಾಳೆ. ಕಂದು ಬಣ್ಣದೋರ ಬಗ್ಗೆ ಅವಳ ಮನೇಲಿ ಏನು ಜೋಕ್ ಮಾಡ್ತಾರೋ ಗೊತ್ತಿಲ್ಲ. ಅವಳ ಅಪ್ಪ-ಅಮ್ಮ ಇಬ್ಬರೂ "ಸ್ಟೆಫನಿ ಈಸ್ ಲಕ್ಕಿ" ಅಂತ ಹೇಳೋದನ್ನ ಕೇಳಿ ಸಂತೋಷಪಟ್ಟಿದೀವಿ. ಜಡೆಬಿಲ್ಲೆಯನ್ನು ಮುಂದಿನ ಹೆಣ್ಣುಮಗುವಿಗೆ ದಾಟಿಸಬೇಕು. ಮಿಹಿರ್-ಸ್ಟೆಫನಿ ಮದುವೆ ಆಗಿ ಅವರಿಗೆ ಒಂದು ಹೆಣ್ಣು ಮಗು ಆದರೆ... ಅದಕ್ಕೆ ಅರ್ಥವಾಗೋ ವಯಸ್ಸು ಬಂದ ಮೇಲೆ ಪಾರ್ವತಿ ಅಜ್ಜಿಯ ಕಥೆ ಹೇಳಿ ಜಡೆಬಿಲ್ಲೆ ಕೊಡ್ತೀನಿ.

"ಪ್ಲೇನು ಸರಿಯಾಗಿರೋ ಟೈಮಿಗೆ ಅಲ್ಲಿಂದ ಹೊರಟಿದೆ ಅಂತ ಸೌತ್ ವೆಸ್ಟ್ ವೆಬ್ಸೈಟಲ್ಲಿ ಹಾಕಿದಾರೆ. ಅರೈವಲ್ ಟೈಮಿಗೆ ಸರಿಯಾಗಿ ಅಲ್ಲಿರ್ಬೇಕು ಅಂದ್ರೆ ಅಮ್ಮಾವ್ರು ಇನ್ನೈದ್ ನಿಮಿಷಕ್ಕೆ ಹೊರಡ್ಬೇಕು" ಕೀಟಲೆಯ ಧ್ವನಿಯಲ್ಲಿ ಹೇಳುತ್ತ ಪಕ್ಕದಲ್ಲಿ ಬಂದು ನಿಂತ ಮೋಹನ್. ಕನಸಿನಿಂದ ಎಚ್ಚೆತ್ತ ಪೂರ್ವಿ ಜಡೆಬಿಲ್ಲೆಗೆ ಹಗುರಾಗಿ ಮುತ್ತಿಟ್ಟು ಅದರದೇ ಸಣ್ಣ ಡಬ್ಬಿಯಲ್ಲಿ ಹಾಕಿಟ್ಟು ಹೊರಟಳು.

*

# ಮೂರು ತಲೆಮಾರುಗಳ ಮೂಲಭೂತ ಮೌಲ್ಯಗಳು

■ ರವಿ ಗೋಪಾಲರಾವ್, San Jose, CA.

ವೈಯಕ್ತಿಕ ಅನುಭವಗಳನ್ನು ಒಟ್ಟುಗೂಡಿಸಿ ಬರೆದ ಲಘು ಲೇಖನ ಇದು. ಇದರಲ್ಲಿ ಮೂರು ತಲೆಮಾರಿನಲ್ಲಾದ ಮೌಲ್ಯಗಳ ಬದಲಾವಣೆಯನ್ನು ಸಂಕ್ಷಿಪ್ತವಾಗಿ ವಿವರಿಸಿದ್ದೇನೆ. ಮೌಲ್ಯಗಳು ಅನೇಕ. ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ನಿಗದಿತವಾಗಿ ವರ್ಗಾವಣೆಯಾಗುವ ಎಲ್ಲ ಮೌಲ್ಯಗಳನ್ನು ತುಲನೆ ಮಾಡುವ ಉದ್ದೇಶ ನನ್ನದಲ್ಲ. ಈ ಮೂರೂ ಪೀಳಿಗೆಗಳಲ್ಲಿ ಕಂಡುಬಂದ ಐದು ಅವಿಭಾಜ್ಯ ಅಥವಾ ತಾತ್ವಿಕ ಮೌಲ್ಯಗಳನ್ನು ಮಾತ್ರ ವಿಶ್ಲೇಷಿಸಿ ನಿಮ್ಮ ಮುಂದಿಟ್ಟಿದ್ದೇನೆ. ಈ ಮೂರು ತಲೆಮಾರಿನ ಕಾಲಾವಧಿ ಎಂಬತ್ತು ವರ್ಷಗಳಿಗಿಂತ (೧೯೩೫–೨೦೧೫) ಹೆಚ್ಚು ವ್ಯಾಪಿಸಿರುವುದರ ಜೊತೆಗೆ ಎರಡು ಖಂಡಗಳ ಮಧ್ಯೆ ಮತ್ತು ಮೂರು ಸಂಸ್ಕೃತಿಗಳ – ಭಾರತ, ಬ್ರಿಟನ್ ಮತ್ತು ಅಮೆರಿಕ ದೇಶಗಳ – ನಿಕಟ ಪ್ರಭಾವಕ್ಕೆ ಒಳಗಾದ ಕಾರಣ ಈ ಮೌಲ್ಯಗಳು ಕಾಲ, ದೇಶ ಮತ್ತು ಪರಸಂಸ್ಕೃತಿಯನ್ನು ಸಮನ್ವಯಗೊಳಿಸುತ್ತವೆ. ಮುಖ್ಯವಾಗಿ, ಈ ಚಾರಿತ್ರಿಕ ಕಾಲಮಾನದಲ್ಲಿ ಪರಿವರ್ತನೆಯ ಮಹತ್ತರ ಪರಿಣಾಮ ಅಲೆಗಳಂತೆ ಅಪ್ಪಳಿಸಿ ಬಂದು ನಮ್ಮ ಮೌಲ್ಯಗಳ ಅಡಿಪಾಯವನ್ನೇ ಪ್ರಶ್ನಿಸುವಂತೆ ಮಾಡಿದೆ. ಆದಕಾರಣ ಈ ಸಂಶೋಧನೆಯ ನಿರ್ಮಿತಿಯನ್ನು ಕೆಲವು ಸಾಮಾಜಿಕ, ತಾಂತ್ರಿಕ, ಆರ್ಥಿಕ, ಮತ್ತು ರಾಜಕೀಯ ಘಟನೆಗಳಿಂದ ಸಾಧ್ಯವಾದಷ್ಟು ಹೊರತುಮಾಡಿ ನಮ್ಮ ತಾತ್ವಿಕ ಮೌಲ್ಯಗಳಿಗೆ ಅಂಟಿಯೂ ಅಂಟದಂತೆ ಒರೆಹಚ್ಚಲು ಪ್ರಯತ್ನಪಟ್ಟಿದ್ದೇನೆ.

**ವ್ಯಕ್ತಿಗತ ಗುಣವಿಶೇಷಗಳು:**

ನನ್ನ ತಂದೆ ತಾಯಿಗಳನ್ನು ಇಲ್ಲಿ ಮೊದಲನೇ ತಲೆಮಾರೆಂದೂ, ನಾನು ಮತ್ತು ನನ್ನ ಶ್ರೀಮತಿಯನ್ನು ಎರಡನೇ ತಲೆಮಾರೆಂದೂ ಮತ್ತು ನಮ್ಮ ಮಕ್ಕಳನ್ನು ಮೂರನೇ ತಲೆಮಾರೆಂದೂ ಪರಿಗಣಿಸಿದ್ದೇನೆ. ಮೂರೂ ತಲೆಮಾರಿನ ವಿಭಿನ್ನತೆಯ ವಿಶಿಷ್ಟತೆ ಎಂದರೆ, ಕರ್ನಾಟಕದಲ್ಲಿ

ಹುಟ್ಟಿ ಬೆಳೆದರೂ ನನ್ನ ತಂದೆ ತಾಯಿಗಳು ಚಿಕ್ಕಂದಿನಲ್ಲಿ ಮತ್ತು ಸಂಸಾರಿಗಳಾಗುವುದಕ್ಕೆ ಮುಂಚೆಯೇ ಬ್ರಿಟಿಷರ ಸಾಂಸ್ಕೃತಿಕ ಮತ್ತು ಪಾರಿಭಾಷಿಕ ತೀವ್ರದಾಳಿಗೆ ಒಳಗಾದವರು. ಅವರು ಭಾರತದ ಸ್ವಾತಂತ್ರ್ಯದ ಮುಂಚಿತ ವರುಷಗಳ ಜೊತೆಗೆ ಸ್ವತಂತ್ರ ಭಾರತದಲ್ಲಿ ಬದುಕಿ ಬಾಳಿದವರು. ಅದರಂತೆಯೇ ನಾನು ಮತ್ತು ನನ್ನ ಶ್ರೀಮತಿ ಸ್ವಾತಂತ್ರ್ಯದ ಹಲವಾರು ವರ್ಷಗಳ ನಂತರ ಕರ್ನಾಟಕದಲ್ಲಿ ಹುಟ್ಟಿ ಬೆಳೆದರೂ, ವಯಸ್ಕರಾದ ಮೇಲೆ ಮತ್ತು ಸಂಸಾರಿಗಳಾಗುವ ಸಮಯಕ್ಕೆ ಅಮೆರಿಕನ್ನರ ಸಾಂಸ್ಕೃತಿಕ ಮತ್ತು ಪಾರಿಭಾಷಿಕ ಪ್ರಭಾವಕ್ಕೊಳಗಾದವರು. ನನ್ನ ತಂದೆ ತಾಯಿಗಳ ಅನುಭವಕ್ಕೆ ವಿಭಿನ್ನವಾಗಿ, ನಾವು ಭಾರತವನ್ನು ಬಿಟ್ಟು ಅಮೆರಿಕಾಗೆ ವಲಸೆ ಬಂದು ಸಂಸಾರ ಹೂಡಿದ್ದರಿಂದ ನಮ್ಮ ಸಾಂಸ್ಕೃತಿಕ ಅನುಭವ ಎರಡೂ ಖಂಡಗಳ ಬೆರಕೆ ಎನ್ನಬಹುದು. ಆದರೆ ನನ್ನ ಮಕ್ಕಳು ಅಮೆರಿಕದಲ್ಲಿಯೇ ಹುಟ್ಟಿ ಬೆಳೆದು ಚಿಕ್ಕಂದಿನಲ್ಲಿ ನಮ್ಮ ಹಿಂದಿನ ಕರ್ನಾಟಕದ ಸಾಂಸ್ಕೃತಿಕ ಪ್ರಭಾವಕ್ಕೊಳಗಾಗಿದ್ದರೂ ವಯಸ್ಕರಾಗುವ ಸಮಯಕ್ಕೆ ಅಮೆರಿಕದ ಸಂಸ್ಕೃತಿಯನ್ನೇ ಅನುಸರಣೆ ಮಾಡಿದ್ದಾರೆ. ಈ ಮೂರೂ ತಲೆಮಾರುಗಳನ್ನು ಕಾಲಾವಧಿಯ ಮಾಪನದಲ್ಲಿ ಎಣಿಸುವುದಾದರೆ, ಸುಮಾರು ಎಂಬತ್ತು ವರ್ಷಗಳ ವೈವಿಧ್ಯಮಯ ಐತಿಹಾಸಿಕತೆಯಿದೆ ಈ ವಿವರಣೆಯಲ್ಲಿ. ಜೊತೆಗೆ ಮೂರೂ ತಲೆಮಾರಿನವರನ್ನು ಅವಿಭಕ್ತ ಕುಟುಂಬವಾಗಿ ಪರಿಗಣಿಸಿದರೆ ಒಟ್ಟು ೬೫ ಜನರ ದೊಡ್ಡ ಸಮೂಹವೇ ಆಗುತ್ತದೆ. (ತಂದೆ ತಾಯಿ, ೧೧ ಮಕ್ಕಳು, ಅವರ ೧೧ ಪತಿ ಯಾ ಪತ್ನಿಯರು, ೨೦ ಮೊಮ್ಮಕ್ಕಳು, ಅವರ ೧೩ ಪತಿ ಯಾ ಪತ್ನಿಯರು ಮತ್ತು ನಾಲ್ಕನೇ ತಲೆಮಾರಿನ ೮ ಮರಿಮಕ್ಕಳು). ಆದರೆ ಈ ಲಘು ಲೇಖನವನ್ನು ನಿರೂಪಿಸಲು ಕೇವಲ ೬ ಜನರನ್ನು- ನನ್ನ ತಂದೆ, ತಾಯಿ ಮತ್ತು ನನ್ನ ಕುಟುಂಬದ ನಾಲ್ಕು ಜನರನ್ನು ಮಾತ್ರ ಆರಿಸಿಕೊಂಡಿದ್ದೇನೆ.

೧೯೩೫–೨೦೧೫ರ ಈ ದೀರ್ಘ ಕಾಲಾವಧಿಯನ್ನು ಮನದಟ್ಟು ಮಾಡಿಕೊಳ್ಳಲು ಮೇಲೆ ಉಲ್ಲೇಖಿಸಿದ ಪ್ರಮುಖ ಸಾಂಸ್ಕೃತಿಕ ಬದಲಾವಣೆಗಳನ್ನು ಮೂರು ಕಾಲಮಾಪನದ ಗುಂಪಿಗೆ ಸೇರಿಸಿದ್ದೇನೆ. ೧೯೩೫–೧೯೬೦ರ ಕಾಲವನ್ನು ಮೊದಲನೇ ತಲೆಮಾರಿನವರಾದ ನನ್ನ ತಂದೆ ತಾಯಿ ಬ್ರಿಟಿಷ್ ಮತ್ತು ಭಾರತದ ಸಾಂಸ್ಕೃತಿಕ ನೆರಳಲ್ಲಿ ಕುಟುಂಬವನ್ನು ಹೂಡಿದ ಗುಂಪಿಗೂ, ನಂತರ ೧೯೬೦–೧೯೮೫ರ ಕಾಲವನ್ನು ಎರಡನೇ ತಲೆಮಾರಿನವರಾದ ನಾನು ಮತ್ತು ನನ್ನ ಶ್ರೀಮತಿ ಭಾರತದ ಸಾಂಸ್ಕೃತಿಕ ನೆರಳಲ್ಲಿ ಬೆಳದು ವಿದ್ಯಾಭ್ಯಾಸ ಮಾಡಿದ ಗುಂಪಿಗೂ ಮತ್ತು ೧೯೮೫–೨೦೧೫ ರ ಕಾಲಮಾಪನವನ್ನು ಎರಡು ಮತ್ತು ಮೂರನೇ ತಲೆಮಾರಿನವರು (ನನ್ನ ಕುಟುಂಬ) ಅಮೆರಿಕದಲ್ಲಿ ನೆಲಸಿ ಸಂಸಾರ ಹೂಡಿದ ಗುಂಪಿಗೂ ಸೇರಿಸಿದ್ದೇನೆ. ಅನುಕ್ರಮವಾಗಿ ಈ ಕಾಲಾವಧಿಯಲ್ಲಿ ಆದ ಪ್ರಪಂಚದ ಮುಖ್ಯ ಬದಲಾವಣೆಗಳು:

* ೧೯೩೫-೬೦: ಎರಡನೇ ವಿಶ್ವ ಯುದ್ಧ, ಭಾರತದ ಸ್ವಾತಂತ್ರ್ಯ;
* ೧೯೬೦-೮೫: ಭಾರತದಲ್ಲಿ ಕೈಗಾರಿಕೋದ್ಯಮ, ಮಧ್ಯಮ ವರ್ಗದ ಉತ್ಥಾನ;
* ೧೯೮೫-೨೦೧೫: ಗಣಕಯಂತ್ರದ ಅವಲಂಬನ ಮತ್ತು ಪ್ರಪಂಚದಾದ್ಯಂತ ಆದ ತಾಂತ್ರಿಕ ಬದಲಾವಣೆ.

ಈ ಬದಲಾವಣೆಗಳು ಹಲವಾರು ರೀತಿಗಳಲ್ಲಿ ನಮ್ಮ ಜೀವನ ಶೈಲಿಗೆ ತಿರುವು ಕೊಟ್ಟಿದ್ದಲ್ಲದೆ, ಆ ಬದಲಾವಣೆಗಳೇ ನಮ್ಮ ಕೆಲವೊಂದು ಮೌಲ್ಯಗಳ ಮೇಲೆ ತೀವ್ರ ಪ್ರಭಾವ ಬೀರಿದೆ ಎಂದು ಖಂಡಿತ ಹೇಳಬಹುದು. ಪರಿವರ್ತನೆಯ ತೀವ್ರತೆಯಲ್ಲಿ ಕೂಡ ಒಂದು ತಲೆಮಾರಿಗೂ ಮತ್ತೊಂದು ತಲೆಮಾರಿಗೂ ಅಜಗಜಾಂತರವಿರಬಹುದು. ಹಾಗಿದ್ದಲ್ಲಿ ಈ ಮೌಲ್ಯಗಳ ಮೇರೆ ಮತ್ತು ಅವುಗಳ ಇತಿಮಿತಿಯನ್ನು ನಾವು ಬೇರೊಂದು ದೃಷ್ಟಿಕೋನದಿಂದ ಅರ್ಥ ಮಾಡಿಕೊಳ್ಳಬೇಕಾಗುತ್ತದೆ.

**ತಾತ್ವಿಕ ಮೌಲ್ಯಗಳು:**

ಸಾಧಾರಣವಾಗಿ ಎಲ್ಲ ಹಿಂದೂ ಕುಟುಂಬಗಳು ತಮ್ಮ ಮನೆತನದಲ್ಲಿ ನಡೆದುಬಂದ ಮತಾಚಾರಗಳನ್ನು ಒಂದಲ್ಲ ಒಂದು ರೀತಿ ಉಳಿಸಿಕೊಂಡು ಬಂದಿವೆ. ಗೃಹಪ್ರವೇಶದ ಸಮಯದಲ್ಲಿ ಹಾಲು ಉಕ್ಕಿಸುವ ಪದ್ಧತಿ ಇರಬಹುದು, ಅಥವಾ ಗರ್ಭಿಣಿಗೆ ಬಳೆ ತೊಡಿಸುವ ನಿಯಮವಿರಬಹುದು ಅಥವಾ ಹೆಣ್ಣು ಮಕ್ಕಳಿಗೆ ಕಿವಿಚುಚ್ಚುವ ಆಚಾರವಿರಬಹುದು, ಇಂತಹ ಮತಾಚರಣೆಗಳನ್ನು ಪಟ್ಟಿಮಾಡುತ್ತಾ ಹೋದರೆ ಒಂದು ಸಂಪುಟವೇ ಆಗಬಹುದು. ಈ ರೀತಿಯ ಮತಾಚರಣೆಗಳನ್ನು ಎಷ್ಟೋ ಕುಟುಂಬಗಳು ತಪ್ಪು ಅರ್ಥದಲ್ಲಿ ಗ್ರಹಿಸಿಕೊಂಡು ಇವೆಲ್ಲವೂ ತಮ್ಮ ಮನೆತನದ ಮೌಲ್ಯಗಳೆಂದು ಹೆಮ್ಮೆಪಡುವುದನ್ನು ನೋಡಿದ್ದೇವೆ. ಭಾರತೀಯ ಚಲನಚಿತ್ರಗಳು, ಕಥೆ-ಕಾದಂಬರಿಗಳು, ಅವಿಭಕ್ತ ಕುಟುಂಬಗಳು, ಮತ್ತು ಎಲ್ಲ ರೀತಿಯ ಸಾಮಾಜಿಕ ಮಾಧ್ಯಮಗಳು ಈ ಮತಾಚರಣೆಗಳನ್ನೇ ವೈಭವೀಕರಿಸಿ ಇವುಗಳೇ ನಮ್ಮ ಮೌಲ್ಯವೆಂದು ಪ್ರಭಾವ ಬೀರುವುದರಲ್ಲಿ ಯಶಸ್ವಿಯಾಗಿವೆ. ಆದರೆ ಮೌಲ್ಯ ಪದದ ಅರ್ಥ ಸ್ವಲ್ಪ ಬೇರೆಯದೇ ಆಗಿರುವುದರಿಂದ ಕೆಲವು ಸ್ಪಷ್ಟೀಕರಣದ ಮಾತುಗಳು ಇಲ್ಲಿ ಸೂಕ್ತ:

ಒಂದು ಕುಟುಂಬದ ಮೂಲಭೂತ ನಂಬಿಕೆಗಳನ್ನು ಮೌಲ್ಯವೆಂದು ಪರಿಗಣಿಸಿದರೂ, ಅವುಗಳನ್ನು ಪಾಲಿಸುವ ವ್ಯಕ್ತಿಗಳಿಗೆ ಜೀವನದಲ್ಲಿ ಯಾವುದು ಸರಿ, ಯಾವುದು ತಪ್ಪು ಎನ್ನುವ ಒಂದು ದಿಗ್ದರ್ಶಕ ಸಿದ್ಧಾಂತವನ್ನು ಆದೇಶಪಡಿಸುತ್ತವೆ. ಮೌಲ್ಯಗಳನ್ನು ವೈಯಕ್ತಿಕವಾಗಿ ಆರಿಸಿಕೊಳ್ಳುವ ಸಾಧ್ಯತೆ ತೀರ ವಿರಳ, ಏಕೆಂದರೆ ತಂದೆ ತಾಯಿ, ಗುರು, ಅಥವಾ ಸಮಾಜ ಚಿಕ್ಕಂದಿನಿಂದಲೂ ಮೌಲ್ಯಗಳನ್ನು ಹನಿಹನಿಯಾಗಿ ತುಂಬಿಬಿಟ್ಟಿರುತ್ತಾರೆ. ನಮಗೆ ಅರಿವಿಲ್ಲದೆಯೇ ಕೆಲವೊಂದು ಮೌಲ್ಯಗಳನ್ನು ನಾವು ನಮ್ಮದಾಗಿಸಿಕೊಂಡಿರುತ್ತೇವೆ. ಯಾವ ಮೌಲ್ಯಗಳು ತಲೆತಲಾಂತರದಿಂದ ವರ್ಗಾವಣೆಗೊಳ್ಳುವುದರ ಜೊತೆಗೆ, ಅವುಗಳನ್ನು

ಬಿಟ್ಟು ಜೀವನ ನಡೆಸಲು ಸಾಧ್ಯವಿಲ್ಲ ಎಂದು ಅನಿಸುತ್ತದೆಯೋ ಅಂತಹ ಮೌಲ್ಯಗಳನ್ನು ಮಾತ್ರ ನಾವು ಮೂಲಭೂತ ಅಥವಾ ತಾತ್ವಿಕ ಮೌಲ್ಯಗಳೆಂದು ಕರೆಯಬಹುದು. ಗಮನವಿಟ್ಟು ನೋಡಿದಾಗ ಈ ತಾತ್ವಿಕ ಮೌಲ್ಯಗಳು ಪ್ರತಿಯೊಂದು ಕುಟುಂಬದಲ್ಲಿ ಬೇರೆಬೇರೆಯಾಗಿಯೇ ಗೋಚರವಾಗುತ್ತವೆ. ಉದಾಹರಣೆಗೆ ತಲಾಂತರದಿಂದ ದೇಶಸೇವೆಗೆಂದೇ ಪಣತೊಟ್ಟ ಸೈನಿಕ ಕುಟುಂಬದ ಮೌಲ್ಯಗಳನ್ನು, ಒಂದು ರೈತ ಕುಟುಂಬಕ್ಕೆ ಹೋಲಿಸಿದರೆ ತೀರಾ ವಿಭಿನ್ನವಾಗಿರಬಹುದು. ಈ ವಿಭಿನ್ನತೆಯಲ್ಲೂ ಕೆಲವು ಸಾಮಾನ್ಯ ಅಂಶಗಳನ್ನೊಳಗೊಂಡ ಮೌಲ್ಯಗಳು ಗೋಚರಿಸಬಹುದು.ಈ ಎರಡೂ ಕುಟುಂಬಗಳಲ್ಲಿ ಭೂತಾಯಿಯ ಮೇಲಿನ ಗೌರವ ತಾತ್ವಿಕ ಮೌಲ್ಯವಾಗಿರಬಹುದು.

ಹಾಗಿದ್ದಲ್ಲಿ ನಿಮ್ಮ ಮೌಲ್ಯಗಳನ್ನು ನೀವೇ ಅರಿತುಕೊಂಡು ಅವುಗಳನ್ನು ನಿಮ್ಮ ಹಿಂದಿನ ಮತ್ತು ಮುಂದಿನ ಪೀಳಿಗೆಗೆ ಹೋಲಿಸಿ ನೋಡಿದಾಗ ನಿಮ್ಮ ಕುಟುಂಬದ ತಾತ್ವಿಕ ಮೌಲ್ಯಗಳು ಯಾವುದೆಂದು ಗೋಚರವಾಗುತ್ತವೆ. ಹೀಗೆ ವಿಶ್ಲೇಷಣೆ ಮಾಡಿದಾಗ ಕೆಳಕಂಡ ಐದು ತಾತ್ವಿಕ ಮೌಲ್ಯಗಳು ನನ್ನ ಕುಟುಂಬದ ಹಿಂದಿನ ತಲೆಮಾರಿಗೂ, ನನಗೂ ಮತ್ತು ಮುಂದಿನ ತಲೆಮಾರಿಗೂ ಅನ್ವಯಿಸುವ ಸಾಮಾನ್ಯ ಅಂಶವೆನಿಸಿತು

* ದೇವರಲ್ಲಿ ನಂಬಿಕೆ, ಶಾಂತ ಮತ್ತು ಧಾರ್ಮಿಕ ಸಂಪ್ರದಾಯಗಳನ್ನು ಪರಿಪಾಲಿಸುವುದು;
* ಮಿತವ್ಯಯ ಮತ್ತು ಸಂಪನ್ಮೂಲಗಳನ್ನು ದುಂದು ವೆಚ್ಚ ಮಾಡದಿರುವುದು;
* ಕುಟುಂಬ ಮತ್ತು ಕುಟುಂಬದ ಐಕ್ಯತೆಗೆ ಪ್ರಾಧಾನ್ಯ ಕೊಡುವುದು;
* ವಿದ್ಯಾಭ್ಯಾಸ ಮತ್ತು ಶಿಸ್ತಿನ ಜೀವನವನ್ನು ಗೌರವಿಸುವುದು;
* ಅಹಿಂಸೆ ಮತ್ತು ಸಾತ್ವಿಕ ಆಹಾರ ಪದ್ಧತಿಯನ್ನು ಅನುಸರಿಸುವುದು.

ಈ ಐದು ಮೌಲ್ಯಗಳನ್ನು ಪರಸ್ಪರ ಅವಲಂಬಿತ ಮತ್ತು ಸಂಯುಕ್ತ ಮೌಲ್ಯಗಳೆಂದೇ ಅರ್ಥೈಸಿಕೊಳ್ಳಬೇಕು. ಈ ಮೌಲ್ಯಗಳನ್ನು ಯಾವುದೇ ಕ್ರಮಯೋಜನೆಯಲ್ಲಿ ವಿಶ್ಲೇಷಿಸಿದರೂ ಒಂದನ್ನೊಂದು ಬಲಪಡಿಸುತ್ತವೆಯೇ ಹೊರತು ವಿರೋಧಿಸುವುದಿಲ್ಲ. ಮೇಲ್ನೋಟಕ್ಕೆ ಈ ಐದು ಮೌಲ್ಯಗಳು ಮೂರೂ ತಲೆಮಾರಿನವರು ತಮ್ಮ ಅನುಕೂಲತೆಗೆ ಅಳವಡಿಸಿಕೊಂಡ ವ್ಯಾವಹಾರಿಕ ಪರಿಪಾಠಗಳಂತೆ ಕಾಣಬಹುದು. ಆದರೆ ಇವು ಕೇವಲ ಪರಿಪಾಠವಾಗದೆ ಪ್ರತಿಯೊಂದು ತಲೆಮಾರಿನಲ್ಲೂ ಒಂದೇ ಅರ್ಥ ಕೊಡುವಂಥ ಪರಿಕಲ್ಪನೆಯಲ್ಲಿ ಬೆಳೆದ ಮೌಲ್ಯಗಳು. ನಮ್ಮ ತಂದೆ ತಾಯಿಗಳು ತಮ್ಮಲ್ಲಿದ್ದ ದೇವರ ನಂಬಿಕೆಯನ್ನು ಬೇರೆ ರೀತಿಯಲ್ಲಿ ಪರಿಪಾಲಿಸಿದರೂ, ಅಗೋಚರನೊಬ್ಬನಿದ್ದಾನೆ ಎನ್ನುವ ಪರಿಕಲ್ಪನೆಯನ್ನು ನಾನು ಕೂಡ ಹಂಚಿಕೊಂಡು ನನ್ನ ಮಕ್ಕಳಲ್ಲೂ ಅಂತಹುದೇ ಒಂದು ಗ್ರಹಿಕೆ ಇದೆಯೆಂದಾಗ, ಅದು ತಾತ್ವಿಕ ಮೌಲ್ಯವೇ ಹೊರತು ಪರಿಪಾಠವಲ್ಲ. ಅದೇ ಅಳತೆಗೋಲಲ್ಲಿ ಮಿಕ್ಕ ನಾಲ್ಕು ಮೌಲ್ಯಗಳನ್ನು ವಿವರಿಸಿದಾಗಲೂ ಬೆಳಕಿಗೆ ಬರುವ ಸಂಗತಿಯೆಂದರೆ ಮೂರೂ ತಲೆಮಾರಿನಲ್ಲಿ ಕೂಡ ಇವುಗಳ ಅಂತರಾರ್ಥ ನಿರೂಪಣೆ ಒಂದೇ ರೀತಿಯದಾಗಿದೆ.

ಆದರೆ ಅವುಗಳನ್ನು ಕಾರ್ಯರೂಪಕ್ಕೆ ತರುವ ಮಾರ್ಗಗಳು ಬೇರೆಯಾದ್ದರಿಂದ ಇಲ್ಲಿ ಕೆಲವು ಉದಾಹರಣೆಗಳು ಸೂಕ್ತವಾಗಿವೆ:

ದೇವರಲ್ಲಿ ನಂಬಿಕೆ: ನನ್ನ ತಂದೆ ತಾಯಿಗಳಿಗೆ ಈ ಮೌಲ್ಯದ ಒಳಮರ್ಮವಿಷ್ಟೇ – ದೇವರಲ್ಲಿ ನಂಬಿಕೆ ಇಟ್ಟ ಮಾನವ ಎಂದೂ ದುರ್ಮಾರ್ಗಿಯಾಗುವುದಿಲ್ಲ ಎನ್ನುವುದು. ವೇದಪಾಠ, ಮಂತ್ರೋಚ್ಚಾರ, ಮಡಿ ಮೈಲಿಗೆಯಲ್ಲಿ ಮಾಡುವ ವ್ರತಗಳು, ಶ್ರಾದ್ಧ, ಬಡವರಿಗೆ ಮತ್ತು ಬ್ರಾಹ್ಮಣರಿಗೆ ದಾನ ಮಾಡುವುದು, ದೇವಸ್ಥಾನಗಳಿಗೆ ಭೇಟಿ, ಕಾಣಿಕೆ ಸಲ್ಲಿಸುವುದು, ಪವಿತ್ರಸ್ಥಾನಗಳಿಗೆ ತೀರ್ಥಯಾತ್ರೆ, ಶಾಂತಿಯುತ ಜೀವನ ಹೀಗೆ ಹಲವಾರು ಮಾರ್ಗಗಳಲ್ಲಿ ತಮ್ಮ ನಂಬಿಕೆಯನ್ನು ವ್ಯಕ್ತಪಡಿಸಿ ಈ ಮೌಲ್ಯವನ್ನು ಪರಿಪಾಲಿಸುತ್ತಿದ್ದರು. ಶಾಂತಿ ಮತ್ತು ಧಾರ್ಮಿಕ ಸಂಪ್ರದಾಯಗಳೇ ಅವರ ವ್ಯಕ್ತಿಗತ ನಿರೂಪಣೆಯಾಗಿತ್ತು.

ನನ್ನ ಮತ್ತು ನನ್ನ ಶ್ರೀಮತಿಯ ದೃಷ್ಟಿಕೋನದಲ್ಲಿ ದೇವರಲ್ಲಿ ನಂಬಿಕೆ ಎಂದರೆ ಆ ಅಗೋಚರನಿಲ್ಲದೆ ಎಲ್ಲವು ಕ್ರಿಯಾಹೀನವಾದ್ದರಿಂದ ಆ ಚೈತನ್ಯದಲ್ಲಿ ಸದಾ ನಂಬಿಕೆಯಿಟ್ಟು ಬಾಳಬೇಕು ಎನ್ನುವುದು. ಪರಿಪಾಲಿಸುವ ಮಾರ್ಗ ಹಲವಾರು ಸಂಪ್ರದಾಯಗಳ ಜೊತೆಗೂಡಿ ಖಾಸಗಿ ಅಭಿರುಚಿಗಳನ್ನು, ಅಮೆರಿಕದ ಜೀವನ ಶೈಲಿಗೆ ಹೊಂದುವಂತೆ ಅನುಷ್ಠಾನ ಮಾಡಿಕೊಂಡಿದ್ದೇವೆ. ಧಾರ್ಮಿಕ ಸಂಪ್ರದಾಯಗಳಿಗೆ ನಮ್ಮ ಹಿಂದಿನ ತಲೆಮಾರಿನವರಂತೆ ಪ್ರಾಮುಖ್ಯತೆ ಕೊಡಲು ಇಚ್ಛೆಯಿದ್ದರೂ ಕಾರ್ಯರೂಪಕ್ಕೆ ತರಲು ಅಡಚಣೆಗಳೇ ಹೆಚ್ಚು.

ನನ್ನ ಮುಂದಿನ ತಲೆಮಾರಿನ ಹೆಣ್ಣು ಮಕ್ಕಳಿಬ್ಬರಿಗೆ ದೇವರಲ್ಲಿ ವೈಯಕ್ತಿಕ ನಂಬಿಕೆಗಿಂತ ಸಮಾಜದಲ್ಲಿ ಸರಿ ತಪ್ಪುಗಳ ಎಲ್ಲೆ ಗುರುತಿಸಲು ಮತ್ತು ನಮ್ಮ ಸಂಸ್ಕೃತಿಯಲ್ಲಿ ಭಾಗವಹಿಸಲು ಸಹಾಯವಾಗಿದೆ ಈ ಮೌಲ್ಯ. ಅವುಗಳನ್ನು ತಮ್ಮದೇ ಆದ ಮತಾಚರಣೆಗಳಲ್ಲಿ ರೂಢಿಸಿಕೊಳ್ಳಲು ಇನ್ನೂ ಸಾಧ್ಯವಾಗಿಲ್ಲ ಮತ್ತು ಆಗುವ ಸಾಧ್ಯತೆ ಅಮೇರಿಕದ ಸಂಸ್ಕೃತಿಯಲ್ಲಿ ಕ್ಷೀಣಿಸುತ್ತಿದೆ.

**ಮಿತವ್ಯಯ:** ಹತ್ತೊಂಬತ್ತು ನೂರಾ ಮೂವತ್ತರ ದಶಕದ ಬ್ರಿಟಿಷ್ ಆಡಳಿತದಡಿ ಹೆಚ್ಚಿನ ಭಾರತೀಯರು ಬಡತನದಲ್ಲೇ ಜೀವನ ನಡೆಸಿದ ಕಾಲ. ಆದರೆ ಅದಕ್ಕೂ ಮುಂಚೆ ಹಿಂದೂ ಸಮಾಜದಲ್ಲಿ ಮಿತವ್ಯಯ ಮತ್ತು ಸಂಪನ್ಮೂಲಗಳನ್ನು ದುಂದು ಮಾಡದಿರುವ ನಿಯಮಗಳನ್ನು ನನ್ನ ಅಜ್ಜಂದಿರು ಕೂಡ ಪಾಲಿಸುತ್ತಿದ್ದರು. ನನ್ನ ತಂದೆ ತಾಯಿ ಕೂಡ ಮಧ್ಯಮವರ್ಗದಲ್ಲೇ ಬೆಳೆದ ಕಾರಣ ವೃಥಾ ಖರ್ಚು ಮತ್ತು ಪರಿಸರಕ್ಕೆ ಹಾನಿಯಾಗುವಂಥ ಯಾವುದೇ ಕೆಲಸಗಳನ್ನು ಮಾಡಕೂಡದೆಂಬ ಹೆಮ್ಮೆಯ ಮೌಲ್ಯಗಳನ್ನು ತಮ್ಮದಾಗಿಸಿಕೊಂಡಿದ್ದರು. ನಾವು ಬೆಳೆಯುವಾಗ ಅದೇ ವಿಚಾರಧಾರೆ ಮತ್ತು ರೂಢಿಯಾಗಿಸಿಕೊಂಡ ಈ ಮೌಲ್ಯಗಳನ್ನು ಅಮೆರಿಕದಂಥ ಸಂಪನ್ಮೂಲ ದೇಶಕ್ಕೆ ವಲಸೆ ಬಂದರೂ ಪರಿಪಾಲಿಸಲು ನಮಗೆ ಕಷ್ಟವಾಗಲಿಲ್ಲ. ಬಿಗಿಮುಷ್ಟಿಯ ಜೊತೆಗೆ ಪರಿಸರವಾದಿ ತತ್ವಗಳನ್ನು ನಮ್ಮದಾಗಿಸಿಕೊಂಡು ನಮ್ಮ ಮುಂದಿನ ಜನಾಂಗಕ್ಕೂ ಒಗ್ಗುವಂತೆ

ಅಳವಡಿಸಿಕೊಂಡಿದ್ದೇವೆ. ಮಿತವ್ಯಯಕ್ಕಿಂತ ಹೆಚ್ಚಾಗಿ ನಮ್ಮ ಮುಂದಿನ ಪೀಳಿಗೆ ಗಾಳಿ, ನೀರು, ಗಿಡಮರ, ಮತ್ತು ವನ್ಯಮೃಗಗಳ ಬಗ್ಗೆ ಕಾಳಜಿ ತೋರಿಸುವುದನ್ನು ಅರಿತಾಗ ಈ ಮೌಲ್ಯ ಅಚ್ಚಳಿಯದೆ ಉಳಿದಿದೆ ಎಂದು ಹೇಳಬಹುದು.

**ಕುಟುಂಬದ ಐಕ್ಯತೆ:** ನಮ್ಮ ಹಿಂದಿನ ತಲೆಮಾರಿಗೆ ಅವಿಭಕ್ತ ಕುಟುಂಬದ ಜೀವನ ಶೈಲಿ ಕರಗತವಾಗಿತ್ತು. ದೊಡ್ಡ ಕುಟುಂಬದ ಹೊಂದಾಣಿಕೆಯಲ್ಲಿ ಕಲಿತ ಬಾಳಿನ ಶಿಕ್ಷಣವೇ ನಮ್ಮ ಹಿರಿಯರಿಗೆ ದಾರಿದೀಪವಾಗಿತ್ತು. ಅವಿಭಕ್ತ ಕುಟುಂಬ ಮುಂದುವರಿಸಲು ಇಚ್ಛೆಯಿದ್ದರೂ, ನನ್ನ ತಂದೆ ಸರ್ಕಾರೀ ಕೆಲಸ ಮಾಡುತ್ತಿದ್ದ ಕಾರಣ ವರ್ಗಾವಣೆಗಳಾಗಿ ಒಂದೇ ಊರಿನಲ್ಲಿ ಇರಲು ಅವರಿಗೆ ಸಾಧ್ಯವಾಗಲಿಲ್ಲ. ಆದರೆ ತಮ್ಮದೇ ಹನ್ನೊಂದು ಮಕ್ಕಳ ಸಂಸಾರವನ್ನು ನಿರ್ವಹಿಸಿದ್ದರಿಂದ ನನ್ನ ತಂದೆ ತಾಯಿಗೆ ಕುಟುಂಬದ ಐಕ್ಯತೆ ಎನ್ನುವುದು ಮಹತ್ತರ ಉದ್ದಿಶ್ಯವಾಗಿತ್ತು. ಅಂತಹ ಹತ್ತು ಮಂದಿ ಒಡಹುಟ್ಟಿದವರ ಸನ್ನಿವೇಶದಲ್ಲಿ ನನ್ನ ಬಾಲ್ಯ ಕಳೆದಿದ್ದರಿಂದ ಅರಿವಿಲ್ಲದೆಯೇ ಈ ಮೌಲ್ಯವನ್ನು ನಾನೂ ಅಳವಡಿಸಿಕೊಂಡಿದ್ದೆ. ಆದಾಗ್ಯೂ, ಎಂಬತ್ತರ ದಶಕದಲ್ಲಾಗುತ್ತಿದ್ದ 'ಸ್ವಂತ ಸಾಧನೆಗಳೇ ಮುಖ್ಯ' ಎನ್ನುವ ಸಾಮಾಜಿಕ ಒತ್ತಡ ಮತ್ತು ಕಟ್ಟಳೆಗೊಳಪಡದ ನಿಲುವುಗಳನ್ನು ಕೂಡ ನನ್ನದಾಗಿಸಿಕೊಂಡಿದ್ದೆ. ಆದರೆ ಇಪ್ಪತ್ತನೇ ಶತಮಾನದ ರೂಪವೈಶಿಷ್ಟ್ಯದಲ್ಲಿ ಅವಿಭಕ್ತ ಕುಟುಂಬಗಳು ಕಣ್ಮರೆಯಾದದ್ದನ್ನು ನೋಡಿದ್ದ ನನಗೆ, ಅಮೆರಿಕದಲ್ಲಿ ನನ್ನದೇ ಪುಟ್ಟದೊಂದು ಘಟಕ ಸಂಸಾರ ನನ್ನ ಕೇಂದ್ರ ಬಿಂದು ಆಗುವುದೆಂದು ಎಣಿಸಿರಲಿಲ್ಲ. ನಾಲ್ಕೇ ಜನರಿರುವ ಈ ಕುಟುಂಬದ ಐಕ್ಯತೆಯ ವಾಸ್ತವಾಂಶ ಬದಲಾಯಿತೇ ಹೊರತು ಅದನ್ನು ಪರಿಪಾಲಿಸುವ ನಿಯಮಗಳು ಬದಲಾಗಲಿಲ್ಲ. ವೈಯಕ್ತಿಕತೆಗೆ ಹೆಚ್ಚು ಪ್ರಾಮುಖ್ಯ ಕೊಡುವ ಅಮೆರಿಕದಲ್ಲಿ ಬೆಳೆದ ನನ್ನ ಮಕ್ಕಳ ಮನೋಭಾವ ವಿಭಿನ್ನವಾದರೂ ಅವರ ಚಿಂತನೆಯ ಹಿಂದೆ ಅದೇ ಹಳೇ ಆಧಾರತತ್ವದ ಅಡಿಪಾಯವಿದೆ ಎಂದು ಹೇಳುವುದು ಕಷ್ಟ. ಏಕೆಂದರೆ, ಮೊದಲನೆಯದಾಗಿ, ಅಮೆರಿಕದಲ್ಲಿ ಬೆಳೆದ ಮಕ್ಕಳು ಚಿಕ್ಕ ವಯಸ್ಸಿನಲ್ಲೇ ಹೈಸ್ಕೂಲ್ ಮುಗಿಸಿ, ದೂರದ ಕಾಲೇಜು ಸೇರಿ, ನಂತರ ಮತ್ತೆಲ್ಲೋ ಕೆಲಸಕ್ಕೆ ಸೇರಿ ತಮ್ಮ ಗೂಡಿಗೆ ಮರಳಿ ಬರುವುದೇ ಇಲ್ಲ. ಎರಡನೆಯದಾಗಿ, ಅವಿಭಕ್ತ ಕುಟುಂಬದ ಮಾದರಿಯಂತೆ ಜೀವನ ನಡೆಸಲು ಎಲ್ಲ ತರಹದ ಸಹಾಯ ಸಿಗದ ಕಾರಣ ಮತ್ತು, ತಮ್ಮ ಸ್ವಂತ ಸಾಧನೆಯಿಂದಲೇ ಮುಂದೆ ಬರಬೇಕೆಂಬ ನಿಯಮವನ್ನು ಪಾಲಿಸುವುದರಿಂದ, ಕುಟುಂಬದ ಐಕ್ಯತೆಯ ಬಗ್ಗೆ ಗಮನ ಹರಿಸುವುದಿಲ್ಲ.

**ವಿದ್ಯಾಭ್ಯಾಸ ಮತ್ತು ಶಿಸ್ತು:** ವಿದ್ಯೆಯಿಲ್ಲದ ಮಾನವ, ಮಾನವನಲ್ಲ ಎನ್ನುವ ಧೋರಣೆಯನ್ನು ಬೆಳೆಸಿಕೊಂಡಂತಹ ಕುಟುಂಬ ನನ್ನ ತಂದೆ ತಾಯಿಗಳದು. ಬಡತನದಲ್ಲೇ ಬೆಳೆದರೂ, ಬ್ರಿಟಿಷ್ ಸಾಮ್ರಾಜ್ಯದಲ್ಲಿ ಅವರಿಗೆ ಸಿಕ್ಕ ಅವಕಾಶಗಳನ್ನು ಉಪಯೋಗಿಸಿಕೊಂಡು ನನ್ನ ತಂದೆ ಆಗಿನ ವೈದ್ಯಕೀಯ ಪದವಿ ಪಡೆದು ತಮ್ಮ ಮುಂದಿನ ಪೀಳಿಗೆಯ

ವಿದ್ಯಾರ್ಜನೆ ಮತ್ತು ಶಿಸ್ತಿನ ಜೀವನಕ್ಕೆ ಅಡಿಗಲ್ಲು ಹಾಕಿದ್ದರು. ಪ್ರಗತಿಪರ ಜೀವನ ಶೈಲಿಗೆ ಮತ್ತು ಬಡತನದಿಂದ ಬಿಡುಗಡೆಗೆ ವಿದ್ಯಾಭ್ಯಾಸ ಮತ್ತು ಶಿಸ್ತು ಮುಖ್ಯ ಎನ್ನುವುದೇ ಈ ಮೌಲ್ಯದ ಹಿಂದಿರುವ ತತ್ವ. ಅಂತಹ ಮೌಲ್ಯವನ್ನು ಕರಗತ ಮಾಡಿಕೊಂಡ ನನ್ನ ಒಡಹುಟ್ಟಿದ ಹತ್ತೂ ಜನರು ಪದವೀಧರರಾಗಿ ಆರ್ಥಿಕ ಉನ್ನತಿ ಗಳಿಸಿರುವುದರಿಂದ ಇದರಲ್ಲಿ ನಾವು ಸತ್ಯತೆಯನ್ನೇ ಕಾಣಬಹುದು. ಭಾರತದಲ್ಲಿ ಇಂಜಿನಿಯರಿಂಗ್ ಮುಗಿಸಿ ನಾನು ಮತ್ತು ನನ್ನ ಶ್ರೀಮತಿ ಅಮೆರಿಕಾಗೆ ವಲಸೆ ಬಂದದ್ದೇ ಉನ್ನತ ಶಿಕ್ಷಣಕ್ಕಾಗಿ ಎನ್ನುವುದರ ಹಿನ್ನೆಲೆಯಲ್ಲಿ ಈ ಮೌಲ್ಯದ ಮಹತ್ತರ ಪ್ರಭಾವ ಅರಿವಾಗುತ್ತದೆ. ಹಾಗಾಗಿ, ತಲಾಂತರಗಳಿಂದ ಜಿನುಗುತ್ತಿರುವ ಈ ಮೌಲ್ಯವನ್ನು ನನ್ನ ಮಕ್ಕಳೂ ಕೂಡ ಸ್ವೀಕರಿಸಿ ಅಮೆರಿಕದಲ್ಲಿ ವಿದ್ಯಾಭ್ಯಾಸ ಮತ್ತು ಶಿಸ್ತಿಗೆ ಮನ್ನಣೆ ಕೊಟ್ಟಿದ್ದಾರೆ.

**ಅಹಿಂಸೆ ಮತ್ತು ಆಹಾರ ಪದ್ಧತಿ:** ಜಗತ್ತಿನ ಎಲ್ಲ ಜೀವಿಗಳೂ ದೈವದತ್ತ ಕೊಡುಗೆಯಾದ್ದರಿಂದ ಅವುಗಳನ್ನು ಕೊಲ್ಲುವ ಹಕ್ಕು ಯಾರಿಗೂ ಇಲ್ಲ ಮತ್ತು ನಮ್ಮ ಆಹಾರಕ್ಕಾಗಿ ಅಮಾಯಕ ಪ್ರಾಣಿಗಳನ್ನು ಕೊಲ್ಲಬೇಕಿಲ್ಲ ಎನ್ನುವುದು ಒಂದು ಉದಾತ್ತಭಾವ. ಅದನ್ನು ನಮ್ಮ ಹಿರಿಯರು ಪ್ರಕೃತಿಜನ್ಯ ನಿಯಮವಾಗಿ ಪಾಲಿಸಿದ್ದಲ್ಲದೆ, ಅಹಿಂಸೆ ಮತ್ತು ಶಾಕಾಹಾರದ ನಿಬಂಧನೆಗಳನ್ನು ನಮ್ಮ ತಲೆಮಾರಿಗೆ ವರ್ಗಾಯಿಸುವುದರಲ್ಲಿ ಯಶಸ್ವಿಯಾಗಿದ್ದರು. ಸಮಾಜದಲ್ಲಾಗುತ್ತಿದ್ದ ಒತ್ತಡಗಳಿಗೆ ಮಣಿಯದೆ ನಾವೂ ಕೂಡ ಈ ತತ್ವವನ್ನು ದಿನನಿತ್ಯದ ಸಂಗತಿಯಾಗಿ ಪರಿಪಾಲಿಸುತ್ತಿದ್ದೇವೆ. ಅಮೆರಿಕದ ಮಾಂಸಹಾರಿ ಸಮಾಜದ ಒತ್ತಡದಲ್ಲಿ ಶಾಕಾಹಾರಿ ಪದ್ಧತಿಯನ್ನು ಉಳಿಸಿಕೊಳ್ಳುವುದು ಪ್ರಯಾಸವೆನಿಸಿದರೂ, ನಮ್ಮದೇ ಆದ ವಿಜಯ ಗಳಿಸಿದ್ದೇವೆ. ನಮ್ಮ ಮುಂದಿನ ಪೀಳಿಗೆ ಕೂಡ ಈ ಒತ್ತಡಕ್ಕೆ ಶರಣಾಗಲಾರದು ಎನ್ನುವ ಭರವಸೆಯನ್ನು ಉಳಿಸಿಕೊಂಡಿದ್ದೇವೆ.

ತಾತ್ವಿಕ ಮೌಲ್ಯಗಳನ್ನು ಮತ್ತು ಅವುಗಳನ್ನು ಪರಿಪಾಲಿಸುವ ನಿಯಮಗಳನ್ನು ಮೇಲಿನ ಸಾಲುಗಳಲ್ಲಿ ಕೇಂದ್ರಬಿಂದುವಾಗಿ ಇಟ್ಟುಕೊಂಡು ವಿಶ್ಲೇಷಣೆ ಮಾಡಿದೆವು. ಇನ್ನು ಮುಂದೆ ಪರಸಂಸ್ಕೃತಿಯ ಪ್ರಭಾವಗಳಿಂದ ಮೌಲ್ಯಗಳಲ್ಲಾದ ಬದಲಾವಣೆಗಳತ್ತ ಗಮನ ಹರಿಸೋಣ.

**ಮೌಲ್ಯಗಳ ಬದಲಾವಣೆ:**

ಎಂಬತ್ತು ವರ್ಷಗಳ ದೀರ್ಘಾವಧಿಯಲ್ಲಿ ಮಾನವನಿರ್ಮಿತ ಮೌಲ್ಯಗಳು ಬದಲಾವಣೆ ಆಗುವುದು ಅನಿವಾರ್ಯ. ಆದರೆ ನಾನು ಈ ಲೇಖನಕ್ಕೆ ಪೂರ್ವ ಸಿದ್ಧಾಂತವೆಂದು ವಿವರಣೆ ಕೊಡುವಾಗ ಈ ತಾತ್ವಿಕ ಮೌಲ್ಯಗಳು ಮೂರೂ ತಲೆಮಾರಿನಲ್ಲಿ ಒಂದೇ ಅರ್ಥದಲ್ಲಿ ಪರಿಕಲ್ಪನೆಗೊಂಡ ಮೌಲ್ಯಗಳೆಂದು ವಿವರಿಸಿದ್ದೆ. ಹಾಗಾದರೆ ಈ ಮೌಲ್ಯಗಳು ಪರಿವರ್ತನೆಗೊಳ್ಳಬಹುದೇ ಹೊರತು ಸಂಪೂರ್ಣ ಬದಲಾವಣೆಗೊಳ್ಳಲು ಸಾಧ್ಯವಿಲ್ಲವೆಂದಾಯಿತು. ಈ ಅನಿಸಿಕೆಯಲ್ಲಿ ನಾವು ಬದಲಾಗುತ್ತಿರುವ ಸಂಸ್ಕೃತಿ, ಆರ್ಥಿಕ

ಪರಿಸ್ಥಿತಿ, ರಾಜಕೀಯ ಮತ್ತು ತಾಂತ್ರಿಕ ಪರಿಸ್ಥಿತಿಗಳನ್ನು ಬೇರೆ ಬೇರೆ ಸನ್ನಿವೇಶಗಳಿಗೆ ಹೋಲಿಸಿ ಮಾರ್ಪಾಡಾಗದ ಮೌಲ್ಯಗಳೆ ಹೆಚ್ಚೆಂದು ಪಕ್ಷಪಾತ ತೋರಬಹುದು. ಆದರೆ ನಿಜಾಂಶ ಸ್ವಲ್ಪ ಬೇರೆಯೇ ಆಗಿರುತ್ತದೆ. ಏಕೆಂದರೆ ಪರಸಂಸ್ಕೃತಿಯನ್ನು ಸ್ವೀಕಾರ ಮಾಡಿದಾಗ ಅಥವಾ ಪರಸಂಸ್ಕೃತಿಯ ಒತ್ತಡಕ್ಕೊಳಗಾದಾಗ ಅದನ್ನು ಅನುಸರಿಸದಿದ್ದರೆ ಅನಿವಾರ್ಯವಾಗಿ ಪ್ರತ್ಯೇಕತೆಯ ಅನುಭವ ಮತ್ತು ಏನೋ ಕಳೆದುಕೊಳ್ಳುತ್ತಿದ್ದೀವೆಂಬ ಭಾವನೆ ಹುಟ್ಟುತ್ತದೆ. ಜೊತೆಗೆ ಮದ್ಯಪಾನ, ಸಿಗರೇಟ್, ಮಾಂಸಾಹಾರ, ಮತ್ತಿತರ ಕೆಟ್ಟ ಚಟಗಳಲ್ಲಿ ಉತ್ತೇಜನ ಸಿಗಬಹುದು. ಉಡುಗೆತೊಡುಗೆಗಳಲ್ಲಿ, ಆಹಾರ ಪದ್ಧತಿಯಲ್ಲಿ, ಇತರ ಗುಂಪುಗಳೊಡನೆ ಹೊಂದಿಕೆಯಲ್ಲಿ, ಭಾಷೆಯಲ್ಲಿ ಮತ್ತು ಹಲವಾರು ನಿರ್ಬಂಧಿತ ವಿಷಯಗಳಲ್ಲಿ, ಈ ಪ್ರತ್ಯೇಕತೆಯ ಭಯ ಗಾಢವಾಗಿ ಪ್ರಕಟಗೊಳ್ಳುವುದು. ಜೊತೆಗೆ ವಿಶ್ವವ್ಯಾಪಕ ಘಟನೆಗಳು ಸ್ಥಳೀಯ ಬದಲಾವಣೆಗಳಿಗೆ ಪ್ರೇರಕವಾಗಬಹುದು. ಉದಾಹರಣೆಗೆ ಎರಡನೇ ವಿಶ್ವಯುದ್ಧದ ಸಮಯದಲ್ಲಿ ತಲೆದೋರಿದ ಆಹಾರದ ಅಭಾವದಿಂದಾಗಿ ಮಿತವ್ಯಯ ನಮ್ಮ ತಂದೆ-ತಾಯಿಯರ ಕಾಲಕ್ಕೆ ತಾತ್ವಿಕ ಮೌಲ್ಯವಾಗಿ ಬೆಳೆಯಿತು. ಪರಸಂಸ್ಕೃತಿಯ ತೀವ್ರ ಒತ್ತಡದಲ್ಲಿ ಮತಾಚರಣೆಗಳು ಬಹು ಬೇಗ ಯಜ್ಞಪಶುಗಳಾಗಿಬಿಡುತ್ತವೆ. ಹಾಗಾಗಿ, ಯಾವ ಮತಾಚರಣೆಗಳನ್ನು ತಾತ್ವಿಕ ಮೌಲ್ಯದ ಸಂಕೇತವಾಗಿ ಅನುಸರಿಸುತ್ತಿದ್ದರೋ ಅವುಗಳೂ ಕೂಡ ಇಲ್ಲದಂತಾಗುತ್ತವೆ. ಕುಟುಂಬದ ಚೌಕಟ್ಟಿನೊಳಗೆ ಯಾವುದು ಮುಖ್ಯ ಎನ್ನುವ ಹೊಸ ಗ್ರಹಿಕೆ, ಹಳೆ ನಿಯಮಗಳನ್ನು ಸಡಿಲಗೊಳಿಸುತ್ತವೆ. ನನ್ನ ತಂದೆ-ತಾಯಿಗಳ ಸನ್ನಿವೇಶದಲ್ಲಿ ಹೇಳುವುದಾದರೆ, ದೇವರಲ್ಲಿ ಇರಬೇಕಾದ ನಂಬಿಕೆಗೂ ವರ್ಷಕ್ಕೊಮ್ಮೆ ಕುಲದೇವತೆಯನ್ನು ನೋಡಲು ನಂಜನಗೂಡಿಗೆ ಹೋಗಲೇಬೇಕೆಂಬ ನಿಯಮದ ಕುಣಿಕೆ ಸಡಿಲಗೊಂಡಿತ್ತು. ನಮ್ಮ ತಂದೆಗಾದರೋ ಇದೊಂದು ಬ್ರಿಟಿಷ್ ಸರ್ಕಾರದ ಬಿಡುವಿಲ್ಲದ ವೈದ್ಯಕೀಯ ವೃತ್ತಿಯಲ್ಲಿ ತಾವು ಕುಶಾಗ್ರಮತಿಯಿಂದ ಮಾಡಿಕೊಂಡ ಪರಿವರ್ತನೆಯೇ ಹೊರತು ಸಂಪೂರ್ಣ ಬದಲಾವಣೆಯಲ್ಲ. ಹೊಸ ಬಟ್ಟೆಯಂತೆ ಸಂಪ್ರದಾಯಗಳನ್ನು ಅದಲುಬದಲು ಮಾಡಿಕೊಳ್ಳುವ ಉತ್ತಮ ನಿದರ್ಶನ ಭಾರತದ ಸ್ವಾತಂತ್ರ್ಯದ ನಂತರ ಕಾಣಬಹುದು. ಯಾವ ಸಂಪ್ರದಾಯಗಳನ್ನು ಬ್ರಿಟಿಷ್ ಸಾಮ್ರಾಜ್ಯದಲ್ಲಿ ಅನುಸರಿಸಲು ಸಾಧ್ಯವಿದ್ದಿರಲಿಲ್ಲವೋ ಅಂತಹ ಸಂಪ್ರದಾಯಗಳನ್ನು ಸ್ವಾತಂತ್ರ್ಯಾನಂತರ ನನ್ನ ತಂದೆ ತಾಯಿ ಮತ್ತೆ ಕಾರ್ಯರೂಪಕ್ಕೆ ತಂದರು. ಮಿಕ್ಕೆಲ್ಲ ಧಾರ್ಮಿಕ ಸಂಪ್ರದಾಯಗಳು ಕೂಡ ಒಂದಾದ ನಂತರ ಮತ್ತೊಂದು ರೀತಿಯಲ್ಲಿ ಪರಿವರ್ತನೆಗೊಂಡರೂ ದೇವರಲ್ಲಿದ್ದ ನಂಬಿಕೆ ಬಿಡಲಿಲ್ಲ. ಅಂದರೆ ಏಕಮಾತ್ರವಾಗಿ ಸಂಪ್ರದಾಯಗಳು ತಾತ್ವಿಕ ಮೌಲ್ಯದ ಮೇಲೆ ಪರಿಣಾಮ ಬೀರಲಿಲ್ಲ ಎಂದಾಯಿತು.

ನನ್ನ ಸನ್ನಿವೇಶದಲ್ಲಿ, ಅಮೆರಿಕಗೆ ವಲಸೆ ಬಂದ ಹೊಸತರಲ್ಲಿ ತೀವ್ರ ಒತ್ತಡವಿದ್ದದ್ದು – ಅಮೆರಿಕನ್ನರನ್ನು ಅನುಸರಿಸದಿದ್ದರೆ ಸಮರೂಪಿ ಜೀವನ ಶೈಲಿ ಸಾಧ್ಯವಿಲ್ಲ, ಆದ್ದರಿಂದ

ಏಳಿಗೆ ಸಾಧ್ಯವಿಲ್ಲ – ಎನ್ನುವ ನಿರಾಧಾರವಾದ ಅಭಿಪ್ರಾಯ, ವರ್ಷಗಳು ಕಳೆದಂತೆ, ನಮ್ಮ ಹಿರಿಯರಿಂದ ಗಳಿಸಿದ ತಾತ್ವಿಕ ಮೌಲ್ಯಗಳನ್ನು ಯಾವ ಬದಲಾವಣೆಯಿಲ್ಲದೆ ಅಮೆರಿಕದಲ್ಲೂ ಪರಿಪಾಲಿಸಬಹುದೆಂಬ ವಿಶ್ವಾಸ ಮೂಡಿತ್ತು ಮತ್ತು ಅವುಗಳು ತ್ರಿಕಾಲಕ್ಕೂ (ನಿನ್ನೆ, ಇಂದು, ನಾಳೆಗೂ) ಅನ್ವಯಿಸುವ ಮೌಲ್ಯಗಳೆಂದು ಮನವರಿಕೆಯಾಗಲು ಹೆಚ್ಚು ಸಮಯ ಬೇಕಾಗಲಿಲ್ಲ. ಪರಸಂಸ್ಕೃತಿಯ ವ್ಯವಹಾರಿಕತೆಯನ್ನು ಅಳವಡಿಸಿಕೊಳ್ಳಲು ನಮ್ಮ ತಾತ್ವಿಕ ಮೌಲ್ಯಗಳನ್ನು ಬಿಕರಿ ಮಾಡಬೇಕಿಲ್ಲ. ಆದರೆ ಆ ತಾತ್ವಿಕ ಮೌಲ್ಯದ ಚೌಕಟ್ಟಿನೊಳಗೆ ನಮಗೆ ಸಮ್ಮತಿಸಿದ ಪರಿವರ್ತನೆಗಳನ್ನು ಮಾಡಿಕೊಳ್ಳಲೇಬೇಕಾಗುತ್ತದೆ, ಸಂಪೂರ್ಣ ಬದಲಾವಣೆಗಳನ್ನಲ್ಲ. ಬೇರೆ ಪರಸಂಸ್ಕೃತಿಗಳಿಗೆ ಹೋಲಿಸಿದರೆ ಅಮೆರಿಕದಲ್ಲಿ ನಮ್ಮದೇ ಮತಾಚರಣೆಗಳನ್ನು ಮತ್ತು ಸಂಪ್ರದಾಯಗಳನ್ನು ವೈಯಕ್ತಿಕ ಮತ್ತು ಸಮಾಜದ ಎರಡೂ ಅಂತಸ್ತಿನಲ್ಲಿ ಅಳವಡಿಸಿಕೊಳ್ಳಲು ಅವಕಾಶ ಸಿಗುತ್ತದೆ. ಎಲ್ಲಿಯವರೆಗೆ ವಲಸಿಗರು ಉದಾತ್ತವಾದ ಸಾರ್ವತ್ರಿಕ ಮೌಲ್ಯಗಳನ್ನು ಅನುಕರಿಸುವರೋ ಅಲ್ಲಿಯವರೆಗೂ ಹೊಂದಾಣಿಕೆಯಲ್ಲಿ ಸಂಘರ್ಷಣೆ ಬರುವುದಿಲ್ಲ. ಮೇಲೆ ವಿವರಿಸಿದ ಐದು ತಾತ್ವಿಕ ಮೌಲ್ಯಗಳನ್ನು ತೋರಿಕೆಯ ಹೊರನೋಟಕ್ಕಾಗಿ ಆಚರಿಸದೆ ಆಂತರಿಕ ಪ್ರಮಾಣದಲ್ಲಿ ಅನುಸರಿಸುತ್ತಿದ್ದೇವೆ. ಆದಕಾರಣ, ಅಮೆರಿಕದ ಸಂಸ್ಕೃತಿಯ ಪ್ರಭಾವ ನಮ್ಮ ಪೀಳಿಗೆಯಲ್ಲಿ ಕಡಿಮೆ. ಆದರೆ ಅಮೆರಿಕದಲ್ಲೇ ಹುಟ್ಟಿ ಬೆಳೆದ ನನ್ನ ಮಕ್ಕಳಿಗೆ ಬೇರಾವ ಸಂಸ್ಕೃತಿಯ ವೈಯಕ್ತಿಕ ಅನುಭವವಿಲ್ಲದ ಕಾರಣ ತಲೆಮರೆಸಿಕೊಂಡಿರುವ ಒಳ್ಳೆಯ ಅಥವಾ ಕೆಟ್ಟ ಪ್ರಭಾವವನ್ನು ನಮ್ಮ ದೃಷ್ಟಿಕೋನದಿಂದ ಅರ್ಥ ಮಾಡಿಕೊಳ್ಳುವುದು ಒಂದು ನಿಜವಾದ ಸವಾಲು.

**ಸೃಜಿಸಿದ ಮೌಲ್ಯಗಳು:** ಕೆಲವೊಮ್ಮೆ ಪರಸಂಸ್ಕೃತಿಯೇ ಹೊಸ ಪರಿಕಲ್ಪನೆಗೆ ಕಾರಣವಾಗಿ, ಅವುಗಳಲ್ಲಿ ಯಾವುದನ್ನು ಹೊಸ ಸನ್ನಿವೇಶದಲ್ಲಿ ಅಳವಡಿಸಿಕೊಂಡಾಗ ನಮ್ಮ ಮೌಲ್ಯಗಳಿಗೆ ಹೆಚ್ಚಿನ ಸ್ಪಷ್ಟತೆ ಸಿಗಬಹುದು ಎನ್ನುವ ಆತ್ಮವಿಮರ್ಶೆಗೆ ಎಡೆಮಾಡಿಕೊಡುತ್ತವೆ. ಉದಾಹರಣೆಗೆ, ಅಸ್ಪೃಶ್ಯತೆಯ ಬಗ್ಗೆ ನಮ್ಮ ಹಿರಿಯರಿಗಿದ್ದ ಅಭಿಪ್ರಾಯಗಳು ನಮ್ಮ ತಲೆಮಾರಿಗಿಂತ ತೀರಾ ವಿಭಿನ್ನವಾದದ್ದು. ಈ ವಿಚಾರದಲ್ಲಿ ಸ್ವಾತಂತ್ರ್ಯದ ನಂತರ ಭಾರತದಲ್ಲಿ ಆದ ಸಕಾರಾತ್ಮಕ ಬದಲಾವಣೆಗಳನ್ನು ಜೀರ್ಣಿಸಿಕೊಂಡು ನಂತರ ಅಮೆರಿಕದ ಮಾನವ ಹಕ್ಕುಗಳ ಬಗ್ಗೆ ಮತ್ತಷ್ಟು ಪರಿಚಯವಾದಾಗ ತಾನಾಗಿಯೇ ಸ್ಪಷ್ಟತೆ ದೊರಕಿತ್ತು ನಮ್ಮ ತಲೆಮಾರಿಗೆ. ಈ ಮಾನವ ಹಕ್ಕುಗಳೇ ಮುಂದೆ ನಮ್ಮ ಕುಟುಂಬದ ಹೊಸ ತಾತ್ವಿಕ ಮೌಲ್ಯಗಳಾಗುವುದರಲ್ಲಿ ಸಂಶಯವಿಲ್ಲ. ಏಕೆಂದರೆ, ನಮ್ಮ ಮುಂದಿನ ಪೀಳಿಗೆ ಇದನ್ನಾಗಲೇ ಪ್ರಕೃತಿಜನ್ಯ ಮೌಲ್ಯವೆಂದು ಪರಿಗಣಿಸಿ ಪ್ರಾಣಿಪಕ್ಷಿಗಳಿಗೂ ಅಂತಹುದೇ ಹಕ್ಕುಗಳನ್ನು ವ್ಯಾಪಿಸಲು ಅಣಿಯಾಗಿದ್ದಾರೆ. ಹಾಗಾಗಿ, ತಾತ್ವಿಕ ಮೌಲ್ಯಗಳು ಬದಲಾಗದಿದ್ದರೂ ಹೊಸ ಮೌಲ್ಯಗಳಿಗೆ ಒತ್ತುಕೊಡುತ್ತವೆ.

**ಮೌಲ್ಯಗಳ ಹೊಂದಾಣಿಕೆ:** ಎಲ್ಲಿ ಪರಸಂಸ್ಕೃತಿಯಿಂದ ಪ್ರಭಾವಕ್ಕೊಳಗಾಗಿ ಸಂಪ್ರದಾಯಗಳು ಭಿನ್ನಾಭಿಪ್ರಾಯಕ್ಕೆ ಎಡೆಮಾಡಿಕೊಡುತ್ತವೆಯೋ ಅಂತಹ ವಿಷಯಗಳಲ್ಲಿ ಒಪ್ಪಂದ ಅಥವಾ ರಾಜಿ ಮಾಡಿಕೊಳ್ಳುವುದು ಸ್ವಾಭಾವಿಕ ಎಂದಾಯಿತು. ಈ ಸುಧಾರಣೆ ಕ್ರಮದಲ್ಲಿ ಸೂಕ್ತವೆನಿಸದ ಭಾಗಗಳನ್ನು ತೊರೆದುಹಾಕಿ, ಹೊಂದಾಣಿಕೆಯ ಮೂಲಕ ಮತ್ತೊಂದು ಹೊಸ ಸಂಪ್ರದಾಯವನ್ನು ಊರ್ಜಿತಮಾಡಬಹುದು. ಮೌಲ್ಯಗಳನ್ನು ಸಮರ್ಥಿಸುವಂಥ ಈ ಹೊಸ ಸಂಪ್ರದಾಯಗಳನ್ನು ಮಾತ್ರ ಬೆಳೆಸಿಕೊಳ್ಳುವುದು ನಮ್ಮ ಕೈಯಲ್ಲೇ ಇದೆ. ಉದಾಹರಣೆಗೆ ಮಡಿಯಲ್ಲಿ ವ್ರತ ಮಾಡಿಯೇ ದಾನ ಮಾಡುವುದು ನಮ್ಮ ಹಿರಿಯರಿಗೆ ತೃಪ್ತಿಯಿತ್ತರೆ, ನಮ್ಮ ಸಮಾಜಕ್ಕನುಗುಣವಾಗಿ ಬಡ ಬಗ್ಗರ ಸಂಸ್ಥೆಗಳಲ್ಲಿ ಸ್ವಯಂಸೇವಕರಾಗಿ ಅಥವಾ ಆರ್ಥಿಕ ಸಹಾಯ ಮಾಡಿದರೆ ಹೊಸ ಸಂಪ್ರದಾಯ ಊರ್ಜಿತವಾದಂತೆಯೂ ಆಯಿತು, ಪರಸಂಸ್ಕೃತಿಗೆ ಹೊಂದಾಣಿಕೆಯೂ ಆಯಿತು. ಇಂತಹ ಹೊಂದಾಣಿಕೆಯಲ್ಲಿ ಹಲವಾರು ಭೇದಗಳನ್ನು ಕಾಣಬಹುದು:

**ಸಮೀಕರಣ:** ನಮ್ಮ ಸಂಸ್ಕೃತಿ ಮತ್ತು ಪರಂಪರೆಗಳನ್ನು ನಮ್ಮದಾಗಿಯೇ ಉಳಿಸಿಕೊಂಡು ಬೇರೆ ಅಥವಾ ಪರಸಂಸ್ಕೃತಿಗಳಲ್ಲಿ ಭಾಗವಹಿಸುವುದೇ ಸಮೀಕರಣ. ವಲಸೆ ಬಂದ ನಾವು ಹೆಚ್ಚು ಪಾಲು ಸಮೀಕರಣದಲ್ಲೇ ನಮ್ಮ ಜೀವನ ಕಳೆಯುತ್ತೇವೆ. ಉದಾಹರಣೆಗೆ ಹಬ್ಬಗಳ ಆಚರಣೆ, ಸಾಂಸ್ಕೃತಿಕ ಕೂಟಗಳಲ್ಲಿ ಭಾಗವಹಿಸುವುದು, ನೃತ್ಯ ನಾಟಕ ಎಲ್ಲವೂ ನಮ್ಮದಾದರೂ, ಕ್ರಿಸ್ಮಸ್, ಥ್ಯಾಂಕ್ಸ್ ಗಿವಿಂಗ್, ಹಾಲೋವಿನ್ ಮುಂತಾದ ಪರಸಂಸ್ಕೃತಿಯ, ಪಾರಿಭಾಷಿಕ ಚಟುವಟಿಕೆಗಳನ್ನು ನಮ್ಮದಾಗಿಸಿಕೊಂಡಿದ್ದೇವೆ. Best of both worlds ಎನ್ನುವುದನ್ನು ಪ್ರತಿಶತ ಅಳವಡಿಸಿಕೊಂಡು ಮುಂದಿನ ಪೀಳಿಗೆಗೆ ಅಡಿಪಾಯ ಹಾಕಿದ್ದೇವೆ. ನಮ್ಮ ಹಿರಿಯರು ಕೂಡ ಬ್ರಿಟಿಷ್ ಮತ್ತು ಭಾರತೀಯ ಸಂಸ್ಕೃತಿಯನ್ನು ಜೊತೆಗೂಡಿಸಿದರು. ತಾತ್ವಿಕ ಮೌಲ್ಯಗಳು ಹಾಗೆಯೆ ಉಳಿದಿದೆ ಎಂದರೆ ಅದು ನಮ್ಮ ಸಂಸ್ಕೃತಿಯ ಸರ್ವತೋಮುಖದ ಕುರುಹು.

**ವಿಲೀನಗೊಳಿಸುವಿಕೆ:** ಎಷ್ಟೋ ಬಾರಿ ಪರಸಂಸ್ಕೃತಿಯನ್ನೇ ನಮ್ಮದಾಗಿಸಿಕೊಂಡು, ನಮ್ಮ ಸಂಸ್ಕೃತಿಯನ್ನು ತಳ್ಳಿಹಾಕುವ ಸನ್ನಿವೇಶಗಳು ವಿಲೀನಗೊಂಡ ಸಂಪ್ರದಾಯಗಳಾಗಿ ಬಿಡುತ್ತದೆ. ಅದೃಷ್ಟವಶದಿಂದ ನನ್ನ ತಲೆಮಾರಿನಲ್ಲಿ ಅಂತಹ ವಿವೇಕರಹಿತ ಉದಾಹರಣೆ ಸಿಗದಿದ್ದರೂ, ಮುಂದಿನ ಪೀಳಿಗೆಯಲ್ಲಿ ಅಂತಹ ಅಪಾಯ ಸೂಚನೆ ಕೆಲವೊಮ್ಮೆ ಕಂಡುಬರುತ್ತಿದೆ. ಧರ್ಮಪ್ರಜ್ಞೆ ಅವರಲ್ಲಿ ಜಾಗೃತಿಯಾಗುವವರೆಗೂ ನಾವು ನಮ್ಮ ಶಿಸ್ತುಕ್ರಮ ಜಾರಿಗೆ ತರಬಹುದೇ ವಿನಃ ಭಾವೋದ್ವೇಗದಲ್ಲಿ ಕುಟುಂಬದ ಐಕ್ಯತೆಗೆ ಹಾನಿ ತರಲು ಸಾಧ್ಯವಿಲ್ಲ.

**ಪ್ರತ್ಯೇಕೀಕರಣ:** ವಲಸೆ ಬಂದರೂ ಬೇರೊಂದು ಪರಸಂಸ್ಕೃತಿಯನ್ನು ಸ್ವೀಕರಿಸದೆ, ಅದರಲ್ಲಿ ಬೆರೆಯದೇ ತಮ್ಮ ಹಳೇ ಸಂಪ್ರದಾಯಗಳಲ್ಲೇ ಜೀವನ ನಡೆಸಿದಾಗ ಆಗುವ ಪರಿಣಾಮವೇ ಪ್ರತ್ಯೇಕೀಕರಣ. ಅಂತಹ ಕುಟುಂಬಗಳಲ್ಲಿ ಎರಡನೇ ತಲೆಮಾರಿಗೆ ಜೀವನ

ನಿಂತ ನೀರಿನಂತೆ ಆಗುತ್ತದೆಯೇ ಹೊರತು ಪ್ರವಹಿಸಲು ಸಾಧ್ಯವಿಲ್ಲ. ಕಟ್ಟುನಿಟ್ಟಿನ ನಿಯಮಗಳನ್ನು ಹೊರಿಸುವುದರ ಜೊತೆಗೆ ಉಗ್ರಗಾಮಿ ನಿಲುವನ್ನು ಮುಂದಿನ ಪೀಳಿಗೆಗೆ ವರ್ಗಾಯಿಸಿದರೆ ಸಂದಿಗ್ಧ ಪರಿಸ್ಥಿತಿಯೇ ಉಂಟಾಗುತ್ತದೆ. ಅದೃಷ್ಟವಶಾತ್, ನಮ್ಮ ಹಿಂದೂ ಸಂಸ್ಕೃತಿ ಪ್ರತ್ಯೇಕೀಕರಣಕ್ಕಿಂತಲೂ ಸಮೀಕರಣದಲ್ಲಿ ಬಾಳನ್ನು ಹಸನು ಮಾಡಿದೆ. ಮೊದಲೇ ವಿವರಿಸಿದಂತೆ, ಈ ಐದು ತಾತ್ವಿಕ ಮೌಲ್ಯಗಳು ಪರಸ್ಪರ ಅವಲಂಬಿತವಾದ್ದರಿಂದ ಇಡೀ ಸಮಾಜದ ಶಾಂತಿ ಮತ್ತು ನೆಮ್ಮದಿಯ ಅನ್ವೇಷಣೆ, ವೈಯಕ್ತಿಕ ಅನ್ವೇಷಣೆ ಆದಾಗ ಮಾತ್ರ ಸಾಧ್ಯ, ಪ್ರತ್ಯೇಕೀಕರಣದಿಂದ ಖಂಡಿತ ಸಾಧ್ಯವಿಲ್ಲ.

**ತ್ರಿಶಂಕು ಅಥವಾ ಅಂಚಿನಲ್ಲಿರುವುದು:** ವಲಸೆ ಬಂದರೂ ಒಂದು ಕಡೆ ಹಳೇ ಸಂಪ್ರದಾಯಗಳಿಗೆ ತಿಲಾಂಜಲಿಯನಿತ್ತು, ಮತ್ತೊಂದೆಡೆ ಪರಸಂಸ್ಕೃತಿಯನ್ನೂ ಸ್ವೀಕರಿಸದೆ ತ್ರಿಶಂಕು ಜೀವನ ಅಥವಾ ಅಂಚಿನಲ್ಲಿ ಜೀವನ ನಡೆಸುವ ಸನ್ನಿವೇಶಗಳು ವಿರಳವೆನ್ನಬಹುದು. ಈ ಲೇಖನದಲ್ಲಿ ವಿವರಿಸಿರುವ ಮೂರೂ ತಲೆಮಾರಿಗೆ ಈ ಸನ್ನಿವೇಶ ಅನ್ವಯಿಸುವುದಿಲ್ಲ. ಆದರೆ ನಿರಾಶ್ರಿತರಾಗಿ ವಲಸೆಬಂದವರಿಗೆ ಇದು ನಿಜಸ್ಥಿತಿ. ಉಟ್ಟ ಬಟ್ಟೆಯಲ್ಲೇ ತಮ್ಮ ಹಿಂದಿನ ಜೀವನ ಶೈಲಿಯನ್ನು ತ್ಯಜಿಸಿ ಅನಾಶ್ರಿತರಾಗಿ ಗಡಿಪಾರಾದವರಿಗೆ ಪರಸಂಸ್ಕೃತಿ ಕಠಿಣವೇ. ಮೇಲೆ ವಿವರಿಸಿದ ನಾಲ್ಕು ಭೇದಗಳನ್ನು ಬಳಸಿ, ಈ ನಿರಾಶ್ರಿತ ಗುಂಪಿನಲ್ಲಿ ಆಗುವ ಬದಲಾವಣೆಗಳನ್ನು ಕೂಲಂಕಷವಾಗಿ ಸಮರ್ಥನೆ ಮಾಡುವ ಉದ್ದೇಶ ನನ್ನದಲ್ಲ. ಆದರೂ ಪರಸಂಸ್ಕೃತಿಯ ಪ್ರಭಾವಕ್ಕೊಳಗಾದ ಎಲ್ಲ ಗುಂಪಿಗೆ ಅನ್ವಯಿಸುವ ಸಾಮಾನ್ಯ ಅಂಶಗಳನ್ನು ಮೇಲೆ ವಿವರಿಸಿದ್ದೇನೆ.

**ವಿಶ್ಲೇಷಣೆ:**

ಮೇಲಿನ ಕೆಲವು ಉದಾಹರಣೆ, ಅಭಿಪ್ರಾಯ, ಅನುಭವ, ಮತ್ತು ಸಮಾಜಶಾಸ್ತ್ರ ತಜ್ಞರ ಸಂಶೋಧನೆಗಳನ್ನು ಅಳವಡಿಸಿಕೊಂಡು ಮೂರೂ ತಲೆಮಾರಿನವರ ವಿಚಾರ ಪರಂಪರೆಯನ್ನು ಒರೆಹಚ್ಚಿ ನೋಡಿದಾಗ ತೀರ್ಮಾನಕ್ಕೆ ಬಂದದ್ದು ಎರಡು ವಿಚಾರಗಳು:

* ಏಕಮಾತ್ರವಾಗಿ ಸಂಪ್ರದಾಯಗಳು ತಾತ್ವಿಕ ಮೌಲ್ಯದ ಮೇಲೆ ಪರಿಣಾಮ ಬೀರಲಿಲ್ಲ.
* ಮೌಲ್ಯಗಳನ್ನು ಪರಿಪಾಲಿಸುವ ಪದ್ಧತಿಗಳಲ್ಲಿ ಪರಿವರ್ತನೆ ಅನಿವಾರ್ಯ.

ನೈತಿಕ ವಿವೇಚನೆ ಮತ್ತು ವೈಯಕ್ತಿಕ ದೃಷ್ಟಿಕೋನದಲ್ಲಿ ತುಲನೆ ಮಾಡಿದಾಗ ತೀರ್ಮಾನಕ್ಕೆ ಬಂದ ವಿಚಾರಗಳು:

ದೇವರಲ್ಲಿ ನಂಬಿಕೆ, ಶಾಂತಿ ಮತ್ತು ಧಾರ್ಮಿಕ ಸಂಪ್ರದಾಯಗಳನ್ನು ಪರಿಪಾಲಿಸುವ ಮೌಲ್ಯವನ್ನು ವಿಶ್ಲೇಷಿಸಿದಾಗ, ಬ್ರಿಟಿಷ್ ಪರಸಂಸ್ಕೃತಿಯಲ್ಲಿ ಮೊದಲನೇ ತಲೆಮಾರಿಗೆ (೧೯೩೫–೬೦) ಹೆಚ್ಚಾಗಿ ಪರಿವರ್ತನೆ ಆಗಲಿಲ್ಲ. ವ್ಯಾವಹಾರಿಕ ಮತ್ತು ದಿನನಿತ್ಯದ ಮತಾಚಾರಗಳನ್ನು ಬದಲಾವಣೆಗಿಂತ ಹೊಂದಾಣಿಕೆಯಲ್ಲಿ ಸರಿದೂಗಿಸಿದರು. ಅಮೆರಿಕದ ಪರಸಂಸ್ಕೃತಿಯಲ್ಲಿ ಎರಡನೇ ತಲೆಮಾರಿಗೆ (೧೯೮೫–೨೦೧೫) ವ್ಯಾವಹಾರಿಕ ಮತ್ತು

ದಿನನಿತ್ಯದ ಮತಾಚಾರಗಳಲ್ಲಿ ಹೆಚ್ಚಿನ ಬದಲಾವಣೆ ಮಾಡಬೇಕಾಯಿತಾದರೂ ಸಮೀಕರಣದ ಮೂಲಕ ಎರಡು ಸಂಸ್ಕೃತಿಯನ್ನು ಸರಿದೂಗಿಸಿದೆವು. ಆದರೆ ಮೂರನೇ ತಲೆಮಾರಿಗೆ (೧೯೮೫–೨೦೧೫ ಮತ್ತು ಅದರಾಚೆ) ತೀವ್ರ ಬದಲಾವಣೆಯಾಗಿ ತಳಹದಿ ಭದ್ರವಾಗಿದ್ದರೂ ಮುಂದೆ ಏನಾಗುವುದು ಎಂದು ತೀರ್ಮಾನಕ್ಕೆ ಬರಲು ಸಾಧ್ಯವಿಲ್ಲ. ದೇವರಲ್ಲಿ ನಂಬಿಕೆ ಉಳಿದರೂ ಧಾರ್ಮಿಕ ಸಂಪ್ರದಾಯಗಳು ಮುಂದುವರೆಯುವ ಸಾಧ್ಯತೆ ಶೂನ್ಯವೆಂದೇ ಹೇಳಬಹುದು.

ಮಿತವ್ಯಯ ಮತ್ತು ಸಂಪನ್ಮೂಲಗಳನ್ನು ದುಂದುವೆಚ್ಚ ಮಾಡದಿರುವ ಮೌಲ್ಯ ಮೂರೂ ಸಂಸ್ಕೃತಿಗಳಿಂದ ಮೂರೂ ತಲೆಮಾರಿಗೆ ವರ್ಗಾವಣೆಯಾಗಿ, ಕೆಲವೊಂದು ಸೃಜಿಸಿದ ಮೌಲ್ಯಗಳನ್ನು ಅಳವಡಿಸಿಕೊಂಡು ಯಾವ ಬದಲಾವಣೆಯ ಅವಶ್ಯವಿಲ್ಲದೆ ಮುಂದುವರಿಯುತ್ತಿದೆ. ಸೃಜಿಸಿದ ಮೌಲ್ಯಗಳಿಗಿಂತ ತಾತ್ವಿಕ ಮೌಲ್ಯಗಳೇ ಆಧಾರಸ್ಥಂಭಗಳಾಗಿವೆ.

ಕುಟುಂಬ ಮತ್ತು ಕುಟುಂಬದ ಐಕ್ಯತೆಗೆ ಹೆಚ್ಚು ಪ್ರಾಧಾನ್ಯ ಕೊಡುವ ಮೌಲ್ಯ, ಪರಸಂಸ್ಕೃತಿಗಳ ಪ್ರಭಾವ ಮತ್ತು ಸಮಾಜದಲ್ಲಾದ ಬದಲಾವಣೆಗಳಿಂದ, ಹೆಚ್ಚು ಪಾಲು ವಿಲೀನಗೊಂಡು ವೈಯಕ್ತಿಕತೆಗೆ ಮತ್ತು ಒಂಟಿತನದ ಅಸ್ತಿತ್ವಕ್ಕೆ ಪ್ರಾಧಾನ್ಯ ತಂದಿವೆ. ಬ್ರಿಟಿಷರ ಪರಸಂಸ್ಕೃತಿಯಲ್ಲೇ ಮೊದಲನೇ ತಲೆಮಾರಿನಲ್ಲಿ ಶುರುವಾದ ಈ ಪರಿವರ್ತನೆ ಅಮೆರಿಕದಲ್ಲಿ ಎರಡನೇ ತಲೆಮಾರಿಗೆ ಸುಪರಿಚಿತವಾಗಿ ಮೂರನೇ ತಲೆಮಾರಿನಲ್ಲಿ ವಿಲೀನಗೊಂಡು ಬೇರೂರಿದೆ.

ವಿದ್ಯಾಭ್ಯಾಸ ಮತ್ತು ಶಿಸ್ತಿನ ಜೀವನವನ್ನು ಗೌರವಿಸುವ ಮೌಲ್ಯ, ಮೂರೂ ಸಂಸ್ಕೃತಿಗಳಿಂದ ಮೂರೂ ತಲೆಮಾರಿಗೆ ವರ್ಗಾವಣೆಯಾಗಿ ಯಾವ ಬದಲಾವಣೆಯ ಅವಶ್ಯಕತೆಯಿಲ್ಲದೆ ಮುಂದುವರಿಯುತ್ತಿದೆ.

ಅಹಿಂಸೆ ಮತ್ತು ಆಹಾರ ಪದ್ಧತಿಯನ್ನು ಅನುಸರಿಸುವ ಮೌಲ್ಯದಲ್ಲಿ, ಬ್ರಿಟಿಷ್ ಪರಸಂಸ್ಕೃತಿ ನನ್ನ ತಂದೆ ತಾಯಿಯ ತಲೆಮಾರಿಗೆ ಅಷ್ಟೇನೂ ಪ್ರಭಾವ ಬೀರದಿದ್ದರೂ, ಅಮೆರಿಕದ ಪರಸಂಸ್ಕೃತಿಯಲ್ಲಿ ಎರಡನೇ ಮತ್ತು ಮೂರನೇ ತಲೆಮಾರಿನವರು ಸಾಕಷ್ಟು ಪರಿವರ್ತನೆ ಮಾಡಿಕೊಂಡು ಹೆಚ್ಚಾಗಿ ಸಮೀಕರಣ ಮತ್ತು ಸೃಜಿಸಿದ ಮೌಲ್ಯಗಳನ್ನು ಅಳವಡಿಸಿಕೊಂಡಿದ್ದೇವೆ. ಈ ವಿಚಾರದಲ್ಲಿ ಪ್ರತ್ಯೇಕೀಕರಣ ಹೆಚ್ಚು ಯಶಸ್ಸು ತಂದಿದೆ ಎಂದೇ ಹೇಳಬಹುದು.

**ಮುಕ್ತಾಯ:**

ಈ ಲಘುಲೇಖನದ ಮೊದಲಲ್ಲಿ ನಾನು ಉತ್ತರ ಹುಡುಕಲು ಹೋದ ಪ್ರಶ್ನೆ: ಪರಸಂಸ್ಕೃತಿಯನ್ನು ಸ್ವೀಕಾರ ಮಾಡುವುದರಿಂದ ಮೂಲಭೂತ ಮೌಲ್ಯಗಳು ಬದಲಾಗುತ್ತವೆಯೇ ಎಂದು. ಮತಾಚರಣೆಗಳನ್ನು ಮತ್ತು ಸಂಪ್ರದಾಯಗಳನ್ನು ಪ್ರತ್ಯೇಕಿಸಿ ತಾತ್ವಿಕ ಮೌಲ್ಯಗಳನ್ನು ಒಂದು ಹೊಸ ದೃಷ್ಟಿಕೋನದಿಂದ ನೋಡಿದೆವು. ಆ ತುಲನೆಯಲ್ಲಿ ಹೊರಹೊಮ್ಮಿದ ಐದು ತಾತ್ವಿಕ ಮೌಲ್ಯಗಳು, ನನ್ನದೇ ಮೂರು ತಲೆಮಾರಿನ ೮೦

ವರ್ಷಗಳ ದೀರ್ಘ ಕಾಲಾವಧಿ ಮತ್ತು ಮೂರು ಪರಸಂಸ್ಕೃತಿಗಳ ಪ್ರಭಾವದಿಂದ ಬದಲಾದವೇ ಎನ್ನುವ ಸಂಶೋಧನೆ ಈ ಲಘುಲೇಖನಕ್ಕೆ ಸ್ಫೂರ್ತಿಯಾಯಿತು. ಈ ಪ್ರಶ್ನೆಗೆ ನಿರ್ಣಾಯಕರ ಉತ್ತರ ಕೊಡುವ ಪ್ರಯತ್ನದಲ್ಲಿ ಕೆಳಗಿನ ನಾಲ್ಕು ಅವಲೋಕನಗಳು ಪರಿಣಾಮಕಾರಿಯಾಗಿವೆ:

ತಾತ್ವಿಕ ಮೌಲ್ಯಗಳು ಮೊದಲ ಎರಡು ತಲೆಮಾರಿನಲ್ಲಿ ಹೆಚ್ಚು ಬದಲಾಗದೆ ಉಳಿದಿವೆ. ಮೊದಲೆರಡು ತಲೆಮಾರಿನಲ್ಲಿ ಪರಿವರ್ತನೆ ಮತ್ತು ಸಮೀಕರಣವೇ ಮೇಲುಗೈ ಪಡೆದಿದೆ. ಅಮೆರಿಕದ ಸಾಮಾಜಿಕ ಪರಿವರ್ತನೆಯ ಫಲಿತಾಂಶವೆ ಇರಬಹುದೇನೋ ಎನ್ನುವಂತೆ, ಮೂರನೇ ತಲೆಮಾರಿನಲ್ಲಿ ತಾತ್ವಿಕ ಮೌಲ್ಯಗಳು ಸೃಜಿಸಿದ ಮೌಲ್ಯಗಳೊಡನೆ ಬೆರೆತು ಹೊಸ ರೂಪ ತಾಳಿವೆ. ಜೊತೆಗೆ ಈ ತಲೆಮಾರಿನ ಧಾರ್ಮಿಕ ಸಂಪ್ರದಾಯ ಮತ್ತು ಕುಟುಂಬದ ಐಕ್ಯತೆಯಲ್ಲಿ ತೀವ್ರ ಬದಲಾವಣೆಗಳಾಗಿ, ತಾತ್ವಿಕ ಮೌಲ್ಯ ಒಂದು ಅನಿರ್ದಿಷ್ಟಿತ ದಿಸೆಯಲ್ಲಿ ಸಾಗುತ್ತಿದ್ದರೂ ಅಡಿಪಾಯ ಭದ್ರವಾಗಿದೆ.

ಪರಸಂಸ್ಕೃತಿಯಲ್ಲಿ ತಾತ್ವಿಕ ಮೌಲ್ಯಗಳನ್ನು ಉಳಿಸಿಕೊಳ್ಳಲು ಹೊರಗಿನಿಂದ ಎಷ್ಟೇ ದಾಳಿಯ ಭೀತಿ, ಒತ್ತಡವಿದ್ದರೂ ಕೊನೆಗೆ ನಮ್ಮ ಹಿಂದಿನ ತಲೆಮಾರಿನಿಂದ ನಾವು ಕಲಿತದ್ದನ್ನು ನಮ್ಮದಾಗಿಸಿಕೊಳ್ಳುವುದು ನಮ್ಮ ಕೈಯಲ್ಲೇ ಇದೆಯೇ ಹೊರತು ಪರಸಂಸ್ಕೃತಿಯನ್ನು ಆಕ್ಷೇಪಿಸುವುದರಿಂದ ಅಥವಾ ನಕಲು ಮಾಡುವುದರಿಂದ ಸಾಧ್ಯವಿಲ್ಲ. ಪರಸಂಸ್ಕೃತಿಯಲ್ಲಿ ತಾತ್ವಿಕ ಮೌಲ್ಯಗಳನ್ನು ಕಾಪಾಡಲು ಪ್ರತಿಯೊಂದು ತಲೆಮಾರಿಗೂ ಬೇರೆಯೇ ಹೊಣೆಗಾರಿಕೆ ಕಾಣಿಸಿಕೊಳ್ಳುತ್ತದೆ. ಅವುಗಳನ್ನು ನಿಷ್ಪಕ್ಷಪಾತವಾಗಿ ಅಳವಡಿಸಿಕೊಳ್ಳಲು ಬದಲಾವಣೆ, ಹೊಂದಾಣಿಕೆ, ಸಮೀಕರಣ, ವಿಲೀನಗೊಳಿಸುವಿಕೆ ಅಥವಾ ಪ್ರತ್ಯೇಕೀಕರಣದಂತಹ ಪರಿಹಾರ ಮಾರ್ಗಗಳ ಮೇಲೆ ಬೆಳಕು ಚೆಲ್ಲಿದೆ, ಈ ಲಘುಲೇಖನ.

*

---

ಉಲ್ಲೇಖ / References:

1. Acculturation — Wikipedia.
2. Rethinking the Concept of Acculturation: Implications for Theory and Research, Seth J. Schwatrz et al., American Psychology, May-June 2010, Pages: 237-251.
3. Acculturation: Living successfully in two cultures, John W. Berry., International Journal of Intercultural Relations, Volume 29, Issue 6, November 2005, Pages 697-712.
4. Several blogs and internet sites. Specifically Thoughtco.com

# ಜಗದ ನಿಯಮ

■ **ತ್ರಿವೇಣಿ ಶ್ರೀನಿವಾಸರಾವ್,** Aurora, IL.

ತರಾತುರಿಯಲ್ಲಿ ಪೂಜೆ ಮುಗಿಸುತ್ತಿದ್ದ ಪತಿಯನ್ನು ಕಂಡು ಸುಧಾಬಾಯಿಗೆ ರೇಗಿತು. "ನಿಮ್ಮಷ್ಟಕ್ಕೆ ನೀವು ಸಾವಕಾಶವಾಗಿ ದೇವರ ಪೂಜೆ ಮಾಡಬಾರದೇ? ಪ್ರತಿ ದಿನವೂ ಅವಳನ್ನು ನೀವೇ ಕರೆದೊಯ್ದು ಕಾಲೇಜಿಗೆ ಬಿಡುವುದೇನು, ಅವಳು ಹೊರಬರುವವರೆಗೂ ಅಲ್ಲೇ ಕಾಯುತ್ತಾ ಕೂಡುವುದೇನು, ನೋಡಿದವರು ಏನೆಂದುಕೊಳ್ಳುವುದಿಲ್ಲ? ಹೇಗೂ ಇದು ಅವಳ ಓದಿನ ಕೊನೆಯ ವರ್ಷ. ಇನ್ನು ಕೆಲವೇ ದಿನಗಳು ತಾನೇ? ಅವಳಷ್ಟಕ್ಕೆ ಅವಳು ಹೋಗಿ ಪರೀಕ್ಷೆ ಬರೆದು ಬರಲಿ ಬಿಡಿ. ಗುಟ್ಟಾಗಿರುವ ವಿಷಯವನ್ನು ನೀವಾಗಿಯೇ ಯಾಕೆ ಜನಗಳ ಬಾಯಿಗೆ ಬೀಳುವಂತೆ ಮಾಡುತ್ತೀರಿ?" ಎಂದರು ಆಕ್ಷೇಪಣೆಯ ದನಿಯಲ್ಲಿ. ಜಪ ಮಾಡುತ್ತಲೇ ಇವರ ಮಾತನ್ನೆಲ್ಲ ಕೇಳಿಸಿಕೊಂಡಿದ್ದ ರಾಮಾಚಾರ್ಯರು ತಣ್ಣನೆಯ ಸ್ವರದಲ್ಲಿ, "ನನಗೆ ಹೊತ್ತಾಯಿತು. ನೈವೇದ್ಯಕ್ಕೆ ತಂದಿಡ್ತೀಯಾ?" ಎಂದಾಗ, ಪತಿಯ ಸ್ವಭಾವ ತಿಳಿದಿದ್ದ ಸುಧಾಬಾಯಿ ನಿರ್ವಿಣ್ಣರಾಗಿ ಒಳನಡೆದರು.

ರಾಮಾಚಾರ್ಯರು ಪೂಜೆ ಮುಗಿಸಿ, ದೇವರಿಗೆ ಸಾಷ್ಟಾಂಗ ನಮಸ್ಕಾರ ಹಾಕಿ ಹೊರಬಂದರೆಂದರೆ, ಮಧ್ಯಾಹ್ನದ ಭೋಜನದವರೆಗೆ ಅವರಿಗೆ ವಿರಾಮ. ಬೆಳಗಿನ ಉಪಾಹಾರದ ರೂಢಿ ಇಲ್ಲದ ಅವರು ಒಂದು ಲೋಟ ಹಾಲನ್ನಷ್ಟೆ ಸೇವಿಸಿ, ಅಂದಿನ ದಿನಪತ್ರಿಕೆಯನ್ನು ತಿರುವಿಹಾಕುತ್ತಿದ್ದರು. ಅನಂತರ ಪತ್ನಿಯಿಂದ ಊಟಕ್ಕೆ ಕರೆ ಬರುವವರೆಗೆ ಯಾವುದಾದರೂ ಗ್ರಂಥದ ಪಾರಾಯಣ ಸಾಗುತ್ತಿತ್ತು. ಅವರೊಡನೆ ಭೇಟಿಗೆ ಬರುವವರು ಕೂಡ ಇದೇ ಸಮಯವನ್ನು ಆರಿಸಿಕೊಳ್ಳುತ್ತಿದ್ದರು. ಬಂದವರೊಂದಿಗೆ ಮಾತುಕಥೆ, ಶಾಸ್ತ್ರ ಸಂಬಂಧದ ಚರ್ಚೆ, ಧರ್ಮಾಚರಣೆಯ ಸಂಬಂಧದಲ್ಲಿ ಏಳುವ ಅನುಮಾನ ಪರಿಹಾರ... ಇತ್ಯಾದಿಗಳಿಗೆ ಆ ಸಮಯ ಮೀಸಲು. ಆದರೆ, ಕಳೆದ ಕೆಲವು ದಿನಗಳಿಂದ ಆಚಾರ್ಯರ ಈ ದೈನಂದಿನ ಕಾರ್ಯಕ್ರಮದಲ್ಲಿಯೂ ವ್ಯತ್ಯಯ ಉಂಟಾಗಿತ್ತು.

ಸುಧಾಬಾಯಿ ಬಿಸಿಹಾಲಿನ ಲೋಟವನ್ನು ಹಿಡಿದು ಬರುವ ಹೊತ್ತಿಗೆ ಆಚಾರ್ಯರಾಗಲೇ ನೀಟಾಗಿ ಪಂಚೆಯುಟ್ಟು, ಕಚ್ಚೆ ತೀಡಿಕೊಳ್ಳುತ್ತಿದ್ದರು. ಸುಧಾಬಾಯಿ ಬಂದುದನ್ನು ನೋಡಿ, "ದಾಮಿನಿ ತಯಾರಾಗಿದ್ದರೆ ಹೊರಡಲು ಹೇಳು" ಎಂದು ಹಾಲನ್ನು ಅವಸರದಿಂದಲೇ ಕುಡಿದು ಹೊರಟುನಿಂತರು. ಆ ವೇಳೆಗಾಗಲೇ ಸಿದ್ಧಳಾಗಿಯೇ ಇದ್ದ ದಾಮಿನಿಗೆ ತಂದೆಯಾಡಿದ್ದು ಕೇಳಿಸಿ ಹೊರಗೆ ಬಂದಳು. ಕಾಲಿಗೆ ಚಪ್ಪಲಿ ಮೆಟ್ಟಿ, ಮೌನವಾಗಿ ತಂದೆಯನ್ನು ಹಿಂಬಾಲಿಸಿದಳು.

ಶಾಸ್ತ್ರಾಚಾರಗಳಿಗೆ ಕಿಂಚಿತ್ತೂ ಲೋಪವಾಗದಂತೆ ನಡೆದುಕೊಂಡು ಬಂದಿದ್ದ ಕಟ್ಟುನಿಟ್ಟಿನ ಬದುಕು ರಾಮಾಚಾರ್ಯರದು. ಚಳಿ ಇರಲಿ, ಮಳೆ ಬರಲಿ, ಬಾವಿ ಕಟ್ಟೆಯಲ್ಲಿ ದಬದಬನೆ ನಾಲ್ಕು ಕೊಡ ನೀರು ಸೇದಿ ಸುರಿದುಕೊಂಡೇ ಅವರ ಮಡಿ ಸ್ನಾನವಾಗಬೇಕು. ಸಾಂಗವಾಗಿ ಪೂಜೆ, ನೈವೇದ್ಯ, ವೈಶ್ವದೇವಾದಿಗಳನ್ನು ಮುಗಿಸಿದ ನಂತರವೇ ಮುಂದಿನ ಕೆಲಸ. ತಾವಾಯಿತು, ತಮ್ಮ ಪಾಡಾಯಿತು ಎಂಬಂತೆ ಸಾಗಿಸಿಕೊಂಡು ಬಂದಿದ್ದ ಅವರ ಸಾತ್ವಿಕ ದಿನಚರಿಯಲ್ಲಿ ಕುಂದಿರಲಿಲ್ಲ. ಧರ್ಮಸೂಕ್ಷ್ಮಗಳಲ್ಲಿ ಏನಾದರೂ ಸಂಶಯ ಉಂಟಾದರೆ ರಾಮಾಚಾರ್ಯರ ಮಾತೇ ಅಂತಿಮ ಪ್ರಮಾಣ. ಬಹಳ ಕಷ್ಟದಿಂದ ಬಾಲ್ಯವನ್ನು ಕಳೆದಿದ್ದ ಆಚಾರ್ಯರು ಸ್ವಪ್ರಯತ್ನದಿಂದ ಮೇಲೆ ಬಂದು ಸಮಾಜದಲ್ಲಿ ಗೌರವಯುತ ಸ್ಥಾನವನ್ನು ಸಂಪಾದಿಸಿದ್ದರು. ಪತ್ನಿ ಸುಧಾಬಾಯಿಯೂ ಆಚಾರ್ಯರ ಅನುಷ್ಠಾನಗಳಿಗೆ ಅನುಕೂಲವಾದ ಸತಿಯಾಗಿದ್ದರು.

ಆಚಾರ್ಯರ ಸುಖಸಂಸಾರದಲ್ಲಿ ಬಿರುಗಾಳಿಯೆದ್ದಿದ್ದು ಅವರ ಕಣ್ಮಣಿಯೇ ಆಗಿದ್ದ ಮಗಳು ದಾಮಿನಿಯಿಂದ. ಇಬ್ಬರು ಗಂಡುಮಕ್ಕಳ ನಂತರ ಹುಟ್ಟಿದ ಮಗಳು ದಾಮಿನಿಯನ್ನು ತಮ್ಮೆಲ್ಲ ಅಕ್ಕರೆ ಧಾರೆಯೆರೆದು ಬೆಳೆಸಿದ್ದರು. ಬುದ್ಧಿವಂತೆ, ರೂಪವಂತೆಯಾದ ಮಗಳೆಂದರೆ ಆಚಾರ್ಯರಿಗೆ ಇನ್ನಿಲ್ಲದ ಹೆಮ್ಮೆ. ಗಂಡುಮಕ್ಕಳಾದ ಗೋವಿಂದ, ಮುಕುಂದರೂ ದಡ್ಡರಲ್ಲವಾದರೂ ದಾಮಿನಿಯ ಪ್ರಖರ ಬುದ್ಧಿಮತ್ತೆಯ ಮುಂದೆ ಅವರು ಸಪ್ಪೆಯೇ. ತಮ್ಮ ಮಗಳು ತಮ್ಮಂತೆಯೇ ಜಾಣೆಯೆಂದು ಆಚಾರ್ಯರು ಹೆಮ್ಮೆಪಡುತ್ತಿದ್ದರು. ಒಮ್ಮೊಮ್ಮೆ ಸುಧಾಬಾಯಿಗೂ ಗಂಡನದು ಅತಿ ಅನ್ನಿಸುತ್ತಿತ್ತು. ಸಂಪ್ರದಾಯಸ್ಥ ವಾತಾವರಣದಲ್ಲಿ ಬೆಳೆದುಬಂದಿದ್ದ ಅವರಿಗೆ ಹೆಣ್ಣು ಹುಡುಗಿಯನ್ನು ಹೀಗೆ ತಲೆಯ ಮೇಲೆ ಹೊತ್ತು ಕುಣಿಸಿದರೆ ಮುಂದೆ ಕೊಟ್ಟ ಮನೆಯಲ್ಲಿ ಹೇಗೋ ಎಂಬ ಆತಂಕ. ಆದರೆ ಅವರ ಅಂಜಿಕೆಯನ್ನು ಆಚಾರ್ಯರು "ದಾಮಿನಿ ನಾನು ಬೆಳೆಸಿದ ಹುಡುಗಿ. ಅವಳೆಂದೂ ನಮ್ಮ ಗೌರವವನ್ನು ಎತ್ತಿಹಿಡಿಯುವವಳೇ ಹೊರತು ನಮ್ಮ ಘನತೆಗೆ ಮಸಿ ಬಳಿಯುವವಳಲ್ಲ, ಆ ನಂಬಿಕೆ ನನಗಿದೆ. ನೀನೂ ಅವಳ ವಿಷಯದಲ್ಲಿ ಯಾವ ಆತಂಕವನ್ನೂ ಇಟ್ಟುಕೊಳ್ಳಬೇಕಾಗಿಲ್ಲ" ಎಂದು ದೃಢವಾಗಿ ಹೇಳಿ ಅವರ ಬಾಯಿಯನ್ನು ಮುಚ್ಚಿಸಿಬಿಡುತ್ತಿದ್ದರು.

ದಾಮಿನಿಯೂ ಒಳ್ಳೆಯ ಹುಡುಗಿಯೇ. ಆದರೆ ಅವಳ ಕನಸುಗಳು ಬೇರೆಯೇ ಇದ್ದವು. ತನ್ನ ಮನೆಯ ಅತಿ ಸಂಪ್ರದಾಯದ ವಾತಾವರಣ ಅವಳಿಗೆ ಉಸಿರು ಕಟ್ಟಿಸುತ್ತಿತ್ತು. ಓದಿನಲ್ಲಿ ಮುಂದಿದ್ದ ಅವಳಿಗೆ ತನ್ನ ವಿದ್ಯಾಭ್ಯಾಸದ ಅಂತಿಮ ಗಮ್ಯವೇನೆಂಬುದರ ಬಗ್ಗೆ ಸ್ಪಷ್ಟತೆಯಿತ್ತು. ಅವಳ ಕನಸುಗಳಿಗೆ ವಿನೋದನ ಒತ್ತಾಸೆಯೂ ಇತ್ತು.

ವಿನೋದ್ ದಾಮಿನಿಯ ಪ್ರಿಯತಮ. ಅವನು ದಾಮಿನಿ ಓದುತ್ತಿದ್ದ ಕಾಲೇಜಿನಲ್ಲೇ ಅವಳಿಗೆ ಪರಿಚಯವಾಗಿದ್ದು. ವಿನೋದ್ ಅವಳ ಸೀನಿಯರ್ ಆಗಿದ್ದವನು. ಈಗ ಓದು ಮುಗಿಸಿ ಸಾಫ್ಟ್‌ವೇರ್ ಕಂಪೆನಿಯೊಂದರಲ್ಲಿ ಉದ್ಯೋಗಿಯಾಗಿ ಕೈತುಂಬಾ ಸಂಪಾದಿಸುತ್ತಿದ್ದ. ಅವನ ಕೆಲಸ ಬೆಂಗಳೂರಿನಲ್ಲಿದ್ದರೂ, ಆಗಾಗ ಅಮೆರಿಕದಲ್ಲಿರುವ ಮುಖ್ಯ ಶಾಖೆಗೆ ಹೋಗಿಬರಬೇಕಿತ್ತು. ಅವನು ಇಚ್ಛಿಸಿದರೆ ಅಲ್ಲೇ ಇದ್ದು ಕೆಲಸ ನಿರ್ವಹಿಸುವ ಅವಕಾಶವಿತ್ತು. ವಿನೋದನಿಗೂ ಅಮೆರಿಕದಲ್ಲಿಯೇ ನೆಲೆಸುವ ಇಷ್ಟವಿತ್ತು. ದಾಮಿನಿಯೊಂದಿಗೆ ವಿವಾಹವಾದೊಡನೆ, ಅವಳೊಟ್ಟಿಗೆ ಅಮೆರಿಕಕ್ಕೆ ಹಾರುವ ಬಯಕೆ ಅವನದು. ತನ್ನ ಆಸೆ ಕೈಗೂಡುವ ದಿನಕ್ಕಾಗಿ ಕಾಯುತ್ತಿದ್ದ. ವಾರಾಂತ್ಯಗಳಲ್ಲಿ ಹೋಟೆಲ್, ಸಿನಿಮಾ, ಮಾಲ್ ಓಡಾಟಗಳಲ್ಲಿ ತನ್ನ ಯೋಜನೆಗಳನ್ನು ದಾಮಿನಿಯೊಂದಿಗೆ ಹಂಚಿಕೊಳ್ಳುತ್ತಿದ್ದ. ದಾಮಿನಿಗೂ ಅವನೊಂದಿಗೆ ಸುತ್ತುವುದು, ಚಿತ್ರಮಂದಿರದ ಕತ್ತಲೆಯಲ್ಲಿ ಅವನ ಭುಜಕ್ಕೊರಗಿ ಭವಿಷ್ಯದ ಕನಸು ಕಾಣುವುದು ಪ್ರಿಯವೇ ಆಗಿತ್ತು. ಈ ಸವಿಗನಸುಗಳ ನಡುವೆ ತನ್ನ ತಂದೆಯ ಸಂಪ್ರದಾಯಸ್ಥ ಮುಖ ಕಣ್ಣೆದುರು ತೇಲಿಬಂದಾಗ ಬೆಚ್ಚಿಬೀಳುತ್ತಿದ್ದಳು.

ತನ್ನ ನಿರ್ಧಾರ ಸಂಪ್ರದಾಯನಿಷ್ಠರಾದ ಹೆತ್ತವರಿಗೆ ಬಲು ದೊಡ್ಡ ಆಘಾತ ನೀಡಲಿದೆ ಎಂದು ಗೊತ್ತಿದ್ದೇ ಅವಳು ವಿನೋದನನ್ನು ಪ್ರೇಮಿಸಿಬಿಟ್ಟಿದ್ದಳು. ವಿನೋದ ತನ್ನ ಜಾತಿಯವನಲ್ಲವೆಂದು ಗೊತ್ತಿದ್ದರೂ, ಪ್ರೇಮಕ್ಕೆ ಜಾತಿಯೊಂದು ಅಡ್ಡಿಯೆಂದು ಅವಳಿಗೆ ಅನ್ನಿಸಿರಲಿಲ್ಲ. ಕಟ್ಟಾ ವೈದಿಕರಾಗಿದ್ದ ಅಪ್ಪ ಈ ವಿವಾಹಕ್ಕೆ ಕನಸಿನಲ್ಲಿಯೂ ಸಮ್ಮತಿಸುವವರಲ್ಲವೆಂದು ಅವಳಿಗೆ ಅರಿವಿತ್ತು. ತಮ್ಮ ಪ್ರೀತಿ ಈ ಎಲ್ಲಾ ಅಡಚಣೆಗಳನ್ನು ನಿವಾರಿಸಿಕೊಂಡು ಯಶಸ್ವಿಯಾಗುವ ಭರವಸೆಯಿತ್ತಾದರೂ, ಎದೆಯಲ್ಲಿ ಆಗೀಗ ಸಣ್ಣಗೆ ಅಳುಕು ಕಾಣಿಸಿಕೊಳ್ಳುತ್ತಿತ್ತು. ತನ್ನ ಓದೊಂದು ಮುಗಿಯಲಿ, ನಂತರ ಮನೆಯಲ್ಲಿ ತಿಳಿಸಿದರಾಯಿತೆಂದು ಕಾಯುತ್ತಿದ್ದಳು.

ವಿನೋದ ಬುದ್ಧಿವಂತ, ರೂಪವಂತ, ಆಗರ್ಭ ಶ್ರೀಮಂತನೂ ಹೌದು. ಅವನಿಗೆ ಎಲ್ಲೋ ಹೋಗಿ ಉದ್ಯೋಗ ಮಾಡುವ ಅಗತ್ಯವೇ ಇರಲಿಲ್ಲ. ಅವನ ತಂದೆ ರೂಢಿಸಿಕೊಂಡು ಬಂದಿದ್ದ ಮನೆತನದ ವ್ಯವಹಾರದಲ್ಲಿ ಕಿಂಚಿತ್ತೂ ಆಸಕ್ತಿ ಇಲ್ಲದ ವಿನೋದ, ಓದಿ, ಇಂಜಿನಿಯರಾಗಿದ್ದ. ವಿನೋದನ ಪ್ರತಿಭೆ, ಸ್ವಾಭಿಮಾನಗಳಿಂದ ದಾಮಿನಿ ಅವನತ್ತ ಆಕರ್ಷಿತಳಾಗಿದ್ದಳು. ಬಯಸಿದ್ದೆಲ್ಲಾ ಬಳಿಯಿದ್ದರೂ ವಿನೋದನಿಗೆ ಅಮೆರಿಕದ ಹಂಬಲ. 'ಇರುವುದೆಲ್ಲವ ಬಿಟ್ಟು ಇರದುದರೆಡೆಗೆ ತುಡಿವುದೇ ಜೀವನ' ಎನ್ನುವ ಕವಿವಾಣಿಯಂತೆ, ಅಮೆರಿಕದ ಮೋಹನ ಮುರಳಿ ಅವನನ್ನು ಹಗಲಿರುಳು ಕರೆಯುತ್ತಿತ್ತು. ದಾಮಿನಿಯೊಂದಿಗೆ

ವಿವಾಹ, ನಂತರ ಮೆಚ್ಚಿದ ಮಡದಿಯೊಂದಿಗೆ ವಿದೇಶಯಾನದ ದಿನವನ್ನು ಅವನು ಎದುರುನೋಡುತ್ತಿದ್ದ.

* * *

ದಾಮಿನಿಯ ಪರಿಸ್ಥಿತಿ ಭಿನ್ನವಿತ್ತು. ಪರೀಕ್ಷೆ ಮುಗಿದ ನಂತರ ತಾನಂತೂ ಕೆಲಸಕ್ಕೆ ಪ್ರಯತ್ನಿಸುವುದು; ಸಿಕ್ಕೊಡನೆ ಮನೆಯಲ್ಲಿ ಈ ವಿಷಯ ತಿಳಿಸುವುದು ಎಂದುಕೊಂಡಿದ್ದಳು ದಾಮಿನಿ. ವಿನೋದನೊಂದಿಗೆ ಅಮೆರಿಕಕ್ಕೆ ಹೋಗುವುದಾದರೆ, ಇಲ್ಲಿರುವ ಸಂಸ್ಥೆಯ ಮೂಲಕವೇ ಹೋಗುವುದೆಂದು ನಿರ್ಧರಿಸಿದ್ದಳು. ವಿನೋದ ತನಗಿರುವ ಅಪಾರ ಸಂಪರ್ಕಗಳ ಮೂಲಕ ಅವಳಿಗೆ ಉದ್ಯೋಗ ದೊರಕಿಸಿಕೊಡುವ ಭರವಸೆ ನೀಡಿದ್ದ. ಒಂದು ವೇಳೆ, ಬೆಂಗಳೂರಿನಲ್ಲಿ ತನಗೊಪ್ಪಿಗೆಯಾಗುವ ಉದ್ಯೋಗ ದೊರಕದೆ ಹೋದರೆ, ವಿನೋದನೊಟ್ಟಿಗೆ ಅಮೆರಿಕಕ್ಕೆ ಪ್ರಯಾಣ ಬೆಳೆಸಿ, ಅಲ್ಲಿಯೇ ಉದ್ಯೋಗ ಅರಸುವುದು ಎಂಬುದು ಸದ್ಯದ ಯೋಚನೆಯಾಗಿತ್ತು. ಅತ್ಯಂತ ಹೆಚ್ಚಿನ ಅಂಕದೊಂದಿಗೆ ತಾನು ಪಡೆಯಲಿರುವ ಇಂಜಿನಿಯರ್ ಪದವಿಯಿಂದ ಕೆಲಸವೊಂದನ್ನು ಪಡೆಯುವುದು ಸಮಸ್ಯೆಯೆಂದು ಅವಳಿಗನ್ನಿಸಿರಲಿಲ್ಲ.

ತಂದೆ, ತಾಯಿ ತಮ್ಮ ಪ್ರೇಮವನ್ನು ಒಪ್ಪಿ, ಪುರಸ್ಕರಿಸುವ ನಿರೀಕ್ಷೆ ಅವಳಿಗೆ ಇರಲಿಲ್ಲ. ಅಂತಹ ಉದಾತ್ತ ಮನೋಭಾವವಿರದ ಸಂಕುಚಿತ ವಾತಾವರಣದಲ್ಲಿಯೇ ಅವಳು ಬೆಳೆದಿದ್ದಳು. ಬೆಳೆದಂತೆಲ್ಲ, ಹೊರಗಿನ ಪರಿಸರ, ವಿಸ್ತಾರವಾದ ಓದು ಅವಳನ್ನು ಚಿಂತನೆಗೆ ಹಚ್ಚಿತ್ತು. ಸರಿ–ತಪ್ಪುಗಳನ್ನು ವಿಮರ್ಶಿಸುವ ವೈಚಾರಿಕ ವ್ಯಕ್ತಿತ್ವ ಅವಳದಾಯಿತು. ಕಂದಾಚಾರದ ಕೋಟೆಯಂತಹ ತನ್ನ ಮನೆ ಅವಳಿಗೆ ಬಂಧನವೆನ್ನಿಸುತ್ತಿತ್ತು. ಹೆತ್ತವರ ಬಗ್ಗೆ ಪ್ರೇಮಾದರಗಳಿದ್ದರೂ ಹೊಸತನಕ್ಕೆ ತೆರೆದುಕೊಳ್ಳಲಾರದ ಅವರ ವರ್ತನೆ, ಮಾತುಕತೆ ಅವಳಲ್ಲಿ ಇನ್ನಿಲ್ಲದ ಬೇಸರ ಮೂಡಿಸುತ್ತಿತ್ತು. ಮನೆಯಲ್ಲಿ ತಂದೆಗೂ ಮಗಳಿಗೂ ವಾಗ್ವಾದ ತಪ್ಪುತ್ತಿರಲಿಲ್ಲ.

ತನ್ನ ಮತ್ತು ವಿನೋದನ ಪ್ರೇಮವನ್ನು ಮುಚ್ಚಿಟ್ಟು, ಕದ್ದು ಮದುವೆಯಾಗುವುದೂ ಅವಳಿಗೆ ಬೇಕಿರಲಿಲ್ಲ. ಒಟ್ಟಿನಲ್ಲಿ ತನ್ನೆಲ್ಲಾ ಸಮಸ್ಯೆಗಳಿಗೂ ಸಮೀಪವಾಗುತ್ತಿರುವ ಪರೀಕ್ಷೆಗಳು ಮಾತ್ರ ಪರಿಹಾರ ಒದಗಿಸಬಲ್ಲವೆಂದು ತಿಳಿದು ಓದಿನತ್ತ ಗಮನ ಹರಿಸಿದ್ದಳು. ತನ್ನ ವಿದ್ಯೆ, ಅದರ ಮೂಲಕ ದೊರಕುವ ಉದ್ಯೋಗ; ಅವಳನ್ನು ಈ ಬಂಧನದಿಂದ ಬಿಡುಗಡೆಗೊಳಿಸುವ ಏಕೈಕ ಸಾಧನವಾಗಿತ್ತು.

* * *

ಆದರೆ, ಅವಳಂದುಕೊಂಡಿದ್ದೇ ಒಂದು, ಆಗಿದ್ದೇ ಇನ್ನೊಂದು. ವಿನೋದ–ದಾಮಿನಿಯರ ಪ್ರೇಮ ಪ್ರಕರಣ ಅವಳಾಗಿ ಹೇಳುವ ಮೊದಲೇ, ಅದು ಹೇಗೊ ಆಚಾರ್ಯರ ಮನೆಯಂಗಳ ತಲುಪಿದ್ದಾಗಿತ್ತು. ಸುಧಾಬಾಯಿ ಕುಸಿದುಹೋಗಿದ್ದರು. ಆಚಾರ್ಯರಿಗೂ

ಭರಿಸಲಾರದ ಆಘಾತ. ತಾವಿನ್ನೂ ಪುಟ್ಟವಳೆಂದು ಭಾವಿಸಿದ್ದ ಮಗಳು ಇಂತಹದೊಂದು ಪರಿಸ್ಥಿತಿ ತಂದಿಟ್ಟಿರುವುದನ್ನು ನಂಬಲೂ ಆಗದಂತಹ ಸ್ಥಿತಿ ಅವರದಾಗಿತ್ತು. ಎರಡು ದಿನ ಗಂಡ ಹೆಂಡತಿ ಮೌನದಲ್ಲಿಯೇ ಕಳೆದಿದ್ದರು. ಕೊನೆಗೆ ಎದೆ ಗಟ್ಟಿ ಮಾಡಿಕೊಂಡು ಮಗಳನ್ನೇ ಕೇಳಿಬಿಡುವುದು. ಅವಳು ಇಲ್ಲವೆಂದು ವಾದಿಸಿದರೆ, ಹೆಚ್ಚು ತನಿಖೆ ಮಾಡದೆ ಸುಮ್ಮನಿದ್ದುಬಿಡುವುದು ಎಂದು ನಿರ್ಧರಿಸಿದರು. ಒಂದು ವೇಳೆ, ಅವಳು ಹೌದೆಂದು ಒಪ್ಪಿಕೊಂಡಲ್ಲಿ, ತಾವೇನು ಮಾಡಬೇಕೆಂದು ಇಬ್ಬರಿಗೂ ಹೊಳೆಯಲಿಲ್ಲ. ಏನೇ ಇರಲಿ, ವಿಷಯ ಕಗ್ಗಂಟಾಗುವ ಮುನ್ನ ಆದಷ್ಟು ಬೇಗ ಗಂಡು ಹುಡುಕಿ ಅವಳಿಗೆ ಮದುವೆ ಮಾಡುವುದೊಂದೇ ದಾರಿ ಎಂದು ತೋಚಿತು ಇಬ್ಬರಿಗೂ. ದಾಮಿನಿಯನ್ನು ಕರೆದು, ಉಪಾಯದಿಂದ ವಿನೋದನ ಬಗ್ಗೆ ವಿಚಾರಿಸಿದ್ದರು. ದಾಮಿನಿ ಮೊದಲು ಬಾಯಿ ಬಿಡದಿದ್ದರೂ, ಕೊನೆಗೆ ಅವರಿಗೆ ಎಲ್ಲಾ ಗೊತ್ತಿದೆ ಎಂದು ಖಚಿತವಾದ ಮೇಲೆ ತನ್ನ ಮತ್ತು ವಿನೋದನ ಪ್ರೀತಿಯನ್ನು ಒಪ್ಪಿಕೊಂಡುಬಿಟ್ಟಳು. ತಾವಿಬ್ಬರೂ ಮದುವೆಯಾಗಿ, ಕೆಲಕಾಲದ ನಂತರ ಅಮೆರಿಕದಲ್ಲಿ ಉದ್ಯೋಗ ಕೈಗೊಳ್ಳುವ ತಮ್ಮ ಯೋಜನೆಯನ್ನೂ ತಿಳಿಸಿದಳು.

ಮಗಳು, 'ಇಲ್ಲ, ನೀವು ಕೇಳಿರುವ ವಿಷಯ ನಿಜವಲ್ಲ. ಯಾರೋ ಹರಡಿರುವ ಈ ಸುದ್ದಿಯನ್ನು ನಂಬದಿರಿ' ಎಂದು ಸುಳ್ಳಾದರೂ ಹೇಳಿರಬಾರದಿತ್ತೇ ಅನ್ನಿಸಿತ್ತು ಆಚಾರ್ಯರಿಗೆ ಆ ಘಳಿಗೆಯಲ್ಲಿ. ಮಗಳ ಮುಖದ ಮೇಲಿದ್ದ ದಿಟ್ಟತನ ಅವರನ್ನು ಅಂಜಿಸಿತ್ತು. ಅವಳ ಮೇಲೆ ಸಿಟ್ಟೂ ಬರಲಿಲ್ಲ. ಅವಳನ್ನು ಬೈದು ಹೊಡೆದು ಮಾಡುವುದರಿಂದಲೂ ಪ್ರಯೋಜನವಿಲ್ಲವೆಂದು ಅರಿವಾಗಿತ್ತು. ಮಗಳನ್ನು ಹೊರಗೆಲ್ಲೂ ಕಳಿಸದೆ ಮನೆಯಲ್ಲಿಟ್ಟುಕೊಂಡು ಗಂಡು ಹುಡುಕುವುದು ಕೂಡ ಅಷ್ಟು ಸುಲಭವಿರಲಿಲ್ಲ. ಪರೀಕ್ಷೆ ಪ್ರಾರಂಭವಾಗುವುದರಲ್ಲಿತ್ತು. ತನ್ನ ಕೊನೆಯ ವರ್ಷದ ಓದನ್ನು ವ್ಯರ್ಥಗೊಳಿಸಿದರೆ ಪ್ರಾಣ ಕಳೆದುಕೊಳ್ಳುವುದಾಗಿ ಹೆದರಿಸಿದಳು ದಾಮಿನಿ. ಪರೀಕ್ಷೆಗಳು ಮುಗಿವವರೆಗೂ ತಾವೇ ಅವಳನ್ನು ಕಾಲೇಜಿಗೆ ಕರೆದೊಯ್ದು, ಮರಳಿ ಮನೆಗೆ ಕರೆತರುವ ಒಪ್ಪಂದದ ಮೇರೆಗೆ ಅವಳು ಪರೀಕ್ಷೆಗೆ ಹಾಜರಾಗಲು ಒಪ್ಪಿಗೆ ಸೂಚಿಸಿದರು. ಮಗಳು ತಮ್ಮ ಕರಾರಿಗೊಪ್ಪಿದ್ದು ಆಚಾರ್ಯರಿಗೆ ಇದ್ದುದರಲ್ಲಿ ಸಮಾಧಾನ ನೀಡಿತ್ತು.

ದಾಮಿನಿಗೆ ತನ್ನ ನಿರ್ಧಾರದಿಂದ ಹೆತ್ತವರಿಗಾಗಿರುವ ಆಘಾತ ಎಂಥದ್ದೆನ್ನುವ ಅರಿವಿತ್ತು. ಒಂದೆಡೆ ಹೆತ್ತವರ ಮೇಲಿನ ಪ್ರೀತಿಯಾದರೆ ಮತ್ತೊಂದೆಡೆ ವಿನೋದನ ಅನುರಾಗ. ಒಂದನ್ನು ಕಳೆದುಕೊಳ್ಳದೆ ಇನ್ನೊಂದು ಸಿಗಲಾರದೆಂದು ಅವಳಿಗೆ ಖಾತರಿಯಾಗಿತ್ತು. ತಾಯಿಯನ್ನಾದರೂ ಹೇಗಾದರೂ ಒಪ್ಪಿಸಬಹುದು, ತಂದೆಯಲ್ಲಿ ಪರಿವರ್ತನೆ ಎಂಬುದು ಎಂದಿಗೂ ಸಾಧ್ಯವಿಲ್ಲವೆಂಬುದು ಅವಳ ಅನುಭವದಿಂದ ತಿಳಿದಿತ್ತು. ಇನ್ನು ಅಣ್ಣಂದಿರೊ ತಂದೆಯ ಪ್ರಭಾವವಲಯದಲ್ಲಿಯೇ ಬೆಳೆದು ಸ್ವಂತಿಕೆಯನ್ನೇ ಕಳೆದುಕೊಂಡಿದ್ದರು. ಅವರಿಂದ ಬೆಂಬಲವನ್ನು ಅಪೇಕ್ಷಿಸುವಂತಿರಲಿಲ್ಲ.

* * *

ಕಚ್ಚೆಪಂಚೆ, ಹಣೆಯ ಮೇಲೆ ದಪ್ಪನೆಯ ಅಂಗಾರ-ಅಕ್ಷತೆ, ಹಿಡಿ ಗಾತ್ರದ ಜುಟ್ಟಿದ್ದ ತಲೆಯನ್ನು ತಪ್ಪದೆ ಅಲಂಕರಿಸುವ ಕರಿಯ ಟೋಪಿ. ಇದು ಆಚಾರ್ಯರ ಖಾಯಂ ದಿರಿಸು. ಪದವಿಪೂರ್ವ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದ ಆಚಾರ್ಯರಿಗೆ ಅಲ್ಲಿಯೂ ವೇಷಭೂಷಣ ಬದಲಿಸುವ ಜರೂರತ್ತು ಒದಗಿರಲಿಲ್ಲ. ಈಗಂತೂ ನಿವೃತ್ತರಾಗಿರುವ ಅವರು ಲೌಕಿಕದ ಹಂಗುಗಳನ್ನೆಲ್ಲ ತೊರೆದಿದ್ದರು. ವಯಸ್ಸಾದ ತಂದೆ ಬಿರುಬಿಸಿಲಿನಲ್ಲಿ ನಡೆದುಕೊಂಡು, ತನ್ನೊಂದಿಗೆ ಕಾವಲಿಗೆಂದು ಬರುವುದು ದಾಮಿನಿಗೆ ಮುಜುಗರವೆನ್ನಿಸುತ್ತಿತ್ತು. ಮಗಳ ಬೇಡಿಕೆಗಳಿಗೆ ಇಲ್ಲವೆಂದೇ ಗೊತ್ತಿರದ ಆಚಾರ್ಯರು ಈಗ ಮಾತ್ರ ಅವಳ ಮಾತನ್ನು ಕೇಳಿಸಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಇನ್ನು ಪರೀಕ್ಷೆಗೆ ಹೋಗಬೇಡವೆಂದು ಹಟ ಹಿಡಿಯದಿದ್ದರೆ ಸರಿ ಎಂದು ದಾಮಿನಿ ಈ ವ್ಯವಸ್ಥೆಗೆ ಒಪ್ಪಿದ್ದಳು.

ಯಾವ ತೊಂದರೆಗಳಿಲ್ಲದೆ ಪರೀಕ್ಷೆಗಳು ಒಂದಾದ ಮೇಲೊಂದರಂತೆ ಮುಗಿದಿದ್ದವು. ಕೊನೆಯ ದಿನದ್ದು ಮಾತ್ರ ಬಾಕಿ ಇತ್ತು. ಮಗಳನ್ನು ಎಂದಿನಂತೆ ಪರೀಕ್ಷೆ ಬರೆಯಲು ಒಳಗೆ ಕಳಿಸಿ, ತಾವು ಗೇಟಿನ ಎದುರಿದ್ದ ಮರದ ನೆರಳಲ್ಲಿ ಕುಳಿತುಕೊಂಡರು. ಇದೊಂದು ದಿನ ಕಳೆದರೆ ಕಾಲೇಜಿಗೆ ರಜೆ ಬರುತ್ತದೆ. ಮಗಳು ಆಗ ವಿನೋದನಿಂದ ದೂರವಿರುವುದರಿಂದ ಅವಳ ಮನಸ್ಸು ಬದಲಾದರೂ ಆಗಬಹುದು ಎಂಬ ದೂರದ ಆಸೆ. ಇವರ ಬಯಕೆಗೆ ಸುಧಾಬಾಯಿಯವರ ಅತ್ತಿಗೆ ತುಂಗಕ್ಕ ನೀರೆರೆದಿದ್ದರು. ತಮ್ಮ ಅಣ್ಣನ ಮಗ ವಿಜಯೇಂದ್ರನಿಗಾಗಿ ಕನ್ಯಾಶೋಧ ನಡೆಯುತ್ತಿದ್ದು, ದಾಮಿನಿಯನ್ನೇ ತಂದುಕೊಳ್ಳಲು ಅಣ್ಣನನ್ನು ಒಪ್ಪಿಸುವುದಾಗಿ ಭರವಸೆ ನೀಡಿದ್ದರು. ವಿಜಯೇಂದ್ರ ಆಚಾರ್ಯರ ಕಣ್ಣೆದುರಿನಲ್ಲಿಯೇ ಬೆಳೆದಿದ್ದ ಹುಡುಗ. ಓದಿ, ಒಳ್ಳೆಯ ಉದ್ಯೋಗದಲ್ಲಿಯೂ ಇರುವಾತ. ಅವನು ತಮ್ಮ ಮಗಳಿಗೆ ಯೋಗ್ಯ ವರನೆನ್ನುವುದರಲ್ಲಿ ಆಚಾರ್ಯರಿಗೆ ಸಂಶಯವಿರಲಿಲ್ಲ. ಆದರೆ ದಾಮಿನಿ ಒಪ್ಪುವಳೋ ಇಲ್ಲವೋ ಎಂಬುದೊಂದೇ ಚಿಂತೆ. ಎಲ್ಲವೂ ಅನುಕೂಲವಾದರೆ ಮದುವೆ ಮಾಡಿ ಮುಗಿಸುವುದೆಂಬ ಹವಣಿಕೆ ಅವರದು. ದಾಮಿನಿ ಒಪ್ಪದಿದ್ದರೆ ಹೈದರಾಬಾದಿನಲ್ಲಿರುವ ತಂಗಿಯ ಮನೆಯಲ್ಲಿ ಅವಳನ್ನು ಸ್ವಲ್ಪ ದಿನ ಬಿಟ್ಟಿರುವುದು. ಹೇಗೋ ಬೀಸುವ ದೊಣ್ಣೆ ಒಮ್ಮೆ ತಪ್ಪಿದರೆ ಸಾಕು, ಮುಂದೆ ನೋಡಿಕೊಳ್ಳೋಣ ಎಂದೆಲ್ಲಾ ಯೋಚನೆಯಲ್ಲಿ ಹೊತ್ತು ಕಳೆಯತೊಡಗಿದರು. ಬಿಸಿಲು ಅವರು ಕೂತಿದ್ದ ಕಡೆಯೇ ಬಂದಿದ್ದರಿಂದ, ಹೊದ್ದಿದ್ದ ಶಲ್ಯದ ಅಂಚಿನಿಂದ ಹಣೆಯ ಮೇಲಿದ್ದ ಬೆವರನ್ನು ಒರೆಸುತ್ತಾ ಎದ್ದು ನೆರಳಿನತ್ತ ನಡೆದರು.

ತಂದೆಯ ಪ್ರೀತಿಯಲ್ಲಿ ಅಣ್ಣಂದಿರಿಗಿಂತ ಸಿಂಹಪಾಲು ಪಡೆದಿದ್ದಳು ದಾಮಿನಿ. ಪುಟ್ಟವಳಾಗಿದ್ದಾಗಿನಿಂದ ಅವಳಿಗೆ ತಾಯಿಗಿಂತಲೂ ತಂದೆಯದೇ ಹಂಬಲ ಹೆಚ್ಚು. ಬೆಳಗಿನ ಚಳಿಯಲ್ಲಿ ಇನ್ನೂ ಮಲಗೆಂದರೂ ಕೇಳದೆ ತಮ್ಮೊಂದಿಗೆ ಎದ್ದುಬಿಡುತ್ತಿದ್ದ ಪುಟ್ಟ ಪೋರಿಗೆ ತಮ್ಮದೇ ಶಾಲು ಹೊದ್ದಿಸಿ ತುಳಸಿ ಬಿಡಿಸಲು ಜೊತೆಗೆ ಕರೆದೊಯ್ಯುತ್ತಿದ್ದರು.

ಪುಟ್ಟಪುಟ್ಟ ಶ್ಲೋಕಗಳನ್ನು ಅರ್ಥಸಹಿತ ಹೇಳಿಕೊಟ್ಟಿದ್ದರು. ದೊಡ್ಡವಳಾದ ಮೇಲೂ ಆಚಾರ್ಯರ ಪ್ರವಚನಗಳಿಗೆ ದಾಮಿನಿ ಮೊದಲ ಸಾಲಿನಲ್ಲಿ ಬಂದು ಕೂಡುತ್ತಿದ್ದಳು. ತಂದೆ ಹೇಳಿದ್ದರಲ್ಲಿ ಏನೇ ಅನುಮಾನ ಬಂದರೂ ಪ್ರಶ್ನಿಸಿ ಪರಿಹಾರ ಕಂಡುಕೊಳ್ಳುತ್ತಿದ್ದಳು. ಮನಸ್ಸಿಗೆ ಒಪ್ಪದ್ದನ್ನು ನಿಷ್ಠುರವಾಗಿ ತಂದೆಯೆದುರು ನುಡಿದು ಹಗುರಾಗುತ್ತಿದ್ದಳು. ಶಾಲೆಯ ಓದಿನ ಜೊತೆಗೆ ಅಧ್ಯಾತ್ಮದ ರುಚಿಯನ್ನೂ ಅವಳ ಮೆದುಳಿಗೆ ಹತ್ತಿಸಿದ್ದ ಆಚಾರ್ಯರಿಗೆ ಅದೇನೋ ಸಾರ್ಥಕಭಾವ.

ತಂದೆಯ ಶ್ರದ್ಧೆಯನ್ನು ಗೌರವಿಸಿ, ತಾನೂ ಅದರಂತೆ ನಡೆಯುತ್ತಿದ್ದ ದಾಮಿನಿಯ ನಂಬುಗೆಯ ಕೋಟೆಯಲ್ಲಿ ಬಿರುಕುಂಟಾಗಿದ್ದೆಲ್ಲಿಂದ ಎಂಬುದು ಮಾತ್ರ ಆಚಾರ್ಯರ ತರ್ಕಕ್ಕೆ ನಿಲುಕಲಿಲ್ಲ. ವಿನೋದ ತನ್ನ ಯಾವ ಗುಣದಿಂದ ದಾಮಿನಿಯನ್ನು ಆಕರ್ಷಿಸಿದ ಎಂಬುದು ಆಚಾರ್ಯರಿಗೆ ಇವತ್ತಿಗೂ ಬಗೆಹರಿಯದ ಒಗಟು. ವಿದ್ಯೆ, ರೂಪದಲ್ಲಿ ಅವನು ದಾಮಿನಿಗೆ ಸಮನಲ್ಲವೆಂದು ಹೆತ್ತವರ ಹೆಮ್ಮೆಗನ್ನಿಸಿದರೂ, ಅದೇನು ನಿಜವಲ್ಲ. ವಿನೋದನ ಶ್ರೀಮಂತಿಕೆ ದಾಮಿನಿಯನ್ನು ಸೆಳೆದಿರಬಹುದೇ ಎಂದು ಒಮ್ಮೆ ಅನ್ನಿಸಿದರೂ, ದಾಮಿನಿ ಹಣಕ್ಕೆ ಮನಸೋಲುವ ಹೆಣ್ಣಲ್ಲವೆಂದು ಅವರ ಬುದ್ಧಿ ನಿರಾಕರಿಸಿತ್ತು. ದಾಮಿನಿ–ವಿನೋದರ ಪ್ರೇಮದ ಉಗಮಕ್ಕೆ ಸೂಕ್ತ ಕಾರಣ ಸಿಕ್ಕದೆ, ಪ್ರೇಮವು ಎಲ್ಲಾ ವಾದ, ತರ್ಕಕ್ಕೆ ಮೀರಿದ್ದೆನ್ನುವುದನ್ನೂ ಒಪ್ಪದೆ, ಒಪ್ಪದೆಯೂ ಇರಲಾಗದೆ ತೊಳಲಾಡಿದ್ದರು.

ಅತ್ತಿದಿಂತ್ತ ಹೊಯ್ದಾಡುತ್ತಿದ್ದ ಆಚಾರ್ಯರ ಮನಸ್ಸಿನಲ್ಲಿ ಮಗಳೊಡನೆ ತಮ್ಮ ಇದುವರೆಗಿನ ಸಂಬಂಧ ಹೇಗಿದ್ದಿತ್ತೆಂಬ ಪ್ರಶ್ನೆಯೊಂದು ಮೂಡಿತು. ಮಗಳನ್ನು ತಾವು ಅತೀವ ಮಮತೆಯಿಂದ ಸಾಕಿದ್ದೇನೊ ನಿಜ. ಅದು ತನ್ನ ಸಂತೋಷಕ್ಕಾಯಿತು. ಆದರೆ ಮಗಳನ್ನು ಅರ್ಥ ಮಾಡಿಕೊಳ್ಳುವುದರಲ್ಲಿ ಎಡವಿದ್ದೇನೆಯೆ? ಇಂಥದ್ದೊಂದು ಪ್ರಶ್ನೆ ಅವರಿಗೆಂದೂ ಎದುರಾಗಿರಲೇ ಇಲ್ಲ. ಮಗಳಿಗೆ ತಾವೇನೂ ಕಡಿಮೆಮಾಡದೆ ಬೆಳೆಸಿದ್ದರೆಂಬ ಗರ್ವ ಅವರಲ್ಲಿತ್ತು. ತಮ್ಮ ಯೋಗ್ಯತೆ ಮೀರಿ ಅವಳ ಬೇಕುಬೇಡಗಳನ್ನು ಪೂರೈಸಿದ್ದರು. ತಮ್ಮ ಆರ್ಥಿಕ ಪರಿಸ್ಥಿತಿಗೆ ಮೀರಿದ್ದಾದರೂ ಅವಳು ಇಷ್ಟಪಟ್ಟ ವಿದ್ಯಾಭ್ಯಾಸಕ್ಕೆ ಅನುವು ಮಾಡಿಕೊಟ್ಟಿದ್ದೂ ಹೌದು. ಆದರೆ ಇವೆಲ್ಲವೂ ತಮ್ಮ ಹಮ್ಮನ್ನೂ ತಣಿಸಿದ್ದೂ ನಿಜವಲ್ಲವೇ? ಒಂದು ದಿನವಾದರೂ ಮಕ್ಕಳೊಂದಿಗೆ ಕೂತು, ಅವರ ಮನಸ್ಸಿನ ಮಾತುಗಳನ್ನು ಆಲಿಸಲು ಎಂದಿಗೂ ತಾವು ಪ್ರಯತ್ನಿಸಿಲ್ಲವೆಂಬುದನ್ನು ನೆನೆದು ಒಂದು ವಿಚಿತ್ರ ಪರಿತಾಪ ಅವರನ್ನು ಆವರಿಸಿತು.

ದಾಮಿನಿಯೊಂದಿಗಾದರೂ ಪರವಾಗಿಲ್ಲ, ಮುದ್ದಿನ ಮಗಳೆಂದು ಅವಳ ಮಾತಿಗೆ ಬೆಲೆಯಿತ್ತು. ಗಂಡು ಮಕ್ಕಳಾದ ಗೋವಿಂದ, ಮುಕುಂದರಿಗಂತೂ ತಾವು ಯಾವ ಪ್ರಾಶಸ್ತ್ಯ ಕೊಟ್ಟಿದ್ದೂ ನೆನಪಿಲ್ಲ. ಅವರ ಅಭಿಪ್ರಾಯಗಳನ್ನು ಎಂದೂ ಯಾವುದಕ್ಕೂ

ಕೇಳಿದ್ದಿಲ್ಲ. ಅವರಾಗೇ ಹೇಳಿದ್ದರೂ ಅದನ್ನು ಮನ್ನಿಸಿದ್ದಿಲ್ಲ. ಓದಿನಲ್ಲಿನ ವಿಷಯಗಳ ಆಯ್ಕೆಯಿಂದ ಹಿಡಿದು ಅವರ ಉಡುಗೆತೊಡುಗೆಯವರೆಗೂ ತಮ್ಮದೇ ಅಂತಿಮ ನಿರ್ಣಯ. ಅವರಿಬ್ಬರಿಗೂ ಯುವಕರಿಗೆ ಸಹಜವಾದ ಆಸೆ–ಆಕಾಂಕ್ಷೆಗಳಿದ್ದವೆಂಬುದೂ ಕೂಡ ತಮ್ಮ ಗಮನಕ್ಕೆ ಬಾರದಾಯಿತೇ? ಮುಕುಂದನಿಗೆ ಕ್ರಿಕೆಟ್ ಆಟದಲ್ಲಿ ಬಹಳ ಆಸಕ್ತಿ ಇತ್ತು. ಕರ್ನಾಟಕದ ಕ್ರಿಕೆಟ್ ತಂಡಕ್ಕೆ ಆಯ್ಕೆಯಾಗುವ ಅವಕಾಶಗಳಿದ್ದರೂ ತಮ್ಮ ವಿರೋಧದಿಂದಾಗಿ ಸಾಧ್ಯವಾಗಿರಲಿಲ್ಲ. ಮುಕುಂದ ಸಾಧು ಸ್ವಭಾವದ ಹುಡುಗ. ತಂದೆಯನ್ನು ಒಪ್ಪಿಸಲು ವಿಫಲನಾಗಿ ತನ್ನೆಲ್ಲಾ ಆಸೆಗಳನ್ನು ಮನದಲ್ಲಿಯೇ ಹುದುಗಿಸಿಡಲು ಕಲಿತಿದ್ದ. ಅವನಲ್ಲಿದ್ದ ಲವಲವಿಕೆ ಮಾಯವಾಗಿ, ಅಂತರ್ಮುಖಿಯಾಗಿದ್ದ.

ಗೋವಿಂದ ಕೊನೆಯವ, ಚಿಕ್ಕಂದಿನಿಂದ ಮಹಾ ತುಂಟ. ಅವನ ಗೆಳೆಯರ ಬಳಗ ದೊಡ್ಡದು. ಅವರೊಂದಿಗೆ ಟ್ರೆಕ್ಕಿಂಗ್, ಹೈಕಿಂಗ್ ಹೋಗುವ ಆಸೆಯನ್ನು ತಂದೆ ವಿರೋಧಿಸಿದಾಗ ಸಿಡಿದೇಳುತ್ತಿದ್ದ. ಕಾಲೇಜಿನ ರಂಗ ಚಟುವಟಿಕೆಗಳಲ್ಲಿ ಅವನಿಗೆ ಆಸಕ್ತಿ. ಅವನನ್ನು ಅದಾವುದರಲ್ಲೂ ಪಾಲ್ಗೊಳ್ಳಲು ತಾವು ಬಿಟ್ಟಿರಲಿಲ್ಲ. ಶಾಲೆ ಕಾಲೇಜುಗಳ ಓದಿನ ಸಮಯದ ಹೊರತಾಗಿ ಉಳಿದ ಸಮಯವನ್ನೆಲ್ಲಾ ಪ್ರವಚನ, ವೇದಾಧ್ಯಯನಕ್ಕೆ ಮೀಸಲಿಡಬೇಕಿತ್ತು. ಗೋವಿಂದ ತನ್ನ ಅಸಮಾಧಾನವನ್ನು ತಾಯಿಯ ಮುಂದೆ ರೇಗುವ ಮೂಲಕ ತೋರಿಸುತ್ತಿದ್ದ. ತಾಯಿಗೆ ತನ್ನ ಅಳಲು ತಿಳಿದರೂ ಅದರಿಂದ ಪ್ರಯೋಜನವಿಲ್ಲವೆಂದು ತಿಳಿದು ಸುಮ್ಮನಾಗುತ್ತಿದ್ದ. ಅವರಿಬ್ಬರ ಅಸಹಾಯಕತೆಯನ್ನು ವಿಧೇಯತೆಯೆಂದು ಭಾವಿಸಿ ಬೀಗುತ್ತಿದ್ದವರು ತಾವೇ ಅಲ್ಲವೇ? ಮಕ್ಕಳಿಬ್ಬರೂ ತಾಯಿಯ ಮುಂದೆ ಅದೇನೇ ದುಸುಮುಸು ಮಾಡಿದರೂ ತಮ್ಮ ಮುಂದೆ ಎಂದೂ ಅಗೌರವದ ವರ್ತನೆ ತೋರಿದ್ದಿಲ್ಲ. ಆ ಗೌರವ ಅವರಿಬ್ಬರ ಸನ್ನಡತೆಯ ಪ್ರತೀಕವಾಗಿತ್ತೇ ಹೊರತು ತಮ್ಮ ಅರ್ಹತೆಯಿಂದ ಗಳಿಸಿದ್ದಾಗಿತ್ತೇ?

ಮಕ್ಕಳ ನಂತರ ಅವರ ಚಿತ್ತದಲ್ಲಿ ಈಗ ಮಡದಿ ಸುಳಿದಳು. ಈಗಂತೂ ಅವರೆದೆ ಅಪರಾಧೀ ಭಾವದಿಂದ ಕುಗ್ಗಿಹೋಯಿತು. ಸುಧಾ ಬಾಲ್ಯದಲ್ಲಿಯೇ ಹೆತ್ತವರನ್ನು ಕಳೆದುಕೊಂಡು ಅಣ್ಣ–ಅತ್ತಿಗೆಯ ಆಶ್ರಯದಲ್ಲಿ ಬೆಳೆದಿದ್ದಳು. ಸುಧಾಳನ್ನು ತಾವು ಮದುವೆಯಾದಾಗ ಆಕೆಯಿನ್ನೂ ಪದವಿಯ ಪ್ರಥಮ ವರ್ಷದಲ್ಲಿ ಓದುತ್ತಿದ್ದಳು. ಒಳ್ಳೆಯ ವರ ಒದಗಿದನೆಂದು ಅವಳ ಪದವಿ ಮುಗಿಯುವುದನ್ನೂ ಕಾಯದೆ ಮದುವೆ ಮುಗಿಸಿ ಕೈತೊಳೆದುಕೊಂಡಿದ್ದರು ಅಣ್ಣ ಅತ್ತಿಗೆ. ಆರ್ಥಿಕ ತಾಪತ್ರಯದಿಂದ ಬಳಲುತ್ತಿದ್ದ ಅವರಿಗೆ ಸುಧಾಳ ಮದುವೆ ಮಾಡಿ, ಜವಾಬ್ದಾರಿ ಕಳೆದುಕೊಳ್ಳುವುದೇ ಮುಖ್ಯವಾಗಿತ್ತು. ಮದುವೆಯಾದ ಮೊದಲ ವರ್ಷ ಸಂಪ್ರದಾಯದ ಪ್ರಕಾರ ಒಂದೆರಡು ಸಂದರ್ಭಗಳಲ್ಲಿ ತವರಿಗೆ ಹೋಗಿಬಂದಿದ್ದರೂ, ಕ್ರಮೇಣ ತವರಿನ ಸಂಪರ್ಕ ತಪ್ಪಿಹೋಗಿತ್ತು. ಅಣ್ಣನ ಮನೆಯಲ್ಲಿ ತನಗೆ ಸಿಗಬಹುದಾದ ಅನಾದರದ ಅರಿವಿದ್ದ ಸುಧಾ ತವರಿನ ವ್ಯಾಮೋಹವನ್ನೇ ತೊರೆದಿದ್ದಳು.

ಅತ್ತ ಹುಟ್ಟಿದ ಮನೆ ಹಾಗಿದ್ದರೆ, ಹೊಕ್ಕ ಮನೆಯೂ ಆಕೆಗೆ ಸುಖವನ್ನೇನೂ ನೀಡಿರಲಿಲ್ಲ. ಖಾಯಿಲೆಯಿಂದ ಹಾಸಿಗೆ ಹಿಡಿದಿದ್ದ ತಮ್ಮ ತಾಯಿಯ ಸೇವೆ, ಅಡುಗೆ, ಮನೆಯಲ್ಲಿ ನಡೆಯುತ್ತಲೇ ಇದ್ದ ಹಬ್ಬ, ವ್ರತ, ಪೂಜೆಗಳೆಂದು ಎಷ್ಟು ಮಾಡಿದರೂ ಮುಗಿಯದಷ್ಟು ಮನೆಗೆಲಸ. ಆಗೀಗ ಗುರುಗಳ ಆರಾಧನೆ, ಹರಕೆಗೆಂದು ಹೋಗಿದ್ದ ಪುಣ್ಯಸ್ಥಳಗಳನ್ನು ಬಿಟ್ಟರೆ ಬೇರಾವ ಪ್ರೇಕ್ಷಣೀಯ ಸ್ಥಳಗಳಿಗೂ ಆಕೆಯನ್ನು ಕರೆದೊಯ್ದಿದ್ದೇ ಇಲ್ಲ. ಸಿಡಿಮಿಡಿ ವ್ಯಕ್ತಿತ್ವದ ತನ್ನನ್ನು ಅನುಸರಿಸಿಕೊಂಡು ಬದುಕುವುದೇ ತನ್ನ ಜೀವನದ ಪರಮಧ್ಯೇಯವೆನ್ನುವಂತೆ ಬಾಳಿದ ಮಡದಿಯ ಬಗ್ಗೆ ಮರುಕವೆನ್ನಿಸಿತು. ಛೇ! ತಾವೆಂಥಾ ಸ್ವಾರ್ಥಿ! ತಮ್ಮ ಯೋಚನೆಗಳೆಲ್ಲವೂ ಎಂದೂ ಸ್ವಯಂಕೇಂದ್ರಿತವೇ!

ದಾಮಿನಿ, ಪ್ರತಿಯೊಂದೂ ವಿಷಯಗಳನ್ನೂ ತಮ್ಮಲ್ಲಿ ಹಂಚಿಕೊಳ್ಳುತ್ತಿದ್ದರೂ, ಅವಳು ತನ್ನ ಪ್ರೀತಿಯನ್ನು ತಮ್ಮಿಂದ ಮುಚ್ಚಿಟ್ಟಿದ್ದರ ಕಾರಣ ತಮ್ಮ ಹಟಮಾರಿತನವೆಂದು ಅವರಿಗೆ ಹೊಳೆಯಿತು. ತಮ್ಮ ಮಾತೇ ನಡೆಯಬೇಕೆಂಬ ತಂದೆಯ ಸ್ವಭಾವವನ್ನು ತಿಳಿದಿದ್ದರಿಂದ, ಕೊನೆಪಕ್ಷ ತನ್ನ ಪ್ರೇಮವನ್ನು ತಂದೆಗೆ ತಿಳಿಸುವ, ಅವರ ಸಮ್ಮತಿ ದೊರಕಿಸಿಕೊಳ್ಳುವ ಪ್ರಯತ್ನ ಕೂಡ ಅವಳು ಮಾಡಲಿಲ್ಲ. ತಮ್ಮ ಮಗಳು ದಾಮಿನಿ ಹೊಣೆಯರಿತ ಹೆಣ್ಣು. ತನ್ನ ಬಾಳ ಸಂಗಾತಿಯನ್ನು ಆರಿಸಿಕೊಳ್ಳುವ ಹಕ್ಕು ಅವಳಿಗಿಲ್ಲವೇ? ಅವಳ ಪ್ರೀತಿಯನ್ನು ಒಬ್ಬ ತಂದೆಯಾಗಿ ತಾವು ಗೌರವಿಸಬೇಕಿತ್ತಲ್ಲವೇ?

ವಿನೋದ ಸ್ವಜಾತಿಯಲ್ಲವಾದರೇನು? ತಮ್ಮ ಪ್ರೇಮದ ಪುತ್ಥಳಿಯ ಮನಸ್ಸನ್ನು ಗೆದ್ದವನು! ಮಗಳು ಮೆಚ್ಚಿದವನು ತಮಗೂ ಮೆಚ್ಚಾಗಬೇಕಲ್ಲವೇ? ಇಷ್ಟು ದಿನ ತಾವು ಪ್ರವಚನದಲ್ಲಿ ಬೋಧಿಸುತ್ತಾ ಬಂದಿದ್ದ 'ವಸುಧೈವ ಕುಟುಂಬಕಮ್' ಎಂಬುದರ ಅರ್ಥ ಇದೇ ಅಲ್ಲವೇ? ಎಲ್ಲರ ಹೃದಯದಲ್ಲೂ ಅಂತರ್ಗತನಾಗಿರುವ ಪರಮಾತ್ಮನನ್ನು ಕಾಣುವ ಕಣ್ಣುಗಳೇ ಇಲ್ಲದ ಜ್ಞಾನಾಂಧ ತಾನು! ಮನೋವೈಶಾಲ್ಯವಿಲ್ಲದ ತಮ್ಮ ಶುಷ್ಕ ಪಾಂಡಿತ್ಯದಿಂದ ಫಲವೇನು? ಬರೀ ವಯಸ್ಸಾದವರನ್ನೆಲ್ಲಾ ಹಿರಿಯರು ಅನ್ನಲಾದೀತೇ? ಅರಿವಿನ ಹೊಳಪಿನಿಂದ ಪಕ್ವವಾಗದ ತನ್ನ ಹಿರಿಯತನಕ್ಕೇನು ಬೆಲೆ? ಸರಿ ಆಗಿದ್ದಾಯಿತು. ಇನ್ನು ಮುಂದಾದರೂ ಮಕ್ಕಳ, ಮಡದಿಯ ಭಾವನೆಗಳನ್ನು ಗೌರವಿಸಬೇಕು. ತನ್ನಲ್ಲಾಗಿರುವ ಈ ಪರಿವರ್ತನೆಯನ್ನು ಮೊದಲು ದಾಮಿನಿಗೆ ತಿಳಿಸಬೇಕು. ತಮ್ಮ ಮಾತಿನಿಂದಾಗಿ ಅವಳ ಮುಖದಲ್ಲಿ ಅರಳುವ ಸಂತೋಷದ ನಗುವನ್ನು ನೋಡಿ ಕಣ್ತುಂಬಿಕೊಳ್ಳಬೇಕು... 'ಮಗಳೇ, ನೀನು ಮಗಳಲ್ಲ, ಈ ಅಪ್ಪನ ತಪ್ಪುಗಳನ್ನೆಲ್ಲಾ ಕ್ಷಮಿಸುವ ತಾಯಿಯಾಗು' ಎಂದು ಬೇಡಿಕೊಳ್ಳಬೇಕು...

ತಮ್ಮದೇ ಬದುಕನ್ನು ಚಲನಚಿತ್ರದಂತೆ ಕಣ್ಣ ಮುಂದೆ ಚಿತ್ರಿಸಿಕೊಳ್ಳುತ್ತಾ ಕುಳಿತಿದ್ದ ಆಚಾರ್ಯರನ್ನು ಸುತ್ತಲಿನ ಕಲರವ ವಾಸ್ತವಕ್ಕೆಳೆಯಿತು. ಪರೀಕ್ಷೆ ಬರೆದು ಮುಗಿಸಿ, ಒಳಗಿನಿಂದ ಒಬ್ಬೊಬ್ಬರಾಗಿ ವಿದ್ಯಾರ್ಥಿಗಳು ಹೊರಬರಲು ಶುರುಮಾಡಿದ್ದರು. ಆಚಾರ್ಯರು

ಯೋಚನೆಗಳನ್ನು ಕೊಡವಿಕೊಂಡು ನೆಟ್ಟಗೆ ಕುಳಿತರು. ದೃಷ್ಟಿಯನ್ನು ಚುರುಕುಗೊಳಿಸಿಕೊಂಡು ಹೋಗಿಬರುವವರನ್ನು ನೋಡತೊಡಗಿದರು. ತಾವು ಕೂತಿದ್ದ ಜಾಗ ದೂರವಾಯಿತೆನ್ನಿಸಿ, ಎದ್ದು ಗೇಟಿನ ಬಳಿ ಬಂದು ದಾಮಿನಿಯ ಹಾದಿ ಕಾಯತೊಡಗಿದರು. ಪರೀಕ್ಷೆಯ ಭಯದಿಂದ ಮುಕ್ತರಾದ ಖುಷಿಯಲ್ಲಿ ನಗುತ್ತಾ ಕಲೆಯುತ್ತಾ ಹೊರಬರುತ್ತಿದ್ದ ಹಿಂಡುಹಿಂಡು ವಿದ್ಯಾರ್ಥಿನಿಯರ ನಡುವೆ ತಮ್ಮ ಕಣ್ಣ ಗೊಂಬೆಯಾದ ಮಗಳಿಗಾಗಿ ಅರಸತೊಡಗಿದರು. ದಾಮಿನಿಯ ಸುಳಿವಿಲ್ಲ. ಇಂದಿನ ಪತ್ರಿಕೆ ದಾಮಿನಿಗೆ ಸ್ವಲ್ಪ ಕಷ್ಟವಾದ ವಿಷಯವಾದ್ದರಿಂದ, ಅವಳು ಪೂರ್ತಿ ಸಮಯ ಮುಗಿದ ನಂತರವೇ ಹೊರಬರಬಹುದೆಂದು ಎಣಿಸಿದರು. ಬಿರುಬಿಸಿಲಿಗೆ ಮುಖ ಬಾಡಿಸಿಕೊಂಡು ಕಾಯತೊಡಗಿದರು. ಹೊಟ್ಟೆಯಲ್ಲಿ ಹಸಿವು ಏರುತ್ತಿತ್ತು.

ಪರೀಕ್ಷೆಯ ಅವಧಿ ಮುಗಿದ ನಂತರವೂ ದಾಮಿನಿ ಹೊರಬರದಿದ್ದುದನ್ನು ನೋಡಿ ಯಾಕೋ ಅಳುಕಾಯಿತು. ಹುಡುಗ, ಹುಡುಗಿಯರಿಂದ ಗಿಜಿಗುಟ್ಟುತ್ತಿದ್ದ ಕಾಲೇಜು ಬರಿದಾಗತೊಡಗಿತ್ತು. ಮಗಳಿಗಾಗಿ ಅರಸಿ ಪರೀಕ್ಷೆ ಹಾಲಿನತ್ತಲೇ ಬಂದರು. ಅಲ್ಲಿಯೂ ದಾಮಿನಿಯನ್ನು ಕಾಣದೆ ವಿಚಾರಿಸಲಾಗಿ ಅವಳಾಗಲೇ ಉತ್ತರಪತ್ರಿಕೆ ಸಲ್ಲಿಸಿ ಹೊರಟಳೆಂಬ ಉತ್ತರ ಬಂದಿತು. ಆಚಾರ್ಯರ ಎದೆ ಢವಗುಟ್ಟತೊಡಗಿತು. ಅವರ ಕೈಕಾಲುಗಳು ಶಕ್ತಿ ಕಳೆದುಕೊಂಡಂತೆ ನಡುಗತೊಡಗಿದವು. ಕಣ್ಣಲ್ಲಿ ಕಣ್ಣಿಟ್ಟು ಕಾದಿದ್ದ ತಮ್ಮ ಕಣ್ಣು ತಪ್ಪಿಸಿ ಮಗಳು ಎತ್ತ ಹೋದಳೋ ತಿಳಿಯದೆ ಕಂಗಾಲಾದರು.

ಕಳವಳದ ನಡುವೆಯೇ ಅವರ ಮೆದುಳಿನಲ್ಲೊಂದು ಮಿಂಚು ಹೊಳೆದಂತಾಯಿತು. ಅವರು ಮರದ ನೆರಳಿನಿಂದ ಎದ್ದು ಗೇಟಿನ ಕಡೆ ಬರುತ್ತಿದ್ದಾಗ, ಗುಲಾಬಿ ಬಣ್ಣದ ದುಪ್ಪಟ್ಟವನ್ನು ತಲೆಯ ಮೇಲೆ ಹೊದ್ದು, ವೇಗವಾಗಿ ಹೋಗಿ ಬದಿಯಲ್ಲಿ ನಿಂತಿದ್ದ ಕಾರನ್ನೇರಿದ್ದ ಹೆಣ್ಣು ಅವರಿಗೆ ದಾಮಿನಿಯ ನೆನಪು ತಂದಿದ್ದಳು. ದಿಟ್ಟಿಸಿ ನೋಡಲು ಯತ್ನಿಸಿದ ಅವರಿಗೆ ದುಪ್ಪಟ್ಟದಲ್ಲಿ ಮರೆಯಾಗಿದ್ದ ಮುಖ ಸರಿಯಾಗಿ ಕಾಣಿಸಿರಲಿಲ್ಲ. ಆ ಮೈಮಾಟ, ನಡಿಗೆ ಮಗಳದ್ದೇ ಅನ್ನಿಸಿ, ಹತ್ತಿರ ಹೋಗಿ ಒಮ್ಮೆ ನೋಡಿಬಿಡಲೇ ಅಂದುಕೊಂಡವರು, ಗುರುತು, ಪರಿಚಯವಿರದ ಅಪರಿಚಿತ ತರುಣಿಯನ್ನು ಹಿಂಬಾಲಿಸುವುದು ಅಸಭ್ಯತೆಯೆನಿಸೀತೆಂದು ಸುಮ್ಮನಾಗಿದ್ದರು.

ಆಚಾರ್ಯರಿಗೆ ಈಗ ಅನುಮಾನ ಉಳಿಯಲಿಲ್ಲ. ದಾಮಿನಿಯೇ ತನ್ನ ಉಡುಗೆಯನ್ನು ಬದಲಿಸಿ, ಮುಖವನ್ನು ಉದ್ದೇಶಪೂರ್ವಕವಾಗಿ ತಮ್ಮಿಂದ ಮರೆಮಾಚಿದ್ದಳೆಂದು ಅವರ ಅಂತರಂಗಕ್ಕೆ ಹೊಳೆದುಬಿಟ್ಟಿತು. ತಾವೇ ಕೈತುತ್ತುಣ್ಣಿಸಿ ಬೆಳೆಸಿದ ಮಗಳು ಈ ರೀತಿ ದ್ರೋಹವೆಸಗುವಳೆಂಬುದನ್ನು ಅವರು ಊಹಿಸಲೂ ಸಾಧ್ಯವಿರಲಿಲ್ಲ. ಮಗಳು ತಮ್ಮ ಕಣ್ತಪ್ಪಿಸಿ ಹಾದುಹೋಗುವಾಗ ಕುತೂಹಲಕ್ಕಾದರೂ ಒಮ್ಮೆ ತಮ್ಮತ್ತ ನೋಡಿಯೇ ಇರುತ್ತಾಳೆ. ಇನ್ನೂ ಊಟವಾಗಿರದೆ, ಬಿಸಿಲಿನಲ್ಲಿ ಕಾದು

ಕಪ್ಪಗಾಗಿರುವ ತಮ್ಮ ಒಣಮುಖ ಅವಳಲ್ಲಿ ಕನಿಕರ ತರಿಸಲಿಲ್ಲವೇಕೆ? ತಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಗಳಲ್ಲವೇ ಅವಳು? ತನಗಾಗಿ ಕಾದು ಕೂತಿರುವ ಮುದಿತಂದೆಯನ್ನು ಈ ರೀತಿ ವಂಚಿಸಿಹೋಗುವ ಬದಲು, ಅವಳು ತನ್ನ ಸಂಬಂಧ ಹರಿದುಕೊಂಡು, ಎದುರಾಎದುರೇ ಹೇಳಿಹೋಗಿದ್ದಿದ್ದರೆ ತಮಗಿಷ್ಟು ದುಃಖವಾಗುತ್ತಿರಲಿಲ್ಲವೇನೊ ಅಂದುಕೊಂಡರು.

ಕಾಲವಂತೂ ಮಿಂಚಿಹೋಗಿತ್ತು. ಸ್ವಮರುಕದಲ್ಲಿ ಮುಳುಗಿಹೋಗಿದ್ದ ಆಚಾರ್ಯರು ದಿಕ್ಕುತೋಚದವರಂತೆ ಮರಳಿ ಮರದಡಿಯಲ್ಲಿ ಹೋಗಿ ಕುಳಿತರು. ಮಗಳ ವಿರುದ್ಧ ಹೂಡಲು ತಮ್ಮ ಬತ್ತಳಿಕೆಯಲ್ಲಿ ಅಸ್ತ್ರಗಳೇ ಇಲ್ಲವೆಂದು ಹೊಳೆದು ಶೂನ್ಯಭಾವ ಅವರನ್ನು ಆವರಿಸಿತು. ಸಂಕಟದಿಂದ ಅವರೆದೆ ಬೆಂದುಹೋಗುತ್ತಿದ್ದರೂ ಕಣ್ಣುಗಳಲ್ಲಿ ಹನಿ ನೀರೂ ಒಸರಲಿಲ್ಲ. ತಮ್ಮ ಆಕ್ರೋಶಕ್ಕಾಗಲೀ, ವ್ಯಥೆಗಾಗಲೀ ಅರ್ಥವೇ ಇಲ್ಲವೆನ್ನಿಸಿತು. ಅದೆಷ್ಟೋ ಹೊತ್ತು ಮಂಕು ಹಿಡಿದವರಂತೆ ಕುಳಿತೇ ಇದ್ದರು. ಇವರೆದೆಯ ತುಮುಲದ ಅರಿವೂ ಇಲ್ಲದಂತೆ ಸುತ್ತಲಿನ ಜಗತ್ತು ನಿರ್ಲಿಪ್ತವಾಗಿ, ಎಂದಿನಂತೆ ನಡೆದೇ ಇತ್ತು. ಪಕ್ಕದಲ್ಲಿ ದಾಮಿನಿಯ ನಗು ಕೇಳಿಸಿದಂತಾಗಿ ವಾಸ್ತವಕ್ಕಿಳಿದರು. ಯಾರೋ ಹರೆಯದ ಹುಡುಗಿಯರಿಬ್ಬರು ತಮ್ಮಲ್ಲೇ ಮಾತಾಡಿಕೊಂಡು, ನಗುತ್ತಾ ಮುಂದೆ ಹೋಗುತ್ತಿದ್ದರು.

ಮನೆಯಲ್ಲಿ ತಮ್ಮ ಬರವನ್ನು ಕಾಯುತ್ತಿರುವ ಪತ್ನಿಯ ನೆನಪಾಗಿ ಮೇಲೆದ್ದರು. ಇವರು ಮನೆ ಸೇರುವ ಹೊತ್ತಿಗೆ ಸುಧಾಬಾಯಿಯ ಪಾಡು ಹೇಳತೀರದು. ಚಪ್ಪಲಿ ಕಳಚುತ್ತಿದ್ದ ಆಚಾರ್ಯರನ್ನು ನೋಡುತ್ತಲೇ ಓಡಿಬಂದು "ಯಾಕೆ ಇಷ್ಟು ಹೊತ್ತು ಮಾಡಿದಿರಿ?" ಎಂದವರೇ, ಅನುಮಾನಿಸುವ ದನಿಯಲ್ಲಿ "ಅವಳೆಲ್ಲಿ?" ಎಂದರು. ಆಚಾರ್ಯರು ಉತ್ತರಿಸದೆ ಧಡಧಡ ಬಚ್ಚಲು ಮನೆಗೆ ನಡೆದರು. ಮನೆಯಿಂದ ಹೊರಹೋದರೆ ಬಂದೊಡನೆ ಸ್ನಾನ ಮಾಡುವುದು ಅವರ ಎಂದಿನ ಕ್ರಮವೇ ಆದರೂ ಇವತ್ತೇಕೋ ಸುಧಾಬಾಯಿಯ ಎದೆ ಭಯದಿಂದ ಹೊಡೆದುಕೊಂಡಿತು.

ಆಚಾರ್ಯರು ಸ್ನಾನ ಮುಗಿಸಿ ಮಡಿಯುಟ್ಟು, ಅಡುಗೆಮನೆಗೆ ನಡೆದು ತಾವು ನಿತ್ಯ ಉಣ್ಣುವ ಬೆಳ್ಳಿ ತಾಟನ್ನು ಮುಂದೆಳೆದುಕೊಂಡು– 'ಇಂದೇಕೋ ನನಗೆ ಅಗಾಧ ಹಸಿವು. ಊಟಕ್ಕೆ ಬಡಿಸು' ಎಂದರು. ಮಗಳನ್ನು ಕರೆತರಲು ಹೋದ ಪತಿಯ ವರ್ತನೆ ಸುಧಾಬಾಯಿಗೆ ಒಗಟಾಯಿತು. ದಾಮಿನಿ ಎಂದಿನಂತೆ ಪರೀಕ್ಷೆ ಮುಗಿದ ನಂತರ ತಂದೆಯೊಡನೆ ಮನೆ ಸೇರಬೇಕಿತ್ತು. ಆದರೆ ಅವಳ ಸುಳಿವಿಲ್ಲ. ಕಾಲೇಜಿನಲ್ಲಿ ಏನು ಅನಾಹುತವಾಗಿದೆಯೊ ಎಂಬ ಆತಂಕ ಒಂದೆಡೆಯಾದರೆ, ಒಳಗೆ ಕುದಿಯುತ್ತಿರುವ ಜ್ವಾಲಾಮುಖಿ ಹೊರಗೆ ತಣ್ಣಗೆ ಕಾಣುವಂತೆ, ಎಂದಿನಂತೆ ಸಿಟ್ಟು, ಸೆಡವು ತೋರದೆ ಅಸಹಜವಾಗಿ ತೋರುತ್ತಿರುವ ಪತಿಯ ವರ್ತನೆ ಅವರನ್ನು ಕಳವಳಕ್ಕೀಡುಮಾಡಿತ್ತು.

ಆಚಾರ್ಯರ ತಟ್ಟೆಗೆ ಅನ್ನ, ಹುಳಿ ಬಡಿಸಿ, ಏನೋ ನೆಪದಿಂದ ಅಲ್ಲಿಂದ ಎದ್ದು, ಮಕ್ಕಳ ಕೋಣೆಯ ಬಳಿ ಬಂದರು. ಮೆಲುದನಿಯಲ್ಲಿ "ಗೋವಿಂದಾ... ಮುಕುಂದಾ ನಿಮ್ಮಪ್ಪ ಯಾಕೋ ಒಂಥರ ಆಡ್ತಿದಾರ್ರೊ. ಬಂದು ಮಾತಾಡಿಸಿ ನೋಡ್ರೊ " ಎಂದು ಅಂಗಲಾಚಿದರು.

ಕಂಪ್ಯೂಟರಿನಲ್ಲಿ ಏನೋ ಕೆಲಸದಲ್ಲಿ ಮುಳುಗಿದ್ದ ಮಕ್ಕಳಿಬ್ಬರೂ ತಾಯಿಯ ಮಾತಿಗೆ ಹೆದರಿ ಓಡಿಬಂದರು. ಅಡುಗೆ ಮನೆಯಲ್ಲಿ ಇಣುಕಿದ ಅವರಿಗೆ ಯಾವುದೇ ಅನಾಹುತದ ಕುರುಹೂ ಕಾಣಲಿಲ್ಲ. ತಾಯಿಯ ಆತಂಕಕ್ಕೆ ಕಾರಣವೂ ಅವರಿಗೆ ಹೊಳೆಯಲಿಲ್ಲ.

ಮನಸ್ಸಿನ ಆಘಾತ, ಹಸಿವಿನಿಂದ ಈಗ ಚೇತರಿಸಿಕೊಂಡಿದ್ದ ಆಚಾರ್ಯರು ಸಾವಧಾನವಾಗಿ ಊಟ ಮಾಡಿ, ಕೊನೆಯ ತುತ್ತು ಮುಗಿಸಿ ಮೇಲೆದ್ದರು. ಸುಧಾಬಾಯಿ ಇನ್ನೂ ಗೊಂದಲದಲ್ಲಿದ್ದರು. ಪತಿಯ ವಿಚಿತ್ರ ವರ್ತನೆ ಅವರನ್ನು ಕಂಗಾಲಾಗಿಸಿತ್ತು. ಆಚಾರ್ಯರ ಮುಖ ಮಾತ್ರ ನಿರಾಳವಾಗಿತ್ತು. ಚಂಡಮಾರುತವೊಂದು ಹಾಯ್ದುಹೋದ ನಂತರದ ಭಾವವದು. ಸದ್ಯಕ್ಕೆ ಏನೊಂದೂ ಮಾತಾಡದ ಸ್ಥಿತಿಯಲ್ಲಿ ಅವರಿದ್ದರು. ಆದರೂ ಪ್ರಶ್ನಾರ್ಥಕ ಚಿಹ್ನೆಗಳಂತೆ ನಿಂತಿದ್ದ ಪತ್ನಿ, ಮಕ್ಕಳಿಗೆ ಉತ್ತರಿಸಲೇಬೇಕಿತ್ತು. ಸೋಫಾದಲ್ಲಿ ಕುಳಿತು, ಪತ್ನಿ ಮತ್ತು ಮಕ್ಕಳನ್ನು ಕೂತುಕೊಳ್ಳುವಂತೆ ಸನ್ನೆ ಮಾಡಿದರು. ಅವರೆಲ್ಲರಿಗೆ ಕಾಲೇಜಿನಲ್ಲಿ ನಡೆದಿದ್ದನ್ನು ತಿಳಿಸಿದರು. ಸುಧಾಬಾಯಿ ವಿಷಯ ತಿಳಿದು ಅಳಲು ಶುರು ಮಾಡಿದರು. 'ಹೊಟ್ಟೆಯಲ್ಲಿ ಹುಟ್ಟಿದ ಮಗಳು ಈ ರೀತಿ ಅನ್ಯಾಯ ಮಾಡಬಹುದೇ? ಜನರೆದುರು ನಾವು ತಲೆ ಎತ್ತಿ ತಿರುಗುವುದಾದರೂ ಹೇಗೆ?' ಎಂದು ಗಟ್ಟಿದನಿಯಲ್ಲಿ ಅಳುತ್ತಾ ಬಡಬಡಿಸತೊಡಗಿದರು. ಆಚಾರ್ಯರು ಪತ್ನಿಯ ದುಃಖದಲ್ಲಿ ತಾವೂ ಸಹಭಾಗಿಯೆನ್ನುವಂತೆ ಅವರ ಸನಿಹ ಬಂದು ಅವರ ಕೈಗಳನ್ನು ತಮ್ಮ ಕೈಯಲ್ಲಿ ಒತ್ತಿ ಹಿಡಿದರು.

ಸುಧಾಬಾಯಿಯ ದುಃಖ ತಹಬಂದಿಗೆ ಬಂದ ನಂತರ ಪತ್ನಿಯನ್ನು ಸಂತೈಸುತ್ತಾ ನುಡಿದರು– 'ಸುಧಾ, ಸಮಾಧಾನ ಮಾಡಿಕೊ. ನಮ್ಮ ಮಗಳು ಅಂಥಾ ಅಪರಾಧವನ್ನೇನೂ ಮಾಡಿಲ್ಲ ಕಣೆ. ಅಲ್ಲಾ, ಎಂಥಾ ಮರುಳ ನಾನು! ವಯಸ್ಸು ಅರವತ್ತು ದಾಟಿ ಮುಂದೋಡುತ್ತಿದ್ದರೂ, ಈ ಜಗತ್ತು ಬದಲಾಗುತ್ತಿದೆ ಎಂದು ಅರಿಯದೆ ಹೋದೆನಲ್ಲ! ನನ್ನ ಸುತ್ತ ನಾನೇ ಒಂದು ಕಾಲ್ಪನಿಕ ಪರಿಧಿಯನ್ನು ಎಳೆದುಕೊಂಡು ಅದರಲ್ಲೇ ಬದುಕಿಬಿಟ್ಟೆನಲ್ಲ! ಈ ಬದುಕು ಎಲ್ಲರಿಗೂ ಒಂದಲ್ಲಾ ಒಂದು ಸಮಯದಲ್ಲಿ ದೊಡ್ಡ ಪಾಠ ಕಲಿಸುತ್ತದೆ. ಆ ಪಾಠ ಎಲ್ಲಿ, ಯಾವಾಗ ದೊರೆಯುತ್ತದೆ, ಕಲಿಸುವ ಗುರು ಯಾರು? ಎಂಬುದು ಮಾತ್ರ ತಿಳಿಯುವುದಿಲ್ಲ. ಈ ದಿನ ಆ ಅರಿವು ನನಗಾಯಿತು. ನಾನೇ ತಲೆಯ ಮೇಲೆ ಹೊತ್ತು ಸುತ್ತಿಸಿದ, ಇನ್ನೂ ಪುಟ್ಟವಳೆಂದು ನಾನು ಭಾವಿಸಿದ್ದರೂ, ನನ್ನನ್ನು ಮೀರಿ ಬೆಳೆದುನಿಂತ ಮಗಳಿಂದ ನನಗೆ ಜ್ಞಾನೋದಯವಾಯಿತು.

ಬದಲಾವಣೆಯೆಂಬುದು ಈ ಜಗದ ನಿಯಮ. ಎಲ್ಲರೂ ಆ ನಿಯಮವನ್ನು ವಿಧೇಯತೆಯಿಂದ ಪಾಲಿಸಲೇಬೇಕು. ಅದರೆದುರು ಬಾಗದೆ ಸೆಟೆದು ನಿಂತರೆ, ನಮ್ಮನ್ನು ಮುರಿದು ಮುನ್ನಡೆಯುವುದು ಅದಕ್ಕೆ ಗೊತ್ತಿದೆ' ಎಂದು ಕ್ಷಣಕಾಲ ಮೌನವಾದರು. ಮತ್ತೇನೋ ನಿರ್ಧರಿಸಿದವರಂತೆ,

'ಮುಕುಂದ, ಹೇಗಾದರೂ ನಿನ್ನ ತಂಗಿಯನ್ನು ಸಂಪರ್ಕಿಸಿ ಈ ಸಂದೇಶವನ್ನು ಅವಳಿಗೆ ತಲುಪಿಸು. ಅವಳೊಪ್ಪಿದವನೊಂದಿಗೆ ಮದುವೆಯಾಗಲು ಅವಳ ಅಪ್ಪನಿಂದ ಯಾವುದೇ ಆಕ್ಷೇಪವಿಲ್ಲ ಎಂದು ತಿಳಿಸಿಬಿಡು' ಎಂದರು.

ಹೀಗಂದ ಪತಿಯ ಮುಖವನ್ನು ಅಚ್ಚರಿಯಿಂದ ದಿಟ್ಟಿಸಿದ ಸುಧಾಬಾಯಿಗೆ ಅಲ್ಲಿ ಯಾವ ನಿರಾಶೆಯಾಗಲೀ, ವಿಷಾದವಾಗಲೀ ಕಾಣದೆ ಅರಿವಿನ ಬೆಳಕೊಂದು ಸುಳಿದುಹೋದ ಕುರುಹು ಕಾಣಿಸಿತು. ಭಾವೋದ್ವೇಗದಿಂದ ಬೆವರುತ್ತಿದ್ದ ಪತಿಯನ್ನು ಕಂಡು ಅವರಿಗೆ ಸೆಖೆಯಾಗುತ್ತಿರಬೇಕೆಂದು ಭಾವಿಸಿ ಕೋಣೆಯ ಕಿಟಕಿಯ ಬಾಗಿಲುಗಳನ್ನು ಅಗಲವಾಗಿ ತೆರೆದರು. ಒಳ ನುಸುಳಿದ ಹೊಸ ಗಾಳಿ ಕೈತೋಟದಲ್ಲಿದ್ದ ತುಳಸಿ, ಪಾರಿಜಾತ, ಮಲ್ಲಿಗೆಯ ಕಂಪನ್ನು ತನ್ನೊಂದಿಗೆ ಹೊತ್ತುತಂದಿತು.

*

# ವಾವೆ ವರಸೆಗಳ ಭಾವ ಸರಸಗಳು

■ **ಸುಪ್ತದೀಪ್ತಿ (ಜ್ಯೋತಿ ಮಹಾದೇವ್),** Manipal, India.

ಹೀಗೊಂದು ಶಿರೋನಾಮೆ ಬುದ್ಧಿಗೆ ಲಗ್ಗೆಯಿಟ್ಟು ದಶಕಗಳೆರಡು ಕಳೆದಿವೆ. ಈ ಪದಪುಂಜ– "ವಾವೆ ವರಸೆ" –ನನ್ನ ತಲೆಯೊಳಗೆ ಹೊಕ್ಕಿದ್ದು ನನ್ನ ಬಾಲ್ಯದಲ್ಲಿ, ಚಂದಮಾಮವೋ ಬಾಲಮಿತ್ರವೋ, ನೆನಪಿಲ್ಲ. ಅದರಲ್ಲೊಂದು ಲೇಖನವಿತ್ತು, 'ವಾವೆ ವರಸೆಗಳು' ಅಂತಲೇ. ಸಂಬಂಧಗಳೊಳಗೆ ಮದುವೆಗಳಾದಾಗ ಇದ್ದ ಬಂಧುತ್ವದ ಎಳೆ ಬದಲಾಗಿ ಇನ್ನೇನೋ ಆಗುವುದನ್ನು ಅದು ಸ್ವಾರಸ್ಯಕರವಾಗಿ ಚಿತ್ರಿಸಿತ್ತು.

**ನೆನಪಿರುವ ಎರಡು ಉದಾಹರಣೆಗಳು:**

ಒಂದು: ಒಂದು ಹುಡುಗಿ ತನ್ನ ಚಿಕ್ಕಮ್ಮನ ಭಾವನ (ಅಮ್ಮನ ತಂಗಿಯ ಗಂಡನ ಅಣ್ಣನ) ಮಗನನ್ನು ಮದುವೆಯಾದರೆ, ಆಗ ಮೊದಲಿದ್ದ 'ವಾವೆಯಲ್ಲಿ ಅಣ್ಣ–ತಂಗಿ' ಸಂಬಂಧ ಪತಿ–ಪತ್ನಿಯಾಗಿ ಬದಲಾಗುತ್ತದೆ. ಅವರ ಸುತ್ತಲಿನ ಉಳಿದವರ ಸಂಬಂಧಗಳ ಎಳೆಗಳಲ್ಲೂ ಬದಲಾವಣೆಯಾಗುತ್ತದೆ. ಚಿಕ್ಕಮ್ಮನ ಗಂಡನ ಅಣ್ಣ– 'ದೊಡ್ಡಪ್ಪ'ನಾಗಿದ್ದರು. ಅವರ ಮಗನನ್ನು ವಿವಾಹವಾದ ಅನಂತರ ಈ ದೊಡ್ಡಪ್ಪ 'ಮಾವ'ನಾದರು. ಅವರ ತಮ್ಮ–ನಾದಿನಿಯರು ಮಾವ–ಅತ್ತೆ ಸಮಾನರಾದರು. ತನ್ಮೂಲಕ ಚಿಕ್ಕಮ್ಮನ ಅಕ್ಕನಾದ ತನ್ನಮ್ಮನೂ ಈಗ 'ಅತ್ತೆ ಸಮಾನ'ರಾಗುವ ವಿಚಿತ್ರ ಸನ್ನಿವೇಶ. ತನ್ನಮ್ಮನೇ ಈ ಮದುಮಗಳಿಗೆ ಅತ್ತೆ! ಎಂಥಾ ತಮಾಷೆ.

ಇನ್ನೊಂದು: ತನ್ನ ಸೋದರತ್ತೆಯ ಮಗಳ ಮಗಳನ್ನು ಒಬ್ಬ ಹುಡುಗ ಮದುವೆಯಾದನೆಂದರೆ ಆಗ ಅವರ ಸುತ್ತಲಿನ ಸಂಬಂಧಗಳಲ್ಲಿ ಮತ್ತೊಂದು 'ವಾವೆ'ಯೆಳೆ ಬೆಸೆದುಕೊಳ್ಳುತ್ತದೆ. ಸೋದರತ್ತೆಯ ಮಗಳು– 'ಅತ್ತಿಗೆ' ಆಗಿದ್ದವರು, ಈ ಮದುವೆಯ ಕಾರಣ, 'ಅತ್ತೆ' ಆಗಿ ಪರಿಣಮಿಸುತ್ತಾರೆ. ಮದುಮಗಳಿಗೆ ಇದುತನಕ 'ಚಿಕ್ಕಪ್ಪ'ನ ಸಮಾನ ಆಗಿದ್ದ ಹುಡುಗ ಈಗ 'ಪತಿ'ಯಾಗುತ್ತಾನೆ. ಅವನ ಅಪ್ಪ–ಅಮ್ಮ, 'ಅಜ್ಜ–ಅಜ್ಜಿ'ಯರ ಸ್ಥಾನದಲ್ಲಿದ್ದವರು (ಸ್ವಂತ ಅಜ್ಜಿಯ ಸಹೋದರ ಅಜ್ಜನೇ ತಾನೇ), ಈಗ 'ಮಾವ–ಅತ್ತೆ'

ಆಗುತ್ತಾರೆ. ಇವರ ಮಕ್ಕಳಿಗೆ ಈ ಹಿರಿಯ ಜೋಡಿ ಸ್ವಂತ ಅಜ್ಜ-ಅಜ್ಜಿಯೂ ಹೌದು (ತಂದೆಯ ಹೆತ್ತವರಾದ್ದರಿಂದ), ತಾಯಿಯ ಅಜ್ಜಿ (ತಮಗೆ ಪಿಜ್ಜಿ)ಯ ಸಹೋದರನಾಗಿದ್ದರಿಂದ ಪಿಜ್ಜ-ಪಿಜ್ಜಿಯೂ ಹೌದು.

ಹೀಗೇ ಬೇರೆ ಬೇರೆ ನೆಲೆಗಳ ಎಳೆಗಳ ನವೀಕೃತ ಸಂಬಂಧಗಳನ್ನು ಆ ಲೇಖನ ವಿವರಿಸಿತ್ತು. ಆದರೆ ಆಗಿನ ಎಳೆವಯಸ್ಸಿಗೆ ಆ ಸಂಬಂಧದೆಳೆಗಳ ಸುತ್ತು-ಸುರುಳಿಗಳು ಅರ್ಥವಾಗಿರಲಿಲ್ಲ. ದಶಕಗಳೆರಡರ ಹಿಂದೆ ಹೇಗೋ ಮತ್ತೆ ಈ ವಿಷಯ ತಲೆಯೊಳಗೆ ಹೊಕ್ಕು ಸುರುಳಿಗಳನ್ನು ಬಿಡಿಸುವ ಪ್ರಯತ್ನ ಮಾಡಿತ್ತಾದರೂ, ಯಾಕೋ ಏನೋ, ಈ ಕುರಿತ ಬರವಣಿಗೆ ಸಾಧ್ಯವಾಗಿರಲಿಲ್ಲ. ಈಗ, 'ಬದಲಾವಣೆ'ಯೆಂಬ ವಿಷಯಕ್ಕೆ ನಾನು ತೆರೆದುಕೊಂಡಾಗ 'ಬದಲಾಗದೇ' ಇದ್ದ ಈ ಶೀರ್ಷಿಕೆ 'ನಾನಿದ್ದೇನೆ' ಅಂದಿತು. ಶಿರೋನಾಮೆ ಅದೇ ಆದರೂ ಈಗ ವಿಷಯ ತುಸು ಬದಲಾಗಿದೆ.

ಕಾಲ ಬದಲಾಗಿದೆ ಅನ್ನುವುದು ಎಲ್ಲರೂ ಆಡುವ, ಎಲ್ಲೆಡೆ ಕೇಳುವ ಸರ್ವೇಸಾಮಾನ್ಯ ಮಾತು. ಬದಲಾಗದ ಕಾಲವಿದೆಯೇ? ಕಾಲವೆಂಬುದು ಪ್ರವಾಹ. ಹರಿಯುವ ನೀರು ಅದು. ನಿಂತಲ್ಲೇ ನಿಲ್ಲದು. ನಿರಂತರತೆಯೇ ಅದರ ನಿಯಮ. ಅದಕ್ಕೆಂದೇ "ಈ ಜಗತ್ತಿನಲ್ಲಿ ಶಾಶ್ವತವೆಂಬುದೊಂದು ಇದ್ದರೆ ಅದು ಬದಲಾವಣೆ" ಎನ್ನಲಾಗುತ್ತದೆ. ಪ್ರಕೃತಿಯಲ್ಲಿನ ನಿರಂತರ ಬದಲಾವಣೆಯೇ ಅದರ ಎಲ್ಲ ರೀತಿಯ ಜೀವ ವೈವಿಧ್ಯದ ಮೂಲಾಧಾರ, ಮೂಲ ಸತ್ತ್ವ, ಮೂಲ ತತ್ತ್ವ. ಬದಲಾವಣೆ ಇಲ್ಲವಾಗಿದ್ದಲ್ಲಿ ನಾವುಗಳು- ಮನುಷ್ಯರು- ಇರುತ್ತಿರಲಿಲ್ಲ; ಡೈನೋಸಾರ್‌ಗಳು ಅಳಿಯುತ್ತಿರಲಿಲ್ಲ. ಅವುಗಳ ಅಳಿವಿನ ಬಳಿಕ ಭೂಮಿಗೆ ಇಳಿದು ಬಂದ ಈ ಮನುಷ್ಯ ಜೀವಿ ಮುಂದೆ ಇನ್ನಾವುದನ್ನು ಉಳಿಸಿ ಬೆಳೆಸುತ್ತಾನೋ, ಮತ್ತಾವುದನ್ನು ಇಳಿಸಿ ಅಳಿಸುತ್ತಾನೋ ಅಳಿಯದ ಆ ದೇವರಿಗೇ ಗೊತ್ತು. ಆ 'ಅವ'ನೂ ಶಾಶ್ವತನಾಗಿಯೂ ನಿರಂತರ ಬದಲಾವಣೆಗಳಿಗೆ ಒಳಗಾದವನೇ ತಾನೇ!

ವಿಷಯಕ್ಕೆ ಬರೋಣ. 'ವಾವೆ ವರಸೆ'ಯೆಂದರೆ ನಂಟು, ಸಂಬಂಧ. ರಕ್ತ ಸಂಬಂಧಗಳು ಮತ್ತು ವೈವಾಹಿಕ ಸಂಬಂಧಗಳ ಸುತ್ತಮುತ್ತ ಕೂಡಿಕೊಂಡು ಹಬ್ಬಿಕೊಳ್ಳುವ ಹಂದರ. ಹಿಂದಿನ ಕೂಡುಕುಟುಂಬಗಳಲ್ಲಿ, ಬಹುಸಂತಾನ ಸಮಯದಲ್ಲಿ 'ವಾವೆ'ಗಳ 'ವರಸೆ' ಬಹುಮುಖಿಯಾಗಿತ್ತು. ಮನೆತುಂಬ ಜನರಿದ್ದು, ಮೂರ್ನಾಲ್ಕು ತಲೆಮಾರಿನವರು ಒಟ್ಟಾಗಿ ಬಾಳುತ್ತಿದ್ದರು. ಮದುವೆಯಾಗಿ ಹೋದ ಹೆಣ್ಣುಮಕ್ಕಳೆಲ್ಲರೂ ಯಾವುದೋ ಸಂದರ್ಭದ ನೆಪದಲ್ಲಿ ಮತ್ತೆ ತೌರಿಗೆ ಬಂದರೆ, ಮೊದಲೇ ತುಂಬಿದಂತಿದ್ದ ಮನೆ ಈಗ ಮತ್ತಷ್ಟು ಖುಷಿಭರಿತವಾಗುತ್ತಿತ್ತು (ಹಾಗೆಂದೇ ಭಾವಿಸೋಣ, ಈ ಬರಹದ ವ್ಯಾಪ್ತಿಯಲ್ಲಿ). ಮೂವತ್ತು ನಲ್ವತ್ತು ಜನರಿದ್ದ ಮನೆಯಲ್ಲೀಗ ಬಂಧುಗಳು-ಬೀಗರು, ನೆಂಟರಿಷ್ಟರು ಸೇರಿದರೆ ಅಲ್ಲಿ ಪರಸ್ಪರ ಕರೆಯುವಾಗಿನ ಪದಗಳ ವೈವಿಧ್ಯ ಈಗ ಕೇಳಲಲಭ್ಯ. ದೊಡ್ಡಜ್ಜ-ಅಜ್ಜ-ಚಿಕ್ಕಜ್ಜ (ಹೀಗೇ ಅಜ್ಜಿಯರೂ); ದೊಡ್ಡಪ್ಪ-ಅಪ್ಪ-ಚಿಕ್ಕಪ್ಪ (ಅಂತೆಯೇ ಅಮ್ಮಂದಿರೂ);

ತಾತ–ಅಜ್ಜಿ; ಸೋದರತ್ತೆ–ಮಾವ (ಅಲ್ಲಿಯೂ ಚಿಕ್ಕತ್ತೆ, ದೊಡ್ಡತ್ತೆಗಳು), ಅವರ ಮಕ್ಕಳು ಅತ್ತಿಗೆ–ಭಾವ; ಅಣ್ಣನ ಮಡದಿಯೂ ಅತ್ತಿಗೆಯೇ, ಅಕ್ಕನ ಗಂಡನೂ ಭಾವನೇ (ಬೀಗರು ಮದುಮಕ್ಕಳ ತಂದೆಗೆ ಭಾವ–ಅಕ್ಕ ಆಗುತ್ತಾರೆ); ಅಣ್ಣ–ತಮ್ಮಂದಿರ ಮಡದಿಯರು ಓರಗಿತ್ತಿಯರು (ನಮ್ಮ ಕರಾವಳಿಯಲ್ಲಿ ಈ ಪದ ಇಲ್ಲ. ಇಲ್ಲಿ ಅವರು ಅಕ್ಕ–ತಂಗಿಯರು – ಅತ್ತೆ ಮನೆಯ ಅಕ್ಕ–ತಂಗಿಯರು!); ಒಡಹುಟ್ಟಿದ ಅಕ್ಕ–ತಂಗಿಯರ ಗಂಡಂದಿರು ಷಡ್ಡುಕರು, ಚಿಕ್ಕಪ್ಪನ ಮಡದಿಯೂ ಚಿಕ್ಕಮ್ಮ, ಅಮ್ಮನ ತಂಗಿಯೂ ಚಿಕ್ಕಮ್ಮ –ಹೀಗೆ ತರಹೇವಾರು ಸಂಬೋಧನೆಗಳ ಕೇಳುಸುಖವೇ ಬೇರೆ.

ಈಗೆಲ್ಲ ಬಹಳಷ್ಟು ಸಂಬಂಧವಾಚಕ ಪದಗಳು ನಮ್ಮ ಪದಕೋಶಗಳಿಂದ ಅಳಿಸಿಹೋಗಿ ಆಮದಾಗಿರುವ ಸುಲಭ ಶಬ್ದಗಳಾದ 'ಅಂಕಲ್', 'ಆಂಟಿ', 'ಕಸಿನ್'ಗಳು ಧಿಗಿಣ ಹೊಡೆಯುತ್ತಿವೆ. 'ವನ್ ಸೈಜ್ ಫಿಟ್ಸ್ ಆಲ್' ಕಾಲಮಾನದಲ್ಲಿ, ಸಂಸ್ಕೃತಿಯಲ್ಲಿ ಈ ಮೂರು ಪದಗಳು ಬಹಳ ಚೆನ್ನಾಗಿ ಎಲ್ಲರನ್ನೂ ಹೊಂದಿಕೊಂಡು ಬಾಳುತ್ತಿವೆ. ಹಿಂದಿಯಲ್ಲಿ ಬಹಳಷ್ಟು ಸಂಬಂಧವಾಚಕ ಪದಗಳನ್ನು ಉಳಿಸಿಕೊಂಡಿದ್ದಾರೆ ಎನ್ನಬಹುದು. ನಮ್ಮ ಕರಾವಳಿ ಪ್ರದೇಶದಲ್ಲಿ, ಕನ್ನಡ–ತುಳು ಮಾತುಗಳಾಡುವ ನಮ್ಮಂತಹವರಲ್ಲಿ ಸಂಬಂಧವಾಚಕ ಪದಗಳ ಕೊರತೆ ಎದ್ದುಕಾಣುತ್ತದೆ. ಇದ್ದುದರಲ್ಲಿ ಕರಾವಳಿ ಹವ್ಯಕರಲ್ಲಿ ಸ್ವಲ್ಪ ಹೆಚ್ಚು ಪದಗಳಿವೆ ಮತ್ತು ಅವರಲ್ಲನೇಕರು ಈಗಲೂ ತಮ್ಮ ಸಂಬಂಧಿಗಳನ್ನು ಆಯಾಯ ಸಂಬಂಧವಾಚಕ ಪದಗಳನ್ನು ಬಳಸಿಯೇ ಸಂಬೋಧಿಸುತ್ತಾರೆ. ಅದರ ಪರಿಣಾಮವೆಂದರೆ– ಬಹುಸಂತಾನವಿದ್ದ ಮನೆಗಳಲ್ಲಿ (ಈಗ ಇದು ಅತ್ಯಪರೂಪವಾದರೂ), ದೊಡ್ಡಕ್ಕನ ಮೊಮ್ಮಕ್ಕಳು ಕೊನೆಯ ತಂಗಿಗಿಂತ ವಯಸ್ಸಿನಲ್ಲಿ ಒಂದೆರಡು ವರುಷಗಳಿಗಷ್ಟೇ ಕಿರಿಯರಾಗಿದ್ದೂ ಅವಳನ್ನು 'ಅಜ್ಜಿ'ಯೆಂದೇ ಕರೆಯುವ, ಮತ್ತು ಈ 'ಪುಟ್ಟಜ್ಜಿ' ಅದನ್ನು ಒಪ್ಪಿಕೊಂಡು ಓಗೊಡುವ ಬಂಧುತ್ವದ ಸೊಬಗು ಹಾಗೂ ಪ್ರೀತಿ, ವಿಶ್ವಾಸ, ವಾತ್ಸಲ್ಯಗಳ ನವಿರುತನ ನಮಗೆ ಈ ಮನೆತನಗಳಲ್ಲಿ ಕಾಣಸಿಗುವುದು.

ಬಹುಸಂತಾನದ ಕ್ರಮ ಕಳೆದು, ದಂಪತಿಗೆ ಮೂರು–ಎರಡು ಮಕ್ಕಳು ಮಾತ್ರ ಜಾರಿಗೆ ಬಂದು, ಈಗೀಗ ಒಂದೇ ಕರುಳ ಕುಡಿಯನ್ನು ಕಾಣುವುದಾಗಿದೆ. ಇಂತಹ ಸಂಸಾರಗಳಲ್ಲಿ ಬೆಳೆಯುವ ಮಕ್ಕಳಿಗೆ ಚಿಕ್ಕಪ್ಪ–ದೊಡ್ಡಪ್ಪ, ಸೋದರತ್ತೆ, ಸೋದರಮಾವ, ಸೋದರ ಅತ್ತಿಗೆ, ಸೋದರ ಭಾವ– ಇಂತಹ ಒಳಬಂಧಗಳ ಪರಿಚಯ ಆಗುವ ಪ್ರಮೇಯವೇ ಬರುತ್ತಿಲ್ಲ. ಮದುವೆಯಾದ ಹುಡುಗ–ಹುಡುಗಿಗೆ ಭಾವ, ಭಾಮೈದ (ಮೈದುನ), ಅತ್ತಿಗೆ, ನಾದಿನಿ, ಷಡ್ಡುಕ, ಓರಗಿತ್ತಿಯರ ತಕರಾರೇ ಇರುವುದಿಲ್ಲ. ಅವರೆಲ್ಲ ತಂತಮ್ಮ ಪಾಡಿಗೆ, ಪೇಟೆಗಳ ತಂತಮ್ಮ ಪುಟ್ಟ ಗೂಡುಗಳಲ್ಲಿ ಒಂದು ಮರಿಗುಬ್ಬಿಯ ಚುಂಚದೊಳಗೆ ಕಾಳೂಡುತ್ತಿದ್ದಾರೆ.

ಅದೆಲ್ಲ ಇರಲಿ, ಇತ್ತೀಚೆಗೆ ಕೇಳಿಬರುತ್ತಿರುವ ಇನ್ನೊಂದು ವಿಚಾರವೆಂದರೆ– ಮದುವೆಗೆ ಸಿದ್ಧನಾಗಿರುವ ಗಂಡು ತನ್ನ ತಂದೆ ತಾಯಿಯರೊಂದಿಗೆ ಬಾಳುತ್ತಿರುವುದು

ಬಿಡಿ, ಅವನಿಗೆ ಅಪ್ಪ-ಅಮ್ಮ ಇರಲೇಬಾರದು ಎನ್ನುವ ಕಂಡೀಷನ್ ಹಾಕಲಾಗುತ್ತಿದೆಯಂತೆ ಹುಡುಗಿಯ ಕಡೆಯವರಿಂದ! ಹುಡುಗನ ಹೆತ್ತವರನ್ನು 'ರಾಹು-ಕೇತು' ಎಂಬ ಸಂಕೇತದಿಂದ ಸೂಚಿಸಲಾಗುತ್ತಿದೆ. "ರಾಹು-ಕೇತು ಇರುವ ಮನೆಗೆ ಹೆಣ್ಣು ಕೊಡಲಾರೆವು", "ರಾಹು-ಕೇತು ಇರುವ ಮನೆಗೆ ಮದುವೆಯಾಗಿ ಹೋಗಲಾರೆ" ಎನ್ನುವ ಮಾತುಗಳು ಚಾಲ್ತಿಯಲ್ಲಿವೆ. ಇವರಿಗೇ ಮಕ್ಕಳಾದಾಗ ಮುಂದೆ ತಮ್ಮ ಮಗ-ಮಗಳಿಗೆ ಮದುವೆ ಮಾಡಬೇಕಾದಾಗ ಈ ಹುಡುಗಿಯರು, ತಾವೇ ಹೆತ್ತವರಾಗಿ ನಿಲ್ಲುವಾಗ (ತಾವೇ 'ರಾಹು-ಕೇತು'ಗಳಾದಾಗ) ಏನು ಮಾಡುತ್ತಾರೆ? ಅದಕ್ಕೀಗ ಉತ್ತರವಿಲ್ಲ. ಕಾಲವಿದೆ.

ಬಹುಶಃ 'ಅತ್ತೆಗೊಂದು ಕಾಲ, ಸೊಸೆಗೊಂದು ಕಾಲ' ಅನ್ನುವಂತೆ, ಹಿಂದೆಲ್ಲ ಮದುವೆಯಾಗಿ ಬಂದ ಹೆಣ್ಣನ್ನು ಅತ್ತೆ ಮನೆಯಲ್ಲಿ ಬೇಕಾಬಿಟ್ಟಿ ದುಡಿಸಿಕೊಂಡು, ಹೀಯಾಳಿಸಿಕೊಂಡು, ಅವಹೇಳನ ಮಾಡಿಕೊಂಡು, ರಾಜಮರ್ಜಿಯಲ್ಲಿ ಅತ್ತೆ ಮನೆಯವರು ಕಾಲಹಾಕಿದ್ದಿತ್ತು. ಈಗ ಅದೇ ನಾಣ್ಯ ತಿರುಗಿ ಬೀಳುವಂತಾಗಿದೆ. ಹೆಣ್ಣು ಹೆಣ್ಣೆಂದು ಹೀಗಳೆವ ಝಮಾನಾ ಬದಲಾಗಿದೆ. ಮಗನಿಗೆ ಮದುವೆ ಮಾಡಬೇಕಾದರೆ ಹೆಣ್ಣಿನ ಮರ್ಜಿಗೆ ಸೆರಗೊಡ್ಡಬೇಕಾಗಿದೆ. ಹೆಣ್ಣು ಭ್ರೂಣ ಹತ್ಯೆಯಂತಹ ಪಾತಕಗಳಿಂದ ಹೆಣ್ಮಕ್ಕಳ ಸಂಖ್ಯೆ ಇಳಿಮುಖವಾಗಿರುವುದು ಒಂದು ಕಾರಣವಾದರೆ, ಉನ್ನತ ಶಿಕ್ಷಣ ಪಡೆದ ನಮ್ಮ ಹೆಣ್ಣುಮಕ್ಕಳು ಸ್ವಾವಲಂಬಿಗಳಾಗಿ, ತಮ್ಮಷ್ಟಕ್ಕೆ ತಾವು ಬದುಕುವುದನ್ನು ಕಲಿತಿದ್ದಾರೆ. ಈ ಸ್ವಾತಂತ್ರ್ಯ ಅವರನ್ನು ಮದುವೆಯೆಂಬ 'ಬಂಧನ'ದ ಕುರಿತು, ಅಲ್ಲಿಂದ ಬರಬಹುದಾದ ಇತರ ಇತಿ-ಮಿತಿಗಳ ಕುರಿತು ಯೋಚಿಸುವಂತೆ ಮಾಡಿದೆ. ಅದಕ್ಕಾಗಿಯೇ, ಮುಂದಾಲೋಚನೆಯೆಂಬಂತೆ, ಅತ್ತೆ-ಮಾವ ಇಲ್ಲದ ಮನೆಯನ್ನು ಆರಿಸಿಕೊಳ್ಳುವತ್ತ ಮನಸ್ಸು ಮಾಡುತ್ತಿದ್ದಾರೆ. ಅಷ್ಟರಮಟ್ಟಿಗೆ ಅವರ ಸ್ವಾತಂತ್ರ್ಯ ಅವರದೇ ಕೈಯಲ್ಲಿರುತ್ತದೆ.

ಈ ಸ್ವಾತಂತ್ರ್ಯದ ಎಲ್ಲೆ ಎಲ್ಲಿ, ಹೇಗೆ ಎನ್ನುವುದೂ ತಾರ್ಕಿಕ ವಿಚಾರ. ಯಾಕೆಂದರೆ, ಈಗೀಗ ಅತಿ ಕ್ಷುಲ್ಲಕವೆನಿಸುವ ಕಾರಣಗಳಿಗೆ ವೈವಾಹಿಕ ಸಂಬಂಧಗಳು, ನಿಶ್ಚಿತಾರ್ಥವಾದ ಸಂಬಂಧಗಳೂ ಮುರಿದುಬೀಳುತ್ತಿವೆ. ಇತ್ತೀಚೆಗೆ ನಿಶ್ಚಿತಾರ್ಥವಾದ ಒಂದು ಸಂಬಂಧ ಮದುವೆಯ ಹದಿನೈದು ದಿನಗಳ ಮುನ್ನವಷ್ಟೇ ಬಿದ್ದುಹೋದ ಘಟನೆಯೂ ಅದರ ಕಾರಣವೂ ಯಾರದೂ ಹುಬ್ಬೇರಿಸಬಹುದು. ಈ ಹುಡುಗ ಹುಡುಗಿ ಇಬ್ಬರೂ ಬೆಂಗಳೂರಿನಲ್ಲಿ ಕೆಲಸದಲ್ಲಿದ್ದರು. ನಿಶ್ಚಿತಾರ್ಥವಾಗಿ ಏಳು ತಿಂಗಳುಗಳಾಗಿದ್ದವು. ವಾರಾಂತ್ಯಗಳಲ್ಲಿ ಸಾಧ್ಯವಿದ್ದಾಗ ಜೊತೆಯಾಗಿ ಸಿನೆಮಾ, ಮಾಲ್, ಶಾಪಿಂಗ್ ಅಂತೆಲ್ಲ ತಿರುಗುತ್ತಿದ್ದರು. ಚಿನ್ನ-ಜವುಳಿ ಮತ್ತೆಲ್ಲ ಖರೀದಾರಿಗಳೂ ಆಗಿದ್ದವು. ದೂರದೂರಿನ ನೆಂಟರಿಷ್ಟರಿಗೆ ಆಮಂತ್ರಣ ಹಂಚಿಯಾಗಿತ್ತು. ಮದುವೆಗೆ ತಿಂಗಳಿದೆ ಅನ್ನುವಾಗ ಅದೇನೋ ಕೊನೆ ಘಳಿಗೆಯ ಶಾಪಿಂಗ್ ಅಂತ ಹುಡುಗನ ಅಮ್ಮ, ಚಿಕ್ಕಮ್ಮ ಬೆಂಗಳೂರಿಗೆ ಬಂದಿಳಿದಿದ್ದಾರೆ. ಅವರ ಜೊತೆ ಭಾವೀ ಮದುಮಗಳೂ ಬರಬೇಕೆನ್ನುವ ಅವರ ಅಪೇಕ್ಷೆಯಂತೆ ಹುಡುಗ ಕರೆ ಮಾಡಿದಾಗ ಅವಳು ತಾನು ಈಗ ಬ್ಯುಸಿಯಿರುವುದಾಗಿಯೂ

ಮರುದಿನ ಕರೆ ಮಾಡುವುದಾಗಿಯೂ ತಿಳಿಸಿ ಠಪ್ಪೆಂದು ಕರೆ ಕಟ್ ಮಾಡಿದ್ದಾಳೆ. ಇವರುಗಳು ಪೆಚ್ಚಾದರೂ ತಮ್ಮ ಕೆಲಸ ಮುಗಿಸಿಕೊಂಡು ಊರಿಗೆ ಮರಳಿದ್ದಾರೆ.

ಅಮ್ಮ-ಚಿಕ್ಕಮ್ಮನ ಪೆಚ್ಚುಮೋರೆ ಕಂಡು ನೊಂದ ಹುಡುಗ ಮರುದಿನ ತನ್ನ ಭಾವೀ ಪತ್ನಿಯ ಬಳಿ, ಯಾಕೆ ಹಿಂದಿನ ದಿನ ಬಂದಿಲ್ಲ, ಏನಂಥ ಕೆಲಸವಿತ್ತೆಂದು ಕೇಳಿದ್ದಾನೆ. ಅವಳೇನೋ ಹಾರಿಕೆಯ ಉತ್ತರ ಕೊಟ್ಟಿದ್ದಾಳೆ. ಅದರ ಮುಂದಿನ ವಾರಾಂತ್ಯದಲ್ಲಿ ಹುಡುಗ ಕರೆ ಮಾಡಿದಾಗ ಅವಳು ಉತ್ತರಿಸಲಿಲ್ಲ. ಎರಡು ದಿನ ಪೂರ್ತಿ ಮಾತಿಗೆ ಸಿಗದವಳನ್ನು ಸೋಮವಾರ ಸಂಜೆ ತುಸು ಕಾತರದಿಂದ ಇವನು ವಿಚಾರಿಸಿಕೊಂಡಾಗ, ತನ್ನ ಸಹೋದ್ಯೋಗಿಗಳ ಜೊತೆ ವಾರಾಂತ್ಯದ ತಿರುಗಾಟಕ್ಕೆ ಹೋಗಿದ್ದಳೆಂದಳು. ತನಗೊಂದು ಮಾತು ತಿಳಿಸಿದರಾಗಿತ್ತು, ತಾನು ಗಾಬರಿಯಾಗಿದ್ದೆನೆಂದು ಇವನು ಆತಂಕ ತೋರಿದಾಗ ಮೌನವಾಗಿದ್ದಳು. ಆದರೆ, ಮರುದಿನವೇ ಅವಳಪ್ಪನಿಂದ ಇವನಪ್ಪನಿಗೆ ಫೋನ್: “ನಮಗೀ ಸಂಬಂಧ ಬೇಡ, ನಿಮ್ಮ ಮಗ ಈಗಲೇ ಇಷ್ಟು ಕಂಟ್ರೋಲ್ ಮಾಡುವವನು ಮದುವೆಯಾದ ಮೇಲೆ ಇನ್ನೆಷ್ಟು ಮಾಡಲಿಕ್ಕಿಲ್ಲ? ನಮಗೆ ಮಗಳ ಸ್ವಾತಂತ್ರ್ಯ, ಸಂತೋಷ ಮುಖ್ಯ, ನಿಮ್ಮ ಸಂಬಂಧ ಅಲ್ಲ” ಅಂದುಬಿಟ್ಟಾಗ ಇವರಿಗೆಲ್ಲ ಆಘಾತವಾಗಿತ್ತು. ಹುಡುಗನ ಅಮ್ಮನಂತೂ ಸ್ವಲ್ಪ ಸಮಯ ಖಿನ್ನತೆಗೂ ಒಳಗಾಗಿದ್ದರು. ಸ್ವಾತಂತ್ರ್ಯದ ಮಿತಿಯೇನು, ಹಾಗಾದರೆ? ಎಲ್ಲಿ, ಹೇಗೆ, ಎಷ್ಟು ಇರಬೇಕು ಸ್ವಾತಂತ್ರ್ಯ? ಉತ್ತರ- ಅವರವರ ಭಾವಕ್ಕೆ!

ಹಿಂದಿನ ಕೂಡುಕುಟುಂಬಗಳಲ್ಲಿ, ಒಂದು ಮನೆಯಲ್ಲಿ ಐದಾರು ಹಿರಿತಲೆಗಳು, ತದನಂತರದ ನಡುತಲೆಗಳು ಸುಮಾರು ಹತ್ತು-ಹನ್ನೆರಡು, ಆಮೇಲಿನ ಕಿರಿತಲೆಗಳು ಒಂದಿಪ್ಪತ್ತು, ಅದಕ್ಕಿಂತಲೂ ಕಿರಿಯದಾದ ಪುಟ್‌ತಲೆಗಳು ಮೂರೋ ನಾಲ್ಕೋ ಇರುತ್ತಿದ್ದವು. ಹೀಗೆ, ಒಂದು ಸೂರಿನೊಳಗೆ ಮೂರು ನಾಲ್ಕು ಪೀಳಿಗೆಯ ಸುಮಾರು ಮೂವತ್ತೆಂಟು ನಲ್ವತ್ತು ಮಂದಿ ಇರುತ್ತಿದ್ದರು. ಮನೆಗೆಲಸಗಳು ಹಂಚಿಹೋಗುತ್ತಿದ್ದವು. ಹಿರಿತಲೆಗಳು ಕಿರಿ ಮತ್ತು ಪುಟ್ಟ ತಲೆಮಾರಿನವರ ಬೌದ್ಧಿಕ ಬೆಳವಣಿಗೆಗೆ ಪೂರಕವಾಗುವಂತಹ ವಾತಾವರಣ ಒಡಮೂಡಿರುತ್ತಿತ್ತು. ಸಂಜೆಯ ಹೊತ್ತು ಈ ಹಿರಿಯರು ಪುಟಾಣಿಗಳನ್ನು ತಮ್ಮ ಸುತ್ತ ಕೂರಿಸಿಕೊಂಡು ರಾಮಾಯಣ-ಮಹಾಭಾರತಗಳ, ಜನಪದರ ಕಥೆಗಳನ್ನು ಹೇಳುತ್ತಿದ್ದರು; ತಿಥಿ-ವಾರ-ನಕ್ಷತ್ರ-ಸಂವತ್ಸರಗಳನ್ನೋ ಮಗ್ಗಿಯನ್ನೋ ಕಲಿಸುತ್ತಿದ್ದರು. ಜೊತೆಗೆ, ತಾವು ಕೂತಲ್ಲೇ ಹತ್ತಿಯಿಂದ ಬತ್ತಿ ಅಥವಾ ಹೂಬತ್ತಿ ಹೊಸೆಯುವುದೋ, ಹೂಮಾಲೆ ಕಟ್ಟುವುದೋ, ಬಟ್ಟೆ-ಬರೆಗಳಿಗೆ ಬೇಕಾದ ಹೊಲಿಗೆ-ತೇಪೆಯ ಕೈ ಕೆಲಸವನ್ನೋ ಮಾಡುತ್ತಿದ್ದರು. ಅಕ್ಕಿ, ಅವಲಕ್ಕಿ, ಅರಳು ಮುಂತಾದುವನ್ನು ಹರಡಿಕೊಂಡು ಕಲ್ಲು ಆರಿಸಿ ಶುದ್ಧೀಕರಿಸುತ್ತಿದ್ದರು. ಸುತ್ತಲೂ ಕುಳಿತಿರುತ್ತಿದ್ದ ಮೂರನೇ ನಾಲ್ಕನೇ ತಲೆಮಾರಿಗೆ ತಮಗರಿಯದಂತೆ ಈ ಕಲೆಗಳೂ ರವಾನೆಯಾಗುತ್ತಿದ್ದವು; ಈ ಕೆಲಸಗಳೂ ದೈನಿಕದ ಭಾಗ, ಜೀವನದ ಅಂಗವೆನ್ನುವ ಅರಿವು ಮೂಡುತ್ತಿತ್ತು.

ಇಂತಹ ಭಾವಸಮೃದ್ಧತೆ, ಬಂಧುತ್ವ ಪ್ರಜ್ಞೆ ಈಗಿಲ್ಲ. 'ಕೋಳಿ ನೆಲ ಕೆದಕುವುದು ತನ್ನ ಕಾಲ ಬುಡಕ್ಕೆ, ಮರಿಗಳ ಹೊಟ್ಟೆಗೆ' ಅನ್ನುವ ಗಾದೆ ಮಾತೊಂದಿದೆ. ಎಲ್ಲರೂ ತಂತಮ್ಮ ಸ್ವಾರ್ಥಗಳಲ್ಲೇ ಮುಳುಗಿಹೋಗಿ, ತಂತಮ್ಮ ಸ್ವಂತದ ಲಾಭ ಮಾತ್ರ ನೋಡಿಕೊಳ್ಳುವ ಮಟ್ಟಿಗೆ ತಮ್ಮ ಸುತ್ತ ಕೋಟೆ ಕಟ್ಟಿಕೊಂಡು ಬಾಳುತ್ತಿರುವುದನ್ನು ಕಾಣುತ್ತಿದ್ದೇವೆ. ಪರವೂರಿನಿಂದ ಬಂಧುಗಳು ಆಪ್ತರು ಊರಿಗೆ ಬರುತ್ತಾರೆಂದರೆ ಸಂಭ್ರಮಿಸುತ್ತಿದ್ದ ಕಾಲವೊಂದಿತ್ತು. ಈಗೆಲ್ಲ ಹಾಗಿಲ್ಲ. ಬರುವವರು ಯಾರೇ ಆಗಿರಲಿ, ತಮ್ಮ ಅನುಕೂಲ-ಅನನುಕೂಲಗಳನ್ನಷ್ಟೇ ಮೊದಲು ನೋಡಿಕೊಂಡು, ಬಂದವರಿಗೆ ನೇರವಾಗಿ, 'ನಮ್ಮ ಮಕ್ಕಳ ಪರೀಕ್ಷೆಯ ಸಮಯದಲ್ಲಿ ನೀವು ನಮ್ಮ ಮನೆಗೆ ಬರಲೇಬೇಡಿ. ಬೇರೆಲ್ಲಾದರೂ ಹೋಗಿ. ಎಲ್ಲೂ ಇಲ್ಲವಾದರೆ ಹೋಟೆಲಲ್ಲಿ ರೂಮ್ ಮಾಡಿಕೊಂಡಿರಿ. ಇಲ್ಲಿ ಬರಬೇಡಿ' ಎಂದವರಿದ್ದಾರೆ. ಪರೀಕ್ಷೆಯ ಸಮಯವಾದರೆ ತಮ್ಮಷ್ಟಕ್ಕೆ ತಾವು ಓದಿಕೊಂಡಿರಬೇಕಾದ ಪ್ರೌಢತೆ ಮಕ್ಕಳಿಗಿಲ್ಲ, ಮಕ್ಕಳನ್ನು ಅಷ್ಟು ಪ್ರೌಢರಾಗಿ ಬೆಳೆಸುವ ಜವಾಬ್ದಾರಿ ಹೆತ್ತವರಿಗಿಲ್ಲ. ಮಕ್ಕಳನ್ನು ತಮ್ಮ ಕಿರುಬೆರಳ ಗಂಟಿಗೆ ನೇತುಹಾಕಿಕೊಂಡು ಬಾಳುತ್ತಿರುವ ಈಗಿನ 'ಬುದ್ಧಿವಂತ, ವಿದ್ಯಾವಂತ' ಹೆತ್ತವರನ್ನು ಕಾಣುವಾಗ ಅಯ್ಯೋ ಅನಿಸುತ್ತದೆ.

ನಾನು ಹತ್ತನೇ ತರಗತಿಯಲ್ಲಿದ್ದಾಗ ನಮ್ಮಮ್ಮನ ಕೊನೆಯ ತಮ್ಮನಿಗೆ ಮದುವೆ ನಿಗದಿಯಾಗಿತ್ತು. ಮಾರ್ಚ್ ದ್ವಿತೀಯಾರ್ಧದಲ್ಲಿ ಮದುವೆ. ಏಪ್ರಿಲ್ ಮೊದಲ ವಾರದಲ್ಲಿ ಎಸ್ಸೆಸ್ಸೆಲ್ಸಿ ಪರೀಕ್ಷೆ. ಅಮ್ಮ ಮಾರ್ಚ್ ಮೊದಲ ವಾರದಲ್ಲೇ ತಮ್ಮ ತೌರಿಗೆ ಹೋಗಿದ್ದರು, ತಮ್ಮ ತಾಯಿ, ಅಣ್ಣ-ಅತ್ತಿಗೆಯರಿಗೆ ಸಹಾಯ ಮಾಡಲು. ನಮ್ಮನೆಯಲ್ಲಿ ಅಪ್ಪ ಮತ್ತು ಇಬ್ಬರು ತಮ್ಮಂದಿರಿಗೆ ಅಡುಗೆ ಮಾಡಿ (ಅವರು ಮೂವರೂ 'ಗಂಡಸರು', ಅಡುಗೆಮನೆಯತ್ತ ಇಣುಕಿಯೂ ನೋಡುತ್ತಿರಲಿಲ್ಲ), ಬೇರೆಲ್ಲ ಸುತ್ತು ಕೆಲಸ (ನಮ್ಮ ನಾಲ್ವರ ಬಟ್ಟೆ-ಪಾತ್ರೆಗಳ ಸ್ವಚ್ಛತೆ, ಮನೆಯ ಸ್ವಚ್ಛತೆ)ಗಳನ್ನೂ ಮಾಡಿಕೊಂಡು, ಆಗಷ್ಟೇ ನೆಟ್ಟು ಬೆಳೆಸುತ್ತಿದ್ದ ಹೂದೋಟಕ್ಕೆ ನೀರುಣಿಸಿಕೊಂಡು, ಪರೀಕ್ಷಾ ತಯಾರಿ ನಡೆಸಿದ್ದೆ. ಯಾರೂ ಅದನ್ನು ದೊಡ್ಡ ವಿಷಯವಾಗಿ ಪರಿಗಣಿಸಿರಲಿಲ್ಲ. ಅಮ್ಮ ಅವರ ಕರ್ತವ್ಯ ಮಾಡಿದ್ದರು, ಆ ಮನೆಮಗಳಾಗಿ; ನಾನು ನನ್ನ ಕರ್ತವ್ಯ ಮಾಡಿದ್ದೆ, ಈ ಮನೆಮಗಳಾಗಿ. ಅಷ್ಟೇ ಅದು. ಇದ್ಯಾವತ್ತಿಗೂ 'ಜ್ಯೋತಿ ಮಾಡಿದ ತ್ಯಾಗ'ವಾಗಿ ಪಟ್ಟ ಪಡೆಯಲಿಲ್ಲ. ಅದರ ಅಗತ್ಯವೂ ಇಲ್ಲ.

ಎಷ್ಟೆಷ್ಟೋ ಬಾರಿ ಈಗಾಗಲೇ ಮಾತಾಡಿ-ಆಡಿ ಹಳಸಲಾಗಿ ಹೋಗಿರುವ ಮತ್ತೊಂದು ವಿಷಯ: ಪತ್ರಲೇಖನ. 'ವಾವೆ ವರಸೆಗಳ' ಇನ್ನೊಂದು ಮಗ್ಗುಲನ್ನು ಈ ಪತ್ರಗಳಲ್ಲಿ ಕಾಣಬಹುದಾಗಿತ್ತು. ಒಂದು ಮನೆಯಿಂದ ಇನ್ನೊಂದು ಮನೆಗೆ ಪತ್ರವೊಂದು ಹೋಯಿತೆಂದರೆ ಅದು ಎರಡೂ ಮನೆಗಳ ಎಲ್ಲರನ್ನೂ ತಲುಪಿಯೇ ತಲುಪುತ್ತದೆ, ಅದರಲ್ಲೂ ಹಿರಿಯರೆಲ್ಲರನ್ನಂತೂ ಒಳಗೊಳ್ಳುತ್ತದೆ. "ತೀರ್ಥರೂಪ ಸಮಾನರಾದ... (ತೀ.ಸ.)" ಅಥವಾ ಅಪರೂಪಕ್ಕೆಂಬಂತೆ "ಮಾತೃಶ್ರೀ ಸಮಾನರಾದ... (ಮಾ.ಸ.)" ಎಂದೇ ಆರಂಭವಾಗುವ ದೀರ್ಘ ಅಂತರ್ದೇಶೀಯ ಪತ್ರ ಅಥವಾ ಪುಟ್ಟ ಕಾರ್ಡ್- ಹಿರಿಯರಿಗೆ

ವಂದಿಸುತ್ತ ಆರಂಭವಾಗಿ, ಈ ಮನೆಯ ಎಲ್ಲರ ಕ್ಷೇಮ ಸಮಾಚಾರದೊಂದಿಗೆ ಮುಂದಡಿಯಿಟ್ಟು, ಅಲ್ಲಿಯ ಎಲ್ಲರ ಕ್ಷೇಮವನ್ನು ವಿಚಾರಿಸಿ, ಹಾರೈಸಿ, ಹೇಳಬೇಕಾದ ಮುಖ್ಯ ವಿಷಯವನ್ನು ಸಂಕ್ಷಿಪ್ತವಾಗಿ ಯಾ ಸುದೀರ್ಘವಾಗಿ ತಿಳಿಸಿ, ತದನಂತರ ಮತ್ತೊಮ್ಮೆ ಎಲ್ಲರಿಗೂ ನಮಸ್ಕಾರ ಮತ್ತು ಶುಭಾಶೀರ್ವಾದಗಳನ್ನು ಸಂವಹಿಸಿ ಮುಕ್ತಾಯಗೊಳ್ಳುತ್ತಿತ್ತು.

ಈಗೆಲ್ಲಿವೆ ಆ ಬಣ್ಣದಂಚೆಗಳು? ಅವು ಹೊತ್ತು ತರುತ್ತಿದ್ದ ಕನಸುಗಳು, ಸಂದೇಶಗಳು ಕಾಲನ ರೆಕ್ಕೆಯೊಳಗೆ ಹುದುಗಿಹೋಗಿವೆ. ಬದಲಾವಣೆ ಅನಿವಾರ್ಯ. ಆದರೆ, ಖೇದದ ಸಂಗತಿಯೆಂದರೆ, ಪತ್ರಲೇಖನ ಸಂಪ್ರದಾಯ ಕಡಿತಗೊಂಡದ್ದರ ಜೊತೆಗೆ ಮಾನವ ಸಂಬಂಧಗಳಲ್ಲಿನ ಒಂದು ಸೂಕ್ಷ್ಮ ನವಿರುತನವೂ ಕಳೆದುಹೋಗಿದೆ. ಪತ್ರಗಳಲ್ಲಿರುತ್ತಿದ್ದ ಸಾಂಪ್ರದಾಯಿಕತೆಯೊಳಗೂ ಹಣಕುತ್ತಿದ್ದ ಆತ್ಮೀಯತೆ, ಆಪ್ತತೆ ಈಗ ಮೆಸೇಜ್ ಮತ್ತು ಮಿಂಚಂಚೆಗಳಲ್ಲಿಲ್ಲ; ಅಥವಾ, ಈ ಮೆಸೇಜುಗಳಲ್ಲಿಯೂ ಆ ಆಪ್ತತೆಯನ್ನೂ ಬೆರೆಸಿ ಹೆಣೆದು ಪತ್ರ ಬರೆಯುವ ವ್ಯವಧಾನ ನಮಗ್ಯಾರಿಗೂ ಇಲ್ಲವಾಗಿದೆಯೇ? ಧಾವಂತದ ಆಧುನಿಕ ಬದುಕು ನಮ್ಮನ್ನು ರೋಬೋಗಳಾಗಿಸಿದೆಯೇ? ಎಲ್ಲವೂ ಎಷ್ಟು ವ್ಯಾವಹಾರಿಕವೆಂದರೆ, ಯಾರೋ ಹೊಸಬರಿಗೆ ಯಾವುದೋ ಕಾರ್ಯಾರ್ಥ ಒಂದು ಸಂದೇಶ ಬರೆಯುವಾಗಲೋ ಮಿಂಚಂಚೆ ಕಳುಹಿಸುವಾಗಲೋ ನಮ್ಮ ಪರಿಚಯ ಹೇಳಿಕೊಳ್ಳುವುದಿಲ್ಲ ಎಂದಾದರೆ ಎಲ್ಲಿ ಕಳೆದುಹೋಗುತ್ತಿದ್ದೇವೆ ನಾವು? ಗಣಕಪರದೆಯ ಹಿಂದಿನ ಮುಖಕ್ಕೆ ಪರಿಚಯದ ಹಂಗೇನು, ಅಂತಲೇ? ವ್ಯವಹಾರ ವೈಯುಕ್ತಿಕವಾಗಬಾರದೆಂದೆ? ಇವ್ಯಾವುವೂ ಒಳ್ಳೆಯ ಕಾರಣಗಳೇ ಅಲ್ಲ. ಪರಿಚಯಿಸಿಕೊಳ್ಳಬೇಕೆಂಬ ಮೂಲಭೂತ ಸೌಜನ್ಯವೂ ಇಲ್ಲದವರಾಗುತ್ತಿದ್ದೇವೆಯೇ ನಾವು, ಮಾನವರು?

'ಮಾನವ' ಎಂದಾಕ್ಷಣ ಅದು ಪದ ಮಾತ್ರವಲ್ಲ, ಅಲ್ಲೊಂದು ಭಾವವಿದೆ; ಅದೊಂದು ಚಿತ್ರವನ್ನು ಕಟ್ಟಿಕೊಡುತ್ತದೆ. ಆ ಚಿತ್ರವೂ ಕಾಲದಿಂದ ಕಾಲಕ್ಕೆ ಬದಲಾಗುತ್ತಿದೆ. ಸತ್ಯಯುಗ, ತ್ರೇತಾಯುಗ, ದ್ವಾಪರಯುಗ, ಕಲಿಯುಗ– ಎಂದು ಭಾರತದಲ್ಲಿ ಕಾಲವನ್ನು ವಿಂಗಡಿಸಿ, ಆಯಾಯ ಕಾಲದಲ್ಲಿ, 'ಮಾನವ'ರ ಗುಣವಿಶೇಷಗಳನ್ನು 'ಯುಗಧರ್ಮ'ವಾಗಿ ಗುರುತಿಸುವುದು ಸಾಮಾನ್ಯವಾಗಿತ್ತು. ಆ ಹಿನ್ನೆಲೆಯಲ್ಲಿ ಈಗ ಚಾಲ್ತಿಯಲ್ಲಿರುವುದು 'ಘೋರ ಕಲಿಯುಗ'. ಯುಗಧರ್ಮಕ್ಕನುಗುಣವಾಗಿ, ಈಗಿನ ಜನರಲ್ಲಿ 'ಮಾನವೀಯತೆ' ಕಡಿಮೆ; ಸೌಜನ್ಯ, ಸೌಹಾರ್ದತೆ, ಪ್ರೀತಿ, ಭಕ್ತಿ, ಅನುಕಂಪ, ಕರುಣೆ, ಗೌರವ, ವಿಶ್ವಾಸ ಮುಂತಾದ ಹಾರ್ದಿಕ ವಿಚಾರಗಳಿಗೆ ಮಹತ್ತ್ವ ಇಳಿಮುಖವಾಗಿದೆ. ನನ್ನ ಬಾಲ್ಯದಲ್ಲಿ– ನಲುವತ್ತು ವರುಷ ಹಿಂದೆ– ನಮ್ಮಜ್ಜಿ ಹೇಳುತ್ತಿದ್ದರು: 'ಕಲಿಯುಗ ಮುಗಿಯುತ್ತಾ ಬಂದಿದೆ ಅನ್ನುವುದಕ್ಕೆ ನಿದರ್ಶನಗಳು ಈಗಾಗಲೇ ಕಾಣುತ್ತಿವೆ. ಮನುಷ್ಯ ನಿರ್ದಾಕ್ಷಿಣ್ಯನಾಗುತ್ತಿದ್ದಾನೆ, ಅವನು ಸಂಪೂರ್ಣ ಕಟುಕನಾದಾಗ ಯುಗ ಮುಗಿಯುತ್ತದೆ. ಬೆಣ್ಣೆ ಮಜ್ಜಿಗೆಯಲ್ಲಿ ಮುಳುಗುತ್ತಿದೆ, ಪೂರ್ತಿ ಮುಳುಗಿದಾಗ ಪ್ರಳಯವಾಗುತ್ತದೆ. ಮನುಷ್ಯರ ಎತ್ತರ ಕುಗ್ಗುತ್ತಿದೆ,

ತುಂಬೇ ಗಿಡಕ್ಕೆ ಏಣಿಯಿಟ್ಟು ಹತ್ತಬೇಕಾದಷ್ಟು ಪುಟ್ಟದಾದಾಗ ಪ್ರಪಂಚ ಮುಳುಗುತ್ತದೆ. ಗುಲಗುಂಜಿಯ ಕಪ್ಪು ಚುಕ್ಕಿ ಮಾಸುತ್ತಿದೆ, ಅದು ಸಂಪೂರ್ಣ ಅಳಿಸಿಹೋದಾಗ ಭೂಮಿ ಜಲಾವೃತವಾಗುತ್ತದೆ. ಇದನ್ನೆಲ್ಲ ನೋಡ್ಲಿಕ್ಕೆ ನಾನು-ನೀನು ಇರುವುದಿಲ್ಲ. ಇರುವವರಿಗೆ ಇದೆಲ್ಲ ತಿಳಿಯುವುದಿಲ್ಲ.' ಮನುಷ್ಯನ ನಿರ್ದಾಕ್ಷಿಣ್ಯ ಸ್ವಭಾವವೊಂದೇ ಮಾನದಂಡ ಆಗುವುದಾದರೆ, ಬಹುಶಃ ಜಗತ್ತು ಬಹಳ ಕಾಲ ಇರಲಾರದೇನೋ ಅನ್ನಿಸುತ್ತದೆ. ಉಳಿದ ಮಾನದಂಡಗಳು ಘಟಿಸಲು ಸಾವಿರಾರು ಸಹಸ್ರ ವರ್ಷಕಾಲ ಬೇಕಾದೀತು.

ಮೊದಲೆಲ್ಲ, ಊರಿನಲ್ಲಿ ಯಾರೋ ಏನೋ ತೊಂದರೆಗೊಳಗಾದರೆ ಸಾಧಾರಣವಾಗಿ ಇಡೀ ಊರೇ ಅವರ ಸಹಾಯಕ್ಕೆ ಜೊತೆಗೂಡುತ್ತಿತ್ತು. ಒಬ್ಬರ ಮನೆಯಲ್ಲಿ ಯಾರಿಗಾದರೂ ಅನಾರೋಗ್ಯವಾಗಿ ಆಸ್ಪತ್ರೆಗೆ ಸೇರಿಸಿದ್ದಾರೆಂದರೆ ಊರಿನ ಕೆಲವರಾದರೂ ಆಸ್ಪತ್ರೆಗೆ ಊಟೋಪಚಾರಗಳ ಸರಬರಾಜು ಮಾಡುತ್ತಿದ್ದರು. ಆಸ್ಪತ್ರೆಯಲ್ಲಿ ರಾತ್ರೆಗೋ ಹಗಲಿಗೋ ಉಳಿಯಲು ಮುಂದಾಗುತ್ತಿದ್ದರು. ಮನೆಯಲ್ಲಿರುವವರಿಗೇನಾದರೂ ಸಹಾಯಗಳು ಬೇಕಾದಲ್ಲಿ ನೋಡಿಕೊಳ್ಳುತ್ತಿದ್ದರು. ಆ ಮನೆಯವರಿಗೆ ಆಗುತ್ತಿರುವ ಅನನುಕೂಲಗಳನ್ನು ಆದಷ್ಟು ಮಟ್ಟಿಗೆ ತಗ್ಗಿಸಲು ಸರ್ವಪ್ರಯತ್ನಗಳು ನಡೆಯುತ್ತಿದ್ದವು. ಆ ಆಪ್ತತೆ, ಸೌಹಾರ್ದ ಈಗಿಲ್ಲ. ತಮ್ಮ ಕಷ್ಟಸಮಯದಲ್ಲಿ ಮೊತ್ತ ಮೊದಲಾಗಿ ಒದಗುವವರು ತಮ್ಮ ನೆರೆಹೊರೆಯವರು, ಸಂಬಂಧಿಕರು ಆಮೇಲೆ ಬರುವವರು ಎನ್ನುವ ಅರಿವು ಕಾಣುತ್ತಿಲ್ಲ. ಸ್ವಾರ್ಥಕೋಟೆಯ ಗೋಡೆ ಬಹಳವೇ ಎತ್ತರವಿದೆ.

ಸಣ್ಣ ನಿದರ್ಶನವಾಗಿ ಇತ್ತೀಚೆಗೆ ನನ್ನ ಪರಿಚಿತರೊಬ್ಬರು ಹೇಳಿದ ಒಂದು ಘಟನೆ ಇಲ್ಲಿ ಪ್ರಸ್ತಾಪಿಸಬೇಕು. ಅವರೂರಿನ ಹಳ್ಳಿಮನೆಯ ಪಕ್ಕದ ಮನೆಮಗಳ ಹೆರಿಗೆಯಾಗಿದೆ. ಬಾಣಂತಿಗೆ ನಮ್ಮ ಕರಾವಳಿಯ ಹಲವು ಮನೆಗಳಲ್ಲಿ ಬಾಳೆಹೂವಿನ ಒಂದು ಬಗೆಯ ಗಟ್ಟಿಚಟ್ನಿ ಮಾಡುವ ಕ್ರಮವಿದೆ; ಹೆರಿಗೆಯಾಗಿ ಹನ್ನೆರಡು ದಿನಗಳ ಅನಂತರ, ಕೆಲವಾರು ದಿನ ಬಾಣಂತಿಯು ಆ ಚಟ್ನಿಯಲ್ಲಿ ಊಟ ಮಾಡಿದರೆ ಆರೋಗ್ಯಕ್ಕೆ ಒಳ್ಳೆಯದು ಎನ್ನುತ್ತಾರೆ. ಆ ಹಳ್ಳಿಯ ತುಂಬ ಮಂಗಗಳ ಕಾಟದಿಂದಾಗಿ ಬಾಳೆ ಹಣ್ಣು-ಬಾಳೆ ಕಾಯಿ-ಬಾಳೆ ಹೂ ಇರಲಿ, ಒಂದೇ ಒಂದು ಮನೆಯಲ್ಲೂ ಬಾಳೆಯ ಗಿಡಗಳೂ ಇಲ್ಲ. ಹಾಗಾಗಿ ಅವರು ಪೇಟೆಯಲ್ಲಿ ತಮ್ಮ ನೆರೆಮನೆಯ ಬಾಳೆಗಿಡದಲ್ಲಿದ್ದ ಹೂವನ್ನು ನೋಡಿ ಅವರಲ್ಲಿ, 'ಬಾಣಂತಿಗೆ ಪಥ್ಯದಡುಗೆಗೆ ಇದನ್ನು ಕೊಡಬಹುದಾ' ಎಂದು ಸೌಮ್ಯವಾಗಿ ಕೇಳಿಕೊಂಡಿದ್ದಾರೆ. ಈ 'ಪೇಟೆ ಜನ' ನಿರ್ದಾಕ್ಷಿಣ್ಯವಾಗಿ, 'ಅಂಗಡಿಯಲ್ಲಿ ಬೇಕಾದಷ್ಟು ಸಿಗುತ್ತದೆ; ಇಲ್ಲವಾದರೆ ತರಿಸಿ ಕೊಡುತ್ತಾರೆ, ಅಲ್ಲಿ ಕೇಳಿ' ಎಂದುಬಿಟ್ಟಾಗ ಇವರೂ ಪಟ್ಟು ಬಿಡದೆ, 'ಇದು ಬಾಣಂತಿಯಡುಗೆಗೆ ಬೇಕಾದುದರಿಂದ ಅಂಗಡಿಯಿಂದ ತರಲಾಗದು, ಅದಕ್ಕೆ ರಾಸಾಯನಿಕಗಳನ್ನು ಸಿಂಪಡಿಸಿರಬಹುದು. ಮನೆಯ ತೋಟದ್ದಾದರೆ ಒಳಿತು' ಎಂದರು; ಅಷ್ಟೇ ಹೇಳಿ, ಆ ಅವರು ಮುಂದಿನ ಉತ್ತರ ಕೊಡುವುದಕ್ಕೆ ಅವಕಾಶ ನೀಡದೆ ಅಲ್ಲಿಂದೆದ್ದು ಬಂದಿದ್ದರು. ಇದೊಂದು ಸಣ್ಣ ಉದಾಹರಣೆಯಷ್ಟೇ. ಇಂತಹವು

ಆಧುನಿಕ ಬದುಕನ್ನು ಅಪ್ಪಿಕೊಂಡ 'ಪೇಟೆ'ಗಳಲ್ಲಿ ನಡೆಯುತ್ತಲೇ ಇರುತ್ತವೆ. ಪುಟ್ಟ ಊರು ಉಡುಪಿ-ಕಾರ್ಕಳಗಳಲ್ಲೇ ಹೀಗಾದರೆ ಮಂಗಳೂರು-ಬೆಂಗಳೂರುಗಳ ಕಥೆ ಬೇರೆ ಹೇಳಬೇಕಿಲ್ಲ.

ಇದಕ್ಕೆ ತದ್ವಿರುದ್ಧವಾದ ಪ್ರಸಂಗವೊಂದಿದೆ. ಒಂದು ಪುಟ್ಟ ಕುಟುಂಬದಲ್ಲಿ ಹಿರಿಯ ದಂಪತಿ ತಮ್ಮ ಮಗ, ಸೊಸೆ ಮತ್ತೆರಡು ಮೊಮ್ಮಕ್ಕಳ ಜೊತೆ ಬಾಳುತ್ತಿದ್ದಾರೆ. ಹಿರಿಯಮ್ಮನಿಗೆ ಒಂದು ಮುಂಜಾನೆ ಏನೋ ಅಸ್ವಸ್ಥತೆಯಾಗಿ ಪಡಸಾಲೆಯಿಂದ ಊಟದಮನೆಗೆ ಹೋಗುತ್ತಿದ್ದವರು ಹಾಗೇ ಬಿದ್ದುಬಿಟ್ಟಿದ್ದಾರೆ. ಮಗ-ಸೊಸೆ ಅವರನ್ನು ಉಪಚರಿಸುತ್ತಿದ್ದಾಗ ಮನೆಯ ಪುಟ್ಟ ಮರಿ ಎದ್ದು ಬಂದಿದೆ. ಶಾಲೆಗೆ ಹೊರಡುವ ತಯಾರಿ ಮಾಡಬೇಕಿದ್ದ ಮರಿಗೆ ತನ್ನಜ್ಜಿಯ ಈ ಸ್ಥಿತಿ ಕಂಡು ಗಾಬರಿಯಾಗಿ 'ಹೋ...' ಎಂದು ದನಿಯೆತ್ತಿ ಅಳಹತ್ತಿದೆ. ಅಮ್ಮನನ್ನು ಉಪಚರಿಸುತ್ತಿದ್ದ ಮಗ ಏನೋ ಸಮಾಧಾನ ಹೇಳಿದ. ಸಾಕಾಗಲಿಲ್ಲ. ಮರಿಯ ಅಮ್ಮ ಹತ್ತಿರ ಬಂದು ಸಂತೈಸಿದಳು. 'ಅಜ್ಜಿಗೇನೂ ಆಗಿಲ್ಲ. ಏನೋ ಸ್ವಲ್ಪ ಸುಸ್ತಾಗಿ ಬಿದ್ದಿದ್ದಾರೆ. ಈಗ ಸರಿಯಾಗ್ತಾರೆ. ನೀನು ಶಾಲೆಗೆ ಹೊರಡು, ಬಾ' ಎಂದರೆ, ಮರಿ ಮತ್ತಷ್ಟು ದನಿಯೆತ್ತಿ, "ಅಜ್ಜಿ ಸುಸ್ತಾಗಿ ಬಿದ್ದರೆ ನಾವೆಲ್ಲ ಇದ್ದೇವೆ. ಅಜ್ಜ ಇದ್ದಾರೆ. ನಾಳೆ ನಾವಿಬ್ಬರೂ ದೊಡ್ಡದಾದ ಮೇಲೆ ತುಂಬಾ ಕಲ್ತು ಕೆಲಸಕ್ಕೇಂತ ಬೇರೆ ಊರಿಗೆ ಹೋದ್ರೆ, ಮದುವೆಯಾಗಿ ಯಾವುದೋ ಊರಿಗೆ ಹೋದ್ರೆ, ನಿಮಗಿಬ್ಬರಿಗೆ ಯಾರಿರ್ತಾರೆ? ಅಮ್ಮ, ನೀವು ಬಿದ್ರೆ ಅಪ್ಪನಿಗೆ ಎತ್ತಲಿಕ್ಕೆ ಆಗ್ಲಿಕ್ಕಿಲ್ಲ. ಅಪ್ಪ ಬಿದ್ರೆ ನಿಮಗೆ ಎತ್ತಲಿಕ್ಕೆ ಆಗ್ಲಿಕ್ಕಿಲ್ಲ. ನಿಮಗೆ ಯಾರಿದ್ದಾರೆ ಉಪಚಾರ ಮಾಡ್ಲಿಕ್ಕೆ?" ಇದಿಷ್ಟನ್ನು ಬಿಕ್ಕಿ ಬಿಕ್ಕಿ ಹೇಳುತ್ತಿದ್ದ ಕೂಸಿಗೆ ಆಗಷ್ಟೇ ಹತ್ತು ವರ್ಷ ತುಂಬಿದ್ದು. ಈ ಅಪ್ಪ ಮಾತ್ರ ಇದನ್ನು ದೊಡ್ಡ ಜೋಕ್ ಎಂಬಂತೆ ಬಂದವರ ಹತ್ತಿರವೆಲ್ಲ ಆಡಿಕೊಂಡು ನಕ್ಕಿದ್ದೇ ನಕ್ಕಿದ್ದು. ಆ ಮಗುವಿಗಿದ್ದ ಸೂಕ್ಷ್ಮ ಮನಸ್ಸು, ತನ್ನ ಮನೆಯ ಪರಿಸ್ಥಿತಿಯನ್ನು ಊಹಿಸುವ ದೂರದೃಷ್ಟಿ ಆ ಮಧ್ಯವಯಸ್ಕನಿಗೇ ಇಲ್ಲವಾಗಿತ್ತು. ಅಪ್ಪನ ಕುಚೋದ್ಯದಿಂದ ನೊಂದ ಮಗು ಒಂದೆರಡು ದಿನ ಮಂಕಾಗಿತ್ತು. ಅಮ್ಮ ಆ ಕೂಸನ್ನು ನಾಜೂಕಾಗಿ ಸಂಭಾಳಿಸಿದಳು. ಅದು ಆ ಮಗುವಿನ ಅದೃಷ್ಟ.

'ಪಾವೆ-ವರಸೆ'ಗಳಿಂದ ಆರಂಭಿಸಿ ಮಾನವ ಸ್ವಭಾವದ ಒಂದೆರಡು ಮಗ್ಗುಲುಗಳನ್ನು ತಡಕಿದ್ದೇನೆ. ಮಾನವನೆದೆಯಿಂದ ಸತತ ಹರಿವ ಅಮೃತವಾಹಿನಿಯನ್ನು ಸವಿದುಂಡು ಬೆಳೆದವರೇ ನಾವುಗಳು, ವಾಹಿನಿಯ ಮುಂಹರಿವಿಗೆ ನಮ್ಮಿಂದಾದಷ್ಟು ಸಾಧನವಾದವರು. ಈಗೀಗಿನ ಪೀಳಿಗೆ ಅಂತಹ ಅಂತಃಕರಣವಿಹೀನ ಆಗುತ್ತಿದೆಯೇ? ಗಂಭೀರವಾದ ಪ್ರಶ್ನೆಯಿದು. ಇಲ್ಲ ಎಂದರೂ ಸಮಾಧಾನವಿಲ್ಲ. ಹೌದು ಎನ್ನಲೂ ನಮ್ಮ ಅಂತಃಕರಣ ಒಪ್ಪುತ್ತಿಲ್ಲ. ನಮ್ಮ ಹಿರಿಯರಷ್ಟು, ನಮ್ಮಷ್ಟು ಸಮಾಜಮುಖಿಗಳಲ್ಲ ನಮ್ಮ ಮುಂದಿನ ಯುವಪೀಳಿಗೆ ಅನ್ನುವುದಕ್ಕೆ ಪುರಾವೆಗಳು ಕಾಣುತ್ತಲೇ ಇವೆ. ಅದಕ್ಕೇ ನಮ್ಮ ಮನಸ್ಸು ಕಳವಳಗೊಳ್ಳುತ್ತದೆ. ಎಲ್ಲಿ, ಯಾವ ಹಂತದಲ್ಲಿ ಈ ಅಂತಃಕರಣದ ಅಮೃತವಾಹಿನಿ ಆವಿಯಾಗಿ ಹೋಗುತ್ತಿದೆ? ಅದಕ್ಕೆ ಕಾರಣರಾರು? ನಾವುಗಳೇ? ನಮ್ಮ ನೂತನ ವಿದ್ಯಾಪದ್ಧತಿಯೆ? ನಮ್ಮ

Genetics/Biotechnologyನ ಸಂಶೋಧನೆಗಳು ಜೀವಕೋಶಗಳ ಬಗ್ಗೆ ಆಳವಾದ ಅರಿವನ್ನು ಕೊಡುವುದರ ಜೊತೆಗೆ, ಜೀವಿಗಳ ದೇಹರಚನೆಯ ಸಂಪೂರ್ಣ ಜ್ಞಾನವನ್ನು ಒದಗಿಸಿದೆ. ಪ್ರಕೃತಿಯ ರಹಸ್ಯವೆಂದು ಭಾವಿಸಲಾಗಿದ್ದ ಜೀವ ಜಂತುಗಳ "ಸೃಷ್ಟಿ"ಯನ್ನು ಕುರಿತು ಸಂಪೂರ್ಣ ತಿಳುವಳಿಕೆಯನ್ನು ಕೊಟ್ಟಿದೆ. Gene Cloningನಿಂದ ಕೃತಕವಾಗಿ ಜೀವಿಗಳನ್ನು ಸೃಷ್ಟಿಸುವ ಮತ್ತು ಅವುಗಳ ಗುಣಗಳನ್ನು ನಿಖರವಾಗಿ ನಿರ್ಧರಿಸುವ ಮಟ್ಟಕ್ಕೆ ತಲುಪಿದ್ದೇವೆ. ಇದರ ಜೊತೆಗೆ ಅನೇಕ ರೀತಿಯ ಖಾಯಿಲೆಗಳ, ಮೆದುಳು, ಹೃದಯ, ಇತ್ಯಾದಿ ಸೂಕ್ಷ್ಮಾತಿಸೂಕ್ಷ್ಮ ಅಂಗಗಳ ರಚನೆಗಳ ಪರಿಪೂರ್ಣ ಕಲ್ಪನೆ ಹೊಂದಿದ್ದೇವೆ. ಈ ನಿಟ್ಟಿನಲ್ಲಿ ಜೈವಿಕ ತಂತ್ರಜ್ಞಾನದ (Biotechnology) ಕೊಡುಗೆ ಅಮೋಘವಾಗಿದ್ದು Laser, X-Ray, Radiation, Ultrasound ಮೊದಲಾದವುಗಳು ಮನುಷ್ಯನ ಆರೋಗ್ಯವನ್ನು ವೃದ್ಧಿಸಲು ಮತ್ತು ರೋಗ ನಿವಾರಿಸಲು ಅತ್ಯಂತ ಸಹಕಾರಿಯಾಗಿವೆ. Geneticsನ ಸಹಾಯದಿಂದ ಕೆಟ್ಟ Geneಗಳನ್ನು ನಿವಾರಿಸುವ ಮೂಲಕ ಮತ್ತು ಒಳ್ಳೆಯ Geneಗಳನ್ನು ಪೋಷಿಸುವ ಮೂಲಕ ಮನುಷ್ಯನ ಆರೋಗ್ಯವನ್ನು ಸುಧಾರಿಸುವುದರ ಜೊತೆಗೆ ಆಯುಷ್ಯವನ್ನೂ ವೃದ್ಧಿಸುವುದರಲ್ಲಿ ಯಶಸ್ವಿಯಾಗಿದ್ದೇವೆ. Geneticsನ ಸಂಶೋಧನೆಯ ಮೂಲಕ ಎಷ್ಟೋ ವರ್ಷಗಳ ಅನೇಕ ಕ್ರಿಮಿನಲ್ ಕೇಸುಗಳನ್ನು ನಿಖರವಾಗಿ ತೀರ್ಮಾನ ಮಾಡಲು ಸಹಕಾರಿಯಾಗಿದೆ.

Robotics ಮತ್ತು Artificial Intelligence ವಿಷಯದಲ್ಲಿ ಅನೇಕ ಅನ್ವೇಷಣೆಗಳು ಪ್ರಮುಖ ವಿಶ್ವವಿದ್ಯಾನಿಲಯ ಮತ್ತು ವೈಜ್ಞಾನಿಕ ಸಂಸ್ಥೆಗಳಲ್ಲಿ ನಿರಂತರವಾಗಿ ನಡೆಯುತ್ತಲೇ ಇವೆ. ನಮ್ಮ ಜೀವನದ ಮೇಲೆ ಮುಂದಿನ ವರ್ಷಗಳಲ್ಲಿ ಈ ಆವಿಷ್ಕಾರಗಳು ಪ್ರಭಾವ ಬೀರುವುದರಲ್ಲಿ ಸಂದೇಹವಿಲ್ಲ. ಮುಂದೇನು ಆಗಬಹುದು ಎಂದು ನಿಮ್ಮ ಊಹೆಗೇ ಬಿಡಲು ಒಂದೆರಡು ಉದಾಹರಣೆ ಕೊಡುತ್ತೇನೆ.

ಎರಡು ವರ್ಷಗಳ ಹಿಂದೆ ಒಂದು T.V. Documentaryಯಲ್ಲಿ ಮೆದುಳು ಶಕ್ತಿಯಿಂದ robo-armನ್ನು ನಿಯಂತ್ರಿಸುವ ಒಂದು ಅದ್ಭುತ ದೃಶ್ಯವನ್ನು ನೋಡಿ ರೋಮಾಂಚನವಾಯಿತು. ಅದರಲ್ಲಿ ಒಂದು ಮಹಿಳೆ ೧೩ ವರ್ಷಗಳ ಹಿಂದೆ ಒಂದು ಕಾರು ಅಪಘಾತದಲ್ಲಿ ಮೆದುಳುಬಳ್ಳಿಗೆ ಆಘಾತವಾಗಿ ದೇಹದ ಅಂಗಾಂಗಗಳ ನಿಯಂತ್ರಣ ಕಳೆದುಕೊಂಡು ಪರಾಧೀನಳಾಗಿ ಹಾಸಿಗೆಯ ಮೇಲೆ ಮಲಗಿದ್ದಾಳೆ. ಅವಳ ಹಾಸಿಗೆಯ ಬಳಿಯಲ್ಲಿ ಒಂದು ರೊಬೊವಿನ ಕೈಯನ್ನು ಇರಿಸಲಾಗಿತ್ತು. ಪಕ್ಕದ ಟೇಬಲ್ ಮೇಲೆ ಒಂದೆರಡು ಲೋಟಗಳಲ್ಲಿ ವಿವಿಧ ಪಾನೀಯಗಳನ್ನು ಇರಿಸಲಾಗಿತ್ತು. ನಿಶ್ಚೇಷ್ಟಿತಳಾಗಿ ಮಲಗಿದ್ದ ಅವಳು ತನ್ನ ಮನಸ್ಸಿನ ಮೂಲಕ ಆ ಕೃತಕ ಕೈಯನ್ನು ನಿಯಂತ್ರಿಸಿ ತನಗೆ ಬೇಕಾದ ಪಾನೀಯವನ್ನು ತನ್ನ ಬಾಯಿಯ ಬಳಿಗೆ ಸೆಳೆದುಕೊಳ್ಳುತ್ತಾಳೆ.

ಕಳೆದ ಒಂದು ವರ್ಷದಿಂದ ನನ್ನ ಸ್ನೇಹಿತನೊಬ್ಬ Teslaದ self driving carನ್ನು ಉಪಯೋಗಿಸುತ್ತಿದ್ದಾನೆ. ಬೆಳಿಗ್ಗೆ ಮನೆಯಿಂದ ಹೊರಗೆ ಬಂದು ತನ್ನ ಕಾರಿಗೆ ಗ್ಯಾರೇಜಿನಿಂದ

ಹೊರಗೆ ಬರಲು ಆಣತಿಮಾಡುತ್ತಾನೆ. ಆ ಕಾರು ಗ್ಯಾರೇಜಿನಿಂದ ಹೊರಗೆ ಬಂದು ಅವನ ಮುಂದೆ ನಿಂತು ಬಾಗಿಲು ತೆರೆದುಕೊಳ್ಳುತ್ತದೆ. ಅವನು ಡ್ರೈವರ್ ಸೀಟಿನಲ್ಲಿ (ಇಲ್ಲಿನ ಕಾಯಿದೆಯಂತೆ) ಕುಳಿತು ಎಲ್ಲಿಗೆ ಹೋಗಬೇಕೆಂದು ಹೇಳುತ್ತಾನೆ. ಅದು ತನ್ನ ಪಾಡಿಗೆ ಡ್ರೈವ್ ಮಾಡಿಕೊಂಡು ಹೊರಡುತ್ತದೆ. ಅವನು ವೃತ್ತಪತ್ರಿಕೆ ಓದುವುದರಲ್ಲಿ ಅಥವಾ ಅವನ ಆಫೀಸ್ ಕೆಲಸದಲ್ಲಿ ನಿರತನಾಗುತ್ತಾನೆ. ಸುಮಾರು ೭೫ ಮೈಲು ದೂರ ಇರುವ ಆಫೀಸಿಗೆ ಅವನನ್ನು ಕ್ಷೇಮವಾಗಿ ಕರೆದೊಯ್ಯುತ್ತದೆ!

Amazonನ Alexa, Googleನ OK Google, Appleನ SIRI ಇತ್ಯಾದಿಗಳು Robotics ಮತ್ತು Artificial Intelligence ತಂತ್ರಜ್ಞಾನಗಳ ಬೆಳವಣಿಗೆಯನ್ನು ದೈನಂದಿನ ಜೀವನದಲ್ಲಿ ಅಳವಡಿಸಿಕೊಳ್ಳುತ್ತಿರುವುದನ್ನು ನೋಡಬಹುದು.

Artificial Intelligence ಕ್ಷೇತ್ರದಲ್ಲಿ ಕಳೆದ ಎರಡು-ಮೂರು ದಶಕಗಳಲ್ಲಿ ಅದ್ಭುತ ಪ್ರಗತಿಯನ್ನು ಸಾಧಿಸಲಾಗಿದೆ. ಮನುಷ್ಯನ ಆಲೋಚನಾಶಕ್ತಿಗೆ ಬೇಕಾದ ಮುಖ್ಯ ಸಾಮಗ್ರಿಗಳು ಎರಡು – ನೆನಪುಗಳ ಸಂಗ್ರಹ (MEMORY) ಮತ್ತು ಕ್ರಮಬದ್ಧ ವಿಚಾರ ಶಕ್ತಿ (LOGIC). ತಂತ್ರಜ್ಞಾನದ ಬೆಳವಣಿಗೆಯಿಂದ ಕಂಪೂಟರ್ ಮೆದುಳಿನಂತೆ ಕೆಲಸ ಮಾಡಲು ಶಕ್ತವಾಗಿದೆ. IBMನ Watson Computerನ ಸಾಮರ್ಥ್ಯವನ್ನು Chess, Jeopardy, Sports, Weather prediction, ಇತ್ಯಾದಿಗಳಲ್ಲಿ ಯಶಸ್ವಿಯಾಗಿ ಉಪಯೋಗಿಸಿಕೊಳ್ಳಲಾಗುತ್ತಿದೆ. Artificial Intelligence ಮತ್ತು Robotics ಈಗಾಗಲೇ ಹಲವಾರು ಕ್ಷೇತ್ರಗಳಲ್ಲಿ repetitive ಕೆಲಸಗಳನ್ನು ಸಮರ್ಥವಾಗಿ ಕೆಲಸ ಮಾಡುತ್ತಿವೆ.

**೪. ಬದಲಾವಣೆ – ಮುಂದೇನು?**

ಮನುಕುಲದ ಭವಿಷ್ಯವು ಕೆಳಕಂಡ ವಿಷಯಗಳಲ್ಲಿ ಆಗಲಿರುವ ವೈಜ್ಞಾನಿಕ ಸಂಶೋಧನೆಗಳ ಮೇಲೆ ಅವಲಂಬಿಸಿರುವುದಾಗಿ ವಿಜ್ಞಾನ ಜ್ಯೋತಿಷಿಗಳ ಸ್ಪಷ್ಟ ಅಭಿಮತ. ಮೇಲ್ನೋಟಕ್ಕೆ ಸಂಪೂರ್ಣವಾಗಿ ವಿಭಿನ್ನವಾದ ವಿಷಯವೆನಿಸಿದರೂ ಇವೆಲ್ಲವೂ ಒಂದಕ್ಕೊಂದು ಪೂರಕವಾಗುವ ಕಾಲ ಸನ್ನಿಹಿತವಾಗುತ್ತಿದೆ.

೧. Nanotechnology

೨. Genetics/Biotechnology

೩. Robotics ಮತ್ತು Artificial Intelligence

ಇಲ್ಲಿಯವರೆಗೆ ಆಗಿರುವ ವೈಜ್ಞಾನಿಕ ಮತ್ತು ತಂತ್ರಜ್ಞಾನದ ಸಂಶೋಧನೆ, ಪ್ರಗತಿ ಮತ್ತು ಪ್ರಗತಿಯ ವೇಗವನ್ನು ಗಮನದಲ್ಲಿಟ್ಟುಕೊಂಡು ವಿಜ್ಞಾನಿಗಳು ಹೇಳಿರುವ ಭವಿಷ್ಯವಾಣಿಯ ಪ್ರಕಾರ Artificial Intelligence ಮತ್ತು Geneticsನ ಸಮ್ಮಿಳನದಿಂದ ಮನುಕುಲ ಮತ್ತು ತಂತ್ರಜ್ಞಾನ ಸಮಾಗಮದ ಶಿಖರವನ್ನು ಬಹುಶಃ ಇನ್ನು ಐವತ್ತು ವರ್ಷಗಳಲ್ಲಿ ತಲುಪಬಹುದು.

ಈ ಸಮಾಗಮದ ಪ್ರತಿಫಲವೇ "ಅತಿಮಾನವ"ನ ಸೃಷ್ಟಿ. ಇದನ್ನು "ಏಕೀಕರಣ" (SINGULARITY – a point in space-time wherein laws of physics do not apply) ಎಂದೂ ಕರೆಯಬಹುದು. ಮಂಗನಿಂದ ಮಾನವನ ವಿಕಾಸಕ್ಕೆ ಮೂಲ ಕಾರಣ ಮೆದುಳಿನ ಬೆಳವಣಿಗೆ. ಈ ಬೆಳವಣಿಗೆಯು ಜೈವಿಕವಾದದ್ದು ಮತ್ತು ಈ ವಿಕಾಸಕ್ಕೆ ಹಲವಾರು ಮಿಲಿಯನ್ ವರ್ಷಗಳು ಬೇಕಾದವು. ಆದರೆ ಮಾನವನಿಂದ "ಅತಿಮಾನವನ ವಿಕಾಸಕ್ಕೆ ಕೆಲವೇ ದಶಕಗಳು ಸಾಕಾದೀತು. ಆದರೆ ಈ ಬದಲಾವಣೆಯೂ ಕೂಡ ಮೆದುಳಿನ ಬುದ್ಧಿಶಕ್ತಿಯಿಂದ ಉಂಟಾದರೂ ಅದು ಜೈವಿಕವಲ್ಲ. ಕೃತಕ ಮತ್ತು ಯಂತ್ರ ನಿರ್ಮಿತವಾದದ್ದು. ಏಕೀಕರಣದಿಂದ ಸೃಷ್ಟಿಸಲ್ಪಟ್ಟ "ಅತಿಮಾನವ"ನ ಬುದ್ಧಿಶಕ್ತಿ ಮಾನವ ಕೋಟಿಯ "ಸಮಷ್ಟಿ ಬುದ್ಧಿಶಕ್ತಿ" (Collective Intelligence)ಗಿಂತ ಸಾವಿರಪಾಲು ಮಿಗಿಲಾಗಿರುತ್ತದೆ. ಇದರ ಜ್ಞಾನ ಭಂಡಾರ ಅಪಾರ ಹಾಗೂ ಶಾಶ್ವತವಾದದ್ದು.

ಈ ಅತಿಮಾನವನ ಸೃಷ್ಟಿಗೆ ನಾನು ಮೇಲೆ ಪಟ್ಟಿ ಮಾಡಿರುವ ಎಲ್ಲ ಕ್ಷೇತ್ರಗಳಲ್ಲೂ ಇನ್ನೂ ಹೆಚ್ಚಿನ ಪ್ರಯೋಗಗಳು ಮತ್ತು ಪ್ರಗತಿ ಆಗಬೇಕು ಮತ್ತು ಅವುಗಳು ಒಂದಕ್ಕೊಂದು ಪೂರಕವಾಗಬೇಕು. ಅದಾಗಲು ಬಹುಶಃ ಇನ್ನೂ ಮೂರು–ನಾಲ್ಕು ದಶಕಗಳು ಬೇಕಾದೀತು. ಆದರೆ ಇವುಗಳ ಪ್ರಗತಿಯನ್ನು ನಾವು ಕಾಲಕ್ರಮೇಣ ನೋಡುತ್ತಾ ಹೋಗಬಹುದು. ನಮ್ಮ ಕಾಲದಲ್ಲಿ ಅಂದರೆ ಇನ್ನೆರಡು ದಶಕಗಳಲ್ಲಿ ಖಂಡಿತಾ ಇನ್ನೂ ಹೆಚ್ಚಿನ ಪ್ರಗತಿಯನ್ನು ನೋಡುತ್ತೇವೆಂಬ ನಂಬಿಕೆ ನನಗಿದೆ.

"ಅತಿಮಾನವ"ನ ಸೃಷ್ಟಿಯಾದ ನಂತರ ಮಾನವ ಜಾತಿಗಿಂತ ಸಂಪೂರ್ಣವಾಗಿ ಭಿನ್ನವಾದ "ಹೊಸ ಪ್ರಾಣಿ" (new species?)ಯ ಉದಯವಾದಂತಾಗುತ್ತದೆ. ಅಲ್ಲಿಂದ ಮುಂದೆ "ಅತಿಮಾನವನಿಗೆ" ಮಾನವನ ಅವಶ್ಯಕತೆ ಇರುವುದಿಲ್ಲ. ಅವುಗಳು ತಮ್ಮ ಭವಿಷ್ಯವನ್ನು ತಾವೇ ರೂಪಿಸಿಕೊಳ್ಳುತ್ತವೆ. ಬಹುಶಃ ಮನುಕುಲದ ಕಟ್ಟಕಡೆಯ ದೊಡ್ಡ ಅನ್ವೇಷಣೆ "ಅತಿಮಾನವ". ಇಲ್ಲಿಗೆ ಮಾನವ ಯುಗದ ಮುಕ್ತಾಯ ಮತ್ತು ಯಂತ್ರಮಾನವ ಯುಗದ ಆರಂಭವೆಂದು ಭಾವಿಸಬಹುದು. ಇದು ಕೆಲವು ಅತಿ ಬುದ್ಧಿವಂತರ ಹುಚ್ಚು ಊಹಾಪೋಹವೆಂದು ತಳ್ಳಿಹಾಕುವಂತಿಲ್ಲ. ಈವರೆಗೆ ಆಗಿರುವ ಪ್ರಗತಿಯನ್ನು ನೋಡಿದಲ್ಲಿ ಈ ಭವಿಷ್ಯವಾದದಲ್ಲಿ ಖಂಡಿತಾ ಹುರುಳಿದೆ. ಈ ಶಿಖರವನ್ನು ಸೇರಲು ಆಗಬೇಕಾದ ಸಂಶೋಧನೆಗಳು ಮತ್ತು ಅದರ ಮಾರ್ಗಸೂಚಿಯನ್ನು ಗಮನಿಸೋಣ.

Technologyಯ ಬೆಳವಣಿಗೆ ೧೯೦೦ರಿಂದ ಗಮನಿಸಿದಾಗ, ಪ್ರತಿ ಎರಡು ವರ್ಷಗಳಲ್ಲಿ ದ್ವಿಗುಣಿಸುತ್ತಿದೆ. ಅದರಲ್ಲೂ ಕಂಪ್ಯೂಟರ್‌ನ ಅನ್ವೇಷಣೆಯ ಅನಂತರ ಪ್ರಗತಿಯು ನಿಚ್ಚಳವಾಗಿ ಗೋಚರವಾಗುತ್ತಿದೆ. ಯುದ್ಧ, ಶಾಂತಿ, ರಿಸೆಶನ್ ಸಮಯಗಳ ಪರಿವಿಲ್ಲದೆ ತಾಂತ್ರಿಕ ಜ್ಞಾನ ಊರ್ಧ್ವಮುಖದಲ್ಲಿ ನಿರಂತರವಾಗಿ ಬೆಳೆಯುತ್ತಿದೆ. "ರೋಬೋಟಿಕ್ಸ್ ಟೆಕ್ನಾಲಜಿ" ಶೈಶವಾವಸ್ಥೆಯಲ್ಲಿದ್ದರೂ ಈಗಾಗಲೇ ೨೦೦೦ಕ್ಕೂ ಮಿಕ್ಕಿದ ರೋಬೋ ಯೋಧರು ಅಫ್ಘಾನಿಸ್ತಾನದ ಯುದ್ಧದಲ್ಲಿ ಮಾನವ ಸೈನಿಕರ ಜೊತೆಯಲ್ಲಿ

ಕಾದಾಡುತ್ತಿವೆ. ಕಂಪ್ಯೂಟರ್ ಚಾಲಿತ drone ವಿಮಾನಗಳು, ಕಾರುಗಳು ಈಗಾಗಲೇ ಚಾಲನೆಯಲ್ಲಿವೆ. IBMನ ಸೂಪರ್ ಕಂಪ್ಯೂಟರ್ ವಾಟ್ಸನ್ ಚೆಸ್ನ ವಿಶ್ವಚಾಂಪಿಯನ್ ಮತ್ತು Jeopardy ಚಾಂಪಿಯನ್ನಗಳನ್ನು ಸೋಲಿಸುವ ಮೂಲಕ ವಿಶ್ವದ 'ಅತಿ ಬುದ್ಧಿವಂತನೆಂದು ಗುರುತಿಸಲ್ಪಟ್ಟಿದೆ. ಮೆದುಳಿನ ಸಹಾಯದಿಂದ ರೋಬೋವನ್ನು ನಿಯಂತ್ರಿಸುವ ಜ್ಞಾನವನ್ನು ಸಂಪಾದಿಸಲ್ಪಟ್ಟಿದೆ. ಮಾನವರ ಸರ್ಜರಿಯಲ್ಲೂ ಕೂಡ ರೋಬೋವನ್ನು ಉಪಯೋಗಿಸಲಾಗುತ್ತಿದೆ. ಮುಂಬರುವ ವರ್ಷಗಳಲ್ಲಿ ತಂತ್ರಜ್ಞಾನದ ಪ್ರಗತಿ ಸಹಸ್ರಪಟ್ಟು ಮುನ್ನಡೆಯುವುದರಲ್ಲಿ ಯಾವ ಸಂಶಯವೂ ಇಲ್ಲ.

Geneticsನ್ನು ಕುರಿತು ಹೇಳುವುದಾದರೆ, ಮನುಷ್ಯನ ಮೆದುಳಿನ ಮೂಲ ತಂತುಗಳು ಡಿ.ಎನ್.ಎ.ಗಳು. ಈಗಾಗಲೇ ಒಂದು ಡಿ.ಎನ್.ಎ.ಯನ್ನು ಕಂಪ್ಯೂಟರಿನಲ್ಲಿಡುವ ಸ್ಥಿತಿಯನ್ನು ತಲುಪಿದ್ದೇವೆ. ೨೦೨೦ರ ವೇಳೆಗೆ ಒಂದು ಕಪ್ಪೆಯ ಮೆದುಳನ್ನು ಕಂಪ್ಯೂಟರಿನಲ್ಲಿರಿಸುವ ಸಾಮರ್ಥ್ಯವನ್ನು ಪಡೆದಿರುತ್ತೇವೆ. ಮನುಷ್ಯನ ಮೆದುಳನ್ನು ಕ್ರಿ.ಶ. ೨೦೩೦ರ ಹೊತ್ತಿಗೆ ಕಂಪ್ಯೂಟರಿನಲ್ಲಿರಿಸುವ ಸ್ಥಿತಿಯನ್ನು ತಲುಪುತ್ತೇವೆ. ಈ ಹಂತದಲ್ಲಿ ನಾವು ಮನುಷ್ಯವರ್ಗದ "ಬೌದ್ಧಿಕ ಅಮರತ್ವ"ವನ್ನು ಸಾಧಿಸಿದಂತಾಗುತ್ತದೆ. ಅಂದರೆ, ಒಬ್ಬ ಮನುಷ್ಯನ ಮೆದುಳನ್ನು ನಾವು ಕಂಪ್ಯೂಟರಿನಲ್ಲಿಟ್ಟ ಅನಂತರ, ಅದಕ್ಕೆಂದೂ ಕೊನೆ ಇರುವುದಿಲ್ಲ, ಮೆದುಳಿನಲ್ಲಿರುವ ನೆನಪುಗಳು, ಬುದ್ಧಿಶಕ್ತಿ, ವಿಚಾರ ಸಾಮರ್ಥ್ಯ, ಇತ್ಯಾದಿಗಳು ಸ್ಥಿರವಾಗಿ ನೆಲೆಸಿರುತ್ತವೆ.

ಭೌತಿಕ ದೇಹ ಅಳಿದರೂ, ಕಂಪ್ಯೂಟರಿನ ನೆರವಿನಿಂದ ಬೌದ್ಧಿಕ ಉಳಿವಿನ ಸಾಕ್ಷಾತ್ಕಾರವಾಗಬಹುದು. ಹಲವಾರು ನಾಯಕರು ಮಡಿದಾಗ ನಾವು ಕೇಳುವ ಸಾಮಾನ್ಯ ಉದ್ಗಾರ, "ಅವರ ಆತ್ಮ ಅಮರ. ಅವರ ಶರೀರ ನಮ್ಮ ಜೊತೆಗೆ ಇರದಿದ್ದರೂ ಅವರ ಆತ್ಮ ನಮ್ಮೊಂದಿಗೆ ಇರುತ್ತದೆ" ಎಂದು, ಈ ಉದ್ಗಾರ ಇನ್ನು ಕೆಲವೇ ದಶಕಗಳಲ್ಲಿ ಸಾಕಾರವಾಗಬಹುದು! ಈ ಹಂತದಲ್ಲಿ ಭೌತಿಕ ಶರೀರದ ನಾಶದ ನಂತರ, ರೋಬೋ ಮಾನವನ ರೂಪದಲ್ಲಿ, ಕೃತಕ ಮೆದುಳನ್ನಳವಡಿಸಿ ಶಾಶ್ವತವಾಗಿ ಕೃತಕ ದೇಹವನ್ನೂ ಕೂಡ ಇಟ್ಟುಕೊಳ್ಳಬಹುದು.

"ಅತಿಮಾನವ"ನ ಕಲ್ಪನೆ ಕೆಲವರಿಗೆ "ಹುಚ್ಚು" ಎನಿಸಬಹುದು. ಈ ಭವಿಷ್ಯತ್ತನ್ನು ನಂಬದಿದ್ದರೂ, ನಮ್ಮ ಭೂತಕಾಲ ಮತ್ತು ನಡೆಯುತ್ತಿರುವ ವರ್ತಮಾನವನ್ನು ನಂಬಲೇ ಬೇಕಲ್ಲವೆ? ಇದು ಸತ್ಯ ಮತ್ತು ಅದ್ಭುತವಲ್ಲದೆ ಮತ್ತೇನು? "ಅತಿಮಾನವ"ನ ಯುಗಕ್ಕೆ ಕಾಲಿರಿಸಿದ ಅನಂತರ "ಮಾನವ"ನ ಭವಿಷ್ಯವೇನು? ಅದು ಭಸ್ಮಾಸುರನಾಗಿ ಸೃಷ್ಟಿಕರ್ತನನ್ನೇ ನಾಶಮಾಡಬಹುದೇ? ಎನ್ನುವ ಪ್ರಶ್ನೆಗಳ ಉತ್ತರ ನಮ್ಮೆಲ್ಲರ ಊಹೆಗೆ ಬಿಟ್ಟಿದ್ದು ಅಲ್ಲವೆ?

ಈ ಎಲ್ಲಾ ವೈಜ್ಞಾನಿಕ ಬದಲಾವಣೆಗಳನ್ನು ನಿಖರವಾಗಿ ಇಷ್ಟು ವರ್ಷಗಳಲ್ಲಿ ಆಗುವುದೆಂದು ಹೇಳಲಾಗದಿದ್ದರೂ ನಾವು ಕಳೆದ ೫೦ ವರ್ಷಗಳಲ್ಲಿ ಆಗಿರುವ ಬದಲಾವಣೆಯನ್ನು ಗಮನಿಸಿದರೆ ಇದು ಅನಿವಾರ್ಯವೆಂದೆನಿಸುತ್ತದೆ. ಕೆಲವು ರಾಜಕೀಯ ಹಾಗೂ ಮತೀಯ ಮೂಢಭಾವನೆಗಳು

ಇವುಗಳನ್ನು ತಡೆಯುವ ಪ್ರಯತ್ನಿಸಿ ಬದಲಾವಣೆಯನ್ನು ನಿಧಾನಿಸಬಹುದಾದರೂ ನಿಲ್ಲಿಸಲಾಗುವುದಿಲ್ಲ ಎನ್ನುವುದು ನನ್ನ ದೃಢ ನಂಬಿಕೆ.

ನಿಮ್ಮ ಸುಲಭದ ಓದಿಗೆ ಈ ಲೇಖನದ ಸಾರವನ್ನು ಒಬ್ಬಾನೊಬ್ಬ ಕಾಲ್ಪನಿಕ ವ್ಯಕ್ತಿಯ ಕಥೆಯ ರೂಪದಲ್ಲಿ ಹೇಳಲು ಪ್ರಯತ್ನಿಸಿದ್ದೇನೆ.

**ಜೈವಿಕರಾಮನ ಕಥೆ (೧೯೭೪ – ೨೦೮೦)**

**೧೯೭೪** – ಕರ್ನಾಟಕ ರಾಜ್ಯದ ಶಿವಮೊಗ್ಗ ಪಟ್ಟಣದಲ್ಲಿ ಒಂದು ಮಧ್ಯಮವರ್ಗದ ಕುಟುಂಬದಲ್ಲಿ ಒಂದು ಗಂಡುಮಗುವಿನ ಜನನವಾಗುತ್ತದೆ. ಮಗುವಿನ ತಂದೆ ತಾಯಿಯುವರು ಅವನನ್ನು ಪ್ರೀತಿಯಿಂದ ಬೆಳೆಸುತ್ತಾರೆ ಮತ್ತು ಮಗುವಿಗೆ 'ಜೈವಿಕರಾಮ'ನೆಂದು ನಾಮಕರಣ ಮಾಡುತ್ತಾರೆ. ಜೈವಿಕರಾಮನ ಮೂರನೆಯ ವರ್ಷದ ಹುಟ್ಟಿದ ಹಬ್ಬಕ್ಕೆ ಅವನ ತಂದೆ ತಾಯಿ ಅವನನ್ನು ಬೆಂಗಳೂರು–ಮೈಸೂರು ಪ್ರವಾಸಕ್ಕೆಂದು ಕರೆದುಕೊಂಡು ಹೋಗಿ ಬಹಳ ಸಂತೋಷದಿಂದ ಕಾಲ ಕಳೆಯುತ್ತಾರೆ. ಅಲ್ಲಿ ಅವನಿಗೆ ಒಂದು ಆಟದ ಬೊಂಬೆಯನ್ನು ಕೊಡಿಸುತ್ತಾರೆ. ಅದೊಂದು ಪುಟ್ಟ ಯಂತ್ರ ಹುಡುಗನ ಬೊಂಬೆ. ಅದಕ್ಕೆ ಕೀಲು ಕೊಟ್ಟರೆ ಅದು ನಗುತ್ತಿತ್ತು, ನಡೆಯುತ್ತಿತ್ತು, ಒಂದೆರಡು ಮಾತನಾಡುತ್ತಿತ್ತು! ಜೈವಿಕರಾಮನಿಗೆ ಮುಂದೆ ಅದು ಅವನ ಇಷ್ಟವಾದ ಸಂಗಾತಿಯಾಯಿತು. ಆ ಬೊಂಬೆಗೆ ಅವನು 'ಕೃತಕರಾಮ'ನೆಂದು ಹೆಸರಿಟ್ಟಿದ್ದ!

**೨೦೦೨** – ಜೈವಿಕರಾಮ ತನ್ನ ಮಾಸ್ಟರ್ಸ್ ಮತ್ತು ಪಿಎಚ್.ಡಿ. ಪದವಿ ಮುಗಿಸಿ ಒಂದು ದೊಡ್ಡ ಅಂತರರಾಷ್ಟ್ರೀಯ ರೊಬೋಟಿಕ್ಸ್ ಸಂಸ್ಥೆಯ ಸಂಶೋಧನಾ ವಿಭಾಗದಲ್ಲಿ ವಿಜ್ಞಾನಿಯಾಗಿ ಕೆಲಸದಲ್ಲಿದ್ದಾನೆ. ಅವನೀಗ T.RAM-v28 ROBOT model ಮೇಲೆ ಕೆಲಸ ಮಾಡುತ್ತಿದ್ದಾನೆ. ತನ್ನ ಕಾಲೇಜ್ ಸಹಪಾಠಿಯಾಗಿದ್ದ ಜಾಕ್ವೆಲೀನ್ ಜೊತೆಗೆ ಅವನ ವಿವಾಹವೂ ಆಗಿ ಸಂತೋಷವಾಗಿದ್ದಾನೆ. ROBOTICS ಮತ್ತು Artifical IIntelligence (AI) ಅವನ ಇಷ್ಟವಾದ ವಿಷಯಗಳಾದ್ದರಿಂದ ಅವನು ತನ್ನ ಹೊಸ–ಹೊಸ ವಿಚಾರಗಳನ್ನು ಅಳವಡಿಸಿ ಎಲ್ಲರ ಮೆಚ್ಚುಗೆ ಗಳಿಸುತ್ತಾನೆ.

**೨೦೨೯** – ಜೈವಿಕರಾಮನ ೫೫ನೆಯ ಹುಟ್ಟುಹಬ್ಬವನ್ನು ಅವನ ಸಂಸ್ಥೆಯಲ್ಲಿ ಪ್ರೀತಿಯಿಂದ ಆಚರಿಸಿ ಅವನಿಗೆ ಒಂದು ಸರ್ಪ್ರೈಸ್ ಪ್ರೆಸೆಂಟ್ ಕೊಡುತ್ತಾರೆ! ವಿಶ್ವದಲ್ಲೇ ಮೊದಲ ಸ್ಥಾನದಲ್ಲಿರುವ ಆ ಸಂಸ್ಥೆಯ prime ROBOT product, ಆ ದಿನ ಅವನಿಗೆ T.RAM-v55 ROBOT modelನ DIRECTOR ಆಗಿ promotion ಸಿಗುತ್ತದೆ. ಅದೊಂದು ಅತ್ಯಂತ ಪ್ರತಿಷ್ಠಿತ ಪದವಿ. ವಿಶ್ವವಿಖ್ಯಾತವಾದ T.RAM ROBOT ಅತ್ಯಂತ ಜನಪ್ರಿಯ ರೊಬೋ ಮಾಡಲ್ ಆಗಿತ್ತು. ಈಗ ಅದರ ಭವಿಷ್ಯವನ್ನೇ ಅವನ ಕೈಗೆ ಕೊಡಲಾಗಿತ್ತು. ತಂತ್ರಜ್ಞಾನದ ಪ್ರಗತಿಯಿಂದ ರೊಬೊಟಿಕ್ಸ್‌ನಲ್ಲಿ ಇದೊಂದು ಸಂಧಿಕಾಲ ಮತ್ತು ದೊಡ್ಡ ಮೈಲುಗಲ್ಲಾಗುವ ಸಮಯ. ಜೈವಿಕರಾಮನಿಗೆ ತುಂಬಾ ಸಂತೋಷವಾಗಿತ್ತು.

**೨೦೩೫** – ಜೈವಿಕರಾಮನಿಗೆ ಸಾಹಿತ್ಯದಲ್ಲಿ ಬಹಳ ಆಸಕ್ತಿ ಇತ್ತು. ಅವಕಾಶ ಸಿಕ್ಕಾಗಲೆಲ್ಲಾ ಬರೆಯುವ ಹವ್ಯಾಸವಿತ್ತು. ಅವನ ವಿಚಾರಪೂರಿತ ಬರಹಗಳು ಬಹಳ ಚರ್ಚಾಸ್ಪದವಾಗಿರುತ್ತಿದ್ದವು. ಈ ವರ್ಷದ ಅಮೆರಿಕದ ಹದಿನೇಳನೆಯ ಕನ್ನಡ ಸಾಹಿತ್ಯ ಸಮ್ಮೇಳನದ ವಸಂತೋತ್ಸವಕ್ಕೆ ಜೈವಿಕರಾಮನನ್ನು ಮುಖ್ಯ ಅತಿಥಿಯಾಗಿ ಆಹ್ವಾನಿಸಲಾಗಿತ್ತು. ಸಮ್ಮೇಳನದ ವಿಷಯ 'ರೊಬೋ ಯುಗದಲ್ಲಿ ಸಾಹಿತ್ಯ'ವನ್ನು ಕುರಿತು ಜೈವಿಕರಾಮ ಮಾಡಿದ ಪಾಂಡಿತ್ಯಪೂರಿತ ಭಾಷಣ ಸಭಿಕರನ್ನು ದಂಗುಬಡಿಸಿತ್ತು. ಇದೇ ಸಮ್ಮೇಳನದ ಮತ್ತೊಂದು ಕಾರ್ಯಾಗಾರದಲ್ಲಿ ಗೂಗಲ್ ಸಂಸ್ಥೆಯ ಎರಡು ರೊಬೋಗಳು ನಡೆಸಿಕೊಟ್ಟ ಗೀತಚಿತ್ರದ ಅವಧಾನ ಕಾರ್ಯಕ್ರಮ ಅದ್ಭುತವಾಗಿತ್ತು. ಸಭಿಕರ ಸಲಹೆಯ ಮೇಲೆ ವಿಷಯವನ್ನು ಪಡೆದುಕೊಂಡ ರೊಬೋಗಳು – ಒಂದು ಚಿತ್ರವನ್ನೂ ಮತ್ತೊಂದು ಕವನವನ್ನು ಕ್ಷಣದಲ್ಲೇ ರಚಿಸಿ/ಚಿತ್ರಿಸಿ ಬರೆದು ಓದುವ/ ಪ್ರದರ್ಶಿಸುವ ಕಾರ್ಯಕ್ರಮ!

**೨೦೪೯** – ಜೈವಿಕರಾಮನ ೭೫ನೆಯ ಹುಟ್ಟು ಹಬ್ಬದ ದಿನ ಮತ್ತು ಅವನು ಕೆಲಸದಿಂದ ನಿವೃತ್ತನಾಗಲು ತೀರ್ಮಾನಿಸಿದ್ದಾನೆ. ೪೭ ವರ್ಷಗಳ ದೀರ್ಘ ಸೇವೆ ಮಾಡಿ T.RAM ROBOT productನ ೫೫ನೆಯ ಆವೃತ್ತಿಯಿಂದ ೭೫ನೆಯ ಆವೃತ್ತಿಯವರೆವಿಗೆ ಕಳೆದ ೨೦ ವರ್ಷಗಳಲ್ಲಿ ಸಂಪೂರ್ಣ ನಿರ್ವಹಣೆಯನ್ನು ಹೊತ್ತು ತಂತ್ರಜ್ಞಾನದ ಪ್ರಗತಿಯನ್ನು ಅಳವಡಿಸಿಕೊಂಡು ಕ್ರಾಂತಿಕಾರಿ ಬದಲಾವಣೆಗಳನ್ನು ತಂದು ವಿಶ್ವದ ಅತ್ಯದ್ಭುತ ಉತ್ಪಾದನೆಯ ನೇತಾರನೆಂದು ಗುರುತಿಸಲ್ಪಟ್ಟಿದ್ದಾನೆ. ಲೆಕ್ಕವಿಲ್ಲದಷ್ಟು ಸನ್ಮಾನ, ಪುರಸ್ಕಾರಗಳು ಸಂದಿವೆ. ೭೫ನೆಯ ಆವೃತ್ತಿಯ ಬಿಡುಗಡೆ ಶೀಘ್ರದಲ್ಲೇ ಆಗಲಿದ್ದು ಮಾನವ ಮತ್ತು ರೊಬೋ ಯುಗದಲ್ಲಿ ಇದೊಂದು ಸಂಧಿಕಾಲವೆಂದು ಅವನಿಗಾಗಲೇ ಅನಿಸಿದೆ. ಹಾಗೂ ತನ್ನ ಸೃಜನಶೀಲತೆಯ ಕೊನೆಯ ಹಂತವೆಂದು ಅರಿತಿದ್ದು ನಿವೃತ್ತನಾಗಲು ಸಜ್ಜಾಗಿದ್ದಾನೆ.

ಜೈವಿಕರಾಮನ ಸಂಸ್ಥೆಯು ತನ್ನ ಅಸಾಧಾರಣ ಬೆಳವಣಿಗೆಗೆ ಕಾರಣವಾದ T.RAM ROBOT productನ ಮೂಲಕ ಜೈವಿಕರಾಮನ ಕೊಡುಗೆಯ ಬೆಲೆ ಅರಿತಿದೆ. ಅದಕ್ಕೆ ಗೌರವ ಸೂಚಿಸಲು T.RAM-v75 ROBOT modelನ್ನು ಸರಣಿಯ ಕೊನೆಯ ಮಾಡಲ್ ಎಂದೂ ಮತ್ತು ಮುಂದಿನ ಸರಣಿಯ ಆರಂಭದ ಮಾಡಲ್ J.RAM v1 ಆಗಿರುವುದೆಂದು ಈಗಾಗಲೇ ಘೋಷಿಸಿದೆ. ಜೈವಿಕರಾಮನ ಉತ್ತರಾಧಿಕಾರಿ Director ಆಗಿ ಒಬ್ಬ ರೊಬೋವನ್ನು ನೇಮಿಸಲಾಯಿತು. ಆ ರೊಬೋವಿನ ಕೆಳಗೆ ಮತ್ತೆರಡು ರೊಬೋಗಳನ್ನು ಮತ್ತು ೪ ಮನುಷ್ಯರನ್ನು Deputy Directors ಎಂದೂ ನೇಮಿಸಲಾಯಿತು.

ಇದೇ ಸಂದರ್ಭದಲ್ಲಿ ಹಲವಾರು ಕ್ಷೇತ್ರಗಳಲ್ಲಿ ಆಗಿರುವ ಪ್ರಗತಿಯನ್ನು ನಿವೇದಿಸಲೇಬೇಕು.

ಭ್ರಷ್ಟಾಚಾರ ೮೦% ರಷ್ಟು ನಿವಾರಣೆಯಾಗಿದೆ. ಅತ್ಯಂತ ಭ್ರಷ್ಟ ಅಧಿಕಾರ ಕೇಂದ್ರಗಳಾದ ಆರಕ್ಷಣಾ ಕೇಂದ್ರಗಳು, ಕಂದಾಯ ಇಲಾಖೆ, ಅಬಕಾರಿ, ಮೂಲ ಸಂಪರ್ಕ ವ್ಯವಸ್ಥೆ, ಆರೋಗ್ಯ ಮತ್ತು ಸ್ವಚ್ಛತೆ ಇಲಾಖೆಗಳೆಲ್ಲಾ ರೊಬೋಗಳ ನಿಯಂತ್ರಣದಲ್ಲಿದ್ದು ಸಮರ್ಪಕವಾಗಿ ಕಾರ್ಯ ನಿರ್ವಹಿಸುತ್ತಲಿವೆ. ಕೊಲೆ, ಕಳ್ಳತನ, ದರೋಡೆಗಳನ್ನು ಸಂಪೂರ್ಣವಾಗಿ ನಿರ್ಮೂಲನ ಮಾಡಲಾಗಿದೆ. ಸಾಮಾನ್ಯ ಜನರು ಇದರಿಂದ ಹರ್ಷಚಿತ್ತರಾಗಿದ್ದಾರೆ.

ಪ್ರಕೃತಿ ವಿಕೋಪಗಳ ಹಾನಿಯನ್ನು ಬಹುಮಟ್ಟಿಗೆ ತಡೆಯಲಾಗಿದೆ.

ಪ್ರಕೃತಿಯ ಸಂಪನ್ಮೂಲಗಳನ್ನು ಮತ್ತು ಮೃಗ ಪಕ್ಷಿಗಳನ್ನು ಯಶಸ್ವಿಯಾಗಿ ಸಂರಕ್ಷಿಸಲಾಗುತ್ತಿದೆ.

ಜೈವಿಕರಾಮನ ನಿವೃತ್ತಿಯ ದಿನ ಅವನ ಸಂಸ್ಥೆಯವರು ಅವನಿಗೆ ಒಂದು Art Workನ್ನು present ಮಾಡುತ್ತಾರೆ. ಆ ವಿನೂತನ ಚಿತ್ರದ ಕೆಳಗೆ ೧೯೭೪–೨೦೫೦ರ time scale ಇರುತ್ತದೆ. ಚಿತ್ರವನ್ನು ನೇರವಾಗಿ ನೋಡಿದರೆ ಜೈವಿಕರಾಮ ಮತ್ತು ರೊಬೋ ಮಾನವ ಸಮ ಅಳತೆಯ ಚಿತ್ರದಂತೆ ತೋರುತ್ತಾರೆ. ಆದರೆ ಎಡಭಾಗದಿಂದ ನೋಡಿದರೆ ಜೈವಿಕರಾಮನು ದೊಡ್ಡದಾಗಿಯೂ, ರೊಬೋ ಮಾನವನು ಪುಟ್ಟದಾಗಿಯೂ ಕಾಣಿಸುತ್ತಾರೆ. ಅದೇ ಚಿತ್ರಪಟವನ್ನು ಬಲಭಾಗದಿಂದ ಅಂದರೆ ೨೦೫೦ರ ಕಡೆಯಿಂದ ನೋಡಿದರೆ ಜೈವಿಕರಾಮನು ಪುಟ್ಟದಾಗಿಯೂ ಮತ್ತು ಅವನ ಪಕ್ಕದಲ್ಲಿದ್ದ ರೊಬೋ ಮಾನವ, ಅತಿ ಮಾನವನಂತೆ ದೊಡ್ಡದಾಗಿ ಕಾಣಿಸುತ್ತಾರೆ! ಇದು ಒಂದು ರೀತಿ time scaleನಲ್ಲಿ ಎಡದಿಂದ ಬಲಕ್ಕೆ ಮಾನವನಿಂದ ಅತಿಮಾನವನಿಗೆ ಅಧಿಕಾರವು ಹಸ್ತಾಂತರವಾದಂತೆ ತೋರುತ್ತದೆ!

**೨೦೭೪** – ಜೈವಿಕರಾಮನಿಗೀಗ ೧೦೦ ವರ್ಷಗಳು. ಅವನ ಹುಟ್ಟುಹಬ್ಬವನ್ನು ಬಹಳ ಸಂಭ್ರಮದಿಂದ ಆಚರಿಸಲಾಗುತ್ತಿದೆ. ಅವನ ಪತ್ನಿ ಬಳಿಯಲ್ಲಿಯೇ ಇದ್ದಾಳೆ. ಮಕ್ಕಳು, ಮೊಮ್ಮಕ್ಕಳೂ, ಮರಿಮಕ್ಕಳೂ, ಬಂಧು ಮಿತ್ರರೆಲ್ಲಾ ಬಂದಿದ್ದಾರೆ. ಜೈವಿಕರಾಮನ ಮನೆಯ ಮೇಲ್ವಿಚಾರಣೆ ನೋಡಿಕೊಳ್ಳುತ್ತಿರುವ ರೊಬೋ ಮೇನೇಜರ್ ಎಲ್ಲ ವ್ಯವಸ್ಥೆಯನ್ನೂ ಬಹಳ ಅಚ್ಚುಕಟ್ಟಾಗಿ ನೋಡಿಕೊಳ್ಳುತ್ತಿದೆ. ಅವರೆಲ್ಲ ಇರುವ ವ್ಯವಸ್ಥೆಯನ್ನು, ಊಟೋಪಚಾರಗಳನ್ನು, ಸ್ವಚ್ಛತೆ, ಇತ್ಯಾದಿಗಳೆಲ್ಲವೂ ಸಮರ್ಪಕವಾಗಿವೆ.

ಜೈವಿಕರಾಮ ನಿವೃತ್ತಿಯಾಗಿ ೨೫ ವರ್ಷಗಳಾಗಿದ್ದು ವಿಶ್ವದಲ್ಲಿ ಇನ್ನೂ ಹೆಚ್ಚು ಪ್ರಗತಿಪೂರ್ವಕ ಬದಲಾವಣೆಗಳಾಗಿವೆ. ಸಂಪೂರ್ಣ ಶಾಂತಿ ನೆಲೆಸಿದೆ. ಯುದ್ಧಗಳ ಮಾತಿರಲಿ, ಸೈನ್ಯಗಳನ್ನು ಮತ್ತು ರಕ್ಷಣಾ ವ್ಯವಸ್ಥೆಯನ್ನು ತೆಗೆದುಹಾಕಲಾಗಿದೆ. ಶಾಂತಿ ಪರಿಪಾಲನೆ ರೊಬೋಗಳ ವಶದಲ್ಲಿದೆ. ಮಾನವರು ಯಾವುದೇ ಹಾನಿಕಾರಕ ನಿರ್ಧಾರವನ್ನೂ ತೆಗೆದುಕೊಳ್ಳುವ ಸ್ಥಿತಿಯಲ್ಲಿಲ್ಲ. ಪಕ್ಷಪಾತ ಮನೋಭಾವವುಳ್ಳ ಮಾನವರು ವಿಶ್ವದ ಮೇಲೆ ದುರಂತ ತಂದುಕೊಂಡಾರೆಂಬ ಭಯದಿಂದ ರೊಬೋಗಳು ಮುಖ್ಯವಾದ ಇಲಾಖೆಗಳನ್ನು

ತಮ್ಮ ವಶದಲ್ಲಿಟ್ಟುಕೊಂಡಿವೆ. ಮನುಷ್ಯರ ಆರೋಗ್ಯ ಉತ್ತಮಮಟ್ಟದಲ್ಲಿದ್ದು ಪ್ರಕೃತಿ ಮತ್ತು ಕಾಡು ಮೃಗಗಳನ್ನು ಸಂರಕ್ಷಿಸಲಾಗಿ ಮಳೆ, ಬೆಳೆಗಳು ಚೆನ್ನಾಗಿವೆ. ವಿಕೋಪಗಳಿಂದಾಗುವ ನಾಶಗಳನ್ನು ತಡೆಯಲಾಗಿದೆ.

ಸಾಮಾನ್ಯ ಜನರು ಈ ವ್ಯವಸ್ಥೆಯಿಂದ ಸಂತುಷ್ಟರಾಗಿದ್ದು ಶಾಂತರಾಗಿ ತಮ್ಮ ತಮ್ಮ ಜೀವನವನ್ನು ಸಂತೋಷದಿಂದ ಅನುಭವಿಸುತ್ತಿದ್ದಾರೆ. ಕಲೆ, ಸಾಹಿತ್ಯ, ಸಂಗೀತಾದಿ ಮನರಂಜನೆಗಳಿಂದ ಜನರ ಜೀವನ ಅರ್ಥಗರ್ಭಿತವಾಗಿದ್ದು ಶುದ್ಧವಾಗಿದೆ.

ಅತಿಮಾನವ ರೊಬೋಗಳು ಜನರ ಹಿತರಕ್ಷಣೆಯನ್ನು ಕಾಪಾಡಿಕೊಂಡು ವಿಶ್ವಸಂಪತ್ತನ್ನು ಸಂರಕ್ಷಿಸುತ್ತಿವೆ.

ಎರಡು ವರ್ಷಗಳ ಹಿಂದೆ ಜೈವಿಕರಾಮನಿಗೆ ಲಘು ಹೃದಯಾಘಾತವಾದಾಗ ಅವನ ಮೆದುಳಿನ ನಕಲನ್ನು ತೆಗೆದಿಡಲಾಗಿತ್ತು. ಅವನ ದೇಹದಂತೆ ತೋರುವ ಒಂದು ರೊಬೋ ಬೊಂಬೆಗೆ ಅವನ ನಕಲಿ ಮೆದುಳನ್ನು ಅಳವಡಿಸಿ ಅವನ ನಕಲನ್ನು ಜೋಪಾನವಾಗಿ ಇಟ್ಟಿದ್ದಾರೆ!

**೨೦೮೦** – ಜೈವಿಕರಾಮ ತನ್ನ ಅಂತಿಮಶಯ್ಯೆಯಲ್ಲಿದ್ದಾನೆ. ಎರಡು ವರ್ಷಗಳ ಹಿಂದೆ ಅವನ ಹೆಂಡತಿಯನ್ನು ಕಳೆದುಕೊಂಡ ಮೇಲೆ ಅವನಿಗೆ ಜೀವನದಲ್ಲಿ ಆಸಕ್ತಿ ಹೋಗಿದೆ. ಅವನ ಮನೆಯಲ್ಲಿ ಅವನಲ್ಲದೆ ಅವನ ರೊಬೋ ಮೇನೇಜರ್ ಮತ್ತು ಜೈವಿಕರಾಮನ ಬೇಡಿಕೆಯಂತೆ ಅವನ ನಕಲು ರೊಬೋ ಕೂಡ ಮನೆಯಲ್ಲಿದೆ.

ಜೈವಿಕರಾಮನ ನೆನಪಿನ ಶಕ್ತಿ ಕುಂದಿದೆ. ಅವನು ತನ್ನ ಹಳೆಯ ನೆನಪುಗಳಿಗೆ ತನ್ನ ರೊಬೋ ನಕಲಿಗೆ ಶರಣಾಗಿದ್ದಾನೆ. ತನ್ನ ಬಾಲ್ಯದ ನೆನಪುಗಳು ಅವನಿಗೆ ಬಹಳ ಇಷ್ಟ. ಬಾಲ್ಯದ ಕಥೆಗಳನ್ನು ತನ್ನ ನಕಲಿನಿಂದ ಕೇಳಿಸಿಕೊಂಡು ಆನಂದಿಸುತ್ತಾನೆ. ಅದರಲ್ಲೂ ೧೯೮೩ರ ಕಪಿಲ್ ದೇವ್ನ ವಿಶ್ವಕಪ್ ಕ್ರಿಕೆಟ್ ಪಂದ್ಯಾವಳಿಯನ್ನು ಎಷ್ಟು ಕೇಳಿ ಆನಂದಿಸಿದರೂ ಸಾಲದು. ರಾಜ ಕುಮಾರ್ ಅವರ ಹಾಡುಗಳೂ ಗುನುಗುನಿಸುತ್ತಿರುತ್ತಾನೆ. ಅವನು ತನ್ನ ತಂದೆ-ತಾಯಿ ಕೊಟ್ಟಿದ್ದ ಮೊದಲ ಯಂತ್ರದ ಬೊಂಬೆ 'ಕೃತಕರಾಮ'ನನ್ನು ತನ್ನ ಬಗಲಲ್ಲಿ ಸದಾಕಾಲವೂ ಇಟ್ಟುಕೊಂಡಿರುತ್ತಾನೆ!

ಒಂದು ದಿನ ಮಧ್ಯಾಹ್ನ ಊಟ ಮಾಡಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದಾಗ ಹಾಗೆಯೇ ಅವನ ಪ್ರಾಣಪಕ್ಷಿ ಹಾರಿಹೋಗುತ್ತದೆ. ಮುಖದಲ್ಲಿ ಶಾಂತ ಮುದ್ರೆಯಿರುತ್ತದೆ. ಪಕ್ಕದ ಆಡಿಯೋವಿನಿಂದ ಅವನಿಗಿಷ್ಟವಾದ ಹಾಡು 'ನಗು ನಗುತಾ ನಲೀ ನಲೀ...' ಕೇಳಿಬರುತ್ತಿರುತ್ತದೆ!

ಜೈವಿಕರಾಮನ ರೊಬೋ ಮೇನೇಜರ್ ಅವನ ಅಂತಿಮ ಸಂಸ್ಕಾರದ ಎಲ್ಲ ತಯಾರಿಯನ್ನೂ ಮುನ್ನವೇ ಮಾಡಿಕೊಂಡಿದ್ದು ಎಲ್ಲವೂ ಯೋಜಿಸಿದಂತೆ ನಡೆಯುತ್ತದೆ. ಸಾವಿರಾರು ಜನ ಬಂಧು ಮಿತ್ರರು ಭಾಗವಹಿಸುತ್ತಾರೆ. ಅವನ ಸಾರ್ಥಕ ಜೀವನವನ್ನು

ಕೊಂಡಾಡುತ್ತಾರೆ. ಅವನಗೆ ಗೌರವ ಸೂಚಿಸಲೆಂದು ವಿಶ್ವದಾದ್ಯಂತ ತುರ್ತು ಸಂಸ್ಥೆಗಳನ್ನು ಹೊರಪಡಿಸಿ ಎಲ್ಲ ಮಾನವರೂ ಮತ್ತು ಅತಿ ಮಾನವರೂ ೧೦ ಸೆಕೆಂಡ್ಗಳ ಕಾಲ ಸ್ಥಗಿತರಾಗಿ ಅವನಿಗೆ ತಮ್ಮ ಗೌರವವನ್ನು ಸೂಚಿಸುತ್ತಾರೆ.

ಜೈವಿಕರಾಮನ ಕೊನೆಯ ದಿನಗಳಲ್ಲಿ ತನ್ನ ಜೀವನದ ಆತ್ಮಾವಲೋಕವನ್ನು ಮಾಡಿಕೊಳ್ಳುತ್ತ ಬರೆದಿಟ್ಟಿದ್ದ ಕೆಲವು ಪುಟಗಳ ಟಿಪ್ಪಣಿಗಳು ಸಿಗುತ್ತವೆ. ಅದರಿಂದ ಆಯ್ದ ಕೆಲ ಸಾಲುಗಳು ಹೀಗಿವೆ.

.....ನನ್ನ ಜೀವನದಲ್ಲಿ ಕೃತಕರಾಮನೊಂದಿಗೆ ಕಳೆದ ನನ್ನ ಬಾಲ್ಯದ ದಿನಗಳಲ್ಲಿ ಗಮನಿಸಿದ ಅನೇಕ ಘಟನೆಗಳು ನನಗೆ ಮನುಷ್ಯವರ್ಗದ ಮೇಲೆ ನಿರಾಸೆ ಮತ್ತು ಜಿಗುಪ್ಸೆ ಮೂಡಲು ಕಾರಣವಾಯಿತು. ಮನುಷ್ಯ ತನ್ನ ಸ್ವಾರ್ಥಕ್ಕಾಗಿ ಏನು ಮಾಡಲೂ ಹೇಸುವುದಿಲ್ಲವೆಂದು ಗಮನಿಸುತ್ತಿದ್ದೆ. ಮನುಷ್ಯನನ್ನು ಯಾವ ಕಾರಣಕ್ಕೂ ನಂಬುವಂತಿರಲಿಲ್ಲ. ಹಾಗೆಂದು ಎಲ್ಲ ಮನುಷ್ಯರೂ ದುಷ್ಟರಾಗಿರಲಿಲ್ಲ. ನಾಯಕರೆಂದು ಕರೆಸಿಕೊಳ್ಳುವ ಕೆಲವೇ ಸ್ವಾರ್ಥಮಂದಿಗಳು ತಮ್ಮ ಸುಖಕ್ಕಾಗಿ ಸಮಾಜದ ಹಿತವನ್ನು ಕಡೆಗಣಿಸುತ್ತಿದ್ದರು. ನನ್ನ ಆಣತಿಯನ್ನು ಪಾಲಿಸುತ್ತಿದ್ದ ಕೃತಕರಾಮನನ್ನು ನೋಡಿದಾಗಲೆಲ್ಲ ನನಗೆ ಅನ್ನಿಸುತ್ತಿದ್ದುದು ಈ ಎಲ್ಲ ಸಮಾಜಘಾತುಕರನ್ನು ಹೀಗೇ ನಿಯಂತ್ರಿಸಲು ಸಾಧ್ಯವೆ? ಎಂದು. ಆಶ್ಚರ್ಯವೆಂದರೆ ಮುಂದೆ ನನ್ನ ಜೀವನದ ವೃತ್ತಿಯೇ ಕೃತಕ ಮನುಷ್ಯರನ್ನು ಸಮಾಜದ ಒಳಿತಿಗೆ ಉಪಯೋಗಿಸುವಂತಾದದ್ದು.

ಕಳೆದ ೨೫ ವರ್ಷಗಳಲ್ಲಿ ಅತಿಮಾನವರ ರಕ್ಷಣೆಯಲ್ಲಿ ವಿಶ್ವ ಶಾಂತಿ ನೆಲೆಸಿದೆ. ಮನುಷ್ಯರು ಮಾತ್ರವಲ್ಲ, ಪ್ರಕೃತಿ, ವನ, ವನ್ಯ ಮೃಗ-ಪಕ್ಷಿಗಳು ಎಲ್ಲವೂ ಸಂರಕ್ಷಿಸಲ್ಪಟ್ಟಿದೆ. ಮೊಟ್ಟ ಮೊದಲ ಬಾರಿಗೆ ನಮ್ಮ ಭೂಮಿಗ್ರಹದ ಭವಿಷ್ಯದ ಮೇಲೆ ನನಗೆ ವಿಶ್ವಾಸವುಂಟಾಗಿದೆ.

ಸಾವಿರಾರು ವರ್ಷಗಳ ಮನುಕುಲದ ನಾಗರಿಕತೆಯಲ್ಲಿ ನಾವು ನೋಡುವುದು ಮನುಷ್ಯ ನಾಗರಿಕನಾದಂತೆ ಕಂಡರೂ ಅವನಿಗೆ ಮನುಷ್ಯತ್ವ ಬಾರದೇ ಇದ್ದುದನ್ನು. 'ವಿಶ್ವಮಾನವ', 'ವಿಶ್ವಶಾಂತಿ', 'ಪ್ರಕೃತಿಪ್ರೇಮ', ಇತ್ಯಾದಿಗಳೆಲ್ಲವೂ ಕಲ್ಪನೆಯಾಗಿಯೇ ಉಳಿದಿತ್ತು. ಮನುಷ್ಯ ತನ್ನ ನಾಶದೊಂದಿಗೆ ವಿಶ್ವವನ್ನೂ ನಾಶಮಾಡುತ್ತಾನೆಂದು ನನಗನ್ನಿಸಿತ್ತು.

ಈಗ ನಮ್ಮ ಮನುಷ್ಯವರ್ಗದ ಜೀವನದ ಉದ್ದೇಶವೇನೆನ್ನುವ ಪ್ರಶ್ನೆ ಉದ್ಭವಿಸುವುದು ಸಹಜವಲ್ಲವೆ? ಆದರೆ ಈ ಪ್ರಶ್ನೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಇದೇ ಪ್ರಶ್ನೆ ಮನುಷ್ಯ ನಾಗರಿಕನಾದಂದಿನಿಂದಲೂ ಇದೆಯಲ್ಲವೆ? ಇದರಿಂದಲೇ ಅಲ್ಲವೆ ಧರ್ಮ, ದೇವರು, ಜಾತಿ-ಮತ, ಆಧ್ಯಾತ್ಮಿಕ ಚಿಂತನೆಗಳು ವಿವಿಧ ಪುರಾಣಗಳು ಜನ್ಮ ತಾಳಿ ಮನುಷ್ಯರು ಹೇಗೆ ಬಾಳಬೇಕೆಂದು ಬೋಧಿಸುತ್ತಿದ್ದುದು? ಆದರೆ ಈ ಪ್ರಶ್ನೆಗೆ ಉತ್ತರ ಸಿಕ್ಕಿದೆಯೆ? ನಿಜ ಹೇಳಬೇಕೆಂದರೆ ಮನುಷ್ಯರ ದುಃಖ, ನೋವು, ಸಂಕಟಗಳು ಮನುಷ್ಯರಿಂದಲೇ ಉದ್ಭವವಾದಂತಹದು. ಆ ಸಮಸ್ಯೆಗೆ ಉತ್ತರ ಹೊರಗಿಲ್ಲ, ಇಲ್ಲೇ ಇದೆ. ಇದಕ್ಕೆ ನಿದರ್ಶನ ಈ ಕಳೆದ ೨೫ ವರ್ಷಗಳ ಇತಿಹಾಸ. ಇದನ್ನೇ ಅಲ್ಲವೇ

ಮನುಷ್ಯರೂ ಬಯಸಿದ್ದು ಮತ್ತು ನಮ್ಮ ಆಧ್ಯಾತ್ಮಿಕತೆಯು ಬೋಧಿಸಿದ್ದು? ಜೀವನವನ್ನು ಪ್ರೀತಿಸು, ನಿನ್ನ ಸುತ್ತಮುತ್ತ ಇರುವ ಜೀವ ಜಂತುಗಳೊಂದಿಗೆ ಸ್ನೇಹದಿಂದಿರು ಎಂದು? ಅತಿಮಾನವರ ಸಹಾಯದಿಂದ ಈಗ ಅದು ಸಾಧ್ಯವಾಗಿದೆ ಮತ್ತು ಮಾನವರೆಲ್ಲ ಸಂತೋಷದಿಂದಿದ್ದಾರೆ.

ವಾಲ್ಮೀಕಿ–ವ್ಯಾಸರು ಜೈವಿಕ ಪಾತ್ರಗಳ ಮೂಲಕ ಜೀವನದ ಸದ್ಗುಣಗಳ ಮತ್ತು ಸದುದ್ದೇಶಗಳ ಸಂದೇಶ ಕೊಟ್ಟರು. ಅವುಗಳು ಅದೆಷ್ಟರಮಟ್ಟಿಗೆ ಜಗತ್ತಿನ ಸಮಸ್ಯೆಗಳನ್ನು ನಿವಾರಿಸುತ್ತೆನ್ನುವುದು ನಾವೆಲ್ಲರೂ ಬಲ್ಲೆವು. ಅವುಗಳು ಕೇವಲ ಆದರ್ಶಗಳಾಗಿ ಉಳಿದವು. ಯಂತ್ರಮಾನವ ಅಥವಾ ಅತಿಮಾನವ ಹೊರಗಿನವರೆ? ಅವೂ ಕೂಡ ಒಂದು ರೀತಿಯಲ್ಲಿ ನಮ್ಮ ಬುದ್ಧಿಶಕ್ತಿಯಿಂದ ಜನಿಸಿದ ನಮ್ಮ ಮಾನಸ ಸಂತಾನವಲ್ಲವೆ? ಅವು ನಮಗಿಂತಲೂ ಬುದ್ಧಿವಂತರಾಗಿ ಸಮಾಜಕ್ಕೆ ಉತ್ತಮ ಕೊಡುಗೆಯಾದಲ್ಲಿ ದೋಷವೇನು? ನಾವು ಇತರ ಪ್ರಾಣಿಗಳೊಡನೆ ಬಾಳಿಬದುಕಿದಂತೆ ಅತಿಮಾನವರು ನಮ್ಮೆಲ್ಲರೊಡನೆ ಬಾಳುತ್ತಾ ನಮ್ಮ ಸಂರಕ್ಷಣೆ ಮಾಡುತ್ತಾರೆ. ಇದೇ ಅಲ್ಲವೇ ವಸುಧೈವ ಕುಟುಂಬಕಮ್ ಅಥವಾ ವಿಶ್ವಕುಟುಂಬ? ತಾನೂ ಬಾಳಬೇಕು ಇತರರನ್ನೂ ಬಾಳಲು ಬಿಡಬೇಕು.

ಮನುಕುಲಕ್ಕೆ ನನ್ನ ಸಂದೇಶ ನಮ್ಮ ಪುರಂದರದಾಸರು ೧೫ನೆಯ ಶತಮಾನದಲ್ಲಿ ಹೇಳಿದ ವಚನವೇ: 'ಮಾನವ ಜನ್ಮ ದೊಡ್ಡದು ಇದ ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ...' ಆದರೆ ನಾನು ಹೇಳುವ ಧರ್ಮ 'ವಿಶ್ವಮಾನವರಾಗಿ ನಿಮ್ಮ ಜೀವನವನ್ನು ಪ್ರೀತಿಸುತ್ತ ಸಂತೋಷದಿಂದ ಬಾಳಿ. ನಿಮ್ಮ ಸಹಚಾರಿಗಳಾದ ಗಿಡ, ಮರ, ಮೃಗ–ಪಕ್ಷಿಗಳನ್ನೂ ಪ್ರೀತಿಸಿ ಸಹ ಬಾಳ್ವೆ ನಡೆಸಿ. ಭವಿಷ್ಯದಲ್ಲಿ ವಿಶ್ವಾಸವಿರಲಿ ಅದು ನಿಸ್ಸಂದೇಹವಾಗಿ ಸುಂದರವಾಗಿರುತ್ತದೆ.' –ಜೈವಿಕರಾಮ.

**೫. ಪರಿಸಮಾಪ್ತಿ**

ಬದಲಾವಣೆಗೆ ಪರಿಸಮಾಪ್ತಿ ಎಂಬುದಿಲ್ಲ. ಒಂದು ವೇಳೆ ಸಮಾಪ್ತಿಯಾದಲ್ಲಿ ಅಲ್ಲಿಗೆ ನಾಗರಿಕತೆ ಮತ್ತು ಬೆಳವಣಿಗೆ ನಿಂತಿದೆಯೆಂದು ಭಾವಿಸಬಹುದು. ಹಾಗಾಗಿ ಇದು ಲೇಖನದ ಸಮಾಪ್ತಿ ಮಾತ್ರ. ಬದಲಾವಣೆಯದಲ್ಲ. ಬದಲಾವಣೆ ನಿರಂತರ. ಪು.ತಿ.ನ. ಅವರು ಹೇಳಿದಂತೆ ಪ್ರಾಪ್ತಿಯಲ್ಲಿ ಸುಖವಿದೆ ಆದರೆ ಪ್ರತಿಭಟನೆಯಲ್ಲಿ ಪ್ರಗತಿಯಿದೆ ! ಆಯ್ಕೆ ನಮ್ಮದು. ಜಾಣ ಮಾನವರು ಈಗಾಗಲೇ ಆಯ್ಕೆ ಮಾಡಿದ್ದಾರೆ. ಪ್ರತಿಭಟನೆಯ ಮೂಲಕ್ಕೆ ಪ್ರಗತಿಯನ್ನು ಸಾಧಿಸುವುದೆಂದು. ಅವರ ಜೊತೆ ಸೇರಿ ಮುಂದೆ ಹೋಗುವುದೊಂದೇ ಮಾರ್ಗ! ನೀವೇನೆನ್ನುತ್ತೀರಿ? ಸಾಧ್ಯವಿರಬಹುದಾದ 'ಅತಿಮಾನವ'ನ ದುಷ್ಟತೆಯ ಬಗ್ಗೆ ನಾವು ತಲೆಕೆಡಿಸಿಕೊಳ್ಳುವುದು ಬೇಡ. ಭವಿಷ್ಯ–ಪ್ರಗತಿ–ಉತ್ತಮ ಎನ್ನುವ ನಂಬಿಕೆ ಇದ್ದರೆ ಸಾಕು.

*

# ಬದಲಾವಣೆಯೆಂಬ ಸಹಜಾವಸ್ಥೆ

■ ಮೀರಾ ಪಿ. ಆರ್., Edison, NJ.

'ಬದಲಾವಣೆ' ಎಂಬ ವಿದ್ಯಮಾನದ ಕುರಿತು ಒಮ್ಮೆಯಾದರೂ ಒಂದಿಷ್ಟಾದರೂ ಚಿಂತಿಸದೆ ಹೋದವರೇ ಇಲ್ಲವೇನೋ! ಸದಾ ಎಲ್ಲೆಲ್ಲೂ ಘಟಿಸುತ್ತಲೇ ಇರುವ, ಅತಿ ಸಾಮಾನ್ಯವೂ ನೈಸರ್ಗಿಕವೂ ಆಗಿದ್ದೂ ಕೆಲವೊಮ್ಮೆ ವಿಚಿತ್ರವಾಗಿಯೂ ಆಶ್ಚರ್ಯಕರವಾಗಿಯೂ ತೋರುವ ಸಂಗತಿಯಿದು. ಜಗದ ಅನಿವಾರ್ಯ ನಿಯಮಗಳಲ್ಲೊಂದಾದ ಈ 'ಬದಲಾವಣೆ'ಯ ಕುರಿತು ಹಲವರಿಗೆ ಹಲವು ತರಹದ ಭಾವನೆ. ಲೋಕದ ಎದೆಯಲ್ಲಿ ಅರಿಯದ ತಳಮಳವನ್ನು ಹುಟ್ಟಿಸುವ ಹಾಗೆಯೇ ಅಪಾರ ಭರವಸೆ ತುಂಬುವುದು ಕೂಡ 'ಬದಲಾವಣೆ' ಎಂಬ ಈ ವಿದ್ಯಮಾನವೇ. ಹಾಗೆ ನೋಡಿದರೆ ಅತ್ಯಂತ ಸರಳವೂ ನೈಸರ್ಗಿಕವೂ ಆದ ವಿಷಯಗಳ ಕುರಿತೇ ಅತ್ಯಂತ ಕ್ಲಿಷ್ಟಕರವಾದ, ಸಂಕೀರ್ಣವಾದ ಮನೋಭಾವವೊಂದು ಯಾಕಾಗಿಯೋ ಎಲ್ಲರಲ್ಲೂ ಮನೆ ಮಾಡಿರುವುದುಂಟು. 'ಬದಲಾವಣೆ'ಯ ಕುರಿತಂತೆ ಮನುಷ್ಯರ ಮನದಲ್ಲಂತೂ ಎಲ್ಲಾ ಕಾಲದಲ್ಲೂ ಒಂದು ಬೆರಗು ಇದ್ದೇ ಇದೆ. ದಾರ್ಶನಿಕರು, ವಿಜ್ಞಾನಿಗಳು, ಕುತೂಹಲಿಗಳೂ ಈ ಕುರಿತು ಮತ್ತೆ ಮತ್ತೆ ಚಿಂತಿಸಿದ ಪರಿಯನ್ನು ಅವಲೋಕಿಸುವುದೇ ಒಂದು ಖುಷಿ.

ವೃದ್ಧ, ರೋಗಿ, ಮೃತ ವ್ಯಕ್ತಿಯನ್ನು ನೋಡಿದ ಬುದ್ಧನ ಮನದಲ್ಲಿ, ಆರೋಗ್ಯವಂತ ದೇಹವೊಂದು ಕಾಲಕ್ರಮೇಣ ಹೀಗೆ ಬದಲಾಗಿ ಇಲ್ಲವಾಗಿಬಿಡುವ ಕುರಿತು ಆಳದ ತಳಮಳವೊಂದು ಶುರುವಾಗಿ, ಅದೇ ಅವನ ಎಲ್ಲಾ ಹುಡುಕಾಟಕ್ಕೂ ಕಡೆಗೆ ಜ್ಞಾನೋದಯಕ್ಕೂ ಮೂಲವಾಯಿತೆಂದು ಕಥೆಗಳು ಹೇಳುತ್ತವೆ. ಬದಲಾವಣೆಯನ್ನು ಕುರಿತಂತೆ ಬುದ್ಧ ಮತ್ತೆ ಮತ್ತೆ ಯೋಚಿಸಿದ್ದಂತೂ ನಿಜವೇ. ಮನುಷ್ಯನಿಗೆ 'ಶಾಶ್ವತ'ವಾಗುವ ಹಂಬಲ ಮತ್ತು 'ನಶ್ವರ'ದ ಭಯವೇ ಬದಲಾವಣೆಯ ಕುರಿತು ಅವನಿಗಿರುವ ತಳಮಳಕ್ಕೆ

ಮೂಲವೆಂದು ಬುದ್ಧ ಹೇಳುತ್ತಾನೆ. ಬಹುಶಃ ನಶ್ವರದ ಈ ಭಯದಿಂದಾಗಿಯೋ ಏನೋ ಮನುಷ್ಯ ಜನಾಂಗ ಎಲ್ಲಾ ಕಾಲ, ದೇಶಗಳಲ್ಲೂ ಶಾಶ್ವತವೆನ್ನುವ ಯಾವುದೋ ಒಂದನ್ನು ಹುಡುಕಾಟ ನಡೆಸಿದೆ. ದೈವ, ಸತ್ಯ, ಪ್ರೇಮ ಎಂಬೆಲ್ಲಾ ಅಮೂರ್ತ ಕಲ್ಪನೆ, ಭಾವನೆಗಳನ್ನು ಅದು ಶಾಶ್ವತದ ಪಟ್ಟಕ್ಕೇರಿಸಿದೆ. ಹಾಗೆ ಪಟ್ಟಕ್ಕೇರಿಸಿ ಕೂರಿಸಿದ ಮೇಲೂ ಈ ನಶ್ವರದ ಬದುಕೇ ಕಾರಣವಾಗಿ, ಶಾಶ್ವತದ ಕುರಿತಂತೆ ಅನುಮಾನಿಸಿ ಹೊಯ್ದಾಡುತ್ತಲೇ ಇದೆ. ನಶ್ವರ ಎಂಬುದೂ ಇಲ್ಲ, ಶಾಶ್ವತವೆಂಬುದೂ ಇಲ್ಲ, ಇರುವ ಒಂದೇ ಸತ್ಯವೆಂದರೆ ಅದು 'ಬದಲಾವಣೆ' ಎಂಬ ನಿಯಮ ಮಾತ್ರ ಮತ್ತು ಇದೊಂದೇ ಈ ಸೃಷ್ಟಿಯಲ್ಲಿರುವ ಸತ್ಯ ಎಂಬಂತೆ ಈ ಹುಡುಕಾಟದ ಹಾದಿಯಲ್ಲಿ ಅನೇಕರಿಗೆ ಕಂಡಿದೆ!

ಅನುಕ್ಷಣವೂ ಬದಲಾಗುತ್ತಲೇ ಇರುವ ನಾವಿರುವ ಈ ವಿಶ್ವಸೃಷ್ಟಿಯ ಮೂಲದಿಂದಲೇ ಎಲ್ಲವೂ ಹೇಗೆ ಬದಲಾಯಿತೆಂದು ನೋಡೋಣವೆಂದರೆ, ಇಂದಿನವರೆಗಿನ ಭೌತವಿಜ್ಞಾನ ಒದಗಿಸುವ ನಿಯಮಗಳನ್ನ ಆಧರಿಸಿ ಕೇವಲ ಮಹಾಸ್ಫೋಟದ ಕಾಲದವರೆಗೆ ಮಾತ್ರ ಇವೆಲ್ಲವೂ ಹೀಗಾಗಿರಬಹುದು ಎಂಬ ಒಂದು ಊಹಾತ್ಮಕ ಗೆರೆಯನ್ನು ನಾವೀಗ ಎಳೆಯಲು ಸಾಧ್ಯ. ಮಹಾಸ್ಫೋಟಕ್ಕೂ ಮುನ್ನ ಏನಿತ್ತು ಅಥವಾ ಇರಲಿಲ್ಲ ಎಂಬ ಪ್ರಶ್ನೆಗೆ ನಮಗಿನ್ನೂ ಉತ್ತರ ಸಿಕ್ಕಿಲ್ಲ. ಹೀಗಾಗಿ 'ಬದಲಾವಣೆ' ಎಂಬ ವಿದ್ಯಮಾನದ ಹುಡುಕಾಟದ ದಾರಿ ನಮ್ಮನ್ನೀಗ ಸುಮಾರು ೧೩.೭ ಬಿಲಿಯನ್ ವರ್ಷಗಳಷ್ಟು ಮಾತ್ರ ಹಿಂದಕ್ಕೆ ಒಯ್ಯಬಲ್ಲದ್ದಾಗಿದೆ! ಸರಿ, ಆ ಮಹಾಸ್ಫೋಟದ ಆ ಕ್ಷಣದಿಂದಲೇ ಪ್ರಾರಂಭಿಸಿ ನೋಡಿದರೆ, ಅಂದಿನ ಆ ಗಳಿಗೆಯಿಂದ ಇಂದಿನವರೆಗೂ ಒಂದು ಕ್ಷಣದ ಹಾಗೆ ಇನ್ನೊಂದಿಲ್ಲ! ಆ ಕ್ಷಣದಿಂದ ಆರಂಭವಾದ ಈ ವಿಶ್ವದ ಹಿಗ್ಗುವಿಕೆ ಎಲ್ಲೂ ನಿಲ್ಲದೆ ಮುಂದುವರಿದೇ ಇದೆ. ಹೀಗೆ ನಿರಂತರವಾಗಿ ಹಿಗ್ಗುತ್ತಿರುವ ವಿಶ್ವದ ಪ್ರತಿಬಿಂಬವೇ ಇದರ ಅಣು ಕಣಗಳಷ್ಟು ಚಿಕ್ಕ ಜೀವಗಳಾದ ನಮ್ಮ ಅನುದಿನದ ಬದುಕಿನಲ್ಲೂ ನೂರು, ಸಾವಿರ ರೂಪಗಳಲ್ಲಿ ಕಾಣಿಸಿಕೊಳ್ಳುತ್ತಿದೆಯೇನೋ ಎನಿಸುತ್ತಿದೆ!

ಗಣಿತೀಯ ಸಿದ್ಧಾಂತಗಳನ್ನೇ ಮುಖ್ಯವಾಗಿ ಇಟ್ಟುಕೊಂಡು ಕಾಲದ, ಬ್ರಹ್ಮಾಂಡದ ಹುಟ್ಟನ್ನೂ ಬೆಳವಣಿಗೆಯನ್ನೂ ಅರಿತುಕೊಳ್ಳುವ ಭೌತವಿಜ್ಞಾನಕ್ಕೆ, ನಿನ್ನೆಯನ್ನಷ್ಟೇ ಅಲ್ಲ, ಕಾಣದ ನಾಳೆಯನ್ನೂ ಅರಿವ ಹಂಬಲ! ನಿನ್ನೆ ನಾಳೆಗಳ ನಡುವಿರುವ ಎಲ್ಲಾ ಬದಲಾವಣೆಗಳನ್ನೂ ಆಮೂಲಾಗ್ರವಾಗಿ ಪರಿಶೀಲಿಸಿ ತಿಳಿವ ಆಸೆ! 'ಬದಲಾವಣೆ'ಯ ಕುರಿತು ಮನುಷ್ಯ ಲೋಕಕ್ಕಿರುವ ಈ ಶಿಶು ಸಹಜ ಕುತೂಹಲವೇ ನಮ್ಮ ಕಲ್ಪನಾ ಲೋಕವನ್ನೂ ಆ ಮೂಲಕ ಅರಿವನ್ನೂ ಕೊನೆ ಮೊದಲಿಲ್ಲದೆ ವಿಸ್ತರಿಸುತ್ತಲೇ ಉಳಿದಿದೆ. ಭೌತ, ಖಭೌತ ಶಾಸ್ತ್ರವೂ ಹಾಗೆಯೇ ಭಾರತೀಯ ತತ್ವಶಾಸ್ತ್ರವೂ ಹುಟ್ಟಿ, ಸತ್ತು, ಮರುಹುಟ್ಟು ಪಡೆದು ನಿರಂತರ ಬದಲಾಗುತ್ತಾ ಚಲನೆಯಲ್ಲಿರುವ ವಿಶ್ವದ ಕುರಿತು ಮತ್ತೆ ಮತ್ತೆ ಚಿಂತಿಸಿವೆ. ಭೌತಶಾಸ್ತ್ರ ಇದೊಂದು ಸಂಭವನೀಯ ಸಿದ್ಧಾಂತ ಎಂದರೆ,

ತತ್ವಶಾಸ್ತ್ರ ಇದು ಇರುವುದೇ ಹೀಗೆ ಎಂದು ಬಿಡುತ್ತದೆ. ಈ ವಿಷಯದ ಕುರಿತಂತೆ ಈ ಎರಡೂ ಜ್ಞಾನಶಾಖೆಗಳ ಚಿಂತನೆಯಲ್ಲಿ ಕಾಣಿಸುವ ಸಾಮ್ಯತೆ ಮಾತ್ರ ದಂಗು ಪಡಿಸುವಂತದ್ದು.

ಮಹಾಸ್ಫೋಟದಿಂದ ಪ್ರಾರಂಭಿಸಿ ನಿರಂತರ ಬದಲಾಗುತ್ತಲೇ, ಹಿಗ್ಗುತ್ತಲೇ ಇರುವ ಈ ವಿಶ್ವ ಕಡೆಗೊಮ್ಮೆ ಹೀಗೆ ಬದಲಾಗುತ್ತಾ ಏನಾಗಬಹುದು ಎಂದು ಚಿಂತಿಸುತ್ತಾ ಭೌತಶಾಸ್ತ್ರವು, ನಾಲ್ಕು ಬಗೆಯ ಊಹಾತ್ಮಕ ಸಂಭಾವ್ಯತೆಗಳನ್ನು ಈ ಕುರಿತು ನೀಡಿದೆ.

**ಊಹೆ ೧. ಬಿಗ್ ರಿಪ್ (ಮಹಾ ಛಿದ್ರ)**

ಇದುವರೆಗೂ ನಮ್ಮ ಯಾವ ಅಳತೆಗೂ ಸಿಕ್ಕಿರದ ಆದರೆ ಅದು 'ಇದೆ' ಎಂದು ಊಹಿಸಲಾಗಿರುವ ಕೃಷ್ಣ ಶಕ್ತಿ(ಡಾರ್ಕ್ ಎನರ್ಜಿ)ಯೇ ಕಾರಣವಾಗಿ ಹಿಗ್ಗುತ್ತಿರುವ ಈ ವಿಶ್ವ, ಹೀಗೆಯೇ ಇನ್ನಷ್ಟು ಮತ್ತಷ್ಟು ವೇಗವನ್ನು ವರ್ಧಿಸಿಕೊಳ್ಳುತ್ತಾ ಹಿಗ್ಗುತ್ತಲೇ ಇರುತ್ತದೆ. ಈ ಹಿಗ್ಗುವಿಕೆಯೇ ಕಾರಣವಾಗಿ ಈ ವಿಶ್ವದೊಳಗಿನ ಎಲ್ಲ ಕಾಯಗಳೂ ಒಂದರಿಂದ ಒಂದು ನಿರಂತರವಾಗಿ ದೂರಾಗುತ್ತಲೇ ಸಾಗುತ್ತವೆ. ಇದರ ಪರಿಣಾಮವಾಗಿ ಗ್ರಹ, ತಾರೆ, ನಕ್ಷತ್ರ ಮಂಡಲಗಳಿರಲಿ ಕಡೆಗೆ ಈ ಎಲ್ಲವುಗಳೂ ರೂಪುಗೊಳ್ಳಲು ಕಾರಣವಾಗಿರುವ ಪರಮಾಣುಗಳ ಜಟಿಲಾತಿ ಜಟಿಲ ಸಂಯೋಜನೆಗಳ ಸಂರಚನೆಗಳೂ ಇನ್ನು ಹಾಗೆ ಒಟ್ಟಾಗಿ ಉಳಿಯಲಾರದೆ ಕಡೆಗೊಮ್ಮೆ ಎಲ್ಲವೂ ಒಂದರಿಂದೊಂದು ಬೇರಾಗುತ್ತಾ ಛಿದ್ರ ಛಿದ್ರವಾಗಿಬಿಡುತ್ತವೆ.

**ಊಹೆ ೨. ಬಿಗ್ ಫ್ರೀಜ್ (ಮಹಾ ಶೈತ್ಯ)**

ಈ ಸಂಭಾವ್ಯತೆಯಲ್ಲಿ ಹಿಗ್ಗುತ್ತಿರುವ ಈ ವಿಶ್ವದೊಳಗಿನ ಆಕಾಶಕಾಯಗಳು ಒಂದರಿಂದೊಂದು ದೂರಾಗುತ್ತಾ ಹೋದಂತೆಯೇ ಬೆಳಕು, ಶಾಖವೂ ಸಹ ಚದುರಿ ಹೋಗುತ್ತಿರುತ್ತದೆ. ಹತ್ತಿರದ ನಕ್ಷತ್ರವೋ, ನಕ್ಷತ್ರಗಂಗೆಯೋ ಹೊಮ್ಮಿಸುವ ಬೆಳಕು, ಶಾಖ ಈ ದೂರದ ಕಾರಣದಿಂದಾಗಿ ಗ್ರಹವೊಂದನ್ನು ಕಡೆಗೊಮ್ಮೆ ತಲುಪುವುದೇ ಸಾಧ್ಯವಾಗದೆ ಹೋಗಿ ಗ್ರಹಗಳೂ ಮತ್ತಿತರ ಆಕಾಶ ಕಾಯಗಳೂ ಶೈತ್ಯಾವಸ್ಥೆ ತಲುಪುತ್ತವೆ. ಕಾಲಾವಧಿಯಲ್ಲಿ ಎಲ್ಲಾ ನಕ್ಷತ್ರಗಳೂ ತಮ್ಮಲ್ಲೇ ಉರಿದುಹೋಗಿ ಖಾಲಿಯಾದ ನಂತರ ಹೊಸ ನಕ್ಷತ್ರವೊಂದರ ಹುಟ್ಟಿಗೆ ಬೇಕಾದ ಕಚ್ಚಾ ಸಾಮಗ್ರಿಯೇ ವಾತಾವರಣದಲ್ಲಿ ಇರದೆ ಕಡೆಗೊಮ್ಮೆ ಇಡೀ ವಿಶ್ವದಲ್ಲಿ ಬೆಳಕೆಂಬುದೇ ಕಾಣೆಯಾಗಿಬಿಡುತ್ತದೆ! ಇಷ್ಟಾದ ಮೇಲೆ ಸಂಪೂರ್ಣ ಶೂನ್ಯಕ್ಕೆ ಮುಟ್ಟಿದ ವಿಶ್ವದ ಉಷ್ಣಾಂಶದಲ್ಲಿ ಇನ್ನ್ಯಾವುದೂ ಹುಟ್ಟುವ ಸಂಭಾವ್ಯತೆಯೇ ಇಲ್ಲದೆ ಅಲ್ಲಿಗೆ ಎಲ್ಲವೂ ನಿಂತು ಈ ಇಡೀ ವಿಶ್ವ ಒಂದು ಶೀತಲ ಬೆಂಗಾಡಿನಂತಾಗುತ್ತದೆ. ಬಹಳಷ್ಟು ವಿಜ್ಞಾನಿಗಳೂ ಭೌತಶಾಸ್ತ್ರಜ್ಞರೂ ಅತ್ಯಂತ ಸಂಭವನೀಯವಾದ ಊಹೆ ಇದೆಂದು ಹೇಳುತ್ತಾರೆ.

**ಊಹೆ ೩. ಬಿಗ್ ಕ್ರಂಚ್/ಬಿಗ್ ಬೌನ್ಸ್ (ಮಹಾ ಸಂಕುಚನ/ವಿಕಸನ)**

ಮಹಾಸ್ಫೋಟದ ನೇರ ಪರಿಣಾಮವಾಗಿ ಆಗುವುದೇ ಮಹಾ ಸಂಕುಚನ/ವಿಕಸನವೆಂದು ಹೇಳಲಾಗಿದೆ. ಈ ಸಂಭಾವ್ಯತೆಯಲ್ಲಿ ವಿಶ್ವದ ಹಿಗ್ಗುವಿಕೆ ಅನಿರ್ದಿಷ್ಟವಾಗಿಯೋ ಅನಂತ ಕಾಲದವರೆಗೋ ಆಗುತ್ತಿರುವಂಥದ್ದಲ್ಲ. ಈ ಕಾಲ್ಪನಿಕ ಊಹೆಯಲ್ಲಿ ಈ ಇಡೀ ವಿಶ್ವ, ಒಂದು ನಿರ್ದಿಷ್ಟ ಪರಿಧಿ ಇರುವ ದೊಡ್ಡ ವೃತ್ತವೊಂದರ ಜ್ಯಾಮಿತೀಯ ಮಾದರಿಯಲ್ಲಿದೆ. ಮಹಾಸ್ಫೋಟವು ಈ ವೃತ್ತದ ಕೇಂದ್ರ ಭಾಗದಲ್ಲಿ ಸಂಭವಿಸಿದ್ದು, ಆ ಗಳಿಗೆಯಿಂದ ಕೇಂದ್ರದಿಂದ ಪರಿಧಿಯ ಕಡೆಗೆ ಹೊರಟ ಈ ವಿಶ್ವದ ಹಿಗ್ಗುವಿಕೆಯ ಯಾನ ಕಡೆಗೊಮ್ಮೆ (ಅಗಣಿತ ಟ್ರಿಲಿಯನ್ ವರ್ಷಗಳ ನಂತರ) ಪರಿಧಿಯನ್ನು ತಾಕಿದ್ದೇ ತಡ, ಮತ್ತೆ ಎಲ್ಲವೂ ಸಂಕುಚಿಸಿ ಕುಗ್ಗಿ, ಎಲ್ಲಾ ದ್ರವ್ಯರಾಶಿಯೂ ಮರಳಿ ಒಂದು ಮಹಾನ್ ಶಕ್ತಿ ಸಂಚಿತ ಘನ ಸಾಂದ್ರಿತ ರೂಪಕ್ಕೆ ಕುಸಿದುಬಿಡುತ್ತದೆ. ಇಲ್ಲಿಗೆ ಮಹಾ ಸಂಕುಚನವಾಯಿತು. ಆದರೆ ಈ ಊಹೆಯನ್ನು ಮತ್ತೆ ಹಲವರು ಮುಂದುವರಿಸುತ್ತಾರೆ. ಹೀಗೆ ಮಹಾ ಸಂಕುಚನವಾಗಿದ್ದೆ ತಡ, ಈ ಶಕ್ತಿ ಸಂಚಿತ ಕೇಂದ್ರ ತನ್ನ ಈ ಘನ ಸಾಂದ್ರತೆಯ ಅವಸ್ಥೆಯಲ್ಲಿ ಹಾಗೆ ಇನ್ನೊಂದು ಕ್ಷಣ ನಿಲ್ಲುವುದೂ ಅಸಾಧ್ಯವಾಗಿ ಮತ್ತೊಮ್ಮೆ ಮಹಾಸ್ಫೋಟವಾಗಿ ಮತ್ತೆ ಈ ವಿಶ್ವದ ಪಯಣ ಕೇಂದ್ರದಿಂದ ಪರಿಧಿಯೆಡೆಗೆ ಹರಡಲು, ಹಿಗ್ಗಲು ಮೊದಲಿಡುತ್ತದೆ! ಹೀಗೆ ಹಿಗ್ಗುವ ಕುಗ್ಗುವ ಈ ವಿಶ್ವದ ನಿರಂತರ ಪಯಣಕ್ಕೆ ಕೊನೆಯೇ ಇಲ್ಲ, ನಮಗೆ ತಿಳಿದಿರುವ ಮಹಾಸ್ಫೋಟ ಮೊದಲನೆಯದೂ ಅಲ್ಲ, ಕೊನೆಯದ್ದೂ ಅಲ್ಲ ಎಂದು ಈ ಸಂಭಾವ್ಯತೆ ಹೇಳುತ್ತದೆ. ಈ ಮಹಾ ವಿಕಸನ/ಸಂಕುಚನ ಕಲ್ಪನೆಯಲ್ಲಿ ನಿಬ್ಬೆರಗಾಗಿಸುವ ಇನ್ನೊಂದು ಅಂಶವೆಂದರೆ, ಹಾಗೆ ಬಾರಿ ಬಾರಿ ಮಹಾಸ್ಫೋಟ ಸಂಭವಿಸಿದಾಗಲೂ ಎಲ್ಲವೂ ಬಾರಿ ಬಾರಿಗೂ ಮತ್ತೆ ಈ ಮುಂಚೆ ಆದಂತೆಯೇ ಆಗಲು ಮೊದಲಾಗುತ್ತದೆ. ಈ ಕಲ್ಪನೆಯಲ್ಲಿ ನಾನು 'ನಮ್ಮ' ಮಹಾಸ್ಫೋಟಕ್ಕೂ ಮೊದಲು ಅದೆಷ್ಟೋ ಬಾರಿ ಈ ಲೇಖನವನ್ನು ಬರೆದಿರುವುದೂ ನೀವು ಅದನ್ನು ಓದಿರುವುದೂ ಈಗಾಗಲೇ ಆಗಿಹೋಗಿದೆ ಮತ್ತೆ ಮುಂದೆಯೂ ಅದೆಷ್ಟೋ ಬಾರಿ ಮರಳಿ ಆಗಲಿದೆ!

ಭಾರತೀಯ ತತ್ವಜ್ಞಾನವೂ ಹಲವು ಕಡೆ (ಭಾಗವತವೂ ಸೇರಿದಂತೆ) ಇದೇ ಮಾದರಿಯನ್ನು ಕಾಲದ ಸ್ವರೂಪವೆಂದು ಹೇಳಿದೆ. ಯುಗ, ಕಲ್ಪ, ಬ್ರಹ್ಮಗಳ ಕಾಲಪ್ರಮಾಣದಲ್ಲಿ ಚಕ್ರದೋಪಾದಿಯಲ್ಲಿ ಸುತ್ತುತ್ತಿರುವ ಕಾಲ/ವಿಶ್ವ ತಾನು ಹೊರಟಲ್ಲಿಂದ ವಿಸ್ತರಿಸಿಕೊಳ್ಳುತ್ತಾ 'ಕೊನೆಯ ತುದಿ' ಎಂಬ ತಾನು ಹೊರಟಲ್ಲಿಗೇ ಮತ್ತೆ ಬಂದು ಮುಟ್ಟಿದ್ದೇ ಇಡೀ ವಿಶ್ವಸೃಷ್ಟಿ ಒಂದು ಸಣ್ಣ ಬಿಂದುಮಾತ್ರಕ್ಕೆ ಹಿಂದಿರುಗಿ ಮತ್ತೆ ವಿಸ್ತರಿಸುತ್ತಾ ಸುತ್ತಲು ಪ್ರಾರಂಭಿಸುತ್ತದೆ!

**ಊಹೆ ೪. ಬಿಗ್ ಸ್ಲರ್ಪ್ (ಮಹಾ ಕಬಳಿಕೆ)**

ತೀರಾ ಇತ್ತೀಚಿನ ಈ ಊಹೆಯನ್ನು ಸ್ಥೂಲವಾಗಿ ಹೇಳುವುದಾದರೆ, ನಮ್ಮ ವಿಶ್ವವು ಸಹಜವಾಗಿಯೇ ಅಸ್ಥಿರವಾದ ನಿರ್ವಾತದಿಂದ ಕೂಡಿದೆ. ಇದರಿಂದಾಗಿ ಇಡೀ

ಬ್ರಹ್ಮಾಂಡವೇ ತೀರಾ ಅಸ್ಥಿರ ಸ್ಥಿತಿಯಂಚಿನಲ್ಲಿ ತೂಗುಯ್ಯಾಲೆಯಾಡುತ್ತಾ ನಿಂತಿದೆ. ನಾವಿರುವ ಈ ಬ್ರಹ್ಮಾಂಡದಲ್ಲೇ ನಿಮ್ನಶಕ್ತಿಯ ಬದಲೀ ವಿಶ್ವವೊಂದು ಉದ್ಭವಿಸಿ, ಯಾವ ಮುನ್ಸೂಚನೆಯನ್ನೂ ನೀಡದೆ ಇದ್ದಕ್ಕಿದ್ದಂತೆ ಈ ನಿರ್ವಾತದಲ್ಲೇ ನೀರ್ಗುಳ್ಳೆಯಂಥಾ ನಿರ್ವಾತ ಗುಳ್ಳೆಯೊಂದನ್ನು ನಿರ್ಮಿಸಿ, ಅದು ಬೆಳಕಿನ ವೇಗದಲ್ಲಿ ವಿಸ್ತರಿಸಿಕೊಳ್ಳುತ್ತಾ ಹಬ್ಬಿ, ನಾವಿರುವ ಈ ಇಡೀ ವಿಶ್ವವನ್ನು ಕಬಳಿಸಿಬಿಡಲಿದೆ !

ತೀರಾ ಇತ್ತೀಚೆಗೆ, ಹಿಗ್ಸ್ ಬೊಸೊನ್ ಕಣದ ಪತ್ತೆಯಾಗಿ ಅದಕ್ಕಿರುವ ದ್ರವ್ಯರಾಶಿಯ ಕುರಿತಂತೆ ನಡೆಯುತ್ತಿರುವ ಚರ್ಚೆಗಳಿಂದಾಗಿ ಈ ಮಹಾ ಕಬಳಿಕೆಯ ಕುರಿತಂತೆ ನಡೆಯುತ್ತಿರುವ ಚರ್ಚೆಗಳಿಗೂ ಇನ್ನಷ್ಟು ಬಿಸಿ ಏರಿದೆ. ಭೌತ, ಖಭೌತ, ಕ್ವಾಂಟಂ ಸಿದ್ಧಾಂತಗಳ ವಿಜ್ಞಾನ ಲೋಕದಲ್ಲಿ ಇನ್ನು ಮುಂದೆ ನಮಗೆ ತಿಳಿದುಬರಲಿರುವ ಇನ್ನೆಷ್ಟು ಹೊಸ ವಿಷಯಗಳಿಂದ ಇನ್ನೂ ಯಾವ ಯಾವ ಸಂಭಾವ್ಯತೆಗಳ ಸಾಧ್ಯತೆಗಳು ನಮ್ಮ ಮುಂದೆ ಬಿಚ್ಚಿಕೊಳ್ಳಲಿವೆಯೋ! ಒಟ್ಟಿನಲ್ಲಿ ಇದ್ದಹಾಗೆಯೇ ಇರುವ ಸ್ಥಿತಿಯು ನಾವಿರುವ ಬ್ರಹ್ಮಾಂಡಕ್ಕಾಗಲೀ ಅದರೊಳಗಿನ ಸೂಕ್ಷ್ಮಾತಿ ಸೂಕ್ಷ್ಮ ಪರಮಾಣುಗಳೊಳಗಿನ ಆಳದಾಳಗಳಲ್ಲಿ ಮಿಡಿಯುತ್ತಿರುವ ಕಣಗಳಿಗಾಗಲೀ ಇಲ್ಲ. ಚಲನೆ ಎಂಬುದು, ಅಸ್ಥಿರತೆ ಎಂಬುದು, ಬದಲಾವಣೆ ಎಂಬುದು ಇಲ್ಲಿ ಅತ್ಯಂತ ಸಹಜ ಸ್ಥಿತಿ, ಅವಸ್ಥೆ.

ಕೊನೆ ಮೊದಲಿಲ್ಲದ ಈ ಅನಂತ ವಿಶ್ವವನ್ನೂ ಅದರಲ್ಲಿ ನಿರಂತರವಾಗಿ ಆಗುತ್ತಲೇ ಇರುವ ಬದಲಾವಣೆಯ ಅನಂತ ಸಾಧ್ಯತೆಗಳನ್ನು ಊಹಿಸುವುದು, ಪರಿಮಿತ ಕಾಲವೆಂಬ ಮಿತಿಯಲ್ಲೇ ಸಿಕ್ಕಿ ಒದ್ದಾಡುವ ಈ ಸದ್ಯದ ನಮ್ಮ ಕಲ್ಪನಾ ಸಾಮರ್ಥ್ಯಕ್ಕೆ ನಿಲುಕದ್ದು ಎನಿಸಿದಲ್ಲಿ, ಸದ್ಯಕ್ಕೆ ನಮ್ಮ ಮನುಷ್ಯ ಲೋಕದಲ್ಲಿ ಏನೆಲ್ಲಾ ಬದಲಾವಣೆಗಳು ಜರುಗುತ್ತಿವೆ ಎಂದು ಅವಲೋಕಿಸುವ ಪ್ರಯತ್ನ ನಡೆಸಬಹುದು.

ಶಾಶ್ವತ ಮತ್ತು ನಶ್ವರಗಳ ಭಯದ ನೆರಳಲ್ಲೇ ಬದುಕುವ ಕಾರಣಕ್ಕೋ ಏನೋ 'ಬದಲಾವಣೆ'ಯ ಕುರಿತಂತೆ ಬಹಳಷ್ಟು ಜನರಿಗೆ ಅದೊಂದು ಬಗೆಯ ಕಸಿವಿಸಿಯ ಮನೋಭಾವ. ಬದಲಾವಣೆ ಅನಿವಾರ್ಯವಾದರೂ ಅದನ್ನು ಒಪ್ಪಿಕೊಳ್ಳದ, ಅದರ ಕುರಿತಂತೆ ಅದೊಂದು ಬಗೆಯ ನಿರಾಶಾವಾದವನ್ನೇ ಧ್ವನಿಸುವ, ಈ ಲೋಕ ಇಂದಿಗಿಂತಲೂ ಹಿಂದೆಯೇ ಎಲ್ಲಾ ರೀತಿಯಲ್ಲೂ ಉತ್ತಮವಾಗಿತ್ತು ಎಂಬ ಮನೋಭಾವ. ನಿರಾಶಾವಾದವು ಮನುಷ್ಯನ ಅತಿ ಸಾಮಾನ್ಯ ಸ್ವಭಾವಗಳಲ್ಲೊಂದು ಎಂದು ಹಾರ್ವರ್ಡ್ ವಿಶ್ವವಿದ್ಯಾಲಯದಲ್ಲಿ ಸೈಕಾಲಜಿ ಪ್ರೊಫೆಸರ್ ಆಗಿರುವ ಸ್ಟೀವನ್ ಪಿಂಕರ್ ಹೇಳುತ್ತಾರೆ. ಮನೋವಿಜ್ಞಾನಿಯಷ್ಟೇ ಅಲ್ಲದೆ ಭಾಷಾಶಾಸ್ತ್ರಜ್ಞರೂ ಬಹುಶ್ರುತರೂ ಆದ ಪಿಂಕರ್, ಹಿಂಸೆಯ ಕುರಿತಂತೆ ಮನುಷ್ಯ ಸ್ವಭಾವದಲ್ಲಿ ಇರುವ ಸೆಳೆತದ ಕುರಿತು ಅಧ್ಯಯನ ನಡೆಸಿದ್ದಾರೆ. ತಮ್ಮ ಈ ಅಧ್ಯಯನದಿಂದ, ಬದಲಾಗುತ್ತಿರುವ ಈ ಮನುಷ್ಯ ಲೋಕದ ಇಷ್ಟಾನಿಷ್ಟಗಳ ಕುರಿತು ಅವರು ಕಂಡುಕೊಂಡಿರುವ ಕೆಲವು ವಿವರಗಳು ಕುತೂಹಲಕಾರಿಯಾಗಿರುವುದಷ್ಟೇ ಅಲ್ಲದೆ ಅತ್ಯಂತ ಆಶಾದಾಯಕವಾಗಿವೆ.

ಪಿಂಕರ್ ಅವರ ಪ್ರಕಾರ, ಇಲ್ಲಿಯವರೆಗಿನ ಮನುಷ್ಯ ಜನಾಂಗದ ಬೆಳವಣಿಗೆಯ ಅವಲೋಕನದಲ್ಲಿ ಅತ್ಯಂತ ನಿರ್ಲಕ್ಷ್ಯಕ್ಕೆ ಒಳಗಾದ ವಿಷಯವೆಂದರೆ, ಹಿಂಸೆಯ ಕುರಿತಂತೆ ಮನುಷ್ಯನ ಧೋರಣೆಯಲ್ಲಿ ಆದ ಬದಲಾವಣೆ. ಅವರ ಪ್ರಕಾರ ಹಿಂದೆಂದಿಗಿಂತಲೂ ಇಂದು ಮನುಷ್ಯ ಜನಾಂಗ ಅತಿ ದೊಡ್ಡ ಮಟ್ಟದಲ್ಲಿ ಅಹಿಂಸಾತ್ಮಕವಾಗಿ ಬದುಕುತ್ತಿದೆ. ಈ ವಿಷಯವನ್ನು ಪ್ರತಿಪಾದಿಸಲು ಅವರು ತಮ್ಮ ಪುಸ್ತಕಗಳಲ್ಲೂ ಉಪನ್ಯಾಸಗಳಲ್ಲೂ ವಿಶದವಾದ ಪುರಾವೆಗಳನ್ನು ಒದಗಿಸುತ್ತಾರೆ. ಮನುಷ್ಯನಲ್ಲಿ ಹಿಂಸಾಪ್ರವೃತ್ತಿ ಕಡಿಮೆಯಾಗಲು ನಾಲ್ಕು ಪ್ರಮುಖ ಕಾರಣಗಳನ್ನು ಗುರುತಿಸುತ್ತಾರೆ. ವೈಚಾರಿಕತೆ, ವೈಜ್ಞಾನಿಕ ಕ್ಷೇತ್ರದಲ್ಲಾಗುತ್ತಿರುವ ಬೆಳವಣಿಗೆ, ಮಾನವೀಯತೆ ಮತ್ತು ಆರ್ಥಿಕ ಪ್ರಗತಿ ಈ ನಾಲ್ಕು ಮುಖ್ಯ ವಿಷಯಗಳಲ್ಲಿ ಕಾಲಕ್ರಮೇಣವಾಗಿ ಆಗುತ್ತಿರುವ ಧನಾತ್ಮಕ ಬದಲಾವಣೆಗಳಿಂದಾಗಿಯೇ ಹಿಂದೆಂದಿಗಿಂತಲೂ ನಾವೀಗ ಹೆಚ್ಚು ಮಾನವೀಯ ಮೌಲ್ಯಗಳನ್ನುಳ್ಳವರಾಗಿ ಬದುಕುತ್ತಿದ್ದೇವೆ ಎಂದು ಅವರ ಅಭಿಪ್ರಾಯ. ವಿಶ್ವಸಂಸ್ಥೆ ಮತ್ತು ಇನ್ನೂ ಹಲವಾರು ವಿಶ್ವಾಸಾರ್ಹ ಮೂಲಗಳಿಂದ ಒದಗಿಬರುವ ಅಂಕಿ ಅಂಶಗಳನ್ನು ಗಮನಿಸುವಾಗಲೂ ಪಿಂಕರ್ ಅವರು ಹೇಳುತ್ತಿರುವುದು ಸರಿಯಾಗಿದೆ ಎಂದೇ ಅನಿಸುತ್ತದೆ. ಅವರು ತಿಳಿಸಿದ ಮೇಲ್ಕಂಡ ಈ ನಾಲ್ಕೂ ಮೌಲ್ಯಗಳನ್ನೂ ಅಳವಡಿಸಿಕೊಂಡು, ಒಟ್ಟಾರೆ ಪ್ರಗತಿ ಸಾಧಿಸುತ್ತಿರುವ ಮುಂದುವರೆದ ದೇಶಗಳಲ್ಲಂತೂ ಇದು ಎದ್ದು ಕಾಣಿಸುವಂತೆಯೇ ಇದೆ. ಆದರೆ ಈ ನಾಲ್ಕೂ ಮುಖ್ಯ ಅಂಶಗಳಲ್ಲೂ ಏಕಪ್ರಕಾರವಾಗಿ ಆಗಬೇಕಾದ ಬದಲಾವಣೆ ಕೇವಲ ಒಂದೋ ಎರಡೋ ಅಂಶಗಳಿಗಷ್ಟೇ ಸೀಮಿತಗೊಂಡಾಗ (ಉದಾಹರಣೆಗೆ, ಆರ್ಥಿಕವಾಗಿ ಬಲಿಷ್ಟವಾಗಿ ವೈಚಾರಿಕವಾಗಿ ದುರ್ಬಲವಾಗುವ) ಅಥವಾ ಈ ಯಾವ ಅಂಶಗಳಲ್ಲೂ ಧನಾತ್ಮಕವಾಗಿ ಯಾವ ಬದಲಾವಣೆಯೂ ಕಷ್ಟಸಾಧ್ಯವಾದ ದೇಶಗಳನ್ನು ಗಮನಿಸುವಾಗ, ಈ ಬದಲಾವಣೆ ಎಂಬ ವಿದ್ಯಮಾನ ತಂದು ಒದಗಿಸಿರುವ ಸಂದಿಗ್ಧಗಳೇ ಕಾರಣವಾಗಿ ಅಲ್ಲಿನ ಸಮಾಜ ಇನ್ನಷ್ಟು ಹಿಂಸಾತ್ಮಕವಾದಂತೆಯೂ ಕಾಣಿಸುತ್ತಿದೆ. ಒಟ್ಟಾರೆ ಪ್ರಪಂಚದಾದ್ಯಂತ ಹಿಂಸಾತ್ಮಕ ಪ್ರವೃತ್ತಿ ಕಡಿಮೆಯಾಗುವುದು ಎಂದಿಗಾದರೂ ಸಾಧ್ಯವಾಗಬಹುದೆ? ಭಾರತೀಯ ಸಮಾಜವನ್ನು ಒಟ್ಟಾರೆಯಾಗಿ ಗಮನಿಸುವಾಗಲೂ ಬದಲಾಗುತ್ತಿರುವ ಸಂದರ್ಭಗಳು, ಪಾತ್ರಗಳೂ ಮತ್ತು ಈ ಬದಲಾವಣೆ ತಂದೊದಗಿಸಿರುವ ಸಂದಿಗ್ಧತೆ, ಸವಾಲುಗಳೂ ಎದ್ದು ಕಾಣುವಂತಿವೆ. ಉದಾಹರಣೆಗೆ ಭಾರತೀಯ ಸಮಾಜದಲ್ಲಿ ಶತಶತಮಾನಗಳಿಂದ ನಿರ್ಮಿತವಾಗಿದ್ದ ಹೆಂಗಸರ ಸಾಮಾಜಿಕ ಭೂಮಿಕೆಯಲ್ಲಾದ ಬದಲಾವಣೆ ಅದೇ ವೇಗದಲ್ಲಿ ಗಂಡಸರ ಪಾತ್ರದಲ್ಲಾಗುತ್ತಿಲ್ಲ!

ಭರವಸೆಗಳ ಕನಸುಗಳ ಹಾದಿಯಲ್ಲಿ ಇಂಥದ್ದೆಲ್ಲ ಸಂದಿಗ್ಧಗಳೂ ಸವಾಲುಗಳೂ ಬದಲಾವಣೆಯಷ್ಟೇ ಸಹಜ ಸ್ಥಿತಿಗಳು. ಕಡೆಗೆ ಎಲ್ಲವೂ ಎಂದಿಗೂ ಇದ್ದ ಹಾಗೆಯೇ ಇರುವುದಾದರೆ, 'ಇರುವಿಕೆ'ಯ ಸ್ಥಿತಿಗಾದರೂ ಯಾವ ಅರ್ಥವಿದೆ?

ಸುಮಾರು ೪೨೮೦ ಮಿಲಿಯನ್ ವರ್ಷಗಳಷ್ಟು ಹಿಂದೆ ಭೂಮಿಯ ಮೇಲೆ ಏಕಾಣು ಜೀವಿಯಾಗಿ ಕಾಣಿಸಿಕೊಂಡ ಜೀವವೊಂದು, ನಿರಂತರವಾಗಿ ಪರಿವರ್ತಿತವಾಗುತ್ತಾ ರೂಪ ರೂಪಗಳನ್ನು ದಾಟುತ್ತಾ ನಾಮಕೋಟಿಗಳನ್ನು ಮೀಟುತ್ತಾ ಈಗ ಈ ಲೇಖನ ಬರೆಯುತ್ತಿರುವ ನಾನಾಗಿ, ಓದುತ್ತಿರುವ ನೀವಾಗಿ ಇಲ್ಲಿ ಹೀಗೆ ಈ ಗಳಿಗೆಯಲ್ಲಿರುವ ಈ ಅದ್ಭುತಕ್ಕೂ ಜೀವದಾಳದಲ್ಲೆಲ್ಲೋ ಸದಾ ಮಿಡಿಯುತ್ತಲೇ ಉಳಿದಿರುವ ಬದಲಾಗುವ ಹಂಬಲವೇ ಕಾರಣವಲ್ಲವೇ? ಜೀವಕೋಶದೊಳಗಿನ ಡಿ.ಎನ್.ಎ.ಗಳಿಗೆ ಬದಲಾಗುವ, ಪರಿವರ್ತಿತವಾಗುವ, ಇನ್ನೊಂದೇ ವೈವಿಧ್ಯವಾಗಿ ಅರಳಿಕೊಳ್ಳುವ ಆಸೆಯೊಂದು ಅಂಕುರಿಸದಿದ್ದಲ್ಲಿ, ಜೀವ ವಿಕಾಸವೆಂಬ ಅದ್ಭುತವೊಂದು ನಡೆಯದೆಯೇ ಇದ್ದಿದ್ದಲ್ಲಿ, ಈ ನೆಲದ ಮೇಲೆ ಈಗಿರುವ (ಮತ್ತು ಹಿಂದೊಮ್ಮೆ ಇದ್ದು ಈಗ ಇಲ್ಲದಾಗಿರುವ) ಕೋಟ್ಯಾಂತರ ಜೀವ ವೈವಿಧ್ಯಕ್ಕೆ ಹೀಗೆ ಈಗ ಇಲ್ಲಿ ಇರುವ ಅವಕಾಶವಾದರೂ ಎಲ್ಲಿರುತ್ತಿತ್ತು?!

*

# ಲೋಲ

■ **ಗುರುಪ್ರಸಾದ ಕಾಗಿನೆಲೆ,** Rochester, MN.

ಮೈಕೆಲ್‌ನನ್ನು ಕೆಲಸದಿಂದ ತೆಗೆದದ್ದು ಬಹಳ ವಿಚಿತ್ರವಾದ ಸಂದರ್ಭದಲ್ಲಿ. ಅಂದು ಆಸ್ಪತ್ರೆಯ ಆಡಳಿತ ಮಂಡಳಿಯಿಂದ ಬೆತ್ ಕೋಲರ್ ತನ್ನ ವಂದಿಮಾಗಧರ ಜತೆ ನೇರವಾಗಿ ನಮ್ಮ ತುರ್ತುಚಿಕಿತ್ಸಾ ವಿಭಾಗಕ್ಕೆ ಬಂದು ಮೈಕೆಲನನ್ನು ಸೀದಾ ಆಕೆಯ ಆಫೀಸಿಗೆ ಕರಕೊಂಡು ಹೋಗಿದ್ದಷ್ಟೇ. ಆತ ವಾಪಸ್ ಬರಲೇ ಇಲ್ಲ. ಅಂದು ಮೈಕೆಲ್ ಮತ್ತು ನಾನು ಒಟ್ಟಿಗೇ ಕೆಲಸ ಮಾಡುತ್ತಿದ್ದೆವು. ಎಮರ್ಜೆನ್ಸಿ ರೂಮಿನಲ್ಲಿ ಸಿಕ್ಕಾಪಟ್ಟೆ ಜನ. ಮೈಕೆಲ್ ಅಂದು ಬಂದದ್ದೇ ಹದಿನೈದು ನಿಮಿಷ ತಡವಾಗಿ. ಬಂದವನೇ ತನ್ನ ಬಟ್ಟೆ ಬದಲಿಸಿ ಸ್ಕ್ರಬ್ಸ್ ಹಾಕಿಕೊಂಡು ಬಂದಾಗ ಅವನನ್ನೇ ಕಾಯುತ್ತಿದ್ದಂತೆ ಬೆತ್ ಮತ್ತು ಆಕೆಯ ತಂಡದವರು ಆತನನ್ನು ಡಿಪಾರ್ಟ್‌ಮೆಂಟಿನಿಂದ ಕರೆದುಕೊಂಡು ಹೋದರು. ನಂತರ ಬೆತ್ "ಡಾ. ಮೈಕೆಲ್ ಇನ್ನು ಮುಂದೆ ನಮ್ಮ ಆಸ್ಪತ್ರೆಯಲ್ಲಿ ಕೆಲಸ ಮಾಡುವುದಿಲ್ಲ. ಆತ ತನ್ನ ವೈಯಕ್ತಿಕ ಕಾರಣಗಳಿಂದ ಕೆಲಸಕ್ಕೆ ರಾಜೀನಾಮೆ ಕೊಟ್ಟಿದ್ದಾನೆ" ಎಂದು ಒಂದು ಚುಟುಕಾದ ಇಮೈಲ್ ಕಳಿಸಿದ್ದಳು.

ನಾನು ಬೆತ್‌ಳ ಆಫೀಸಿಗೆ ಹೋಗಿ "ಇವೆಲ್ಲ ಆಡಳಿತದವರು ಆಡೋ ನಾಟಕ. ನನಗೆ ಗೊತ್ತಾಗುತ್ತದೆ. ಮೈಕೆಲ್ ರಾಜೀನಾಮೆ ಕೊಟ್ಟಿದ್ದಲ್ಲ. ಅವನನ್ನು ಕೆಲಸದಿಂದ ತೆಗೆದದ್ದು ತಾನೇ?" ಎಂದು ಕೇಳಿದಾಗ ಆಕೆ ಕೊಂಚ ಕೊಂಕಾದ ಧ್ವನಿಯಲ್ಲಿ "ನಿನಗೆ ಇದರಿಂದ ಇನ್ನೂ ಅನುಕೂಲವೇ ತಾನೇ? ವಿಭಾಗದ ಮುಖ್ಯಸ್ಥನ ಜಾಗಕ್ಕೆ ಈಗ ನಿನಗೆ ಯಾರೂ ಸ್ಪರ್ಧಿಗಳಿಲ್ಲ" ಎಂದು ನಕ್ಕಳು.

ನಾನು ಕೊಂಚ ಆಕ್ಷೇಪಣೆಯ ಧ್ವನಿಯಲ್ಲಿ "ಮುಖ್ಯಸ್ಥನ ಕೆಲಸ ಹಾಳಾಗಿಹೋಗಲಿ. ಈಗ ಈ ಡಿಪಾರ್ಟ್‌ಮೆಂಟಲ್ಲಿರೋ ಇಷ್ಟು ಜನರನ್ನು ನಿಭಾಯಿಸೋದು ಹೇಗೆ? ಇಂಥ ಗಿಜಿಗಿಜಿ ಸಮಯದಲ್ಲಿ ಒಂದು ಸುಳಿವೂ ಕೊಡದೆ ಏಕ್‌ದಂ ಡಾಕ್ಟರುಗಳನ್ನು ಕೆಲಸದಿಂದ

ತೆಗೆಯೋದು ಅಂದರೆ ಏನು? ಅದೂ, ಮೈಕೆಲ್ ನಿಜವಾಗಿಯೂ ಒಳ್ಳೆಯ ಡಾಕ್ಟರು. ಡಿಪಾರ್ಟ್‌ಮೆಂಟು ಎಷ್ಟೇ ಗಿಜಿಗಿಜಿಗುಟ್ಟುತ್ತಿರಲಿ, ರೋಗಿಗೆ ಎಂಥ ಮಾರಣಾಂತಿಕ ಖಾಯಿಲೆಯಿರಲಿ, ಕೊಂಚವೂ ಸಂಯಮ ಕಳೆದುಕೊಳ್ಳದೇ ಶಾಂತವಾಗಿ ಕೆಲಸ ಮಾಡುತ್ತಿದ್ದ. ಈಗ ನಾನೊಬ್ಬನೇ ಇಡೀ ವಿಭಾಗವನ್ನು ಹೇಗೆ ನಿಭಾಯಿಸಲಿ? ನಿಮಗೆ ನಮ್ಮ ಕಷ್ಟ ಅರ್ಥವಾಗುವುದಾದರೂ ಹೇಗೆ? ಇಷ್ಟಕ್ಕೂ ಮೈಕೆಲ್ ಮಾಡಿದ ತಪ್ಪಾದರೂ ಏನು?" ಎಂದು ಕೇಳಿದೆ.

"ನನ್ನ ಮಾತು ನಂಬು. ಇದರ ಬಗ್ಗೆ ನಾನು ಹೆಚ್ಚೇನೂ ಹೇಳಲಾರೆ. ಮೈಕೆಲ್‌ನಂಥ ಡಾಕ್ಟರನ್ನು ಕೆಲಸದಿಂದ ತೆಗೆಯುವುದು ನಮಗೂ ಬಹಳ ಕಷ್ಟ. ಅದರಲ್ಲೂ ಆತ ಇಡೀ ಡಿಪಾಟ್‌ಮೆಂಟಿಗೆ ಚೀಫ್ ಆಗ್ತಿದ್ದ. ನಮಗೆ, ಅದೂ, ಆಡಳಿತ ಮಂಡಳಿಗೆ ಮತ್ತೆ ಅಂಥವನನ್ನು ಹುಡುಕೋದು ಕಷ್ಟ. ಆದರೆ ಆಡಳಿತದಲ್ಲಿದ್ದಾಗ ಕೆಲವೊಮ್ಮೆ ಕಷ್ಟಕರವಾದ ನಿರ್ಣಯಗಳನ್ನು ತೆಗೆದುಕೊಳ್ಳಲೇಬೇಕಾಗುತ್ತದೆ" ಎಂದು ಹೇಳಿ, "ಕಾಲ ಕಳೆದಂತೆ ನಿನಗೇ ಗೊತ್ತಾಗುತ್ತದೆ" ಎಂದು ಹೇಳಿ ನಮ್ಮ ಸಂಭಾಷಣೆಯನ್ನು ತುಂಡರಿಸಿದ್ದಳು.

ನಾನು ಎಲ್ಲರನ್ನೂ ಬಯ್ದುಕೊಳ್ಳುತ್ತಾ ಅಂದಿನ ಪಾಳಿಯನ್ನು ಮುಗಿಸಿದ್ದೆ.

* * *

ವಾಸ್ತವವಾಗಿ ಮೈಕೆಲನ ಈ ಹಠಾತ್ ನಿರ್ಗಮನದಿಂದ ಯಾರಿಗಾದರೂ ಕೆಟ್ಟ ಖುಷಿಯಾಗಬೇಕಿದ್ದರೆ ಅದು ನನಗೇ. ನಮ್ಮ ಡಿಪಾರ್ಟ್‌ಮೆಂಟಿನ ಮುಖ್ಯಸ್ಥನ ಕೆಲಸಕ್ಕೆ ಸದರಿ ಚೀಫ್ ರಾಬರ್ಟ್ ರಾಜೀನಾಮೆ ಕೊಟ್ಟಿದ್ದ. ಆತನ ಜಾಗ ತೆರವಾದಾಗ ಆಸ್ಪತ್ರೆಯ ನಿಯಮಾವಳಿಗಳ ಪ್ರಕಾರ ಆ ಕೆಲಸಕ್ಕೆ ಆಸ್ಪತ್ರೆಯ ವೆಬ್‌ಸೈಟಿನಲ್ಲಿ ಮತ್ತು ಸ್ಥಳೀಯ ಪತ್ರಿಕೆಗಳಲ್ಲಿ ಜಾಹಿರಾತು ಕೊಡಬೇಕು. ಆಂತರಿಕ ಅಭ್ಯರ್ಥಿಗಳಿಗೇ ಆದ್ಯತೆ ಕೊಡಬಹುದೆಂಬ ಗುಮಾನಿ ಮತ್ತು ಶೇಕಡ ಹದಿನಾರರಷ್ಟು ಜಾಸ್ತಿ ಸಂಬಳ– ಎರಡೂ ಕಾರಣದಿಂದ ಇಡೀ ವಿಭಾಗದ ಡಾಕ್ಟರುಗಳೆಲ್ಲ ಈ ಚೀಫ್ ಪಟ್ಟಕ್ಕೆ ಅರ್ಜಿ ಹಾಕಿದ್ದೆವು. ಕೊನೆಯ ಸುತ್ತಿನ ಸಂದರ್ಶನಕ್ಕೆ ನಾನೂ ಮೈಕೆಲ್ ಇಬ್ಬರೂ ಆಯ್ಕೆಯಾಗಿದ್ದೆವು. ನನ್ನ ಸಂದರ್ಶನ ಚೆನ್ನಾಗಿಯೇ ಆಗಿತ್ತು ಎಂದುಕೊಂಡಿದ್ದೆ. ಆದರೆ ಮೈಕೆಲನಿಗೆ ಚೀಫ್ ಪಟ್ಟ ಸಿಕ್ಕಿತ್ತು.

ನನಗೆ ಸಹಜವಾಗಿ ಬೇಸರವಾಗಿದ್ದರೂ ಒಳಗೊಳಗೇ ನನಗಿಂತ ಮೈಕೆಲ್ ಈ ಕೆಲಸಕ್ಕೆ ಸರಿಯಾದವನೇನೋ ಎಂಬ ಅನುಮಾನವಿತ್ತು. ಆತ ಹೋದ ವರ್ಷ ಟ್ರಾಮಾ ಫೆಲೋಶಿಪ್ಪನ್ನು ಮಾಡಿದ್ದ. ನಮ್ಮ ಇಡೀ ವಿಭಾಗದಲ್ಲಿ ಯಾರೂ ಮಾಡದ ಕೆಲವೊಂದು ಜೀವ ಉಳಿಸುವ ಪ್ರೊಸೀಜರುಗಳನ್ನು ಕಲಿತಿದ್ದ. ಅದಕ್ಕಿಂತ ಮುಂಚೆ ಆಸ್ಪತ್ರೆಯ ಆಡಳಿತದವರು ನನಗೂ ಮೈಕೆಲನಿಗೂ ಎಂಬಿಎ ಮಾಡಲು ವಿಶೇಷವಾಗಿ ಹಣ ಕೊಟ್ಟು ಯುನಿವರ್ಸಿಟಿಗೆ ಕಳಿಸಿದ್ದರು. ನಾವಿಬ್ಬರೂ ಹೆಚ್ಚು ಕಮ್ಮಿ ಒಂದೇ ಮಟ್ಟದ ಡಾಕ್ಟರಿಕೆಯನ್ನು ಮಾಡಿದರೂ ಆಸ್ಪತ್ರೆಯ ಇತರೇ ವಿಭಾಗದ ಜತೆ ಸತತವಾಗಿ ಸಂಪರ್ಕದಲ್ಲಿರುವುದು,

ರೋಗಿಗಳ ದೂರುಪತ್ರಗಳಿಗೆ ನಯವಾಗಿ ಉತ್ತರಿಸುವುದು, ನರ್ಸುಗಳನ್ನು ಸದಾ ಖುಷಿಯಾಗಿಡುವುದು ಮತ್ತು ಆಸ್ಪತ್ರೆಯ ಇನ್ನಿತರ ಸಣ್ಣ ಸಣ್ಣ ರಾಜಕೀಯಗಳನ್ನು ನಿಭಾಯಿಸುವುದು ಇಂಥವಕ್ಕೆ ನನಗಿಂತ ಮೈಕೆಲ್ ಸರಿಯಾದವನು ಎಂದು ನನಗೂ ಅನಿಸಿತ್ತು. ಆದರೂ ದುಡ್ಡು ಯಾರಿಗೆ ಬೇಡ? ಹೇಗೆ ನನಗೆ ನಾನು ಸಮಜಾಯಿಷಿ ಕೊಟ್ಟುಕೊಂಡರೂ ನಾನು ಮೈಕೆಲನಿಗಿಂತ ಕಮ್ಮಿಯೇನೂ ಇರಲಿಲ್ಲ, ಅವನಷ್ಟೇ ದಕ್ಷತೆಯಿಂದ ಇಲ್ಲವೇ ಅವನಿಗಿಂತ ಚೆನ್ನಾಗಿ ನಾನು ಈ ಕೆಲಸ ಮಾಡುತ್ತಿದ್ದೆ ಎನ್ನುವ ಭಾವನೆ ಹೋಗಲಿಲ್ಲ. ಅದರಲ್ಲಿಯೂ ಸ್ವಾತಿ "ನಾನು ನಿನಗೆ ಹೇಳಿದ್ದೆ. ಸೂಟು ಬೂಟು ಹಾಕಿಕೊಂಡು ನಾಲಿಗೆ ತಿರುಗಿಸಿಕೊಂಡು ಉಚ್ಚಾರ ಬದಲಿಸಿಕೊಂಡ ತಕ್ಷಣ ನೀನು ಮೈಕೆಲನಾಗೋದಿಲ್ಲ. ನೀನು ಮೈಕೆಲನಾಗದತನಕ ನಿನಗೆ ಚೀಫು ಗೀಫು ಪಟ್ಟ ಎಲ್ಲ ಸಿಗೊಲ್ಲ. ಸುಮ್ಮನೆ ತಲೆನೋವು ಕಮ್ಮಿಯಾಯ್ತು ಅಂತ ಸಂತೋಷಪಟ್ಟುಕೋ" ಎಂದು ಇದಕ್ಕೊಂದು ಬಣ್ಣಬಣ್ಣದ ತಿರುವು ಕೊಟ್ಟಿದ್ದಳು. ನಾನು ಆದಷ್ಟು ಈ ವಿಷಯವನ್ನು ಮರೆಯಲು ಪ್ರಯತ್ನಿಸುತ್ತಿದ್ದೆ.

ರಾಬರ್ಟ್ ಈ ಆರ್ಥಿಕ ವರ್ಷಾಂತ್ಯದವರೆಗೂ ಮುಖ್ಯಸ್ಥನಾಗಿರುವುದು, ಅನಂತರ ಮೈಕೆಲ್ ಮುಖ್ಯಸ್ಥನ ಜವಾಬ್ದಾರಿಯನ್ನು ವಹಿಸಿಕೊಳ್ಳುವುದು ಎಂದು ನಿರ್ಧರಿಸಿಯಾಗಿತ್ತು.

ಅಂತದರಲ್ಲಿ ಈಗ ಮೈಕೆಲ್ ಇದ್ದಕ್ಕಿದ್ದಂತೆ ಕೆಲಸ ಕಳಕೊಂಡಿದ್ದಾನೆ.

ಬೇಡವೆಂದರೂ ನನ್ನ ಕಣ್ಣಲ್ಲಿ ಬೇರೆ ಯಾರಿಗೂ ಕಾಣಿಸದಂತೆ ನಿಗ್ರಹಿಸಿಕೊಳ್ಳಬೇಕಾದ ಹೊಳಪಿತ್ತಂತೆ, ಸ್ವಾತಿ ಹೇಳಿದ್ದಳು.

* * *

ಮೈಕೆಲನ ಈ ಅಚಾನಕ್ ನಿರ್ಗಮನ ಕೆಲಸಗಾರರಲ್ಲಿ ಹಲವಾರು ಊಹಾಪೋಹಗಳನ್ನು ಹುಟ್ಟಿಸಿತ್ತು. "ನನಗೆ ಗೊತ್ತಿತ್ತು, ಆತ ಕೆಲಸ ಕಳೆದುಕೊಳ್ಳುತ್ತಾನೆ ಅಂತ. ಆತ ಕುಡುಕ. ಕಣ್ಣುಗಳನ್ನು ನೋಡಿದರೇ ಹೇಳಬಹುದು. ಮೊನ್ನೆ ಆತ ಬೆಳಿಗ್ಗೆ ಬಂದಾಗ ಆತ ಹತ್ತಿರ ಸುಳಿದರೆ ಆಲ್ಕೋಹಾಲಿನ ವಾಸನೆ ಬರುತ್ತಿತ್ತು" ಎಂದು ಒಬ್ಬ ನರ್ಸ್ ಹೇಳಿದರೆ, ಇನ್ನೊಬ್ಬಾಕೆ "ಅದು ಗಾಯ ಕ್ಲೀನ್ ಮಾಡುವ ಆಲ್ಕೋಹಾಲು. ಆಗತಾನೆ ಆತ ರೂಮ್ ನಾಲ್ಕರ ಪೇಶೆಂಟಿಗೆ ಹೊಲಿಗೆ ಹಾಕಿ ಬಂದಿದ್ದ" ಎಂದು ಮೈಕೆಲನ ಪರವಾಗಿ ನಿಂತಳು. "ಆತ ನಮ್ಮನ್ನು ನೋಡುತ್ತಿದ್ದ ರೀತಿ ಗಮನಿಸಿದೆಯಾ? ನನ್ನನ್ನು ನೋಡುತ್ತಿದ್ದಾಗ ನನ್ನ ಎದೆಯನ್ನೇ ದಿಟ್ಟಿಸಿ ನೋಡುತ್ತಿದ್ದ. ಯಾವ ಪೇಶೆಂಟಿಗೆ ಏನು ಮಾಡಿದನೋ. ಎಷ್ಟೋ ಬಾರಿ ಹೆಂಗಸರನ್ನು ಪರೀಕ್ಷೆ ಮಾಡುವಾಗ ಆತ ನಮ್ಮನ್ನು ರೂಮಿನೊಳಗೂ ಕರೆಯುತ್ತಾ ಇರಲಿಲ್ಲ. ಯಾರಿಗೆ ಗೊತ್ತು, ಆ ನಾಲ್ಕು ಗೋಡೆಗಳ ನಡುವೆ ಏನು ನಡೆಯುತ್ತದೆ ಅಂತ. ಇಂಥವನನ್ನು ಚೀಫ್ ಮಾಡಲು ಹೊರಟಿದ್ದರು, ಬೇರೆ" ಎಂದು ಇನ್ನೊಬ್ಬಾಕೆ ಹೇಳಿದಳು.

ಮೈಕೆಲ್ ನನಗೆ ಕೆಲಸದ ಹೊರಗೂ ಕೊಂಚ ಪರಿಚಯವಿದ್ದ. ಆತನ ಹೆಂಡತಿ ಹಿಲರಿ ನಾವು ಹೋಗುವ ಜಿಮ್ಮಿನಲ್ಲಿಯೇ ಝೂಂಬಾ ಹೇಳಿಕೊಡುತ್ತಾಳೆ. ನಾನೂ ಕೆಲವೊಮ್ಮೆ ಆಕೆಯ ಕ್ಲಾಸಿಗೆ ಹೋಗಿದ್ದೆ. ಮಗ ಎಂಟನೇ ಕ್ಲಾಸಿನಲ್ಲಿ ಓದುತ್ತಿದ್ದ. ಪುಟ್ಟ ಮತ್ತು ಮೈಕೆಲನ ಮಗ ಒಟ್ಟಿಗೇ ಬ್ಯಾಸ್ಕೆಟ್ ಬಾಲ್ ಆಡುತ್ತಿದ್ದರು. ಮಕ್ಕಳ ಶಾಲೆ, ಆಟ ಪಾಠದ ಬಗ್ಗೆ ಮಾತಾಡುತ್ತಿದ್ದೆವು. ಸ್ವಾತಿ ಜಿಮ್ಮಿಗೆ ಬರುತ್ತಿದ್ದರೂ ಈ ಸಾಮೂಹಿಕ ವ್ಯಾಯಾಮದ ಕ್ಲಾಸುಗಳಿಗೆ ಮಾತ್ರ ಹಾಜರಾಗುತ್ತಿರಲಿಲ್ಲ. ಹಾಗಾಗಿ ಮೈಕೆಲ್ ಮತ್ತು ಹಿಲರಿ ಇಬ್ಬರೂ ಸ್ವಾತಿಗಿಂತ ಹೆಚ್ಚಾಗಿ ನನಗೇ ಪರಿಚಯ.

ಮೈಕೆಲನನ್ನು ಯಾಕೆ ಕೆಲಸದಿಂದ ತೆಗೆದರು ಎಂಬುದು ಎಷ್ಟು ದಿನವಾದರೂ ಯಾರಿಗೂ ಗೊತ್ತಿರಲಿಲ್ಲ. ನಾನು ನಮ್ಮ ವಿಭಾಗದ ಮುಖ್ಯಸ್ಥ ರಾಬರ್ಟನನ್ನು ಕೇಳಿದೆ. ಆತ "ದಯವಿಟ್ಟು ಆ ವಿಷಯ ಒಂದು ಮಾತಾಡಬೇಡ. ಆದರೆ ಒಂದು ಮಾತ್ರ ನಿಜ. ಈ ಗಾಳಿಸುದ್ದಿಗೆ ಕಿವಿಗೊಡಬೇಡ. ಆತ ಯಾರೊಂದಿಗೂ ಅನುಚಿತವಾಗಿ ನಡಕೊಂಡಿರಲಿಲ್ಲ. ಅಷ್ಟೇ ಅಲ್ಲ. ಆತನ ವೈದ್ಯಕೀಯ ಪರಿಣತಿಗೂ ಈಗ ಆತ ಕೆಲಸ ಕಳಕೊಂಡಿರುವುದಕ್ಕೂ ಏನೂ ಸಂಬಂಧವಿಲ್ಲ. ದೇವರ ದಯದಿಂದ ಆತ ಮತ್ತೆ ನಮ್ಮ ಆಸ್ಪತ್ರೆಯಲ್ಲಿ ಕೆಲಸ ಮಾಡುವಂತಾದರೆ ಸಾಕು. ಆತ ಬಹಳ ಒಳ್ಳೆಯ ಡಾಕ್ಟರು" ಎಂದ. ಮತ್ತೆ ನನ್ನ ಮುಖ ನೋಡಿ "ಅಫ್ ಕೋರ್ಸ್, ನೀನೂ ಅಷ್ಟೇ ಒಳ್ಳೇ ಡಾಕ್ಟರು. ಚೀಫ್ ಆಗಲಿಕ್ಕೆ ಸಿದ್ಧವಾಗಿದ್ದೀಯಾ. ನೀನೇ ತಾನೇ ನೆಕ್ಸ್ಟ್ ಇನ್ ಲೈನ್" ಎಂದು ನಕ್ಕ.

ನಾನು ಕೂಡ ಸುಮ್ಮನೆ ನಕ್ಕೆ.

ಅಂದು ಮನೆಗೆ ಬಂದು ಸ್ವಾತಿಗೆ ಈ ವಿಷಯ ಹೇಳಿದಾಗ "ಏನೇನು ಸುಡುಗಾಡಿರುತ್ತೋ ಇವರದ್ದು. ವಾಸ್ ಮೈಕೆಲ್ ಮಿಟೂಡ್?" ಎಂದು ಕೇಳಿದಳು. 'ಮಿಟೂ' ಅನ್ನುವ ಪದಗುಚ್ಛವನ್ನು ವಿಶೇಷಣವೋ, ಬಯ್ಗುಳವೋ ಆಗಿ ಕೇಳಿದ್ದೆ. ಆದರೆ ಅದನ್ನು ಒಂದು ಕ್ರಿಯಾಪದವಾಗಿ ಉಪಯೋಗಿಸಿದ್ದ ಕೀರ್ತಿ ಸ್ವಾತಿಗೆ ಸೇರುತ್ತದೇನೋ. ನಾನು "ಗೊತ್ತಿಲ್ಲ" ಎಂದೆ. ನನ್ನನ್ನು ನೋಡಿ "ಆತ ಮಿಟೂ ಆಗಿ ಕೆಲಸ ಕಳಕೊಂಡಿದ್ದರೆ ವಾಪಸ್ ಚೀಫ್ ಆಗೋದು ಕಷ್ಟ. ನೀನೇ ತಾನೇ ನೆಕ್ಸ್ಟ್ ಇನ್ ಲೈನ್. ಚೀಫ್ ಆದರೆ ಹುಷಾರಾಗಿರು. ಸುತ್ತಲೂ ಬರೇ ಹೆಂಗಸರೇ ಇರ್ತಾರೆ. ನಿನಗೆ ಮೊದಲೇ ಸುತ್ತಲೂ ಜನರಿದ್ದರೆ ಜೋಕ್ ಮಾಡೋ ಜೋಷು. ಜೋಕ್ ಮಾಡ್ತಾ ಇದೀನಿ ಅಂತ ತಿಳಕೊಂಡು ಏನೇನೋ ಮಾತಾಡಬೇಡ" ಎಂದು ಎಚ್ಚರಿಸಿದಳು.

* * *

ನನಗೆ ತಿಳಿದಮಟ್ಟಿಗೆ ಮೈಕೆಲನ ಜಾಗಕ್ಕೆ ಇನ್ನೊಬ್ಬ ಡಾಕ್ಟರನ್ನು ಹುಡುಕುವ ಪ್ರಕ್ರಿಯೆ ನಡೆಯುತ್ತಿತ್ತು. ಮೈಕೆಲನಷ್ಟು ಯೋಗ್ಯ ಅಭ್ಯರ್ಥಿಯನ್ನು ಹೊರಗಿನಿಂದ ಹುಡುಕುವುದು ಕಷ್ಟ. ಇನ್ನೊಂದು ಸುದ್ದಿಯ ಪ್ರಕಾರ ಡಾಕ್ಟರ್ ಕೆಲಸದ ಜತೆಗೆ ಚೀಫ್

ಆಗಿಯೂ ಕೆಲಸ ಮಾಡಬಲ್ಲ ಆಡಳಿತದಲ್ಲಿಯೂ ಮುತ್ಸದ್ದಿಯಾಗಿರುವವರನ್ನು ಹುಡುಕುತ್ತಿದ್ದಾರಂತೆ. ನಾನು ನೆಕ್ಸ್ಟ್ ಇನ್ ಲೈನ್ ಇರುವುದು ಸುಳ್ಳು ಅನಿಸಿತು. ಇಪ್ಪತ್ತು ವರ್ಷ ಕೆಲಸ ಮಾಡಿದ ಮೇಲೂ ನನ್ನನ್ನು ಬೈಪಾಸ್ ಮಾಡಿ ಹೊರಗಿನಿಂದ ಯಾರನ್ನಾದರೂ ರಾಬರ್ಟನ ಬದಲಿಗೆ ತರಬಹುದು ಎಂಬ ಸುದ್ದಿಯೇ ಕಸಿವಿಸಿ ತಂದಿತ್ತು. ನಾನು ಸುಮ್ಮನಿರುವುದನ್ನು ಬಿಟ್ಟು ಬೇರೇನೂ ಮಾಡಲು ಸಾಧ್ಯವಿರಲಿಲ್ಲ.

ನಾನು ಮೈಕೆಲನಿಗೆ ಆತ ಕೆಲಸ ಕಳೆದುಕೊಂಡದ್ದಕ್ಕೆ ವಿಷಾದವನ್ನು ವ್ಯಕ್ತಪಡಿಸಿ ಒಂದು ಮೆಸೇಜನ್ನು ಕಳಿಸಿದ್ದೆ. ನನ್ನಿಂದ ಏನಾದರೂ ಸಹಾಯ ಬೇಕಿದ್ದರೆ ಸಂಕೋಚವಿಲ್ಲದೆ ಕೇಳಬೇಕೆಂದೂ ಹೇಳಿದ್ದೆ. ಆತ ಅದಕ್ಕೆ ಉತ್ತರಿಸಿರಲಿಲ್ಲ. ಮೈಕೆಲನನ್ನು ಜಿಮ್ಮಿನಲ್ಲಿಯೂ ನಾನು ಕಂಡಿರಲಿಲ್ಲ. ಆತನ ಮಗನನ್ನು ಹಿಲರಿಯೇ ಕರೆದುಕೊಂಡು ಬರುತ್ತಿದ್ದಳು. ಆಕೆಯನ್ನು ನಾನು ಮೈಕೆಲ್ ಹೇಗಿದ್ದಾನೆಂದು ಕೇಳಿದಾಗ “ಇದ್ದಾನೆ” ಎಂದು ಹಾರಿಕೆಯ ಉತ್ತರ ಕೊಟ್ಟಿದ್ದಳು. “ನಾನು ಆತನಿಗೆ ಒಂದು ಮೆಸೇಜು ಕಳಿಸಿದ್ದೆ. ಆತನಿಗೆ ಏನಾದರೂ ಸಹಾಯ ಬೇಕಿದ್ದರೆ ನನಗೆ ಯಾವಾಗ ಬೇಕಾದರೂ ಮೆಸೇಜು ಮಾಡಲಿಕ್ಕೆ ಹೇಳು” ಎಂದಾಗ ಆಕೆಯ ಕಣ್ಣಾಲಿಗಳು ತುಂಬಿಕೊಂಡವು. ನಾನು ಹೆಚ್ಚು ಮಾತಾಡದೇ ಆಕೆಯನ್ನು ಬೀಳ್ಕೊಟ್ಟೆ.

ಇದಾಗಿ ಕೆಲದಿನದ ನಂತರ ಒಂದು ದಿನ ಮೈಕೆಲ್ ನನ್ನ ಮೊಬೈಲಿಗೆ ಫೋನು ಮಾಡಿದ. ನಾನು ಮನೆಯಲ್ಲಿಯೇ ಇದ್ದೆ. ಫೋನು ಎತ್ತಿಕೊಂಡಾಗ ಮೈಕೆಲ್ “ಹಾಯ್” ಎಂದ. ನಾನು ಆತನ ಪರಿಸ್ಥಿತಿಗೆ ಸಾರಿ ಹೇಳಿದೆ. ನಂತರ ಬೇರೆ ಏನೂ ಮಾತಾಡಲಿಕ್ಕೆ ಗೊತ್ತಾಗದೇ ಆತನ ಮಾತಿಗೆ ಕಾದೆ. ಆತ “ನೋಡು, ನಾನು ಇಲ್ಲಿಯ ಫಾರ್ಮಸಿ ಒಂದರಲ್ಲಿ ಫಾರ್ಮಸಿ ಟೆಕ್ನಿಶಿಯನ್ ಆಗಿ ಕೆಲಸ ಮಾಡಲು ಅರ್ಜಿ ಹಾಕಿದ್ದೇನೆ. ಅದಕ್ಕೆ ನಿನ್ನ ಶಿಫಾರಸು ಪತ್ರ ಸಿಗಬಹುದಾ?” ಎಂದ. ನನಗೆ ಆತ ಏನು ಹೇಳುತ್ತಿದ್ದಾನೆ ಎಂಬುದರ ತಲೆಬುಡ ಅರ್ಥವಾಗಲಿಲ್ಲ. ನಾನು “ಮೈಕೆಲ್, ನೀನೊಬ್ಬ ಡಾಕ್ಟರು. ನೀನು ಫಾರ್ಮಸಿ ಟೆಕ್ನಿಶಿಯನ್ ಆಗಿ ಕೆಲಸ ಮಾಡಲು ಅರ್ಜಿ ಹಾಕಿದ್ದೀಯಾ?” ಎಂದು ಕೇಳಿದೆ. ಆತ ನನಗಿಂತ ಆಶ್ಚರ್ಯಭರಿತನಾಗಿ ‘ನನ್ನನ್ನು ಕೆಲಸದಿಂದ ಏಕೆ ತೆಗೆದರು ಎಂದು ನಿನಗೆ ರಾಬರ್ಟ್ ಹೇಳಲಿಲ್ಲವಾ?” ಎಂದ. ನಾನು “ಇಲ್ಲ. ಅದರ ಬಗ್ಗೆ ನಾವು ಯಾರೂ ಪರಸ್ಪರ ಮಾತಾಡಬಾರದು ಎಂದು ಹೇಳಿದ್ದಾರೆ” ಎಂದೆ.

ಮೈಕೆಲ್ “ಓ ದೇವರೇ, ನಾನು ನಿನಗೆ ಈಗಾಗಲೇ ವಿಷಯ ತಿಳಿದಿರುತ್ತದೆ ಎಂದುಕೊಂಡಿದ್ದೆ” ಎಂದ.

ನಾನು “ಖಡಾಖಂಡಿತವಾಗಿ ಇಲ್ಲ. ಗೊತ್ತಿದ್ದರೆ ನಿನ್ನ ಹತ್ತಿರ ಎಂತ ಮುಚ್ಚುಮರೆ. ನೀನೇ ಹೇಳಬಹುದಲ್ಲ” ಎಂದೆ ಕುತೂಹಲ ತಡೆಯದೇ.

ಆತ ಮೂವತ್ತು ಸೆಕೆಂಡುಗಳಷ್ಟು ಕಾಲ ಯೋಚನೆ ಮಾಡಿ “ನಾನು ನನ್ನ ಕೆಲಸ ಹೋದ ಕಾರಣವನ್ನು ತಿಳಿಸಿದರೆ ನೀನು ನನ್ನನ್ನು ಅತಿ ಕ್ರೂರ, ಅತಿ ಕೆಟ್ಟ ಮನುಷ್ಯ ಅಂತ ತಿಳಕೋತೀಯ?” ಎಂದ.

ನನ್ನ ಕುತೂಹಲ ಇನ್ನೂ ತೀವ್ರವಾಯಿತು. ಆದರೂ ಅದನ್ನು ತೋರಗೊಡದೇ "ಅಂಥ ಕೆಟ್ಟದ್ದು ಏನು ಮಾಡಿರ್ತೀಯೋ ಮಾರಾಯಾ. ಕುಡಕೊಂಡೇನಾದರೂ ಕೆಲಸಕ್ಕೆ ಬಂದಿದ್ದೆಯಾ?" ಎಂದೆ.

"ಇಲ್ಲ" ಎಂದ.

"ಯಾವುದಾದರೂ ಪೇಶೆಂಟ್ ಜತೆ ಕೆಟ್ಟದಾಗಿ?"

"ನೀನೇ ಹೇಳು. ನಾನು ನಿನ್ನ ಜತೆಗೇ ಹತ್ತು ವರ್ಷ ಕೆಲಸ ಮಾಡಿದ್ದೇನೆ" ಎಂದ.

"ಮೈಕೆಲ್. ನಾನು ನಿನಗೆ ಶಿಫಾರಸು ಕೊಡಬಾರದ ಕೆಲಸವನ್ನು ಮಾಡಿಲ್ಲ ಎಂದು ನೀನು ಪ್ರಾಮಿಸ್ ಮಾಡು. ನಾನು ಈಗಲೇ ಫೋನ್ ಮಾಡುತ್ತೇನೆ" ಎಂದೆ. "ನಾನೀಗ ಅರ್ಜಿ ಹಾಕಿರುವುದು ಫಾರ್ಮಸಿ ಟೆಕ್ನಿಷಿಯನ್ ಕೆಲಸಕ್ಕೆ. ಆ ಕೆಲಸ ಮಾಡದಂತೆ ನನ್ನನ್ನು ತಡೆಯುವ ಯಾವ ಕೆಟ್ಟ ಕೆಲಸವನ್ನೂ ನಾನು ಮಾಡಿಲ್ಲ. ನಿನಗೆ ನನ್ನ ಮಾತಿನಲ್ಲಿ ನಂಬಿಕೆಯಿದ್ದಲ್ಲಿ ನನ್ನ ಹೊಸಾ ಬಾಸಿನ ನಂಬರ್ ನಿನಗೆ ಕಳಿಸುತ್ತೇನೆ. ನನ್ನ ಬಗ್ಗೆ ಒಂದೆರಡು ಒಳ್ಳೆಯ ಮಾತಾಡು. ಪ್ಲೀಸ್, ನನಗೆ ಈ ಕೆಲಸ ಬೇಕು" ಎಂದ.

ನಮ್ಮಿಬ್ಬರ ಮಾತು ಕೇಳಿಸಿಕೊಳ್ಳುತ್ತಿದ್ದ ಸ್ವಾತಿ "ಎಂತ ರಾಮಾಯಣವಪ್ಪ ಇದು. ಓದಿರೋದು ಎಂಡಿ. ಇಡೀ ಡಿಪಾರ್ಟ್‌ಮೆಂಟಿಗೇ ಬಾಸ್ ಆಗಬೇಕಾಗಿದ್ದೋನು. ಫಾರ್ಮಸಿ ಟೆಕ್ನಿಶಿಯನ್ ಕೆಲಸ ಮಾಡ್ತಾನಂತೆ. ನಿಮ್ಮಾಸ್ಪತ್ರೆಯಲ್ಲಿ ಏನೋ ಮಾಡಿ ಸಿಕ್ಕಾಕೊಂಡಿದ್ದಾನೆ, ಕೆಲಸದಿಂದ ತೆಗೆದಿದ್ದಾರೆ, ಸರಿ. ಆದರೆ ಇಡೀ ದೇಶದಲ್ಲಿ ನಿಮ್ಮದೊಂದೇ ಆಸ್ಪತ್ರೆಯಲ್ಲವಲ್ಲ. ಈತನಿಗೆ ಮೆಡಿಕಲ್ ಲೈಸೆನ್ಸೇ ಹೋಗಿರಬಹುದು. ಇಲ್ಲದಿದ್ದರೆ ಫಾರ್ಮಸಿ ಟೆಕ್ನಿಷಿಯನ್ ಕೆಲಸವನ್ನು ಯಾಕೆ ಮಾಡ್ತಾನೆ. ನೀ ಸುಮ್ನೆ ಇವನನ್ನು ರೆಕಮಂಡ್ ಮಾಡೋಕೆ ಹೋಗ್ಬೇಡ" ಎಂದಳು. ನಾನೂ ಯಾವುದಕ್ಕೂ ರಾಬರ್ಟನ್ನು ಒಂದು ಮಾತು ಕೇಳಿ ನಂತರ ಫೋನು ಮಾಡೋಣ ಎಂದುಕೊಂಡೆ.

* * *

ಮಾರನೆಯ ದಿನ ರಾಬರ್ಟ್ ಸಿಕ್ಕಾಗ ಮೈಕೆಲನ ಫೋನಿನ ವಿಷಯವನ್ನು ಹೇಳಿದೆ. "ವಿಷಯ ತುಂಬಾ ಗೊಂದಲಮಯವಾಗಿ ಕಾಣುತ್ತದೆ. ಆಡಳಿತ ಮಂಡಳಿಯವರು ಈತ ಯಾವ ಕಾರಣಕ್ಕೆ ಕೆಲಸ ಕಳಕೊಂಡ ಎಂದು ಹೇಳದಿದ್ದರೂ ಪರವಾಗಿಲ್ಲ. ಮೈಕೆಲ್ ನಮ್ಮ ಬಾಸಾಗಬೇಕಾಗಿದ್ದವನು. ಆತ ನನಗೆ ಫಾರ್ಮಸಿ ಟೆಕ್ನಿಷಿಯನ್ ಕೆಲಸಕ್ಕೆ ರೆಕಮಂಡೇಶನ್ ಕೇಳುತ್ತಾ ಇದ್ದಾನೆ. ಆತನನ್ನು ನಾನು ರೆಕಮಂಡ್ ಮಾಡಬಹುದೋ ಇಲ್ಲವೋ? ಆತ ಏನಾದರೂ ಮಾರ್ಫೀನು ಇತರೇ ಔಷಧಿಗಳನ್ನು ಸ್ಮಗಲ್ ಮಾಡುತ್ತಿದ್ದನಾ?"

ರಾಬರ್ಟ್ ನಕ್ಕುಬಿಟ್ಟ. "ನೋಡು, ನಾನು ಯಾವ ಕಾರಣಕ್ಕೂ ಆತ ಏನು ಮಾಡಿದ್ದ ಎಂದು ಹೇಳಲಾರೆ. ಒಂದು ಮಾತ್ರ ನಿಜ. ಆತನಿಗೆ ಇನ್ನೂ ಸ್ವಲ್ಪ ದಿನ

ಡಾಕ್ಟರಿಕೆ ಮಾಡಲಿಕ್ಕಾಗಲ್ಲ. ಅದಕ್ಕೇ ಈ ಕೆಲಸಕ್ಕೆ ಅರ್ಜಿ ಹಾಕಿದ್ದಾನೆ. ನನ್ನನ್ನು ಕೇಳಿದರೆ ನಾನು ಖಂಡಿತಾ ರೆಕಮಂಡೇಷನ್ ಪತ್ರ ಕೊಡುತ್ತೇನೆ" ಎಂದ.

"ಆತ ನಿನ್ನನ್ನು ಕೇಳಿಲ್ಲವಾ?" ಎಂದೆ.

"ಇಲ್ಲ. ಆತ ಮತ್ತೆ ನಿನಗೆ ಫೋನೇನಾದರೂ ಮಾಡಿದರೆ ನನ್ನನ್ನು ಸಂಪರ್ಕಿಸಲಿಕ್ಕೆ ಹೇಳು" ಎಂದ.

ಮೈಕೆಲ್ ಮತ್ತೆ ಫೋನು ಮಾಡಲಿಲ್ಲ. ಆತ ಮಿನಿಯಾಪೋಲಿಸ್‌ನಿಂದ ಅರವತ್ತು ಕಿಲೋಮೀಟರ್ ದೂರವಿರುವ ಫಾರ್ಮಸಿ ಒಂದರಲ್ಲಿ ಕೆಲಸ ಮಾಡುತ್ತಿದ್ದಾನೆಂದು ನಂತರ ತಿಳಿಯಿತು.

* * *

ಮೈಕೆಲನ ಬಗ್ಗೆ ಎಲ್ಲರಿಗೂ ಕುತೂಹಲ ತಣಿಯುತ್ತಿತ್ತು ಅನ್ನುವ ಹೊತ್ತಿಗೆ ಬೆತ್ 'ಫಾರ್ ಯುವರ್ ಐಸ್ ಓನ್ಲಿ' ಎಂದು ಒಂದು ಮೆಸೇಜನ್ನು ನನಗೆ ಕಳಿಸಿದಳು. ಮೆಸೇಜನ್ನು ತೆಗೆಯುವ ಮುಂಚೆ ಫೋನು ಮಾಡಿ "ಮೆಸೇಜು ಓದಿದೆಯಾ? ಡಿಸ್‌ಗಸ್ಟಿಂಗ್" ಎಂದಳು. ನಾನು ಇನ್ನೂ ಓದಿಲ್ಲವೆಂದು ಆಕೆ ಲೈನಿನಲ್ಲಿರುವಾಗಲೇ ಮೆಸೇಜನ್ನು ನನ್ನ ಪಾಡಿಗೆ ನಾನೇ ಓದಿಕೊಂಡೆ. 'ನಗರದ ಈಸ್ಟ್ ಹೆಲ್ತ್ ಗುಂಪಿನಲ್ಲಿ ಕೆಲಸ ಮಾಡುತ್ತಿದ್ದ ಡಾ. ಮೈಕೆಲ್ ವಿಲಿಯಮ್ಸ್ ಎಂಬ ತುರ್ತುಚಿಕಿತ್ಸಾ ವೈದ್ಯನನ್ನು ಅಪ್ರಾಪ್ತ ವಯಸ್ಸಿನ ಮಕ್ಕಳ ಅಶ್ಲೀಲ ಚಿತ್ರ ಹಾಗೂ ಸಿನೆಮಾಗಳನ್ನು ಅಂತರ್ಜಾಲದಲ್ಲೆಲ್ಲ ಹರಡುತ್ತಿರುವ (disseminating child pornography on the web) ಆರೋಪದ ಮೇಲೆ ಫಿಲ್ಮೋರ್ ಕೌಂಟಿಯ ಪೊಲೀಸರು ಬಂಧಿಸಿ ೧೦,೦೦೦.೦೦ ಡಾಲರ್ ಜಾಮೀನಿನ ಮೇಲೆ ಮಾರನೆಯ ದಿನ ಬಿಡುಗಡೆ ಮಾಡಿದ್ದಾರೆ. ಮಾರನೆಯ ದಿನವೇ ಅದೇ ಕೌಂಟಿಯ ಕೋರ್ಟಿನ ನ್ಯಾಯಾಧೀಶರ ಮುಂದೆ ಹಾಜರುಪಡಿಸಲಾಗಿ, ನ್ಯಾಯಾಧೀಶರು ಡಾ. ಮೈಕೆಲನಿಗೆ ಆರು ತಿಂಗಳು ಕಮ್ಯುನಿಟಿ ಸರ್ವಿಸ್ ಮತ್ತು ೧೮ ವರ್ಷದ ಕೆಳಗಿನ ಮಕ್ಕಳಿರುವ ಜಾಗದಿಂದ ಅನಿರ್ದಿಷ್ಟ ಕಾಲ ಮೂವತ್ತಡಿ ದೂರವಿರಬೇಕೆಂದು ಶಿಕ್ಷೆ ವಿಧಿಸಿದ್ದಾರೆ' ಎಂಬ ಟ್ರಿಬ್ಯೂನಿನ ಸಾರ್ವಜನಿಕ ಪ್ರಕಟಣೆಯ ಒಂದು ಸಣ್ಣ ಚಿತ್ರವನ್ನು ಕಳಿಸಿದ್ದಳು.

"ಯಾರಿಗೂ ಹೇಳಬೇಡ. ತಕ್ಷಣ ಆ ಮೆಸೇಜನ್ನು ಡಿಲೀಟ್ ಮಾಡು" ಎಂದಳು, ಬೆತ್.

"ಇದು ಸಾರ್ವಜನಿಕ ಸುದ್ದಿ. ದಿನಪತ್ರಿಕೆಯಲ್ಲಿ ಬಂದಿದೆ" ಎಂದೆ.

"ಹೌದು. ಆದರೆ ಅದು ಇನ್ನೂ ಎಲ್ಲೆಡೆ ಸುದ್ದಿಯಾಗಿಲ್ಲ. ಆದ್ದರಿಂದ ನಾನು ನಿನ್ನ ಹತ್ತಿರ ಮಾತ್ರ ಈ ಸುದ್ದಿಯನ್ನು ಹಂಚಿಕೊಂಡಿದ್ದೇನೆ, ಅಷ್ಟೇ" ಎಂದಳು.

ನನಗೆ ಈ ಸುದ್ದಿಯನ್ನು ನಂಬಲಾಗಲೇ ಇಲ್ಲ. ಮೈಕೆಲ್‌ನಂಥ ಮೈಕೆಲ್ ಮಕ್ಕಳ ಅಶ್ಲೀಲ ಸಿನಿಮಾ ಮತ್ತು ಚಿತ್ರಗಳನ್ನು ಅಂತರ್ಜಾಲದಲ್ಲಿ ಹರಡುತ್ತಿದ್ದ ಎಂದರೆ. ಈ

ಅಂತರ್ಜಾಲದಲ್ಲಿ ಹರಡುವುದು ಎಂದರೇನು? ಈತ ಈ ಸಿನೆಮಾಗಳನ್ನು ನಿರ್ಮಾಣ ಮಾಡುತ್ತಿದ್ದನೇ? ನಿರ್ಮಾಣ ಮಾಡುವುದು ಎಂದರೆ ಮಕ್ಕಳನ್ನು ಈ ರೀತಿಯ ವಿಕೃತಿಗೆ ಒಡ್ಡಿ ತಾನು ನೋಡುವುದಷ್ಟೇ ಅಲ್ಲ, ಅದನ್ನು ಇತರರಿಗೆ ಹಂಚುವುದು. ಈತನದೇ ವೆಬ್‌ಸೈಟಿದೆಯಾ? ಈತ ಮಕ್ಕಳ ಪೋರ್ನಾಗ್ರಫಿಯನ್ನು ತಾನೇ ಶೂಟ್ ಮಾಡುತ್ತಾನಾ? ಎಂಥದಿದು ಅಸಹ್ಯ. ಈತ ಡಾಕ್ಟರು, ದುಡ್ಡಿಗಾಗಿ ಈ ಕೆಲಸ ಮಾಡುತ್ತಾನೆ ಎಂದರೆ ನಂಬಲಾಗುವುದಿಲ್ಲ. ಮೈಕೆಲನಿಗೆ ಹದಿಮೂರು ವರ್ಷದ ಮಗನಿದ್ದಾನೆ. ಹಾಗಿದ್ದಾಗ, ಇದೆಂಥ ಹುಚ್ಚು. ಮಕ್ಕಳಿರುವ ಜಾಗದಿಂದ ಮೂವತ್ತಡಿ ದೂರವಿರಬೇಕು ಎಂದರೆ? ಓಹೋ ಅದಕ್ಕೆ ಈತ ಡಾಕ್ಟರಿಕೆ ಮಾಡುವ ಹಾಗಿಲ್ಲ. ಎಮರ್ಜೆನ್ಸಿ ರೂಮಿನಲ್ಲಿ ಕೆಲಸ ಮಾಡುತ್ತಾ ಮಕ್ಕಳಿಂದ ದೂರವಿರುವುದು ಎಂದರೆ?

ನನಗೆ ಮೈಕೆಲನ ಮೇಲೆ ಅಸಹ್ಯ ಮತ್ತು ಸಿಟ್ಟು ಒಮ್ಮೆಲೇ ಬಂತು.

ಬೆತ್‌ಗೆ ಮೈಕೆಲನ ಬದಲು ಹೊರಗಿನಿಂದ ಯಾರನ್ನಾದರೂ ತರುತ್ತಿದ್ದಾರಾ ಎಂದು ಮೆಸೇಜಿಸಿದೆ. ಆಕೆ ಅದಕ್ಕೆ ಉತ್ತರ ಕೊಡಲಿಲ್ಲ. ಇನ್ನು ಮೈಕೆಲನನ್ನು ಮತ್ತೆ ನಮ್ಮಾಸ್ಪತ್ರೆಯಲ್ಲಿ ಕೆಲಸಕ್ಕೆ ತೆಗೆದುಕೊಳ್ಳುವುದು ಅನುಮಾನ ಅನ್ನಿಸಿತು.

ಇಂಥ ವಿಷಯವನ್ನು ಯಾರಿಗೂ ಹೇಳಬೇಡ ಎಂದು ಹೇಳಿದರೆ ಅದು ಹೇಗೆ ಸಾಧ್ಯ. ಸ್ವಾತಿಗೆ ಆ ಮೆಸೇಜನ್ನು ಕಳಿಸಿದೆ. ಓದಿದವಳೇ "ನಾನು ಹೇಳಲಿಲ್ಲವಾ, ಇವರನ್ನೆಲ್ಲಾ ನಂಬಲಿಕ್ಕಾಗುವುದಿಲ್ಲ ಅಂತ. ಸದ್ಯ ದೇವರು ನಿನಗೆ ಒಳ್ಳೆಯ ಬುದ್ಧಿ ಕೊಟ್ಟಿದ್ದ. ನೀನು ಅವನನ್ನು ಯಾವ ಕೆಲಸಕ್ಕೂ ರೆಕಮಂಡ್ ಮಾಡಲಿಲ್ಲ. ಅದ್ಯಾವ ಫಾರ್ಮಸಿಯಲ್ಲಿ ಕೆಲಸ ಮಾಡುತ್ತಾನೆ ಎಂದು ತಿಳಕೋ. ಪುಟ್ಟನ್ನ ಅದರ ದಿಕ್ಕಿನಲ್ಲಿ ತಲೆಹಾಕಿ ಕೂಡ ಮಲಗಿಸೋದು ಬೇಡ. ಥೂ, ನಾಚಿಕೆಯಾಗ್ಬೇಕು, ಈ ಜನ್ಮಕ್ಕೆ" ಎಂದು ಇನ್ನೂ ಬಯ್ಯಲಿಕ್ಕೆ ಸಮಯವಿಲ್ಲವೆಂದೂ ಅರ್ಜೆಂಟಾಗಿ ಮೀಟಿಂಗ್ ಬಂದಿದೆಯೆಂದೂ ಹೇಳಿ ಫೋನಿಟ್ಟಳು. ಯಾವುದೇ ಕೆಟ್ಟಕೆಲಸವಾಗಲೀ, ಸ್ವಾತಿಯ ಪ್ರಕಾರ 'ಇವರು' ಮಾಡಲು ಹೇಸರು. 'ಈ ದೇಶದಲ್ಲಿ ದಿನಾ ಕುಡಿಯುತ್ತಾರೆ.' 'ಇವರುಗಳೆಲ್ಲ ಹೈಸ್ಕೂಲಲ್ಲಿರಬೇಕಾದರೆ ಎಲ್ಲ ಮಾಡಿ ಮುಗಿಸಿರ್ತಾರೆ' ಇತ್ಯಾದಿ. ಒಟ್ಟು ಪುಟ್ಟ ಇವರಂತಾಗದಿದ್ದರೆ ಸಾಕು, ಇಲ್ಲಿಯೇ ಬೆಳೆದರೂ ಪರವಾಯಿಲ್ಲ.

* * *

ಬೆತ್ ಯಾರಿಗೂ ಹೇಳಬೇಡ ಎಂದು ಸುಮಾರು ಜನರಿಗೆ ಈ ಮೆಸೇಜನ್ನು ಕಳಿಸಿದ್ದಳೆನ್ನಿಸುತ್ತದೆ. ಎಲ್ಲರೂ ಮೈಕೆಲನ ಬಗ್ಗೆ ಗುಸುಗುಸು ಮಾಡುವುದು ತಪ್ಪಲಿಲ್ಲ. ಅಷ್ಟೇ ಅಲ್ಲ. ಇದು ಪತ್ರಿಕೆಯಲ್ಲಿ ಸುದ್ದಿಯಾಗಿ ಬಂದಿದ್ದರಿಂದ ರಾಜಾರೋಷವಾಗಿ ಮಾತಾಡತೊಡಗಿದರು. ಇಂಥ ವಿಷಯವನ್ನು ಗೌಪ್ಯವಾಗಿಟ್ಟ ಮ್ಯಾನೇಜ್‌ಮೆಂಟ್ ಅನ್ನು ಎಲ್ಲರೂ ಬಯ್ದಿದ್ದೇ ಬಯ್ದಿದ್ದು. ಆದರೆ ಒಬ್ಬರಿಗೂ ಈ ಇಂಟರ್ನೆಟ್ಟಿನಲ್ಲಿ ಮಕ್ಕಳ

ಪೋರ್ನ್ ಅನ್ನು ಹರಡುವುದು ಎಂದರೆ ಏನು ಎಂದು ಗೊತ್ತಿಲ್ಲ. ಟೋನಿ ಎಂಬ ನರ್ಸ್ ಒಬ್ಬ "ಪೋರ್ನ್ ಹರಡುವುದು ಎಂದರೆ ಆತನೇ ನಿರ್ಮಾಣ ಮಾಡಿರಬೇಕೆಂಬುದೇನಿಲ್ಲ. ಮೊದಲಿಗೆ ಮಕ್ಕಳ ಪೋರ್ನ್ ಅನ್ನು ನೋಡುವುದೇ ಕಾನೂನುಬಾಹಿರ. ಅಂತದ್ದರಲ್ಲಿ ಈತ ಅದನ್ನು ತಾನು ನೋಡಿದ್ದಲ್ಲದೇ ಬೇರೆಯವರಿಗೂ ನೋಡು ಎಂದು ಕಳಿಸಿದ್ದಾನೆಂದರೆ, ಅದು ದೊಡ್ಡ ತಪ್ಪು. ಯಾವುದೇ ಪೋರ್ನ್ ಸೈಟುಗಳನ್ನು ನೋಡುವಾಗ ಬಹಳ ಹುಷಾರಾಗಿರಬೇಕು. ಇದ್ದಕ್ಕಿದ್ದಂತೆ ಏನೇನೋ ಪಾಪ್ ಅಪ್ ಆಗ್ತಾ ಇರುತ್ತೆ. ಅಪ್ಪಿ ತಪ್ಪಿ ಕ್ಲಿಕ್ ಮಾಡಿದರೆ ಎಲ್ಲೆಲ್ಲಿಗೋ ಕರಕೊಂಡು ಹೋಗುತ್ತೆ. ಈತನೂ ಹಾಗೆಯೇ ಏನಾದರೂ ತಪ್ಪಾಗಿ ಕ್ಲಿಕ್ ಮಾಡಿ ಸಿಕ್ಕಿಹಾಕೊಂಡಿದಾನೋ ಏನೋ? ಮೈಕೆಲನನ್ನು ನೋಡಿದರೆ ಆತ ಮಕ್ಕಳ ಪೋರ್ನ್ ನೋಡೋನು ಅಂತನಿಸೊಲ್ಲ" ಎಂದ. ಎಲ್ಲರೂ ಅಹುದಹುದು ಎಂಬಂತೆ ತಲೆಯಾಡಿಸಿದರು. ನನಗೆ ಟೋನಿಗೆ ಈ ವಿಷಯದ ಬಗ್ಗೆ ಹೇಗೆ ಗೊತ್ತು ಎಂದು ಕೇಳಬೇಕೆನಿಸಿದರೂ ಎಂತದೂ ಬೇಡ ಎನಿಸಿ ಸುಮ್ಮನಾದೆ. ಬೆತ್ ಕೂಡ ನಮ್ಮ ಜತೆ ಇದ್ದಳು. ಆಕೆ "ಏನಲ್ಲವಂತೆ. ಇದೊಂತರಾ ಪ್ಯಾಟರ್ನ್ ಇತ್ತಂತೆ ಆತನ ನಡವಳಿಕೆಗೆ. ಪೊಲೀಸರು ಅವನನ್ನು ಅರೆಸ್ಟ್ ಮಾಡಿದ್ದರಂತೆ. ಆತನಿಗೆ ಈ ಮಕ್ಕಳಿಂದ ದೂರವಿರಬೇಕು ಎಂದು ಎಚ್ಚರಿಸಿಯೂ ಇದ್ದರಂತೆ. ಆದರೆ ಆ ಎಚ್ಚರಿಕೆಯನ್ನೆಲ್ಲಾ ಕಡೆಗಣಿಸಿ ಈತ ಕೆಲಸಕ್ಕೆ ಬರುತ್ತಲೇ ಇದ್ದನಂತೆ. ಈ ಸುದ್ದಿ ಪತ್ರಿಕೆಯಲ್ಲಿ ಬರುವ ಮುಂಚೆ ಆಸ್ಪತ್ರೆಯ ಆಡಳಿತ ಮಂಡಳಿ ಒಂದು ನಿರ್ಧಾರವನ್ನು ತೆಗೆದುಕೊಳ್ಳಲೇಬೇಕಿತ್ತು. ಈತನೇ ತನ್ನ ತಪ್ಪನ್ನು ಒಪ್ಪಿಕೊಂಡಿದ್ದಲ್ಲಿ ಕೊಂಚವಾದರೂ ಕರುಣೆಯಿಂದ ನೋಡುತ್ತಿದ್ದರೇನೋ. ಅನ್ಯಾಯವಾಗಿ ಹಾಳು ಮಾಡಿಕೊಂಡ. ವಾಟ್ ಎ ವೇಸ್ಟ್ ಎಂಥ ಒಳ್ಳೆ ಡಾಕ್ಟರು, ಆತ" ಎಂದಳು.

ನನಗೆ ಏನೇ ಆದರೂ ಮೈಕೆಲ್ ಒಬ್ಬನೇ ಕೂತು ಇಂಟರ್ನೆಟ್ಟಲ್ಲಿ ಮಕ್ಕಳ ಹಸಿಬಿಸಿ ಚಿತ್ರ, ಸಿನೆಮಾಗಳನ್ನು ನೋಡುವ ಮನುಷ್ಯ ಎನ್ನುವುದರ ಬಗ್ಗೆ ನಂಬಿಕೆ ಬರಲೇ ಇಲ್ಲ. ಇದು ಸುಳ್ಳೋ ನಿಜವೋ ಗೊತ್ತಾಗುವುದು ಹೇಗೆ? ಕುತೂಹಲ ತಡೆಯಲಾರದೇ ಆತನ ಹೆಸರನ್ನು ಗೂಗಲಲ್ಲಿ ಟೈಪಿಸಿದೆ. ಎಂಟರ್ ಒತ್ತುವುದಕ್ಕೆ ಬೆರಳಳುಕಿತು. ಈ ಅಂತರ್ಜಾಲದಲ್ಲಿಯೇ ಕುಪ್ರಸಿದ್ಧನಾಗಿರಬಹುದಾದ ಹಾಗೂ ಆತನ ಹೆಸರನ್ನು ಗೂಗಲಿಸಿದಲ್ಲಿ ಸಭ್ಯಲೋಕ ವಿಕೃತವೆಂದು ಪರಿಗಣಿಸಿರುವ ಪ್ರಪಂಚವೊಂದು ಅನಾವರಣಗೊಳ್ಳುವ ಸಂಭವವಿರುವುದೊಂದೇ ಅಲ್ಲ, ಒಂದೇ ಕ್ಲಿಕ್ಕಿನಿಂದ ಅದನ್ನು ಪ್ರವೇಶಿಸಿದ ತಪ್ಪೊಂದರಿಂದ ಮಾತ್ರ ನಾನೂ ಜೈಲಿಗೆ ಹೋಗಬೇಕಾದ ಪ್ರಸಂಗ ಬರಬಹುದಾಗಿದ್ದರಿಂದ ಕುತೂಹಲವನ್ನು ಹಾಗೇ ಅದುಮಿಕೊಂಡು ಸುಮ್ಮನಾಗದೇ ವಿಧಿಯಿರಲಿಲ್ಲ.

* * *

ಇವೆಲ್ಲ ನಡೆದು ಆರು ತಿಂಗಳ ಮೇಲಾಗಿತ್ತು. ನಾನು ಪುಟ್ಟನನ್ನು ಜಿಮ್ಮಿನಿಂದ ಕರೆದುಕೊಂಡು ಬರಲು ಹೋಗಿದ್ದೆ. ಆಶ್ಚರ್ಯಕರವಾಗಿ ಅಲ್ಲಿ ಮೈಕೆಲ್ ತನ್ನ ಮಗನ ಕೈಹಿಡಕೊಂಡು ಸ್ವಿಮಿಂಗ್ ಪೂಲಿನಿಂದ ಹೊರಗೆ ಬಂದ. ನನ್ನನ್ನು ನೋಡಿ "ಹಾಯ್" ಎಂದು ಕೈಮುಂದೆ ನೀಡಿದ. ಬೇಡವೆಂದರೂ ನನ್ನ ಮುಖದಲ್ಲಿ ಯಾವ ಭಾವವಿತ್ತೋ ಆತನ ಮುಖ ಕೊಂಚ ಚಿಕ್ಕದಾಯಿತು. ನಾನು ತಕ್ಷಣ ನಕ್ಕು "ಏ ಮೈಕೆಲ್, ನೀನಿಲ್ಲಿ !" ಎಂದೆ.

"ಹಾ ಹೌದು. ಮಗನಿಗೆ ಸ್ವಿಮಿಂಗ್ ಕ್ಲಾಸಿತ್ತು. ಮುಗಿಯುವತನಕ ನಾನು ಅಲ್ಲಿಯೇ ಕೂತಿದ್ದೆ. ಈಗ ಕರಕೊಂಡು ಮನೆಗೆ ಹೋಗುತ್ತಿದ್ದೇನೆ" ಎಂದ. ನಾನು ಆತನತ್ತ ವಿಚಿತ್ರವಾಗಿ ನೋಡುತ್ತಿದ್ದೆ. ಆತ ನನ್ನ ನೋಡಿ "ನಿನಗೆ ಸಮಯವಿದ್ದಲ್ಲಿ ಒಂದೈದು ನಿಮಿಷ ಮಾತಾಡಬಹುದಾ?" ಎಂದ. ನಾನು ಬೇರೆ ದಾರಿಯಿಲ್ಲದೇ ಆಗಲಿ ಎಂದೆ. ಪುಟ್ಟ ಬರುವುದಕ್ಕೆ ಇನ್ನೂ ಐದು ನಿಮಿಷ ಸಮಯವಿತ್ತು. ಅಲ್ಲಿಯೇ ಜಿಮ್ಮಿನ ಕಾಫಿ ಶಾಪಿಗೆ ಹೋಗೋಣವೆಂದೆ. ಆತ ಆತನ ಮಗನಗೆ ಅಲ್ಲಿಯೇ ಬ್ಯಾಸ್ಕೆಟ್‌ಬಾಲಿನ ಕೋರ್ಟಿನಲ್ಲಿ ಆಡಿಕೊಂಡಿರು ಎಂದು ಹೇಳಿ ಬಿಟ್ಟು ಬಂದ.

ನನಗೆ ಕಾಫಿ ಕುಡಿಯುವಷ್ಟು ಸಮಯವಿರಲಿಲ್ಲ. ಮೇಲಾಗಿ ಪುಟ್ಟ ಬಂದುಬಿಟ್ಟರೆ ಎಂಬ ಹೆದರಿಕೆ. ಮೈಕೆಲನಿಗೆ ಮಕ್ಕಳಿಂದ ದೂರವಿರಬೇಕೆಂಬ ರಿಸ್ಟ್ರೈನಿಂಗ್ ಆರ್ಡರ್ ಇನ್ನೂ ಇದೆಯಾ ಇಲ್ಲವಾ? ಇದ್ದರೆ ಆತ ಜಿಮ್ಮಿಗೆ ಹೇಗೆ ಬರಬಲ್ಲ ?

ಆತನೇ ಮಾತು ತೆಗೆದ. "ಮತ್ತೆ ಕೆಲಸಕ್ಕೆ ಅರ್ಜಿ ಹಾಕಿದೀನಿ. ನನ್ನ ಬದಲಿಗೆ ಇನ್ನೂ ಯಾರನ್ನೂ ಕೆಲಸಕ್ಕೆ ತೆಗೆದುಕೊಂಡಿಲ್ಲವಂತಲ್ಲ" ಎಂದ.

ನನಗೆ ಇನ್ನೂ ಆಶ್ಚರ್ಯವಾಯಿತು. ತಡಕೊಳ್ಳಲಾಗದೇ "ರಾಬರ್ಟನ ಜತೆ ಮಾತಾಡಿದ್ದೀಯ ಇದರ ಬಗ್ಗೆ. ಹೊರಗಿನಿಂದ ಯಾರನ್ನಾದರೂ ತರಬೇಕು ಅಂತಿದ್ದರು" ಎಂದೆ.

"ನಾನು ಅರ್ಜಿ ಹಾಕಿರುವುದು ಚೀಫ್ ಪಟ್ಟಕ್ಕಲ್ಲ. ಮತ್ತೆ ಡಾಕ್ಟರಾಗೋದಕ್ಕೆ ಮಾತ್ರ. ರಾಬರ್ಟ್ ಮೊದಲಿಂದಲೂ ನನಗೆ ಬೆಂಬಲವಾಗಿ ನಿಂತಿದ್ದಾನೆ. ಆತನಿಗೆ ಆತನದೇ ಸಮಸ್ಯೆಗಳಿವೆ. ಹಾಗಾಗಿ ಆತ ನನ್ನ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳಬಲ್ಲ."

ನಾನು ಆಶ್ಚರ್ಯದಿಂದ ಆತನ ಮುಖ ನೋಡಿದೆ. "ನಿನಗೆ ಗೊತ್ತಿಲ್ಲವಾ ರಾಬರ್ಟ್ ಆಲ್ಕೋಹಾಲಿಕ್. ಆತ ಮೂರು ಬಾರಿ ಮಾದಕವಸ್ತು ಮತ್ತು ಆಲ್ಕೋಹಾಲ್ ಪುನರ್ವಸತಿ ಕೇಂದ್ರಗಳಿಗೆ ಭರ್ತಿಯಾಗಿ ಬಂದಿದ್ದಾನೆ. ಆತ ರಾತ್ರಿ ಪಾಳಿಯಲ್ಲಿ ಕೆಲಸ ಮಾಡಿದರೆ ಬೆಳಿಗ್ಗೆ ಮನೆಗೆ ಹೋದ ತಕ್ಷಣ ಎರಡು ಡ್ರಿಂಕಿಲ್ಲದಿದ್ದರೆ ಮಲಗಲಿಕ್ಕೆ ಆಗೋದಿಲ್ಲ" ಎಂದ.

ಅಬ್ಬಾ ಬದುಕೇ ಎಂದುಕೊಂಡೆ. ಎಂಥ ಮನುಷ್ಯ ಈತ. ನಾನು ನೋಡಿದ ಮೈಕೆಲ್ ಈತನಲ್ಲ ಅನಿಸಿತು. ತಾನು ಬಿದ್ದಿದ್ದಾನೆ ತನ್ನ ಜತೆ ರಾಬರ್ಟನನ್ನೂ

ಎಳೆಯುತ್ತಿದ್ದಾನೆ. ಈತನ ಪೋರ್ನ್ ವ್ಯಸನಕ್ಕೆ ರಾಬರ್ಟನ ಕುಡಿತ ಹೇಗೆ ಸಮಜಾಯಿಷಿಯಾಗಬಲ್ಲದು. ಇವನ ವಾದ ಭಂಡತನವಲ್ಲದೇ ಇನ್ನೇನು. ಆದರೂ ರಾಬರ್ಟ್ ಏನು ಮಾಡಿದರೂ ಕಾನೂನುಬಾಹಿರವಾದದ್ದನ್ನೇನೂ ಮಾಡಿಲ್ಲ. ಜತೆಗೆ ಕೆಲಸದಿಂದ ತೆಗೆಯುವಂಥದ್ದನ್ನೇನಾದರೂ ಮಾಡಿದ್ದರೆ ಆತ ನಮ್ಮ ಬಾಸ್ ಹೇಗಾಗಿ ಉಳಿಯುತ್ತಿದ್ದ.

ಆದರೂ ರಾಬರ್ಟನ ರಾಜೀನಾಮೆ ಕೇವಲ ರಾಜೀನಾಮೆಯಲ್ಲ ಅನಿಸಿತ್ತು. ಅಕಸ್ಮಾತ್ ರಾಬರ್ಟನನ್ನು ಆತನ ಕುಡಿತದ ಕಾರಣಕ್ಕೆ ಕೆಲಸದಿಂದ ತೆಗೆದು ಮೈಕೆಲನಿಗೆ ಕೆಲಸ ಕೊಟ್ಟಿದ್ದಲ್ಲಿ ಬಾಣಲೆಯಿಂದ ಬೆಂಕಿಗೆ ಹಾರಿದಂತಾಗಿರಬಹುದು ಆಡಳಿತ ಮಂಡಳಿಗೆ.

"ಸಾರಿ, ನನಗೆ ನನ್ನದೇ ಸಮಸ್ಯೆಗಳಿವೆ. ಇಂಥದರಲ್ಲಿ ನಾನು ರಾಬರ್ಟನ ನಡವಳಿಕೆಯ ಬಗ್ಗೆ ಮಾತಾಡೋ ಯಾವ ಅಧಿಕಾರವನ್ನೂ ಹೊಂದಿಲ್ಲ. ಅಷ್ಟೇ ಅಲ್ಲ ನಾನು ನನ್ನ ನಡತೆಯನ್ನು ಸಮರ್ಥಿಸಿಕೊಳ್ಳುತ್ತಿಲ್ಲ. ಆದರೆ ಮನುಷ್ಯ ಎಂದಮೇಲೆ ಏನಾದರೂ ಒಂದು ಇಂಥಾ ಗುಣ ಇರುತ್ತದೆ ತಾನೆ. ನಾನು ನಿಜವಾಗಿ ಹೇಳ್ತಾ ಇದೀನಿ. ಇದರಿಂದ ನನಗೆ ಬಹಳ ದುಃಖವಾಗಿದೆ. ಬಹಳ ಪಶ್ಚಾತ್ತಾಪವಾಗಿದೆ. ಬದುಕಿನಲ್ಲಿ ನಾನು ಎಲ್ಲವನ್ನೂ ಕಳೆದುಕೊಳ್ಳುವ ಘಟ್ಟಕ್ಕೆ ಬಂದು ನಿಂತಿದ್ದೇನೆ. ಈ ಸಮಯದಲ್ಲಿ ನನಗೆ ನಿನ್ನ ಸಹಾಯ ಬೇಕು" ಎಂದ.

ನಾನು ಅರ್ಥವಾಗದಂತೆ ಮತ್ತೆ ಅವನ ಮುಖ ನೋಡಿದೆ. ಆತ "ನನಗೆ ಈ ಕೆಲಸ ಮತ್ತೆ ಸಿಗಬೇಕಾದರೆ ಇನ್ನೊಂದು ರೆಕಮಂಡೇಶನ್ ಪತ್ರ ಬೇಕಾಗಿದೆ" ಎಂದ.

ನಾನು "ಮೈಕೆಲ್, ಸಾರಿ. ನಿನ್ನ ಬಗ್ಗೆ ಊಹಾಪೋಹಗಳೇ ಜಾಸ್ತಿ. ಇಂಟರ್ನೆಟ್ ಅಲ್ಲಿ ನೀನು ಏನು ಮಾಡ್ತಾ ಇದ್ದೀಯ ಅಂತ ನಿನ್ನ ಹೆಂಡತಿಗೆ ಗೊತ್ತಾ? ಗೊತ್ತಿದ್ದಲ್ಲಿ ಆಕೆ ಇನ್ನೂ ನಿನ್ನ ಜತೆಯಲ್ಲಿ ಹೇಗಿದ್ದಾಳೆ ? ನಿನ್ನ ಮಗನನ್ನು ನಿನ್ನ ಜತೆ ಇಲ್ಲಿ ಇಷ್ಟು ಜನ ಮಕ್ಕಳಿರುವ ಈ ಜಿಮ್ಮಿಗೆ ಕಳಿಸಿದಾಳಲ್ಲ. ನಿನ್ನ ಆ ರಿಸ್ಟ್ರೇನಿಂಗ್ ಆರ್ಡರ್‌ಗೆ ಅರ್ಥ ಏನು? ಈ ಜಿಮ್ಮಿನವರಿಗೆ ನಿನ್ನ ಈ ಹವ್ಯಾಸಗಳು ಗೊತ್ತಾ? ನಿನ್ನ ಬಗ್ಗೆ ನನಗೆ ಏನೂ ಗೊತ್ತಿಲ್ಲ. ನಾನು ನಿನ್ನನ್ನು ಮತ್ತೆ ಹೇಗೆ ರೆಕಮೆಂಡ್ ಮಾಡಲಿ?"

"ನನ್ನ ಹೆಂಡತಿಗೆ ನನಗಿಂತ ನನ್ನ ಕೆಲಸದ, ಸಂಬಳದ ಅವಶ್ಯಕತೆ ಬಹಳ ಇದೆ. ಮದುವೆ ಅನ್ನುವ ವ್ಯವಸ್ಥೆಯಲ್ಲಿ ಕಟ್ಟುಬಿದ್ದಾಗ ಇಬ್ಬರೂ ಪರಸ್ಪರರ ಇಂಥ ಯಾವುದಾದರೂ ಅವಲಕ್ಷಣಗಳನ್ನು ಸಹಿಸಿಕೊಳ್ಳಬೇಕಾಗುತ್ತದೆ. ಇನ್ನು ನನ್ನ ಮಗ. ನನ್ನ ಎಲ್ಲ ಹುಚ್ಚಾಟಗಳ ನಡುವೆಯೂ ನಾನೂ ನನ್ನ ಮಗನೂ ಒಂದೇ ಮನೆಯಲ್ಲಿ ಇದ್ದುದರಿಂದ ಮತ್ತು ನಾನು ಯಾವತ್ತೂ ಯಾವುದೇ ಜೀವಂತ ಮಕ್ಕಳ ಜತೆ ಕೆಟ್ಟದಾಗಿ ನಡಕೊಳ್ಳದೇ ಇರುವುದರಿಂದ ನನ್ನಿಂದ ನನ್ನ ಮಗನಿಗೆ ಯಾವುದೇ ತೊಂದರೆ ಇಲ್ಲ ಎಂದು ಜಡ್ಜ್ ತೀರ್ಪು ಕೊಟ್ಟಿದ್ದಾರೆ. ಮೈ ಪ್ಯಾಶನ್ ವಾಸ್ ಆಲ್ ವರ್ಚುಯಲ್. ನಿನ್ನ ಬಳಿ ಒಂದೇ ಒಂದು ಮಾತು ಕೇಳಿಕೊಳ್ಳಲಾ?"

ನಾನು "ಸರಿ" ಎಂದೆ. ಇದನ್ನು ಈತ ಪ್ಯಾಶನ್ ಅಂತಾನಲ್ಲ, ಅಬ್ಬಾ ಧೈರ್ಯವೇ ಅಂದುಕೊಂಡೆ.

"ನೀನು ನನ್ನನ್ನು ರೆಕಮಂಡ್ ಮಾಡುತ್ತಿರುವುದು ಬರೇ ಡಾಕ್ಟರು ಕೆಲಸಕ್ಕೆ ಮಾತ್ರ. ವಿಭಾಗದ ಮುಖ್ಯಸ್ಥನ ಪದವಿಯ ಆಸೆಯನ್ನು ನಾನು ಯಾವಾಗಲೋ ಬಿಟ್ಟಾಗಿದೆ. ಆದ್ದರಿಂದ ನನ್ನ ಡಾಕ್ಟರಿಕೆಯ ಬಗ್ಗೆ ನಿನಗೆ ನಂಬಿಕೆಯಿದ್ದಲ್ಲಿ ಮಾತ್ರ ನೀನು ಪತ್ರ ಬರಿ. ನಾವೆಲ್ಲ ಎಂಥ ಡಾಕ್ಟರಿಕೆ ಮಾಡುತ್ತೇವೆ ಅನ್ನೋದು ಪರಸ್ಪರರಿಗೆ ಚೆನ್ನಾಗಿ ಗೊತ್ತಿದೆ. ಇನ್ನು ನನ್ನ ಈ ಕೆಲಸದ ಹೊರಗಿನ ಚಟುವಟಿಕೆಯ ಬಗ್ಗೆ ನಿನಗೆ ಏನು ತಿಳಕೊಳ್ಳಬೇಕಾಗಿದೆ, ಎಷ್ಟು ತಿಳಕೊಳ್ಳಬೇಕಾಗಿದೆ ಹೇಳು. ಮುಚ್ಚಿಡದೆ, ನಿನ್ನನ್ನು ಮುಜುಗರಪಡಿಸದೆ ಎಷ್ಟು ಸಾಧ್ಯವೋ ಅಷ್ಟು ಹೇಳುತ್ತೇನೆ. ಒಂದೇ ಒಂದು ಸಣ್ಣ ಮುಜುಗರಪಡಿಸುವ ವಿವರ ಬಿಟ್ಟು. ನನ್ನ ವ್ಯವಹಾರವೆಲ್ಲ ಇದ್ದುದು ೧೬ರಿಂದ ೧೮ ವಯಸ್ಸಿನವರ ಜತೆಗೆ ಮಾತ್ರ. ಕೆಲ ದೇಶಗಳಲ್ಲಿ ಇದು ಕಾನೂನುಬದ್ಧ."

ನಾನು ಉಗುಳು ನುಂಗಿ "ಈ ಶಿಫಾರಸು ಪತ್ರದಲ್ಲಿ ಒಂದು ಪ್ರಶ್ನೆಯಿರುತ್ತದೆ. ನಿನಗೂ ಗೊತ್ತು. ನಿಮಗೆ ಗೊತ್ತಿದ್ದಂತೆ ಈ ಅಭ್ಯರ್ಥಿ ಫೆಲನಿ ಅಥವಾ ಇತರ ಕಾನೂನುಬಾಹಿರ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದಾನಾ? ಎಂದು. ಆ ಪ್ರಶ್ನೆಗೆ ನನ್ನ ಉತ್ತರ ಹೌದು ಎಂದಾಗಿದ್ದಲ್ಲಿ ಅದಕ್ಕೆ ನಾನು ಈ ಚಟುವಟಿಕೆಗಳಿದ್ದಾಗ್ಯೂ ಈ ಅಭ್ಯರ್ಥಿಯನ್ನು ನೀನು ಯಾಕೆ ಶಿಫಾರಸು ಮಾಡುತ್ತಿದ್ದೀಯಾ ಎಂದು ಇನ್ನೊಂದು ಪ್ರಶ್ನೆ ಬರುತ್ತದೆ. ಅದಕ್ಕೆ ನಾನು ಉತ್ತರ ಕೊಡಬೇಕು. ಅದಕ್ಕೆ ಸಮರ್ಪಕವಾದ ಉತ್ತರವನ್ನು ನಾನು ಕೊಡುವಷ್ಟು ಮಾತ್ರ ನನಗೆ ವಿವರ ಗೊತ್ತಿದ್ದರೆ ಸಾಕು. ಪ್ಲೀಸ್ ಡೋಂಟ್ ಫ್ರೀಕ್ ಮಿ ಔಟ್ ವಿತ್ ಆಲ್ ಡೀಟೈಲ್ಸ್ ಅಫ್ ಯುವರ್ ಡಾರ್ಕ್ ಲೈಫ್." ಎಂದೆ.

ಪುಟ್ಟ 'ನನ್ನ ಪ್ರಾಕ್ಟೀಸು ಮುಗಿಯಿತು. ಬೇಗ ಮನೆಗೆ ಹೋಗೋಣ' ಎಂದು ಫೋನಿಗೆ ಮೆಸೇಜು ಕಳಿಸಿದ. ನಾನು ಬರುವುದು ಇನ್ನೂ ಐದು ನಿಮಿಷ ಆಗುತ್ತದೆ, ನೀನು ಅಲ್ಲಿಯೇ ಆಟ ಆಡಿಕೊಂಡಿರು ಎಂದು ಕಳಿಸಿದ ಮೆಸೇಜಿಗೆ ಓಕೆ ಬ್ಯಾಸ್ಕೆಟ್‌ಬಾಲ್ ಕೋರ್ಟಲ್ಲಿರುತ್ತೇನೆ ಎಂದು ಮೆಸೇಜು ಕಳಿಸಿದ. ನಾನು ಅಲ್ಲಿಗೆ ಹೋಗಬೇಡ, ಟೆನಿಸ್ ಕೋರ್ಟಲ್ಲೇ ಇರು, ನನಗೆ ಪಾರ್ಕ್ ಮಾಡಲು ಸುಲಭವಾಗುತ್ತದೆ ಎಂದು ಆತನನ್ನು ಬ್ಯಾಸ್ಕೆಟ್ ಬಾಲ್ ಕೋರ್ಟಿಂದ ದೂರವಿಟ್ಟೆ. ಮೈಕೆಲನ ಮಗನ ತಪ್ಪೇನೂ ಇಲ್ಲದಿದ್ದರೂ ಪುಟ್ಟ ಯಾವುದೇ ಕಾರಣಕ್ಕೆ ಅಲ್ಲಿ ಹೋಗುವುದು ನನಗೆ ಇಷ್ಟವಾಗಿರಲಿಲ್ಲ.

"ಇದು ಹೇಗೆ ಶುರುವಾಯ್ತು ಎನ್ನುವುದು ನನಗೂ ಗೊತ್ತಿಲ್ಲ. ನಾನು ಇಂಟರ್ನೆಟ್ ನೋಡುತ್ತಾ ಇದ್ದಾಗ ಕೆಲವೊಮ್ಮೆ ಈ ಡೀಪ್ ವೆಬ್ ಅಂತಾರಲ್ಲ, ಪದರ ಪದರ ಸೆಕ್ಯುರಿಟಿಯಿರುತ್ತೆ. ಅಲ್ಲಿ ಅಡ್ಡಾಡುತ್ತಿದ್ದೆ. ಯಾಕೆ ಅಂತ ಗೊತ್ತಿಲ್ಲ. ಇನ್ನೊಬ್ಬರ ರಹಸ್ಯಗಳ ಬಗ್ಗೆ ಏನೋ ಕುತೂಹಲ. ಉದಾಹರಣೆಗೆ ನನ್ನ ಹೆಂಡತಿ ಇಂಟರ್ನೆಟ್ಟಿನಲ್ಲಿ ನನ್ನ ಕಣ್ಣು

ತಪ್ಪಿಸಿ ಏನು ನೋಡ್ತಾ ಇದ್ದಾಳೆ, ಆಕೆಯ ಬ್ಯಾಂಕ್ ಅಕೌಂಟುಗಳು, ನಮ್ಮ ಆಸ್ಪತ್ರೆಗೆ ಬರುವ ಪೇಶೆಂಟುಗಳ ಕ್ರಿಮಿನಲ್ ಹಿಸ್ಟರಿ, ಫ್ರೆಂಡಾಗದ ನರ್ಸುಗಳ ಫೇಸ್‌ಬುಕ್ ಪೋಸ್ಟುಗಳು, ಅವರ ಫೋಟೋ ಆಲ್ಬಮ್ಮುಗಳು ಇತರೇ ಇತರೇ. ಮೊದಲು ನಿರುಪದ್ರವಿ ಎಂದೇ ನಾನಂದುಕೊಂಡಿದ್ದ ಈ ಚಟ ಇನ್ನೂ ಮುಂದೆ ಮುಂದೆ ಹೋಯಿತು. ಬೇರೆಯವರ ಎಲ್ಲ ರಹಸ್ಯಗಳು ನಿನಗೆ ಗೊತ್ತಾಗುತ್ತಾ ಹೋದಹಾಗೆ ಅದು ನಿನಗೆ ಇಲ್ಲದ ಶಕ್ತಿ ಕೊಡುತ್ತದೆ. ಅದೃಶ್ಯನಾಗಿ ಎಲ್ಲರ ಮನೆಯೊಳಗೆ, ಬಾತ್‌ರೂಮೊಳಗೆ, ಬೆಡ್‌ರೂಮೊಳಗೆ ಹೋಗಿ ಬಂದಹಾಗೆ. ನಿಜವಾಗಿ ನೀನು ಯಾರದಾದರೂ ಬಾತ್‌ರೂಮಿಗೆ ಹೋದಲ್ಲಿ, ಅಕ್ರಮವಾಗಿ ಹೋದಲ್ಲಿ ಅದು ಕಾನೂನುಬಾಹಿರ ಅನ್ನುವ ಅರಿವು ನಿನಗಿರುತ್ತದೆ. ಆದರೆ ಈ ವರ್ಚುಯಲ್ ಪ್ರಪಂಚದಲ್ಲಿ ಯಾವುದು ಕಾನೂನುಬದ್ಧ, ಯಾವುದು ಕಾನೂನು ಬಾಹಿರ ಎಂದು ಅಷ್ಟು ಸುಲಭವಾಗಿ ಗೊತ್ತಾಗುವುದಿಲ್ಲ. ಅಂಥಾ ಸಮಯದಲ್ಲಿ ನಾನು ಅಪ್ಪಿತಪ್ಪಿ ಈ ಸೈಟುಗಳನ್ನು ನೋಡಲು ಶುರುಮಾಡಿಕೊಂಡಿದ್ದು. ಒಮ್ಮೆ ಶುರುವಾದ ಮೇಲೆ ಅದರ ಸೆಳೆತದಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ಮತ್ತೊಮ್ಮೆ ಹೇಳುತ್ತೇನೆ, ನಾನು ಈ ಕೆಲಸವನ್ನು ಕಾನೂನುಬದ್ಧ ಎಂದು ತಿಳಿದೇ ಮಾಡುತ್ತಿದ್ದುದು. ಬೇರೆ ಬೇರೆ ದೇಶದ ಕಾನೂನುಗಳು ನನಗೆ ಗೊತ್ತಿಲ್ಲ" ಎಂದ.

ನಾನು ಸುಮ್ಮನೇ ಆತನ ಮುಖವನ್ನೇ ನೋಡುತ್ತಿದ್ದೆ. ಏನಂತ ತಿಳಿದುಕೊಳ್ಳಲಿ, ಏನೇ ಆದರೂ ಮಕ್ಕಳ ಅಶ್ಲೀಲ ಚಿತ್ರಗಳನ್ನು ನೋಡುತ್ತಿದ್ದವನ ಬಗ್ಗೆ ಯಾರಿಗಾದರೂ ಒಳ್ಳೆಯ ಅಭಿಪ್ರಾಯ ಬರುವುದು ಹೇಗೆ ಸಾಧ್ಯ? ಈಗ ವಯಸ್ಸಿನ ವಿವರ ಹೇಳಿ ಹರಯ, ಕಿರಿಯ, ಶೈಶವ ವಿಕೃತಿಗಳೇ ಬೇರೆ ಎಂದು ಸಮಜಾಯಿಷಿ ಕೇಳುತ್ತಿದ್ದಾನೆ ಅನ್ನಿಸಿತು.

ನನ್ನ ಮೈಯೆಲ್ಲ ಹುಳ ಹರಿದಾಡಿದ ಅನುಭವವಾಗುತ್ತಿತ್ತು.

ಪುಟ್ಟ ರೆಸ್ಟುರೆಂಟಿನ ಕಡೆ ಬರುತ್ತಿದ್ದ. ಪುಟ್ಟ ಹತ್ತಿರವಾಗುತ್ತಿದ್ದಂತೆ ನಾನು ಎದ್ದು "ಮೈಕೆಲ್, ನಿನಗೇನು ಬೇಕು ಎಂದು ನನಗೆ ನಂತರ ಮೆಸೇಜು ಮಾಡು. ನಾನು ಪುಟ್ಟನನ್ನು ಮನೆಗೆ ಕರಕೊಂಡು ಹೋಗಬೇಕು, ಲೇಟಾಗಿದೆ" ಎಂದು ಪುಟ್ಟನ ಕೈಹಿಡಿದು ಜಿಮ್ಮಿನಿಂದ ಆದಷ್ಟು ಬೇಗ ಹೊರಟೆ.

* * *

ಮೈಕೆಲ್ ನನ್ನಿಂದ ಇನ್ನೊಂದು ಶಿಫಾರಸು ಪತ್ರವನ್ನು ಕೇಳಿ ಮೆಸೇಜು ಮಾಡಿದ್ದ. ನಾನು ನಯವಾಗಿ ನಿರಾಕರಿಸಿದ್ದೆ. ಆದರೆ ನಿಜ ಹೇಳಿದ್ದೆ. 'ನಿನಗೆ ಕಾನೂನಿನ ಪ್ರಕಾರ ಅದೇನು ಶಿಕ್ಷೆ ಕೊಟ್ಟಿದ್ದಾರೋ, ಬಿಟ್ಟಿದ್ದಾರೋ ಗೊತ್ತಿಲ್ಲ. ಅದು ಸರಿಯಾದ ಶಿಕ್ಷೆ ಹೌದೋ ಇಲ್ಲವೋ ಅದೂ ಗೊತ್ತಿಲ್ಲ. ಆದರೆ ನಿನ್ನನ್ನು ಒಬ್ಬ ಡಾಕ್ಟರ ಕೆಲಸಕ್ಕೂ ಶಿಫಾರಸು ಮಾಡುವುದು ನನ್ನಿಂದ ಸಾಧ್ಯವಿಲ್ಲ. ಆದ್ದರಿಂದ ದಯವಿಟ್ಟು ಕ್ಷಮಿಸು" ಎಂದು ಮೆಸೇಜನ್ನು ಕಳಿಸಿದ್ದೆ.

ನಾನು ಆತನಿಗೆ ಶಿಫಾರಸು ಮಾಡದೇ ಇರುವುದು ಅಂಥ ವ್ಯತ್ಯಾಸವನ್ನೇನೂ ಮಾಡಲಿಲ್ಲ. ಮೈಕೆಲ್ ಮತ್ತೆ ನಮ್ಮಾಸ್ಪತ್ರೆಯಲ್ಲಿ ಕೆಲಸಕ್ಕೆ ಸೇರಿಕೊಂಡ. ನಾನು ರಾಬರ್ಟನಿಗೆ ನನ್ನ ತೀವ್ರ ಅಸಮಾಧಾನವನ್ನು ತೋರ್ಪಡಿಸಿಕೊಂಡೆ. "ರಾಬರ್ಟ್, ಇದೇನಿದು? ಇವನ ಬಗ್ಗೆ ಇಷ್ಟೆಲ್ಲ ಸುದ್ದಿಯಿದೆ. ಪತ್ರಿಕೆಯಲ್ಲಿ ಈತನನ್ನು ಅರೆಸ್ಟ್ ಮಾಡಿದ ಸುದ್ದಿ ಕೂಡ ಬಂದಿದೆ. ಮತ್ತೆ ಈತನನ್ನು ಕೆಲಸಕ್ಕೆ ತೆಗೆದುಕೊಂಡಿದ್ದೀಯಲ್ಲ."

"ಇವನನ್ನು ಅರೆಸ್ಟ್ ಮಾಡಿದ್ದು ನಿಜ. ಮೈಕೆಲನಿಗೆ ಜಡ್ಜ್ ಕೊಟ್ಟ ಶಿಕ್ಷೆಯನ್ನು ಆತ ಪೂರೈಸಿದ್ದಾನೆ. ಅವನಿಗೆ ಮತ್ತೆ ಡಾಕ್ಟರ್ ಕೆಲಸ ಮಾಡಬಾರದು ಎಂದೇನೂ ನಿರ್ಬಂಧವನ್ನು ನ್ಯಾಯಾಧೀಶರು ವಿಧಿಸಿಲ್ಲ. ಹಾಗಾಗಿ, ಅವನನ್ನು ಅವನ ಕೆಲಸ ಮಾಡಲು ತಡೆಯಲು ನಾನ್ಯಾರು?"

"ರಿಸ್ಟ್ರೈನಿಂಗ್ ಆರ್ಡರ್ ಇತ್ತಲ್ಲವಾ, ಅನಿರ್ದಿಷ್ಟ ಕಾಲ."

"ಅನಿರ್ದಿಷ್ಟ, ಶಾಶ್ವತವಾಗಿಯಲ್ಲ. ಅದನ್ನು ತೆಗೆದಾಯಿತು."

"ರಾಬರ್ಟ್, ಸಾರಿ ಫರ್ ಬೀಯಿಂಗ್ ನಯೀವ್. ಇಂಥ ತಪ್ಪಿಗೆ ಆರು ತಿಂಗಳು ಕಮ್ಯುನಿಟಿ ಸರ್ವಿಸ್ ಹೆಸರಲ್ಲಿ ಹೈವೇ ಪಕ್ಕದ ಕಸ ತೆಗೆದುಹಾಕಿ ಮಕ್ಕಳಿಂದ ಮೂವತ್ತಡಿ ದೂರ ಇದ್ದರೆ ಸಾಕಾ? ಮತ್ತೇನೂ ಶಿಕ್ಷೆ ಬೇಡವಾ?"

"ನೋಡು, ಇಂಥ ತಪ್ಪಿಗೆ ಇಂಥ ಶಿಕ್ಷೆ ಎನ್ನುವುದನ್ನು ನಿರ್ಧರಿಸುವವರು ನ್ಯಾಯಾಧೀಶರು. ನಾನು ನೀನು ಯಾರು, ತೀರ್ಪು ನೀಡುವುದಕ್ಕೆ? ಆತ ನ್ಯಾಯಾಧೀಶರಿಂದ ಗುಡ್ ಸ್ಟಾಂಡಿಂಗ್ ಪ್ರಮಾಣ ಪತ್ರ ತೆಗೆದುಕೊಂಡು ಬಂದಿದ್ದಾನೆ. ಎಲ್ಲರೂ ತಪ್ಪು ಮಾಡ್ತಾರೆ. ಆದರೆ ಇಂಥ ತಪ್ಪುಗಳು ಎದ್ದು ಕಾಣುತ್ತವೆ. ಕುಡಿತ, ವ್ಯಸನ ಎಲ್ಲ ಕಾಯಿಲೆಗಳು. ಅಡಿಕ್ಷನ್ ಈಸ್ ಎ ಡಿಸೀಸ್ ಅಂಡ್ ಯು ನೋ ದಟ್. ಹಾಗೇ ಈ ಪೋರ್ನ್ ಅಡಿಕ್ಷನ್ ಕೂಡ ಒಂದು ಕಾಯಿಲೆ. ನಾನು ಆತನ ಪರವಾಗಿ ವಾದಿಸುತ್ತಿಲ್ಲ. ಆದರೆ ಒಮ್ಮೆ ಯೋಚನೆ ಮಾಡು. ಇವನಿಗೆ ಕ್ಯಾನ್ಸರ್ರೋ ಹಾರ್ಟ್ ಅಟ್ಯಾಕೋ ಆಗಿದ್ದರೆ ಇವನಿಗೆ ಒಂದು ಕಾಯಿಲೆಯಿತ್ತು, ವಾಸಿಯಾಯಿತು ಎಂದು ಡಾಕ್ಟರುಗಳು ಹೇಳಿದ ಮೇಲೆ ಮತ್ತೆ ವಾಪಸ್ಸು ಕೆಲಸಕ್ಕೆ ತೆಗೆದುಕೊಳ್ಳುತ್ತೇವೆಯೋ ಇಲ್ಲವೋ? ಇಂಥ ವಿಷಯದಲ್ಲಿ ನಾವುಗಳು ಬಹಳ ಜಡ್ಜ್‌ಮೆಂಟಲ್ ಆಗಿಬಿಡುತ್ತೇವೆ, ಅಲ್ಲವಾ? ಇವನಿಗೆ ಆತನ ಥೆರಪಿಸ್ಟ್, ಕೌನ್ಸೆಲರ್ ಎಲ್ಲರೂ ಈತ ಮತ್ತೆ ತನ್ನ ಕೆಲಸಕ್ಕೆ ವಾಪಸಾಗಬಹುದು ಎಂದು ಸರ್ಟಿಫಿಕೇಟ್ ಕೊಟ್ಟಿದ್ದಾರೆ. ಅಧಿಕೃತವಾಗಿ ಈತನಿಗೆ ಕೆಲಸ ಕೊಡದೇ ಇರುವುದಕ್ಕೆ ನನ್ನ ಹತ್ತಿರ ಬೇರೆ ಯಾವುದೇ ಕಾರಣಗಳಿಲ್ಲ."

"ರಾಬರ್ಟ್, ಬರೇ ಪೇಪರ್ವರ್ಕ್ ಸರಿ ಇದ್ದರೆ ಮಾತ್ರ ಸಾಕಾ? ಮೈಕೆಲ್ ಎಲ್ಲೆಲ್ಲಿ ಏನೇನು ಮಾಡಿದ್ದನೋ, ಮತ್ತೆ ಈ ಕೆಲಸ ಮಾಡೋದಿಲ್ಲ ಎನ್ನೋದು ಏನು ಗ್ಯಾರಂಟಿ ?"

"ಮತ್ತೆ ಅದನ್ನು ನಿರ್ಧರಿಸೋದು ನಾನಲ್ಲ. ಅವನ ಪರ್ಸನಲ್ ಕಂಪ್ಯುಟರನ್ನು ಮಾನಿಟರ್ ಮಾಡುತ್ತಾರಂತೆ. ಆಸ್ಪತ್ರೆಯಲ್ಲಿ ಅವನಿಗೆ ಇಂಟರ್ನೆಟ್ ಉಪಯೋಗಿಸಲಿಕ್ಕೆ ಅನುಮತಿ ಇಲ್ಲ. ಆತನ ಅಪರಾಧವೆಲ್ಲ ವರ್ಚುಯಲ್ ಪ್ರಪಂಚದಲ್ಲಿ ಆಗಿದ್ದರಿಂದ ಅದಕ್ಕೆ ಎಲ್ಲ ಬಂದೋಬಸ್ತು ಮಾಡಿಕೊಂಡೇ ಅವನನ್ನು ಮತ್ತೆ ಕೆಲಸಕ್ಕೆ ತೆಗೆದುಕೊಳ್ಳುತ್ತಿರೋದು. ಎಲ್ಲ ಸರಿ ಇರೋರನ್ನು ಮಾತ್ರ ಕೆಲಸಕ್ಕೆ ತೆಗೆದುಕೊಳ್ಳಬೇಕೆಂದರೆ ನಾವು ಈ ಆಸ್ಪತ್ರೆ ನಡೆಸೋದು ಬಹಳ ಕಷ್ಟ" ಎಂದು ಹೇಳಿ 'ನೀನು ನಿನ್ನ ವೈಯಕ್ತಿಕ ನಂಬಿಕೆಗಳನ್ನು ಮನೆಯಲ್ಲಿಟ್ಟು ಬರಬೇಕು. ಇಲ್ಲಿ ಕೆಲಸ ಮಾಡುವಾಗ ಆಡಳಿತದ ನಿರ್ಣಯಕ್ಕೆ ಬದ್ಧನಾಗಿರಬೇಕು. ನಾನು ಇಲ್ಲಿ ಪತ್ರಗಳಿಗೆ ಸಹಿ ಮಾಡುವುದನ್ನು ಬಿಟ್ಟರೆ ಬೇರೇನನ್ನೂ ಮಾಡಿಲ್ಲ. ನಿನಗೆ ಅರ್ಥ ಆಗುತ್ತೆ ಅನಿಸುತ್ತೆ" ಎಂದು ಸಂಭಾಷಣೆ ಮುಂದುವರಿಸುವಲ್ಲಿ ಆತನಿಗೆ ಆಸಕ್ತಿಯಿಲ್ಲ ಎನ್ನುವಂತೆ ತನ್ನ ಕಂಪ್ಯೂಟರಿನಲ್ಲಿ ಕಣ್ಣು ಹುದುಗಿಸಿದ.

ನನಗೆ ಇನ್ನೂ ಸಮಾಧಾನವಾಗಲಿಲ್ಲ. ಬೆತ್ ಕೋಲರ್‌ಗೆ "ಮೈಕೆಲನನ್ನು ಕೆಲಸಕ್ಕೆ ಮತ್ತೆ ವಾಪಸ್ಸು ಕರಕೊಳ್ತಾ ಇರುವ ಆಡಳಿತ ಮಂಡಳಿಯ ನಿರ್ಣಯದ ಬಗ್ಗೆ ನರ್ಸುಗಳು ಏನನ್ನುತ್ತಾರೆ? ಯಾರಿಗಾದರೂ ಇದರ ಬಗ್ಗೆ ಕೊಂಚವೇ ಕೊಂಚ ಅನುಮಾನವಿದ್ದರೂ ನೀನು ಅವರಿಂದ ಸಹಿ ತೆಗೆದುಕೊಂಡು ರಾಬರ್ಟನಿಗೆ ಕಳಿಸು. ಮಕ್ಕಳು ಮರಿ ಓಡಾಡಿಕೊಂಡು, ಪೆಟ್ಟುಮಾಡಿಕೊಂಡು, ಕೆಲವೊಮ್ಮೆ ತುಂಬಾ ಗಂಭೀರ ಸ್ಥಿತಿಯಲ್ಲಿ ಬರುವ ಜಾಗ ಇದು. ಇವನಿಂದ ಬೇರೆ ಯಾರೂ ಕೆಲಸಕ್ಕೆ ಬರುವುದಕ್ಕೆ ಮುಜುಗರ ಮಾಡಿಕೊಳ್ಳಬಾರದು" ಎಂದು ಇಮೈಲ್ ಮಾಡಿದೆ.

ಬೆತ್ "ಡ್ಯೂಡ್, ವಿ ಲವ್ ಮೈಕೆಲ್. ಆತ ಏನೇ ಮಾಡಿದ್ದರೂ ಆತ ಒಬ್ಬ ಒಳ್ಳೆ ಡಾಕ್ಟರು. ಆತ ಮಕ್ಕಳೊಂದಿಗೆ ನಡಕೊಳ್ಳೋ ರೀತಿ ನೋಡಿದ್ದೀಯ. ಕಿಡ್ಸ್ ಲವ್ ಹಿಮ್. ಜಾಸ್ತಿ ತಲೆಕೆಡಿಸಿಕೊಳ್ಳಬೇಡ" ಎಂದು ಒಂದು ಚುಟುಕಾದ ಇಮೈಲ್ ಕಳಿಸಿದ್ದಳು.

ನಾನು "ಕಿಡ್ಸ್ ಲವ್ ಹಿಮ್? ನೋ ಹಿ ಲವ್ಸ್ ಕಿಡ್ಸ್!!" ನನ್ನ ಆಶ್ಚರ್ಯಸೂಚಕ ಚಿಹ್ನೆಗಳು ನನ್ನ ಅಸಹಾಯಕತೆಯನ್ನು ಮಾತ್ರ ಹೇಳುತ್ತಿದ್ದವು.

"ವೋ, ವೋ, ವೋ. ಸ್ವಲ್ಪ ನಿಧಾನಿಸು. ನೀನು ಬಹಳ ಅನುಚಿತವಾಗಿ ನಡೆದುಕೊಳ್ಳುತ್ತಿದ್ದೀಯ. ನಿನ್ನ ವೈಯಕ್ತಿಕ ಜೀವನದಲ್ಲಿ ನೀನು ಮಾಡುವ ತಪ್ಪುಗಳು ನಿನ್ನ ಕೆಲಸದ ಮೇಲೆ ಪರಿಣಾಮ ಮಾಡುತ್ತದಾ ಇಲ್ಲವಾ ಎನ್ನುವುದಷ್ಟೇ ನಮಗೆ ಮುಖ್ಯ. ಉಳಿದದ್ದೆಲ್ಲಾ ನಗಣ್ಯ. ಚಿಲ್. ದಿಸ್ ಈಸ್ ಪೋಸ್ಟ್ ಟ್ರುತ್ ಎರಾ" ಎಂದು ಬರೆದಿದ್ದಳು.

ಪೋಸ್ಟ್ ಟ್ರುತ್, ಸತ್ಯಾನಂತರದ ಕಾಲವಂತೆ. ಅಂದರೇನು? ಈತ ಅಶ್ಲೀಲ ಚಿತ್ರವ್ಯಸನಿ. ಅದು ಸತ್ಯ. ಆದರೆ ನಾವು ಅದರಾಚೆಯ, ಅದರ ನಂತರದ ಆತನ

ವ್ಯಕ್ತಿತ್ವವನ್ನು ಮಾತ್ರ ನೋಡಬೇಕು. ಅನುಕೂಲಕ್ಕಾಗುವ ಸತ್ಯ ಮಾತ್ರ ಸತ್ಯ. ಯಾವುದಾದರೂ ಸಂಗತಿ, ವಿಷಯ ಸತ್ಯವಾಗಿದ್ದರೂ ಅದರಿಂದ ಅನನುಕೂಲವಾಗುತ್ತದೆ ಅಂದಾಗ ಅದನ್ನು ಕೊಂಚ ಪಕ್ಕಕ್ಕಿಟ್ಟು ಮುಂದೆ ಹೋಗಬೇಕು. ನ ಭೂ್ರಯಾತ್ ಒಬ್ಬ ಡಾಕ್ಟರ್ ಇಂಥ ಚಿತ್ರಗಳನ್ನು ಇಂಟರ್ನೆಟ್ಟಿನಲ್ಲಿ ಹಂಚುತ್ತಿದ್ದ ಎಂಬ ಅಪ್ರಿಯ ಸತ್ಯಕ್ಕಿಂತ, ನಂತರದ ಕಾಲದಲ್ಲಿ ಆತ ಎಂಥ ಮನುಷ್ಯ, ಎಂತ ಡಾಕ್ಟರು ಅನ್ನುವುದು ಅವನು ನಿಜವಾಗಿ ಮಾಡಿದ ತಪ್ಪನ್ನು ಅಂದರೆ ಸತ್ಯದ ವಿಶ್ವಾಸಾರ್ಹತೆಯನ್ನು ನಿರ್ಧರಿಸುತ್ತದೆ. ನಾನೇನೇ ಕೂಗಾಡಿದರೂ ಅದು ಉಪಯೋಗವಿಲ್ಲ ಅನ್ನಿಸಿತು.

ನಾನು "ಆತನನ್ನು ಚೀಫ್ ಪಟ್ಟಕ್ಕೆ ಮತ್ತೆ ಪರಿಗಣಿಸಬಹುದಾ?" ಎಂದು ಕುತೂಹಲವನ್ನು ತಡೆಯದೆ ಕಳಿಸಿದ್ದೆ.

"ಪರಿಗಣಿಸಬಾರದು ಎಂದೇನೂ ನಿರ್ಧಾರವಾಗಿಲ್ಲ ಅನಿಸುತ್ತೆ" ಎಂದು ಸಂಭವಿಸಬಹುದಾದ ಡಬಲ್ ನೆಗಟೀವ್ ಆಡಳಿತೀ ಜಾರ್ಗನಿನೊಂದಿಗೆ ಇಮೈಲ್ ಕೊನೆಗೊಳಿಸಿದಳು.

* * *

ಪುಟ್ಟ ಬ್ಯಾಸ್ಕೆಟ್‌ಬಾಲಿನ ಕೋರ್ಟಿನಲ್ಲಿ ಬಿದ್ದು ತೊಡೆ ಸಂದಿಯಲ್ಲಿ ಗಾಯ ಮಾಡಿಕೊಂಡಿದ್ದನಂತೆ. ಕುಂಟುತ್ತಾ ಪಾರ್ಕಿಂಗ್ ಲಾಟಿಗೆ ಬಂದ. ನಾನು ಅಲ್ಲಿಯೇ ಜಿಮ್ಮಿನ ಲಾಕರ್ ರೂಮಿನಲ್ಲಿ ಕರಕೊಂಡು ಹೋಗಿ ನೋಡುತ್ತೇನೆ ಎಂದೆ. "ನಾಟ್ ಯು" ಎಂದ. ನಾನು "ಯಾಕೋ ಪುಟ್ಟ, ನಾನು ನಿಮ್ಮಪ್ಪನೋ" ಎಂದೆ. ಪುಟ್ಟ "ಅದಕ್ಕೇ" ಎಂದ.

ಪುಟ್ಟನಿಗೆ ಈಗ ಹದಿನೈದು. ಮೈಯಲ್ಲಿ ಬದಲಾವಣೆಗಳು ಎದ್ದು ಕಾಣುತ್ತಿದ್ದವು. ಮೈಕೈಯೆಲ್ಲ ಕೂದಲುಗಳು. ವಯಸ್ಸಿಗೆ ಮೀರಿದ ಎತ್ತರ. ಮೊದಲಿಂದ ಆಟ, ಜಿಮ್ಮು, ವ್ಯಾಯಾಮದಲ್ಲಿ ಆಸಕ್ತಿಯಿದ್ದುದರಿಂದ ನೋಡಿದರೆ ಹತ್ತೊಂಬತ್ತು ವಯಸ್ಸಿನ ಹುಡುಗನ ಹಾಗೆ ಕಾಣುತ್ತಿದ್ದ. ಆದ್ದರಿಂದ ತೊಡೆಸಂದಿಯ ಗಾಯವನ್ನು ನನಗೆ ತೋರಿಸಲಿಕ್ಕೆ ಸಹಜವಾಗಿಯೇ ನಾಚಿಕೆಪಟ್ಟುಕೊಳ್ಳುತ್ತಿದ್ದಾನೆ ಎಂದುಕೊಂಡೆ. ಒಂದು ಬ್ಯಾಂಡ್ ಏಡ್ ಹಾಕಿಕೊಂಡು ಬಾ ಮನೆಗೆ ಹೋಗೋಣ ಎಂದಾಗ ಆತ ಅಲ್ಲಿಯೇ ಯಾರ ಹತ್ತಿರವೋ ಬ್ಯಾಂಡ್ ಏಡ್ ಇಸಕೊಂಡು ಹಾಕಿಕೊಂಡು ಬಂದ.

ಮನೆಗೆ ಹೋಗಬೇಕಾದರೆ ಕಾಲಗಲಿಸಿಕೊಂಡು ನಡೆಯುತ್ತಾ ಇದ್ದ. "ನೋವಾಗುತ್ತಿದೆಯೇನೋ, ಪುಟ್ಟ" ಎಂದಾಗ "ನೋ" ಎಂದು ಸುಮ್ಮನೆ ತನ್ನ ಫೋನು ನೋಡುತ್ತಾ ಕೂತ. ನಾನು ಮನೆಗೆ ಹೋಗಿ ಗರಾಜಿನ ಬಾಗಿಲನ್ನು ತೆರೆದು ಕಾರನ್ನು ಒಳಗೆ ಇಟ್ಟು ನನ್ನ ಫೋನಲ್ಲಿದ್ದ ಮೆಸೇಜುಗಳನ್ನು ನೋಡುತ್ತಾ ಇದ್ದೆ. ಪುಟ್ಟ ಕಾರಿನಿಂದ ಕೆಳಗಿಳಿಯಲು ಹೋದಾಗ ಆತ ಕೂತಿದ್ದ ಸೀಟಿನಲ್ಲಿ ರಕ್ತ ಒಂದು ಸಣ್ಣ ಹಳ್ಳ ಕಟ್ಟಿತ್ತು.

ಗಾಬರಿಯಿಂದ "ಪುಟ್ಟ" ಎಂದು ಕಾರಿನಿಂದ ಇಳಿದು ಹೋದೆ, ಆತನ ಪ್ಯಾಂಟಿನ ಹಿಂಭಾಗವೆಲ್ಲ ರಕ್ತ. ಮುಂದೆ ತೊಡೆಯ ಭಾಗದಲ್ಲಿ ಮುಟ್ಟಿ ನೋಡಿದರೆ ಬೆಚ್ಚಗೆ ತೇವವಾಗಿತ್ತು. ಬಿಳಿಚಿಕೊಂಡಿದೆಯಾ ಎಂದು ನಾಲಿಗೆ ನೋಡಲು "ಚಾಚು" ಎಂದೆ. "ಐ ಆಮ್ ಓಕೆ" ಎಂದು ಹಾಗೇ ಹಿಂದೆ ಒರಗಿದ.

ಮುಂದಿನ ಐದು ನಿಮಿಷದಲ್ಲಿ ಆಸ್ಪತ್ರೆಯಲ್ಲಿದ್ದೆ. ಎಷ್ಟು ಕೆಂಪುದೀಪಗಳನ್ನು ಹಾದೆನೋ, ಎಷ್ಟು ಕಾರುಗಳನ್ನು ಹಿಂದೆ ಹಾಕಿದ್ದೆನೋ ದೇವರಿಗೇ ಗೊತ್ತು. ಹೊರಗೆ ರಿಜಿಸ್ಟ್ರೇಷನ್‌ನಲ್ಲಿ ಪುಟ್ಟನ ಹೆಸರನ್ನು ನೋಂದಾಯಿಸಿ ಒಳಗೆ ಮಲಗಿಸಿ ಆತನ ಪ್ಯಾಂಟನ್ನು ತೊಡೆಯ ತನಕ ಮೇಲೇರಿಸಲಾಗದೇ ಒಂದು ಭಾಗವನ್ನು ಕತ್ತರಿಸಿ ತೆಗೆದಿದ್ದಷ್ಟೇ.

ರಕ್ತ ಕಾಣಿಸಿತ್ತು.

ಏನಿಲ್ಲವೆಂದರೂ ನಾಲ್ಕಿಂಚಿನ ಗಾಯ. ಯಾವುದೋ ರಕ್ತನಾಳ ಕತ್ತರಿಸಿದೆ. ಸುಮಾರು ಅರ್ಧಗಂಟೆ ರಕ್ತಸ್ರಾವವಾಗಿರುವುದರಿಂದ ಪುಟ್ಟನ ಕೈಗಳು ತಣ್ಣಗಾಗುತ್ತಿವೆ, ರಕ್ತದೊತ್ತಡ ಕಮ್ಮಿಯಾಗುತ್ತಿದೆ.

ನರ್ಸುಗಳಿಬ್ಬರು 'ಟ್ರಾಮಾ ಟೀಮ್ ಟು ಎಮೆರ್ಜೆನ್ಸಿ ಡಿಪಾರ್ಟ್‌ಮೆಂಟ್' ಕರೆದರು, ನನ್ನ ಕೈಗಳು ನಡುಗುತ್ತಿದ್ದವು. ನಾನು ಸೀದಾ ಹೋಗಿ ಕೈಗವಸು ಹಾಕಿಕೊಂಡು ಪುಟ್ಟನ ಗಾಯದಿಂದ ಕಾಣುತ್ತಿದ್ದ ರಕ್ತನಾಳದ ಮೇಲೆ ಒಂದು ಬೆಟ್ಟಿಟ್ಟು ಬಲವಾಗಿ ಒತ್ತಿದೆ. ಪಕ್ಕದಲ್ಲಿ ಮೈಕೆಲನಿದ್ದ. ಅಂದು ಆತನ ಪಾಳಿ. ಆತ ಪುಟ್ಟನ ಹತ್ತಿರ ಬಂದ. ತಕ್ಷಣ "ಅವನನ್ನು ಮುಟ್ಟಬೇಡ" ಎಂದು ಬಲವಾಗಿ ಕೂಗಿದೆ.

"ನೀನು ಈಗ ಸ್ವಲ್ಪ ಸಮಾಧಾನದಿಂದಿರಬೇಕು. ಪುಟ್ಟನ ತೊಡೆಯ ಆರ್ಟರಿಗೆ ಏಟು ತಗುಲಿರಬಹುದು. ನಾನು ನೋಡುತ್ತೇನೆ. ನೀನು ಹಾಗೇ ಆ ಜಾಗದಲ್ಲಿಯೇ ಹೆಬ್ಬೆಟ್ಟನ್ನು ಒತ್ತಿಕೊಂಡಿಟ್ಟುಕೋ" ಎಂದ.

ನಾನು ನಿರ್ವಾಹವಿಲ್ಲದೇ ಸುಮ್ಮನೇ ಬೆಟ್ಟೊತ್ತಿ ನಿಂತುಕೊಂಡಿದ್ದೆ. ನಾಲ್ಕು ಜನ ನರ್ಸುಗಳು ಪುಟ್ಟನ ಎರಡೂ ಮುಂಗೈಯಲ್ಲಿ ಐವಿ ಹಾಕಿದ್ದರು. ಯಾರೋ ಕೂಗುತ್ತಿದ್ದರು 'ಪುಟ್ಟನ ಬೀಪಿ ಅರವತ್ತು ಓವರ್ ನಲವತ್ತು. ಬ್ಲಡ್ ಬ್ಯಾಂಕಿನಿಂದ ರಕ್ತ ತರಿಸಿ.'

ಬಾಗಿಲ ಬಳಿ ಸ್ವಾತಿ ಕಾಣಿಸಿದಳು. ಓಡಿ ಬಂದು ನನ್ನನ್ನಪ್ಪಿಕೊಂಡಳು. ನಾನು ಆಕೆಯ ತಲೆ ನೇವರಿಸಿದೆ. ಪುಟ್ಟನ ರಕ್ತನಾಳದಿಂದ ರಕ್ತ ಹೊರಗೆ ಚಿಮ್ಮದಂತೆ ತಡೆದಿರುವುದು ನನ್ನ ಬೆಟ್ಟೊಂದೇ. ಏನು ಮಾಡಿದರೂ ಆ ಬೆಟ್ಟನ್ನು ಅಲ್ಲಿಂದ ತೆಗೆಯಲು ನಾನು ಸಿದ್ಧನಿರಲಿಲ್ಲ.

ಮೈಕೆಲ್ ತನ್ನ ಸರಂಜಾಮುಗಳನ್ನು ತಂದ. "ಹಾಗೆಯೇ ಆ ಬೆಟ್ಟನ್ನಿಟ್ಟುಕೊಂಡಿರು. ಏನು ಮಾಡಿದರೂ ತೆಗೆಯಬೇಡ. ನಾನು ಒಂದೇ ಒಂದು ನಿಮಿಷದಲ್ಲಿ ಪರ್ಸ್‌ಸ್ಟ್ರಿಂಗ್ ಹೊಲಿಗೆಯನ್ನು ನಿನ್ನ ಬೆರಳ ಸುತ್ತ ಹಾಕಿ ಕೊಂಚ ಬಲವಾಗಿ ಎಳೆಯುತ್ತೇನೆ. ಬರೇ ಚರ್ಮದಡಿಯ ಸಣ್ಣ ರಕ್ತನಾಳಗಳು ಹರಿದುಕೊಂಡಿದ್ದರೆ ಈ ಹೊಲಿಗೆ ರಕ್ತಸ್ರಾವವನ್ನು

ತಡೆಯುತ್ತದೆ. ಇಲ್ಲದಿದ್ದರೆ ಆಪರೇಟಿಂಗ್ ರೂಮಿಗೆ ಹೋಗಬೇಕಾಗುತ್ತದೆ. ನಾನು ಸರ್ಜನನಿಗೆ ಬರಹೇಳಿಯಾಗಿದೆ" ಎಂದ.

ಈ ತರದ ಪೇಶೆಂಟುಗಳು ಬಂದರೆ ನಾನು ಮಾಮೂಲಿಯಾಗಿ ಜಾಸ್ತಿ ರಿಸ್ಕು ತೆಗೆದುಕೊಳ್ಳಲು ಹೋಗುವುದಿಲ್ಲ. ಮೊದಲು ಸರ್ಜನನನ್ನು ಕರೆದು ನಂತರ ಪೇಶೆಂಟಿಗೆ ತುರ್ತಾಗಿ ಏನು ಬೇಕೋ ಅದನ್ನು ಮಾತ್ರ ಮಾಡುತ್ತೇನೆ. ಆದರೆ ಮೈಕೆಲ್ ಈ ತರದ ಹೊಲಿಗೆ ಹಾಕುವುದರಲ್ಲಿ ಪರಿಣತ. ಆತ ಈ ರೀತಿಯ ಹೊಲಿಗೆಯನ್ನು ಚಕಚಕ ಹಾಕುವುದನ್ನು ನಾನೇ ನೋಡಿದ್ದೆ. ಆತ ಹೊಲಿಗೆ ಹಾಕಿದರೆ ಪುಟ್ಟನನ್ನು ಆಪರೇಷನ್ ರೂಮಿಗೆ ಹೋಗುವುದರಿಂದ ತಡೆಯಬಹುದು ಎಂದನ್ನಿಸಿತ್ತು.

ಆದರೆ ಯಾವ ಕಾರಣಕ್ಕೂ ಇಂದು ನಾನು ಪುಟ್ಟನ ಜೀವವನ್ನು ಮೈಕೆಲನ ಕೈಯಲ್ಲಿಡಲು ಸಿದ್ಧನಿರಲಿಲ್ಲ.

ಪುಟ್ಟ ಇದ್ದಕ್ಕಿದ್ದಂತೆ ಹೊದಿಕೆ ಮೇಲೆಳೆದುಕೊಂಡು ತನ್ನ ತೊಡೆಯ ಭಾಗವನ್ನು ಮುಚ್ಚಿಕೊಳ್ಳಲು ಪ್ರಯತ್ನ ಮಾಡಿದ. ಮೈಕೆಲನ ಕೈ ಪುಟ್ಟನ ತೊಡೆಯ ಮೇಲಿತ್ತು.

ನಾನು "ಯು ಸನ್ ಆಫ್ ಅ ಬಿಚ್. ಏನು ಮಾಡಿದೀ ಪುಟ್ಟನಿಗೆ. ಮುಟ್ಟಬೇಡ ಎಂದು ಹೇಳಲಿಲ್ಲವಾ?" ಎಂದು ಎಲ್ಲರೆದುರೂ ಕೂಗಿದೆ.

ಗಾಬರಿಗೊಂಡಂತೆ ಕೈ ಹಿಂತೆಗೆದುಕೊಂಡ "ನಾನು ನನ್ನ ಕೆಲಸ ಮಾತ್ರ ಮಾಡುತ್ತಿದ್ದೇನೆ, ಪ್ಲೀಸ್" ಎಂದ. ಕೈಗವಸು ಹಾಕಿಕೊಂಡು, ಸಲಕರಣೆಗಳನ್ನು ತನ್ನ ಎರಡೂ ಕೈಯಲ್ಲಿ ಇಟ್ಟುಕೊಂಡು ಶರಣಾಗತನಾದಂತೆ ಎರಡೂ ಕೈಯನ್ನೂ ಮೇಲೆತ್ತಿ ಹಿಡಿದು ನಿಂತಿದ್ದ, ಮೈಕೆಲ್.

ಸುತ್ತಲಿದ್ದ ನರ್ಸುಗಳು ನಮ್ಮಿಬ್ಬರನ್ನೂ ನೋಡುತ್ತಾ ಏನು ಮಾಡಬೇಕೆಂದು ಗೊತ್ತಾಗದೇ ನಿಂತಿದ್ದರು.

ನಾನು ಟೋನಿಗೆ "ಸರ್ಜನ್ ಯಾವಾಗ ಬರುತ್ತಿದ್ದಾನೆ?" ಎಂದು ಕೇಳಿದೆ. ನನ್ನ ಮಾತಿಗೆ ಉತ್ತರವೆಂಬಂತೆ ಸರ್ಜನ್ ಪಾರೀಖ್ ಹೊರಗಿಂದ ಬಂದು ಇಲ್ಲಿನ ಸನ್ನಿವೇಶವನ್ನು ಅರ್ಥ ಮಾಡಿಕೊಳ್ಳಲಿಕ್ಕೆ ಪ್ರಯತ್ನ ಮಾಡುತ್ತಿದ್ದ. ಸ್ವಾತಿಯ ಬಳಿ ಆತ ಎಷ್ಟು ಸಾಧ್ಯವೋ ಅಷ್ಟು ವಿಷಯ ತಿಳಕೊಂಡು ಬಂದಿದ್ದ.

"ಓಕೆ, ಫೆಲ್ಲಸ್. ಮೈಕೆಲ್ ಹೇಳಿದ ಹಾಗೆ ಇಲ್ಲಿಯೇ ಪರ್ಸ್‌ಸ್ಟ್ರಿಂಗ್ ಹೊಲಿಗೆ ಹಾಕಿ ರಕ್ತಸ್ರಾವವನ್ನು ತಹಬಂದಿಗೆ ತರೋಕಾಗುತ್ತಾ ಅಂತ ಪ್ರಯತ್ನಿಸುತ್ತೀನಿ. ಆಗದಿದ್ದರೆ ಓಟಿ ಸಿದ್ಧವಾಗಿದೆ" ಎಂದು ಹೇಳಿ ಪುಟ್ಟನ ತೊಡೆಯ ಗಾಯವನ್ನು ಒತ್ತಿ ಹಿಡಿದಿದ್ದ ನನ್ನ ಬೆಟ್ಟಿನ ಸುತ್ತ ಜೋಳಿಗೆಯ ಕುತ್ತಿಗೆ ಕಟ್ಟುವ ಸಣ್ಣ ನೂಲಿನ ಗಂಟಿನಂತೆ ಒಂದಾದ ಮೇಲೆ ಒಂದು ಎಂಟು ಬಾರಿ ಗಾಯದ ಪರಿಧಿಯನ್ನು ಸುತ್ತಿಸಿ ಗಾಯದ ಬಾಯನ್ನು ಮೀನಿನ ಬಾಯಿಯ ತರ ಉಫ್ ಎನಿಸಿ ಬಲವಾಗಿ ಎಳೆದು ಗಂಟು ಹಾಕಿದ ಪಾರೀಖ್. ನನಗೆ "ನಿಧಾನವಾಗಿ ನಿನ್ನ ಬೆಟ್ಟನ್ನು ತೆಗಿ" ಎಂದ.

ನಾನು ಬೆಟ್ಟು ತೆಗೆದೆ.

ಪುಟ್ಟ ಕಣ್ಣು ತೆಗೆದ.

ಪಕ್ಕದಲ್ಲಿ ಪಾರೀಖನ ಮುಖದಲ್ಲಿ ನಗು ಕಾಣಿಸಿತ್ತು. ಮೈಕೆಲ್‌ಗೆ ಹೈ ಫೈ ಕೊಡಲು ಕೈಯೆತ್ತಿದ. ಅಲ್ಲಿ ಮೈಕೆಲ್ ಇರಲಿಲ್ಲ. ಆತ ಆತನ ಕಂಪ್ಯೂಟರ್ ಮುಂದೆ ಕೂತು ಪುಟ್ಟನ ಚಾರ್ಟನ್ನು ಮುಗಿಸಿ ನನ್ನ, ಸ್ವಾತಿಯ ಬಳಿ ಬಂದು 'ಇವತ್ತು ರಾತ್ರಿ ಅಬ್ಸರ್ವೇಷನ್ ಅಲ್ಲಿ ಇದ್ದರೆ ಸಾಕು, ಅನಿಸುತ್ತೆ. ಯಾವುದೇ ಆಳದ ಗಾಯಗಳಾಗಿಲ್ಲ ಅನಿಸುತ್ತೆ. ಅಡ್ಮಿಷನ್ ಎಲ್ಲ ಆಗಿದೆ. ನಿದ್ದೆ ಬರೋಕೆ ಇಂಜಕ್ಷನ್ ಕೊಟ್ಟಾಗಿದೆ" ಎಂದ.

"ಮೈಕೆಲ್ ಇವತ್ತು ರಾತ್ರಿ ಕೆಲಸ ಮಾಡುತ್ತಿದ್ದಾನಾ?" ಎಂದಳು ಸ್ವಾತಿ.

ನಾನು "ಹೌದು" ಎಂದೆ.

"ಸಮಯ ಸಿಕ್ಕಾಗ ಹೋಗಿ ಸಾರಿ ಹೇಳಿ ಬಾ" ಎಂದಳು.

ನಾನು ಆ ಸಮಯಕ್ಕಾಗಿ ಕಾದೆ.

*

# ಬದಲಾಗುತ್ತಿರುವ ಸಮೂಹ ಮಾಧ್ಯಮ

■ **ಶಿಶಿರ ಹೆಗಡೆ,** Westmont, IL.

ಮನುಷ್ಯನ ವಿಕಾಸ, ಉಳಿದು ಬೆಳೆದು ಬಂದ ಹಾದಿ, ಮತ್ತು ಮನುಷ್ಯ ಹೇಗೆ ಮತ್ತು ಯಾಕೆ ಈ ಜೀವ ಜಗತ್ತಿನ ಓಟದಲ್ಲಿ ಬದುಕಿ ಇಲ್ಲಿಯವರೆಗೆ ತಲುಪಿದ ಎಂದು ವಿಚಾರ ಮಾಡುತ್ತಾ ಹೋದಾಗ ಸಹಜವಾಗಿ ನೂರಾರು ಆವಿಷ್ಕಾರಗಳು ನಮ್ಮೆದುರಿಗೆ ಬಂದು ನಿಲ್ಲುತ್ತವೆ. ಈ ಎಲ್ಲ ಆವಿಷ್ಕಾರಗಳಷ್ಟೇ ಮುಖ್ಯ, ವಿಚಾರ ವಿನಿಮಯ ಮತ್ತು ಮಾಧ್ಯಮ, ಹಾಗೂ ಮಾಧ್ಯಮವನ್ನು ಬಳಸಿಕೊಂಡು ಬೆಳೆದ ರೀತಿ. ಆವಿಷ್ಕರಿಸಿದ್ದನ್ನು ಮತ್ತೆ ಆವಿಷ್ಕರಿಸದೇ ಬೇರೊಬ್ಬರಿಂದ ಕಲಿಯುವ ಮಹತ್ವದ ವಿಚಾರವನ್ನು ಈ ವ್ಯಾಪಕತೆಯಲ್ಲಿ ತನ್ನದಾಗಿಸಿಕೊಂಡದ್ದು ಮನುಷ್ಯ ಮಾತ್ರ. ಮನುಕುಲ ಬೆಳೆದಂತೆ ಮಾಧ್ಯಮ ಕೂಡ ಇತಿಹಾಸದುದ್ದಕ್ಕೂ ಹಲವು ಬದಲಾವಣೆಗಳನ್ನು ಕಂಡಿತು. ಒಟ್ಟಾರೆಯಾಗಿ ಮನುಷ್ಯನ ವಿಕಾಸದ ಜೊತೆ ಜೊತೆ ಮಾಧ್ಯಮ, ಅದರಲ್ಲಿಯೂ ಸುದ್ದಿ ಮಾಧ್ಯಮ ಬೆಳೆಯುತ್ತ ಹತ್ತು ಹಲವು ಆಕಾರಗಳನ್ನು ಪಡೆದುಕೊಂಡಿತು. ಹೀಗೆ ಮಾಧ್ಯಮದ ಬೆಳವಣಿಗೆ ಮತ್ತು ಅದರ ಮಹತ್ವ, ಬದಲಾವಣೆ ಮತ್ತು ಅದರ ಪರಿಣಾಮಗಳ ಬಗ್ಗೆ ಒಂದು ಸ್ಥೂಲ ವಿಚಾರವನ್ನು ನಿಮ್ಮೆದುರಿಗೆ ಇಡಲು ಇಷ್ಟಪಡುತ್ತೇನೆ.

ಆದಿಮಾನವನ ಕಾಲದಲ್ಲಿ ಮನುಷ್ಯನ ಇನ್ನೊಂದು ಪಾಳಯ ಆವಿಷ್ಕರಿಸಿದ್ದೇನು ಮತ್ತು ಹೇಗೆ ಹೊಸತೊಂದನ್ನು ಕಲಿತು ಬದುಕಿನ ಓಟದಲ್ಲಿ ಮುಂದಿದ್ದಾನೆ ಎನ್ನುವ ವಿಚಾರ ಅರಿಯುವ ಪ್ರಕೃತಿ ಸ್ವಭಾವವೇ ಮಾಧ್ಯಮದ ಹುಟ್ಟು ಎನ್ನಬಹುದು. ಇಂದಿಗೂ ಬಹುತೇಕ ಪ್ರಾಣಿಗಳು ಅಪಾಯ ಸಂಜ್ಞೆಯನ್ನು ರವಾನಿಸಲು ಶಬ್ದವನ್ನು ಮಾಧ್ಯಮವಾಗಿ ಬಳಸಿಕೊಳ್ಳುವುದನ್ನು ಕಂಡಿದ್ದೇವೆ. ಆದರೆ ಮನುಷ್ಯನ ಅವಶ್ಯಕತೆ ಕೇವಲ ಅಷ್ಟಕ್ಕೇ ಸೀಮಿತವಾಗಲಿಲ್ಲ. ಸುದ್ದಿ ಮಾಧ್ಯಮ ಹುಟ್ಟಿದ್ದು ಬದುಕಿನ ತಂತ್ರಗಳನ್ನು ಹಂಚಿಕೊಳ್ಳಲು ಸೀಮಿತವಾಗಿತ್ತೇನೋ. ನೋಡಿ ಕಲಿಯುವ ಪ್ರಕೃತಿ ಮನುಷ್ಯನಲ್ಲಿ ಸಹಜವಾಗಿ ವಿಚಾರ ವಿನಿಮಯದ ಅವಶ್ಯಕತೆಯನ್ನು ಹುಟ್ಟುಹಾಕಿತು. ಮನುಷ್ಯ ಮೊದಲು ವಿಚಾರಗಳನ್ನು

ಹಂಚಿಕೊಳ್ಳಲು ಮತ್ತು ಸುದ್ದಿ ಹರಡಲು ಬಳಸುತ್ತಿದ್ದದ್ದು ಸನ್ನೆ ಮತ್ತು ಶಬ್ದಗಳನ್ನು– ಇತರ ಪ್ರಾಣಿಗಳಂತೆ. ಈ ಪದ್ಧತಿಗೆ ಅದರದೇ ಆದ ನಿರ್ಬಂಧಗಳಿದ್ದವು. ಇಲ್ಲಿ ಸುದ್ದಿ ಅಥವಾ ವಿಚಾರ ವಿನಿಮಯಕ್ಕೆ ಮನುಷ್ಯ ಮನುಷ್ಯ ನೇರವಾಗಿ ಸಂಧಿಸಬೇಕಿತ್ತು ಅಥವಾ ಕೂಗಳತೆಯಲ್ಲಿರಬೇಕಿತ್ತು. ಹೀಗೆ ಹಂಚಿಕೊಂಡ ವಿಚಾರಗಳು ಮನುಷ್ಯ ನೆನಪಿಟ್ಟುಕೊಳ್ಳುವವರೆಗೆ ಮಾತ್ರ ಬದುಕುಳಿಯುತ್ತಿದ್ದವು.

ಹೀಗಿರುವಾಗ ಮನುಷ್ಯನಿಗೆ ತನ್ನ ಜ್ಞಾನ, ವಿಚಾರ ಮತ್ತು ಕಲಾತ್ಮಕತೆಯನ್ನು ಕೇವಲ ಎದುರಿಗೆ ಸಂಧಿಸುವ ಜನರಿಗಷ್ಟೇ ಅಲ್ಲದೆ ಮುಂದಿನ ತಲೆಮಾರಿಗೆ ವರ್ಗಾಯಿಸುವ ಮಾಧ್ಯಮದ ಅವಶ್ಯಕತೆ ಗುಹಾಂತರ ಚಿತ್ರಗಳ ಹುಟ್ಟಿಗೆ ಕಾರಣವಿರಬಹುದು. ಸುಮಾರು ಮೂವತ್ತು ಸಾವಿರ ವರ್ಷಗಳ ಹಿಂದೆ ಮನುಷ್ಯ ಮೊದಲ ಬಾರಿ ತನ್ನ ವಿಚಾರಗಳನ್ನು ಮತ್ತು ಕಲ್ಪನೆಗಳನ್ನು ಚಿತ್ರದ ರೂಪಕೊಟ್ಟು ದಾಖಲಿಸಲು ಶುರುವಿಟ್ಟುಕೊಂಡ ಎನ್ನುತ್ತಾರೆ ಉತ್ಖನನ ಇತಿಹಾಸ ತಜ್ಞರು. ಆ ಚಿತ್ರಗಳು ಕಥೆಗಳನ್ನು ಹೇಳುತ್ತಿದ್ದವು ಅಥವಾ ವಿಚಾರಗಳನ್ನು ತಿಳಿಸುತ್ತಿದ್ದವು ಹಾಗು ಕಲಿತದ್ದನ್ನು ಮುಂದಿನ ತಲೆಮಾರಿಗೆ ವರ್ಗಾಯಿಸುವ ಮಾಧ್ಯಮವಾಗಿ ಬಳಸಿಕೊಳ್ಳಲ್ಪಡುತ್ತಿದ್ದವು.

ಪುರಾತತ್ವ ಶಾಸ್ತ್ರಜ್ಞರ ಪ್ರಕಾರ ಮನುಷ್ಯ ಬರೆಯಲು, ವಿಚಾರಗಳನ್ನು ಸಂಜ್ಞಾ ಮಿಶ್ರಿತ ಶಬ್ದ ರೂಪ ಕೊಡಲು ಕಲಿತದ್ದು ತೀರಾ ಇತ್ತೀಚಿಗೆ ಸುಮಾರು ೫,೨೦೦ ವರ್ಷಗಳ ಮೊದಲು. ಅದಾದ ಸುಮಾರು ಒಂದು ಸಾವಿರ ವರ್ಷದ ನಂತರ ನಕ್ಷೆಯ ಪರಿಕಲ್ಪನೆ ಇದ್ದದ್ದು ಬೆಬಿಲೋನಿಯಾದ ಪಳೆಯುಳಿಕೆಗಳಲ್ಲಿ ತಿಳಿದುಬರುತ್ತದೆ. ಆದರೆ ಕಾಗದದ ಮೇಲೆ ಬರೆಯಲು ಮತ್ತು ಅದನ್ನು ವಾಹಕವಾಗಿ ಬಳಸಲು ಕಲಿಯಲು ನಮ್ಮ ಪೂರ್ವಜರಿಗೆ ಇನ್ನೆರಡು ಸಾವಿರ ವರ್ಷಗಳೇ ಬೇಕಾದವು. ಒಮ್ಮೆ ಕಾಗದದ ಆವಿಷ್ಕಾರವಾದ ನಂತರ ಮತ್ತು ಶಾಯಿಯ ಬಳಕೆ ಶುರುವಾದ ನಂತರ ಮಾಧ್ಯಮದ ಓಟದ ಶೀಘ್ರತೆ ಹೆಚ್ಚಿತು. ಈ ಮಾಧ್ಯಮದ ಕಾರಣದಿಂದಲೇ ಅದನ್ನು ಓದಲು ಅಥವಾ ಅರಿಯಲು ಒಂದು ವ್ಯವಸ್ಥಿತವಾದ ಕಲಿಕೆಯ ಅವಶ್ಯಕತೆ ಮುಂದೆ ಶಾಲೆ, ಶಿಕ್ಷಣದ ಹುಟ್ಟಿಗೆ ಕಾರಣವಾಯಿತು ಕೂಡ.

ಮೊದಲು ಕಾಗದದಲ್ಲಿ ಮನುಷ್ಯ ಹಸ್ತಾಕ್ಷರದಲ್ಲೇ ಬರೆಯಬೇಕಿತ್ತು. ಒಂದು ವಿಚಾರವನ್ನು ಇನ್ನೊಬ್ಬರಿಗೆ, ಅಥವಾ ಕೆಲವೇ ಜನರಿಗೆ ಮಾತ್ರ ತಲುಪಿಸಲು ಇದೇನೋ ಸಹಾಯಕವಾಗಿತ್ತು. ಆದರೆ ಮನುಷ್ಯನ ಸುದ್ದಿ ಪಸರಿಸುವ ಅವಶ್ಯಕತೆ ಅಷ್ಟಕ್ಕೇ ಸೀಮಿತವಾಗಿರದೆ ಅದು ನೂರಾರು ಸಾವಿರಾರು ಜನರಿಗೆ ತಲುಪಬೇಕಿತ್ತು. ಆಗ ಆವಿಷ್ಕಾರವಾಗಿದ್ದೇ ಮುದ್ರಣ. ಅಕ್ಷರಗಳ ಅಚ್ಚುಗಳನ್ನು ಪೋಣಿಸಿ ವಿಚಾರಗಳಿಗೆ ಅಕ್ಷರ ರೂಪ ಕೊಟ್ಟು ಸುಲಭವಾಗಿ ನೂರಾರು ಪ್ರತಿಗಳನ್ನು ಮಾಡಬಲ್ಲ ಮತ್ತು ಹಂಚಬಲ್ಲ ಸಾಮರ್ಥ್ಯ ಮನುಷ್ಯನ ಬದುಕಿನ ಗತಿಯನ್ನೇ ಬದಲಿಸಿತು. ಕ್ರಿ.ಶ. ೧೬೦೫ರಲ್ಲಿ ಮೊದಲ ಗುರುತಿಸಲ್ಪಟ್ಟ ಆಧುನಿಕ ಪತ್ರಿಕೆ ಜರ್ಮನಿಯಲ್ಲಿ ಮುದ್ರಿಸಲ್ಪಟ್ಟಿತು. ಇವತ್ತು ನಮ್ಮ ಬಳಿ

ಉಳಿದ ಅತೀ ಹಳೆಯ ಛಾಯಾಚಿತ್ರ ೧೮೨೬ರದ್ದು. ಫೋಟೋಗ್ರಾಫಿಯನ್ನು ಕಂಡುಹಿಡಿದವರು ಫ್ರೆಂಚರು. ಮುದ್ರಣ ಮತ್ತು ಫೋಟೋ ಮುದ್ರಣ ಮಾಧ್ಯಮದ ಇತಿಹಾಸದಲ್ಲಿ ಮಹತ್ತರವಾದ ಮೈಲಿಗಲ್ಲು. ಇದು ಮನುಷ್ಯನ ಜೀವನ ಪದ್ಧತಿ ಮತ್ತು ಗತಿಯನ್ನು ಸಂಪೂರ್ಣವಾಗಿ ಬದಲಿಸಿಬಿಟ್ಟಿತು.

ಅದೇ ಸಮಯದಲ್ಲಿ ಜಗತ್ತಿನ ಉದ್ದಗಲಕ್ಕೂ ನಡೆಯುತ್ತಿದ್ದ ಯುದ್ಧಗಳಲ್ಲಿ ಪತ್ರಿಕೆ ಅಥವಾ ಲಿಖಿತ ಮಾಧ್ಯಮದ ಬಳಕೆಯನ್ನು ಮೀರಿ ತ್ವರಿತ ಗತಿಯ ಮಾಧ್ಯಮ ಬೆಳೆಯುವ ಅವಶ್ಯಕತೆ ಇನ್ನಷ್ಟು ಹೊಸ ಸಂಶೋಧನೆಗಳಿಗೆ ಕಾರಣವಾಯಿತು. ಅಂತಹ ಅವಶ್ಯಕತೆಗನುಗುಣವಾಗಿ ೧೮ನೇ ಶತಮಾನದ ಮಹತ್ತರವಾದ ಶೋಧ ಮೋರ್ಸ್ ಕೋಡ್. ಕೇವಲ ಡಿಟ್ ಡಾಟ್ ಶಬ್ದಗಳಲ್ಲೇ ಸಂದೇಶಗಳನ್ನು ರವಾನಿಸಬಲ್ಲ ಮೋರ್ಸ್ ಕೋಡ್ ವಿಶ್ವಯುದ್ಧದ ಸಮಯದಲ್ಲಿ ಒಂದು ಮಹತ್ತರ ಪಾತ್ರವನ್ನು ವಹಿಸಿತು. ಮೋರ್ಸ್ ಕೋಡ್ ಮಾಧ್ಯಮದಿಂದ ಮನುಷ್ಯ ಮೊದಲಬಾರಿಗೆ ಅತೀ ತ್ವರಿತ ಮಾಧ್ಯಮದ ಬಳಕೆಯನ್ನು ಕಲಿತು ಅಳವಡಿಸಿಕೊಂಡ. ಯುದ್ಧ ಸಮಯದಲ್ಲಿ ಸೈನಿಕರು ತನ್ನ ತಾಯ್ನೆಲ ಸಂಪರ್ಕಿಸಲು, ಯುದ್ಧ ಸಾಮಗ್ರಿಗಳ ಮತ್ತು ಆಹಾರ ಬಟ್ಟೆಗಳ ಅವಶ್ಯಕತೆ ತಿಳಿಸಲು ಇದೇ ತ್ವರಿತ ಮಾಧ್ಯಮ ಸಹಾಯಕವಾಯಿತು. ಇನ್ನು ಶತ್ರುಪಾಳಯದ ಬಗ್ಗೆ ಸುದ್ದಿ ರವಾನಿಸಿಕೊಳ್ಳಲು ಬಹು ಮುಖ್ಯ ತ್ವರಿತ ಮಾಧ್ಯಮ. ಹೀಗೆ ತ್ವರಿತ ಮಾಧ್ಯಮ ಅದೆಷ್ಟು ಮಹತ್ವದ್ದಾಗಿತ್ತೆಂದರೆ ಅದನ್ನು ವ್ಯವಸ್ಥಿತವಾಗಿ ಹೊಂದಿದವರು ಮಾತ್ರ ಯುದ್ಧಗಳನ್ನು ಗೆಲ್ಲಲು ಸಾಧ್ಯವಿತ್ತು. ಇಲ್ಲಿ ಗಮನಿಸಬೇಕಾದದ್ದೇನೆಂದರೆ ಮಾಧ್ಯಮ ಎಲ್ಲ ಕಾಲದಲ್ಲಿಯೂ ಮನುಷ್ಯನ ಅಸ್ತಿತ್ವವನ್ನು ನಿರ್ಧರಿಸುವ ಒಂದು ಮಹತ್ವದ ವಿಚಾರವಾಗಿ ಬೆಳೆದದ್ದು.

ಅನಂತರ ಬಂದದ್ದು ಟೆಲಿಗ್ರಾಮ್ ಮತ್ತು ಟೆಲಿಫೋನ್‌ಗಳ ಆವಿಷ್ಕಾರ ಮತ್ತು ಅಲ್ಲಿಂದ ಮಾಧ್ಯಮ ಬದಲಿಸಿಕೊಂಡ ರೀತಿ ಒಂದು ರೋಮಾಂಚಕ ಹಾದಿ.

**ಆಧುನಿಕ ಪತ್ರಿಕೆಯ ಹುಟ್ಟು ಮತ್ತು ಬೆಳವಣಿಗೆ**

ಸುಮಾರು ೧೪ನೇ ಶತಮಾನದಲ್ಲಿ ಕೊರಾಂಟೊ (ಕರಪತ್ರಗಳು) ಎನ್ನುವ ಒಂದು ಸುದ್ದಿ ಪದ್ಧತಿ ಇಂಗ್ಲೆಂಡ್ ಮತ್ತಿತರ ಕಡೆಗಳಲ್ಲಿ ಶುರುವಾಯಿತು. ಸುಮಾರಾಗಿ ನೇರ ಸುದ್ದಿಗಳನ್ನು ಹೊಂದಿರುತ್ತಿದ್ದ ಒಂದು ಪುಟದಷ್ಟು ಸುದ್ದಿ ಪ್ರತಿಗಳನ್ನು ಮಾಡಿ ಹಂಚುವ ಪದ್ಧತಿ ಬಹಳ ಪ್ರಸಿದ್ಧಿಗೆ ಬಂದಿತು. ಇದು ಅಂದಿನ ಇಂಗ್ಲಿಷ್ ವಸಾಹತುಗಳ ಮೇಲೆ ಬಹುವಾಗಿ ಪರಿಣಾಮ ಬೀರಲು ಶುರುವಾಯಿತು. ಮುಂದೆ ತಮ್ಮ ಬೇರೆ ಬೇರೆ ವಸಾಹತುಗಳಲ್ಲಿ ನಡೆಯು‌ ಜನಾಂಗೀಯ ಯುದ್ಧಗಳು ಜನರಿಂದ ಜನರಿಗೆ ಸುಲಭವಾಗಿ ತಲುಪಿ ಇಂಗ್ಲೀಷರು ತಮ್ಮ ವಸಾಹತಿನ ಹಿಡಿತ ಕಳೆದುಕೊಳ್ಳಲು ಮೊದಲು ಕಾರಣವಾದದ್ದು ಇದೇ ಕೊರಾಂಟೋಸ್. ಈ ಮಾಧ್ಯಮದ ವ್ಯಾಪಕತೆ, ಜನಪ್ರಿಯತೆ ಮತ್ತು ಅದು ಸಮಾಜದ ಮೇಲೆ ಬೀರುತ್ತಿರುವ ಪರಿಣಾಮವನ್ನು ಗುರುತಿಸಿ ನಿಷೇಧಿಸುವ ಮಟ್ಟಿಗೆ ಈ

ಮಾಧ್ಯಮ ಪದ್ಧತಿ ಬಹು ಬೇಗ ಬೆಳೆದು ನಿಂತಿತು. ಅದೇ ಕಾರಣಕ್ಕೆ ೧೬ನೇ ಶತಮಾನದ ಮಧ್ಯದಲ್ಲಿ ಕಿಂಗ್ ಜೇಮ್ಸ್ I ಕೊರಾಂಟೊ ಅನ್ನು ನಿಷೇಧಿಸಿದ.

ಅಂದಿನ ಕಾಲದಲ್ಲಿ ಈ ಕೊರಾಂಟೊ ಅದೆಷ್ಟು ಜನಪ್ರಿಯವಾಗಿತ್ತೆಂದರೆ ರಾಜ ಹೇರಿದ ನಿಷೇಧವನ್ನೂ ಮೀರಿ ಇದು ಬೆಳೆದು ನಿಂತಿತು ಮತ್ತು ಇನ್ನಷ್ಟು ವ್ಯಾಪಕತೆ ಪಡೆಯಿತು. ಮೊದಲು ಈ ಕೊರಾಂಟೊ ಪದ್ಧತಿಗೆ ಒಂದು ಶಿಸ್ತಿರಲಿಲ್ಲ. ಯಾವ ಯಾವಾಗಲೋ ಯಾರ್ಯಾರೋ ತಮಗೆ ಬೇಕಾದ ಸುದ್ದಿಯನ್ನು ಬೇಕಾದ ರೀತಿಯಲ್ಲಿ ಚಿಕ್ಕದಾಗಿ ಮತ್ತು ನೇರವಾಗಿ ಬರೆದು ಹಂಚುತ್ತಿದ್ದರು. ಮೊದಲು ಒಂದು ಪುಟದಷ್ಟು ಇರುತ್ತಿದ್ದ ಈ ಸುದ್ದಿ ಪತ್ರಗಳು ಸುಮಾರು ೧೬ನೇ ಶತಮಾನದ ಅಂತ್ಯದಲ್ಲಿ ಪುಸ್ತಕದಷ್ಟು ಗಾತ್ರ ಹಿಗ್ಗಿಸಿ ಸುದ್ದಿಪುಸ್ತಕಗಳಾಗಿ (News Books) ಪ್ರಚಲಿತಕ್ಕೆ ಬಂದವು. ಆದರೆ ಮೊದಲು ಕಂಡಕಂಡವರೆಲ್ಲ ಪ್ರಕಟಿಸುತ್ತಿದ್ದ ಈ ಸುದ್ದಿ ಪುಸ್ತಕಗಳಿಗೆ ಜನಮಾನಸದಲ್ಲಿ ಮಿಶ್ರ ಭಾವನೆಯಿತ್ತು. ಈ ಮಿಶ್ರ ಭಾವನೆಗೆ ಮೊದಲನೆಯ ಕಾರಣ ಆ ಸುದ್ದಿಗಳು ಕೆಲವೊಮ್ಮೆ ಸತ್ಯದಷ್ಟೇ ಸುಳ್ಳನ್ನು ಹರಡುತ್ತಿದ್ದವು ಮತ್ತು ಇದರ ಹಿಂದಿನ ಉದ್ದೇಶಗಳು ಪ್ರಕಟಿಸುವವರ ಮನೋಭಾವನೆ ಮತ್ತು ಅವಶ್ಯಕತೆಗೆ ಅನುಗುಣವಾಗಿರುತ್ತಿದ್ದವು. ಮತ್ತು ಎರಡನೆಯ ಕಾರಣ ಆ ಪತ್ರಗಳಿಗೆ ಒಂದು ನಿಗದಿತ ಸಮಯವಿರಲಿಲ್ಲ. ಕ್ರಮೇಣ ಈ ಪದ್ಧತಿ ಹಲವು ಅಪಖ್ಯಾತಿಗಳ ಮಧ್ಯೆ ಅಲ್ಲಲ್ಲಿ ಹತ್ತು ಹಲವು ರಾಜಕೀಯ ಮತ್ತು ಖಾಸಗೀ ಕಲಹಗಳಿಗೆ ಕಾರಣವಾಯಿತು. ಕ್ರಮೇಣ ಹೆಚ್ಚಿನ ರಾಜರು ಮತ್ತು ರಾಜ ಮನೆತನ ಈ ರೀತಿಯ ಸುದ್ದಿ ಪುಸ್ತಕಗಳ ಮೇಲೆ ನಿರ್ಬಂಧಗಳನ್ನು ಹೇರತೊಡಗಿದರು.

ಈ ರೀತಿ ಸುಳ್ಳು ಸುದ್ದಿಗಳೊಂದಿಗೆ ಕಲುಷಿತವಾದ ಸುದ್ದಿ ಪ್ರತಿಗಳು ಮತ್ತು ಪುಸ್ತಕಗಳು ಒಮ್ಮೊಮ್ಮೆ ಇತಿಹಾಸಕಾರರ ಬಳಿ ಸಿಕ್ಕಿ ಕೆಲವು ಇತಿಹಾಸಗಳನ್ನೇ ಪ್ರಶ್ನಿಸುವಂತಾಗಿದೆ ಕೂಡ. ನಮ್ಮಲ್ಲಿ ಇವತ್ತು ಹೆಚ್ಚಿನ ಇತಿಹಾಸ ರಚನೆಯಾಗಿರುವುದು ಆ ಕಾಲದಲ್ಲಿ ಉಳಿದುಕೊಂಡ ಮಾಧ್ಯಮದ ತುಣುಕುಗಳ ಆಧಾರದ ಮೇಲೆ.

ಜಗತ್ತಿನಲ್ಲಿ ನಡೆದುಹೋದ ಎಲ್ಲ ಆಧುನಿಕ ಮತ್ತು ಮಧ್ಯಕಾಲೀನ ಕ್ರಾಂತಿಗಳಲ್ಲಿ ಪತ್ರಿಕೆಯ ಪಾತ್ರ ಅನನ್ಯ. ೧೭ನೇ ಶತಮಾನದಲ್ಲಿ ನಡೆದ ಅಮೇರಿಕನ್ ಕ್ರಾಂತಿ ಇರಬಹುದು ಅಥವಾ ಫ್ರೆಂಚ್ ಹೈಟಿ ಕ್ರಾಂತಿಗಳಿರಬಹುದು. ನಂತರ ೧೮ನೇ ಶತಮಾನದಲ್ಲಿ ನಡೆದ ಬಹುತೇಕ ಕ್ರಾಂತಿಗಳು ಮತ್ತು ಭಾರತ ಮೊದಲಾದ ದೇಶಗಳಲ್ಲಿ ನಡೆದ ಸ್ವಾತಂತ್ರ್ಯ ಹೋರಾಟವಿರಬಹುದು, ಈ ಎಲ್ಲ ಸಮಯದಲ್ಲಿ ವೃತ್ತ ಪತ್ರಿಕೆಗಳ ಪಾತ್ರ ಬಹು ದೊಡ್ಡದು. ಕ್ರಾಂತಿಕಾರಿ ವಿಚಾರಗಳನ್ನು ಜನರಲ್ಲಿ ಜಾಗೃತಿಗೊಳಿಸಲು ಮತ್ತು ಏಕೀಕರಣಕ್ಕೆ ಪತ್ರಿಕೆಗಳನ್ನು ಸಮಂಜಸವಾಗಿ ಬಳಸಿಕೊಳ್ಳಲಾಯಿತು. ಇಂಗ್ಲಿಷ್, ಫ್ರೆಂಚ್, ಡಚ್ ಮೊದಲಾದ ದೇಶಗಳ ವಸಾಹತುಶಾಹೀ ಧೋರಣೆಯ ವಿರುದ್ಧ ಪತ್ರಿಕೆ ಒಂದು ಜನಜಾಗೃತಿ ಮಾಧ್ಯಮವಾಗಿ ಮತ್ತು ಇವೆಲ್ಲವಕ್ಕೂ ಬೆನ್ನೆಲುಬಾಗಿ ಮನುಷ್ಯನ ಇತಿಹಾಸದ ಒಂದು ಭಾಗವಾಗಿದ್ದು ಇಂದು ಇತಿಹಾಸ.

ಸುದ್ದಿ ಪತ್ರಿಕೆ ಯಾವತ್ತೂ 'ಬಿಳಿ ಆನೆ' ಎಂದೇ ಕರೆಸಿಕೊಳ್ಳುತ್ತದೆ. ಸುಮಾರು ೧೭ನೇ ಶತಮಾನದಲ್ಲಿ ಮೊದಲು ಪತ್ರಿಕೆಗಳು ಒಂದಿಲ್ಲೊಂದು ಪಕ್ಷಕ್ಕೆ ನಿಷ್ಠೆ ತೋರಿಸಿಕೊಂಡು ಬಂದದ್ದು ಕಾಣಿಸುತ್ತದೆ. ಆಗಿನಿಂದಲೇ 'Party Press' ಎಂಬ ಪದ್ಧತಿ ಇತ್ತು. ಅದಕ್ಕೆ ಮುಖ್ಯ ಕಾರಣ ಪತ್ರಿಕೆ ನಡೆಸಲು ಬೇಕಾಗುವ ಹಣ. ಯಾವುದೇ ವ್ಯಕ್ತಿ ಅಥವಾ ಸಂಘಟನೆ ರಾಜಕೀಯ ಕೃಪಾಪೋಷಿತವಲ್ಲದಿದ್ದರೆ ಒಂದು ಪತ್ರಿಕೆಯನ್ನು ನಡೆಸಿಕೊಂಡು ಹೋಗಲು ಸಾಧ್ಯವಾಗುತ್ತಿರಲಿಲ್ಲ. ಅದ್ಯಾವ ಕಾಲದಲ್ಲೂ ಚಂದಾದಾರಿಕೆ ಮತ್ತು ಜಾಹಿರಾತು ಒಂದು ಪತ್ರಿಕೆಯನ್ನು ಸಾಕಿ ಸಲಹುವಷ್ಟು ಹಣವನ್ನೊದಗಿಸುತ್ತಿರಲಿಲ್ಲ. ಹಾಗಾಗಿ ಒಂದು ರಾಜಕೀಯ ಪಕ್ಷ ಅಥವಾ ವಿಚಾರಕ್ಕೆ ಹೊಂದಿಕೊಳ್ಳಲೇಬೇಕಾದ ಅನಿವಾರ್ಯತೆ ಕಾಲ ಕಾಲಕ್ಕೆ ಬಂದು ಪತ್ರಿಕೆಗಳು ರಾಜಕೀಯ ಪಕ್ಷಗಳ ಮುಖವಾಣಿಯಂತೆ ವರ್ತಿಸಲು ಶುರುವಿಟ್ಟುಕೊಂಡವು. ಇಂದಿಗೂ ಇದು ನಿಜ.

೧೮ನೇ ಶತಮಾನದ ಮಧ್ಯದಲ್ಲಿ ಮುದ್ರಣ ತಂತ್ರಜ್ಞಾನದ ಆವಿಷ್ಕಾರ ಪತ್ರಿಕೆಯನ್ನು ಸಂಪೂರ್ಣವಾಗಿ ಬದಲಿಸಿಬಿಟ್ಟಿತು. ಮೊದಲನೆಯದಾಗಿ ಪತ್ರಿಕೆಯ ವೆಚ್ಚ ಕಡಿಮೆಯಾಯಿತು. ಇದರಿಂದ ಕಡಿಮೆ ಬೆಲೆಗೆ ಪತ್ರಿಕೆಗಳು ಲಭಿಸಲು ಶುರುವಾಯಿತು. ಅಲ್ಲಿಯವರೆಗೆ ಪತ್ರಿಕೆ ದುಬಾರಿಯಾಗಿರುತ್ತಿದ್ದುದರಿಂದ ಒಂದು ಶ್ರೀಮಂತ ಸಂಸ್ಕೃತಿಯಂತೆ ಬಿಂಬಿತವಾದ ಕಾರಣ ಕಡಿಮೆ ಬೆಲೆಗೆ ಸಿಗತೊಡಗಿದ ಪತ್ರಿಕೆಯನ್ನು ಜನ ಮುಗಿಬಿದ್ದು ಖರೀದಿಸಲು ಶುರುವಿಟ್ಟುಕೊಂಡರು. ಇದರಿಂದ ಪತ್ರಿಕೆಯ ತಲುಪು ಜಾಸ್ತಿಯಾಯಿತು. ಇದರಿಂದ ಪತ್ರಿಕೆಯ ಬಳಕೆಯ ಜೊತೆಜೊತೆ ಜನರ ಮೇಲಿನ ರಾಜಕೀಯ ಪ್ರೇರಣೆಗೆ ಮೊದಲೇ ರಾಜಕೀಯಪಕ್ಷದ ವಾಣಿಯಂತೆ ಬಳಸಿಕೊಳ್ಳುತ್ತಿದ್ದವರಿಗೆ ಜನಸಾಮಾನ್ಯನಿಗೆ ತಲುಪುವ ಮಾಧ್ಯಮವಾಗಿ ಪತ್ರಿಕೆ ಉತ್ತಮ ಮಾಧ್ಯಮವಾಗಿಬಿಟ್ಟಿತು.

ಬೆಂಜಮಿನ್ ಡೇ, ನ್ಯೂಯಾರ್ಕ್ ಸನ್ ಮೊದಲಾದ ಪತ್ರಿಕೆಗಳು ಲಿನೋಟೈಪ್ ಯಂತ್ರದಂತಹ ತಂತ್ರಜ್ಞಾನವನ್ನು ಸಾಮೂಹಿಕ-ಉತ್ಪಾದನಾ ಶುರುವಿಟ್ಟುಕೊಂಡವು. ಇವೆಲ್ಲಕ್ಕೂ ಪೂರಕವೆಂಬಂತೆ ಜಲ ಮತ್ತು ರಸ್ತೆ ಮಾರ್ಗ ವ್ಯವಸ್ಥೆಗಳು ತೀವ್ರಗತಿಯಲ್ಲಿ ಬೆಳೆದು ನಿಂತು ಪತ್ರಿಕೆಯ ವಹಿವಾಟಿಗೆ ಸಹಾಯಕವಾದವು. ಹೀಗೆ ಕ್ರಮೇಣ ಹೊಸ ಜೀವನ ಪಡೆದು ಪತ್ರಿಕೆಯ ವ್ಯಾಪಕತೆ ತೀವ್ರವಾಯಿತು. ದಿನಕ್ಕೊಂದು ಹೊಸ ಪತ್ರಿಕೆ ಹುಟ್ಟಿಕೊಳ್ಳಲು ಈ ಬೆಳವಣಿಗೆಗಳು ಪೂರಕ ವ್ಯವಸ್ಥೆಯನ್ನು ಕಲ್ಪಿಸಿಕೊಟ್ಟವು.

ಮಧ್ಯ ಕಾಲದಲ್ಲಿ ಮತ್ತು ಆಧುನಿಕ ಶತಮಾನದಲ್ಲಿ ರಾಜಕೀಯ ಮತ್ತು ಕ್ರಾಂತಿಯೊಂದೇ ಕಾರಣವೆಂಬಂತೆ ಬೆಳೆದ ಪತ್ರಿಕೆ ಕ್ರಮೇಣ ಯುದ್ಧಗಳು ಕಡಿಮೆಯಾದಂತೆ ಮತ್ತು ವಸಾಹತುಗಳು ಮತ್ತು ಆಕ್ರಮಣಗಳು ಕಡಿಮೆಯಾದಂತೆ ಜನರ ಸದಭಿರುಚಿಗೆ ತಕ್ಕಂತೆ ಬದಲಾವಣೆಯನ್ನು ಮಾಡಿಕೊಳ್ಳಬೇಕಾಯಿತು. ಓದುಗರು ಕೇವಲ ರಾಜಕೀಯ ಸುದ್ದಿಗಳು, ಕ್ರಾಂತಿ ಮತ್ತು ರಕ್ತ ಸಿಕ್ತ ಕಥೆಗಳಲ್ಲಿ ಆಸಕ್ತಿ ಕಳೆದುಕೊಳ್ಳುತ್ತಿರುವುದನ್ನು ಸುದ್ದಿಮನೆಗಳು ಕ್ರಮೇಣ ಗ್ರಹಿಸತೊಡಗಿದವು. ಜನರಿಗೆ ಮನೋರಂಜನೆಯ ಅವಶ್ಯಕತೆಯಿತ್ತು.

ಸಾಹಿತ್ಯ, ಕಾಲ್ಪನಿಕ ಕಥೆ, ಕಾವ್ಯ ಮೊದಲಾದವುಗಳನ್ನು ಹೆಚ್ಚು ಹೆಚ್ಚು ಇಷ್ಟಪಡುವುದನ್ನು ಸಂಪಾದಕರು ಗ್ರಹಿಸತೊಡಗಿದರು. ಜೋಸೆಫ್ ಪುಲಿಟ್ಜರಿನಂತಹ ಸಂಪಾದಕರು ಮತ್ತು ಮತ್ತು ನ್ಯೂಯಾರ್ಕ್ ವರ್ಲ್ಡ್‌ನಂತಹ ಪತ್ರಿಕೆ ಹೀಗೊಂದು ಬದಲಾವಣೆಯನ್ನು ಮತ್ತು ಪತ್ರಿಕೆಗಳಲ್ಲಿ ವೈವಿಧ್ಯವನ್ನು ಜಾರಿಗೆ ತಂದವರಲ್ಲಿ ಮೊದಲಿಗರು ಎನ್ನಬಹುದು. ಈ ಬದಲಾವಣೆಯಿಂದ ನ್ಯೂಯಾರ್ಕ್ ವರ್ಲ್ಡ್‌ನ ತನ್ನ ಪರಿಚಲನೆ ಪ್ರಸರಣ(circulation)ವನ್ನು ಹಲವು ಪಟ್ಟು ಹೆಚ್ಚಿಕೊಂಡದ್ದನ್ನು ನೋಡಿ ಉಳಿದೆಲ್ಲ ಪತ್ರಿಕೆಗಳು ಅದನ್ನೇ ಪಾಲಿಸತೊಡಗಿದವು.

ಕ್ರಮೇಣ ಟ್ಯಾಬ್ಲಾಯ್ಡ್-ಶೈಲಿಯ ಪತ್ರಿಕೆಗಳ ಜನನವಾಯಿತು. ಸಂಪಾದಕೀಯ ಪುಟಗಳು ವಿಚಾರಗಳನ್ನು ಹಂಚಿಕೊಳ್ಳಲು, ಮುಖಪುಟಗಳು ಮುಖ್ಯ ರಾಜಕೀಯ ಸುದ್ದಿಗಳಿಗೂ ಮತ್ತು ಒಳಪುಟಗಳು ಚಿಕ್ಕ ಸುದ್ದಿಗಳಿಗೆ, ವ್ಯಂಗ್ಯ ಚಿತ್ರಗಳು, ಹನಿಗವನಗಳು, ಕಥೆ, ಕಾವ್ಯ, ಧಾರಾವಾಹಿಗಳು ಮತ್ತು ಕ್ರೀಡಾ ಸುದ್ದಿಗಳಿಗೆ ಜಾಗ ನಿಗದಿಸಿ ಹೆಚ್ಚಿನ ಪತ್ರಿಕೆಗಳು ಸಮಗ್ರ ಸುದ್ದಿಯ ಕಡೆ ಮತ್ತು ಸಮಾಜದ ಎಲ್ಲ ವರ್ಗ ವಯಸ್ಸಿನ ಜನರ ಅಭಿರುಚಿಗೆ ತಕ್ಕಂತೆ ಪತ್ರಿಕೆಗಳು ತಮ್ಮನ್ನು ತಾವು ಬದಲಿಸಿಕೊಂಡವು. ಇವೆಲ್ಲವುದರ ಮಧ್ಯೆ ಕ್ರಮೇಣ ಬೇರೆ ಬೇರೆ ಸುದ್ದಿಗಳಿಗೆ – ಅಭಿರುಚಿಗೆ ಪ್ರತ್ಯೇಕ ಪತ್ರಿಕೆಗಳು ಹುಟ್ಟಿಕೊಂಡವು ಕೂಡ.

ಇಪ್ಪತ್ತನೆಯ ಶತಮಾನದಲ್ಲಿ ಕ್ರೀಡಾ ಪತ್ರಿಕೆಗಳು ಮತ್ತು ಸ್ಕ್ಯಾಂಡಲ್ (ಹಗರಣ) ಸುದ್ದಿಗಳನ್ನು ಹೊತ್ತು ತರುವ ಪತ್ರಿಕೆಗಳು ಜನಪ್ರಿಯತೆಯನ್ನು ಪಡೆದುಕೊಂಡವು. ಮಹಿಳೆಯರಿಗೆ, ಪುರುಷರಿಗೆ, ಮಕ್ಕಳಿಗೆ, ಆರೋಗ್ಯಕ್ಕೆ, ಸಿನಿಮಾಕ್ಕೆ, ವಾಹನಕ್ಕೆ, ವಿಜ್ಞಾನಕ್ಕೆ– ಹೀಗೆ ವಿಷಯಕ್ಕೊಂದು ಪತ್ರಿಕೆಗಳು ಹುಟ್ಟಿಕೊಂಡವು. ಕ್ರಮೇಣ ಪತ್ರಿಕೆಗಳ ಪೈಪೋಟಿ ಹೆಚ್ಚುತ್ತ, ಸುದ್ದಿ ಬಿತ್ತರಿಕೆಯಲ್ಲಿನ ಸ್ಪರ್ಧೆ ಹೊಸತೊಂದು ಓಟಕ್ಕೆ ಕಾರಣವಾಯಿತು. ಇಪ್ಪತ್ತನೆಯ ಶತಮಾನದ ಆದಿಯಲ್ಲಿ ಅತಿಹೆಚ್ಚು ಮಾರಾಟವಾಗುತ್ತಿದ್ದುದು ಸ್ಕ್ಯಾಂಡಲ್ ಸಂಬಂಧಿಸಿದ ಸುದ್ದಿಗಳು. ಹೆಚ್ಚಿನ ಸುದ್ದಿಗಳು ಭ್ರಷ್ಟ ವ್ಯವಹಾರ ಮತ್ತು ಸರ್ಕಾರದ ಧೋರಣೆ ಮತ್ತು ಆಚರಣೆಗಳನ್ನು ಬಹಿರಂಗಪಡಿಸುತ್ತಿದ್ದವು. ಅಪ್ಟಾನ್ ಸಿನ್ಕ್ಲೇರ್ನ ಧಾರಾವಾಹಿಯಾದ ದಿ ಜಂಗಲ್‌ನಂತಹ ತನಿಖಾ ವರದಿ ಕೈಗಾರಿಕಾ ಕಾರ್ಮಿಕರನ್ನು ನಡೆಸಿಕೊಂಡ ರೀತಿಯನ್ನೇ ಬದಲಿಸಿತು. ಈ ವರದಿಗಳಿಂದ ಅಸುರಕ್ಷಿತ ಆಹಾರ ಸಂಸ್ಕರಣಾ ಅಭ್ಯಾಸಗಳಿಂದ ಗ್ರಾಹಕರು ಮತ್ತು ಉದ್ಯೋಗಿಗಳನ್ನು ರಕ್ಷಿಸಲು ಪ್ಯೂರ್ ಫುಡ್ ಅಂಡ್ ಡ್ರಗ್ ಆಕ್ಟ್ ಮತ್ತು ಇತರ ಕಾನೂನುಗಳು ಜಾರಿಗೆ ಬಂದವು. ಲಂಚ ಮತ್ತು ಭ್ರಷ್ಟಾಚಾರದಲ್ಲಿ ಪಾಲ್ಗೊಂಡ ಸ್ಥಳೀಯ ಮತ್ತು ರಾಜ್ಯ ಸರ್ಕಾರಿ ಅಧಿಕಾರಿಗಳನ್ನು ಬಹಿರಂಗಪಡಿಸುವ ಕೇಂದ್ರಬಿಂದುಗಳಾಗಿ ಪತ್ರಿಕೆಗಳು ಬದಲಾದವು.

**ರೇಡಿಯೋ ಮಾಧ್ಯಮ ಮತ್ತು ಸುದ್ದಿ ಪಡೆಯುವ ರೀತಿ**

ಆದರೆ ಇದೆಲ್ಲವನ್ನು ಮೀರಿ ನಿಂತ ಬೆಳವಣಿಗೆ ರೇಡಿಯೋ ಮಾಧ್ಯಮದ್ದು. ಇಂದು ರೇಡಿಯೋದ ಮೂಲಕ ಸುದ್ದಿಗಳು ಜಗತ್ತಿನ ಮೂಲೆ ಮೂಲೆ ತಲುಪುತ್ತವೆ.

ಇಂದಿಗೂ ಜನಸಾಂದ್ರಿತ ಸ್ಥಳಗಳಲ್ಲಿ ಪತ್ರಿಕೆ ಸಫಲ ಮಾಧ್ಯಮವಾಗಿದೆ. ಆದರೆ ಮನುಷ್ಯನ ಭೌಗೋಳಿಕ ವ್ಯಾಪಕತೆಯ ಎದುರು ವಸ್ತು ಸಂಬಂಧೀ ಮಾಧ್ಯಮವಾದ ಪತ್ರಿಕೆಯನ್ನು ಹಿಂದಿಕ್ಕಿ ಬೆಳೆದದ್ದು ರೇಡಿಯೋ. ಇವತ್ತಿಗೂ ಜಗತ್ತಿನ ೯೩% ಜನರು ರೇಡಿಯೋ ಕೇಳುತ್ತಾರೆ. ರೇಡಿಯೋ ಇಂದಿಗೂ ಪ್ರಸ್ತುತ. ೧೯೨೦ರಲ್ಲಿ ಮೊದಲಬಾರಿ ರೇಡಿಯೋನಲ್ಲಿ ಸುದ್ದಿ ಬಿತ್ತರಿಕೆ ಶುರುವಾಯಿತು. ಅದಕ್ಕೂ ಮೊದಲು ಕೇವಲ ಮನೋರಂಜನೆಯ ಮತ್ತು ಕಲಿಕೆಯ ಮಾಧ್ಯಮದಂತೆ ಬಿಂಬಿತವಾದ ರೇಡಿಯೋ ಕ್ರಮೇಣ ಸುದ್ದಿ ವಾಹಿನಿಯಾಗಿ ಜನರಿಗೆ ತಲುಪುವಲ್ಲಿ ಯಶಸ್ವಿಯಾಯಿತು. ಜನರು ಈ ಬದಲಾವಣೆಯನ್ನು ಬಹು ಬೇಡಿಕೆಯಿಂದ ಸ್ವಾಗತಿಸಿದರು. ಪ್ರಿಂಟ್ ಪತ್ರಿಕೆ ಇಂದಿಗೂ ಕೂಡ, ದೇಶ ಎಷ್ಟೇ ಮುಂದುವರಿದಿದ್ದರೂ, ಹಳ್ಳಿಗಳನ್ನು ತಲುಪುತ್ತಿಲ್ಲ. ಈ ಕೊರತೆಯನ್ನು ತುಂಬಿಸಿದ್ದು ರೇಡಿಯೋ. ರೇಡಿಯೋದ ಈ ಸಾಮರ್ಥ್ಯವನ್ನು ರಾಜಕೀಯ ಪಕ್ಷಗಳು ಕೂಡ ಬೇಗನೆ ಅರಿತವು. ಹಾಗಾಗಿಯೇ ಮಾರ್ಚ್ ೧೯೩೩ರಲ್ಲಿ ಅಧಿಕಾರಕ್ಕೆ ಬಂದಾಗ, ಅಧ್ಯಕ್ಷ ರೂಸ್ವೆಲ್ಟ್ ಅಮೆರಿಕನ್ನರನ್ನು ತಲುಪಲು ಬಳಸಿಕೊಂಡ ವಾಹಿನಿ ರೇಡಿಯೋ. ಅಧ್ಯಕ್ಷರಾದ ಕೇವಲ ಎಂಟು ದಿನಗಳಲ್ಲಿ ತಮ್ಮ ಮೊದಲ ಭಾಷಣವನ್ನು ರೇಡಿಯೋ ಮೂಲಕ ಮಾಡಿ ಜನರನ್ನು ತಲುಪಲು ಬಳಸಿಕೊಂಡರು. ಜನರು ರೇಡಿಯೋ ಮೂಲಕ ಅಧ್ಯಕ್ಷರ ಭಾಷಣ ಕೇಳಿ ಒಂದು ಹತ್ತಿರದ ಭಾವ ಪಡೆದರು. ಇದೇ ಸಮಯದಲ್ಲಿ ಜಗತ್ತಿನ ಹೆಚ್ಚಿನ ರಾಜಕೀಯ ವ್ಯಕ್ತಿಗಳು ರೇಡಿಯೋ ಬಳಸಿಕೊಳ್ಳಲು ಮುಂದಾದರು. ಭಾರತದಂತಹ ದೇಶದಲ್ಲಿ ಸ್ವಾತಂತ್ರ್ಯ ಹೋರಾಟದ ಕೊನೆಯ ಘಟ್ಟದ ಸಂಧರ್ಭದಲ್ಲಿ ರೇಡಿಯೋ ಒಂದು ಮುಖ್ಯವಾಹಿನಿಯಾಗಿ ಜನರನ್ನು ಬೆಸೆಯಿತು ಕೂಡ. ಇಂದಿಗೂ ಕೂಡ ಭಾರತದಂತಹ ದೇಶದಲ್ಲಿ ಬಹುತೇಕರು ಬೆಳಿಗ್ಗೆ ಸಂಜೆ ಸುದ್ದಿಗೆ ರೇಡಿಯೋ ಮೊರೆ ಹೋಗುತ್ತಾರೆ. ಪ್ರಧಾನಿ ನೆಹರುವಿಂದ ಇಂದಿನ ಪ್ರಧಾನಿ ಮೋದಿಯವರೆಗೆ, ನಾಯಕರು ರೇಡಿಯೋ ಮೂಲಕ ಜನರ ಜೊತೆ ಮಾತನಾಡುತ್ತಾರೆ. ಇದು ರೇಡಿಯೋದ ವ್ಯಾಪಕತೆ. ಎಫ್‌ಎಂ ರೇಡಿಯೋ ಇಂದಿಗೂ ನಗರ ಪ್ರದೇಶಗಳಲ್ಲಿ ಮುಖ್ಯ ಸುದ್ದಿವಾಹಿನಿಯಾದರೆ ಎ ಎಮ್ ರೇಡಿಯೋಗಳು ಹಳ್ಳಿಗರ ಆಪ್ತ ಸುದ್ದಿ ಮಿತ್ರ. ಇವತ್ತಿಗೂ ಮೂರನೇ ಜಗತ್ತಿನ ದೇಶಗಳಿರಬಹುದು ಅಥವಾ ಭಾರತದಂತಹ ಬೆಳೆಯುತ್ತಿರುವ ದೇಶವಿರಬಹುದು ಇಲ್ಲವೇ ಅಮೆರಿಕಾದಂತಹ ಆಧುನಿಕ ದೇಶವಿರಬಹುದು, ರೇಡಿಯೋ ಸುದ್ದಿ ಹೊತ್ತು ತರುವ ಮುಖ್ಯ ವಾಹಿನಿ.

**ಟೆಲಿವಿಷನ್ ಸುದ್ದಿ ಮಾಧ್ಯಮ**

ರೇಡಿಯೋ ಮತ್ತು ಪತ್ರಿಕೆಗಳನ್ನು ಹಿಂದಿಕ್ಕಿ ಅವೆಲ್ಲವುದರ ಸಂಹಾರವನ್ನೇ ಮಾಡಿಬಿಡುತ್ತದೇನೋ ಎಂಬಂತೆ ೧೯೯೦ರ ನಂತರ ಪ್ರಚಲಿತಕ್ಕೆ ಬಂದ ಇನ್ನೊಂದು ಸುದ್ದಿ ಮಾಧ್ಯಮ ಟಿವಿ. ರೇಡಿಯೋ ಕೇಳಿ ಸುದ್ದಿ ಪಡೆಯುತ್ತಿದ್ದೆವು ಮತ್ತು ಪತ್ರಿಕೆಗಳನ್ನು

ಓದಿ ಸುದ್ದಿ ಪಡೆಯುತ್ತಿದ್ದೆವು, ಆದರೆ ಟಿವಿಯಲ್ಲಿ ಮೊದಲ ಬಾರಿ ಸುದ್ದಿಯನ್ನು ನೋಡಬಹುದಿತ್ತು. ರಂಜನೀಯ ದೃಶ್ಯ ಮಾಧ್ಯಮವನ್ನು ಜನರು ಬಹಳ ಆಸ್ಥೆಯಿಂದ ತಮ್ಮದಾಗಿಸಿಕೊಂಡರು, ಅಲ್ಲೊಂದು ಭೀಕರ ಬರಗಾಲವಿರಬಹುದು ಅಥವಾ ಭೂಕುಸಿತ ಇರಬಹುದು ಅಥವಾ ಅದ್ಯಾವುದೋ ರಾಜಕಾರಣಿಯ, ಸಿನೆಮಾ ತಾರೆಯರ ಮದುವೆ ಇರಬಹುದು ಅಥವಾ ಯುದ್ಧವಿರಬಹುದು– ಅದನ್ನು ಕಣ್ಣಾರೆ ಕಂಡ ಅನುಭವವನ್ನು ಟಿವಿ ಸಾದ್ಯಶಗೊಳಿಸಿತು. ಎಡ್ವರ್ಡ್ ಆರ್. ಮರ್‍ರೊ ಅವರ ೧೯೫೧ರ ಸುದ್ದಿ ಪ್ರದರ್ಶನ 'ಸೀ ಇಟ್ ನೌ' ದೊಂದಿಗೆ ದೂರದರ್ಶನ ಪತ್ರಿಕೋದ್ಯಮವು ಹುಟ್ಟಿಕೊಂಡಿತು ಎನ್ನಲಾಗುತ್ತದೆ. ನಂತರ ಎಬಿಸಿ, ಸಿಬಿಎಸ್, ಮತ್ತು ಎನ್ಬಿಸಿ ಮುಂತಾದ ನೆಟ್‌ವರ್ಕ್‌ಗಳು ರಾತ್ರಿ ನಿಗದಿತ ಸಮಯಕ್ಕೆ ಸುದ್ದಿ ಪ್ರಸಾರಗಳನ್ನು ಪ್ರಾರಂಭಿಸಿದವು. ಇವು ಬಹು ಜನಾಸಕ್ತಿಯನ್ನು ಪಡೆದನಂತರ ಕ್ರಮೇಣ ಎಲ್ಲ ವಾಹಿನಿಗಳು ಇದನ್ನೇ ಅನುಸರಿಸಿದವು. ಟಿವಿ ಲಭ್ಯತೆ ಮತ್ತು ಕೈಗೆಟುಕುವಿಕೆಯ ಸಾಧ್ಯತೆ ಇಂದಿಗೂ ಹಲವು ದೇಶಗಳಲ್ಲಿ ಕಷ್ಟವಾದರೂ ಆಧುನಿಕ ದೇಶಗಳಲ್ಲಿ ಬಹುತೇಕ ಸುದ್ದಿಗಳ ಹರಿವು ಜನರಿಗೆ ತಲುಪುವುದು ಟಿವಿಯಿಂದಲೇ. ಟಿವಿ ಸುದ್ದಿಯಿಂದ ಸುದ್ದಿ ಬಿತ್ತರಿಕೆಯ ಹೊಸತೊಂದು ಆಯಾಮವೇ ತೆರೆದುಕೊಂಡಿತು. ಮೊದಲು ಸ್ಕ್ಯಾಂಡಲ್‌ಗಳು ಪತ್ರಿಕೆಗಳಲ್ಲಿ ಬರವಣಿಗೆ ಮತ್ತು ಚಿತ್ರದ ಮೂಲಕ ಅಥವಾ ರೇಡಿಯೋದಲ್ಲಿ ಧ್ವನಿಯ ಮೂಲಕ ಜನರಿಗೆ ತಲುಪುತ್ತಿದ್ದರೆ ಟಿವಿ ಬಂದನಂತರ ಜನರು ಸ್ವತಃ ನೋಡಿ ಪರಾಮರ್ಶಿಸಿ ಸುದ್ದಿಯನ್ನು ಪಡೆಯಲು ಸಹಾಯಕವಾಯಿತು. ೨೦೧೦ರ ಸಮಯ ಟಿವಿ ಮಾಧ್ಯಮದ ಉತ್ತುಂಗ ಎನ್ನಬಹುದು. ೨೦ನೇ ಶತಮಾನದ ಅಂತ್ಯದಲ್ಲಿ ಆವಿಷ್ಕಾರವಾದರೂ ಇತ್ತೀಚೆಗೆ ಬಹುಪ್ರಚಲಿತಕ್ಕೆ ಬಂದ ಇಂಟರ್ನೆಟ್ ಸುದ್ದಿ ಪಡೆಯುವ ಸುಲಭತೆಯನ್ನು ಹೆಚ್ಚಿಸಿದ್ದಲ್ಲದೆ ಇನ್ನಷ್ಟು ಪ್ರಕಾರದ ಮಾಧ್ಯಮದ ಜನಬಳಕೆಗೆ ಮುನ್ನುಡಿ ಬರೆಯಿತು.

**ಇಂಟರ್ನೆಟ್ ಮತ್ತು ಆಧುನಿಕ ಡಿಜಿಟಲ್ ಮಾಧ್ಯಮ**

ಇಂಟರ್ನೆಟ್ ಆವಿಷ್ಕಾರ ಮತ್ತು ಸುದ್ದಿ ಪಡೆಯುವಿಕೆಗೆ ಇಂಟರ್ನೆಟ್‌ನ ಅವಲಂಬನೆ ಹೊಸತೊಂದು ಅದ್ಭುತ ಸಾಧ್ಯತೆಗೆ ನಾಂದಿಯಾಯಿತು. ಇಂದು ಉಗಾಂಡಾದ ಮೂಲೆಯಲ್ಲೆಲ್ಲೋ ನಡೆದುಹೋಗುವ ದುರಂತದಿಂದ ಹಿಡಿದು ಅಮೆರಿಕಾದ ವೈಟ್ ಹೌಸಿನಲ್ಲಿ ಪಿಸುಗುಟ್ಟಿದ ಗುಟ್ಟೊಂದು ಜಗತ್ತಿನ ಇನ್ನ್ಯಾವುದೋ ಮೂಲೆಯಲ್ಲಿರುವ ಜನ ಸಾಮಾನ್ಯನಿಗೆ ತಲುಪಲು ಕೇವಲ ಒಂದೆರಡು ಕ್ಷಣ ಸಾಕು. ಒಂದು ಸುದ್ದಿ ಸುಳ್ಳೋ ಸತ್ಯವೋ, ಲಕ್ಷಾಂತರ ಜನರನ್ನು ತಲುಪಲು ಕ್ಷಣಾರ್ಧ ಸಾಕು. ಹುಟ್ಟಿಕೊಂಡ ಸುದ್ದಿಯೊಂದಕ್ಕೆ, ವಿಚಾರವೊಂದಕ್ಕೆ ಇಂಟರ್ನೆಟ್ ಯುಗದಲ್ಲಿ ಸಾವೇ ಇಲ್ಲ. ಇಲ್ಲಿ ಸುದ್ದಿ ಶಾಶ್ವತ. ವಿಚಾರಗಳು ಅಮರ.

ಡಿಜಿಟಲ್ ಯುಗದಲ್ಲಿ ಪತ್ರಿಕೆಗಳು, ರೇಡಿಯೋ ಅಥವಾ ಟಿವಿ ಮತ್ತು ವಿಡಿಯೋ ತಮ್ಮ ಆಕಾರವನ್ನು ಬದಲಿಸಿಕೊಂಡವು ಎನ್ನಬಹುದು. ಇಂದು ಪತ್ರಿಕೆ, ರೇಡಿಯೋ,

ಟೆಲಿವಿಷನ್ ಎಲ್ಲವೂ ಡಿಜಿಟಲ್. ಜಗತ್ತಿನ ಯಾವ ಮೂಲೆಯ ಪತ್ರಿಕೆ ಕೂಡ ಒಂದೆರಡು ಕ್ಲಿಕ್‌ನಲ್ಲಿ ಲಭ್ಯ. ಕರ್ನಾಟಕದ ಪ್ರಾದೇಶಿಕ ಸುದ್ದಿಪತ್ರಿಕೆ ಕೂಡ ಅಮೆರಿಕಾದಲ್ಲೋ ಅಥವಾ ಜಗತ್ತಿನ ಇನ್ಯಾವುದೋ ಮೂಲೆಯಲ್ಲಿ ಇರುವ ಸಾಮಾನ್ಯನಿಗೆ ಸುಲಭದಲ್ಲಿ ಲಭ್ಯ. ಇವತ್ತು ಕರ್ನಾಟಕದ ಎಲ್ಲ ಕನ್ನಡ ಟಿವಿ ಸುದ್ದಿವಾಹಿನಿಗಳು ಯೂಟ್ಯೂಬಿನಲ್ಲಿ ಲೈವ್ ಲಭ್ಯವಿದೆ. ನಿಮಗೆ ಬೆಂಗಳೂರಿನ ಎಫ್. ಎಂ. ನಿಂದ ಹಿಡಿದು ಧಾರವಾಡ, ಬೆಂಗಳೂರಿನಲ್ಲಿ ಹೀಗೆ ಅಲ್ಲಲ್ಲಿ ಬಿತ್ತರವಾಗುವ ಪ್ರಾದೇಶಿಕ ಸಮಾಚಾರಗಳು ಆನ್‌ಲೈನ್‌ನಿನಲ್ಲಿ ತ್ವರಿತ ಲಭ್ಯ. ಯುಟ್ಯೂಬ್, ಸೋಶಿಯಲ್ ಮೀಡಿಯಾ, ವಾಟ್ಸಪ್ಪ್ ಗ್ರೂಪ್ಪುಗಳು, ಟೆಲಿಗ್ರಾಂ ಗ್ರೂಪುಗಳು, ಪೋಡ್ಕ್ಯಾಸ್ಟ್‌ಗಳು, ಆಪ್ ಸುದ್ದಿ ಪತ್ರಿಕೆಗಳು– ಇವೆಲ್ಲವೂ ಹೊಸ ಸುದ್ದಿ ಮಾಧ್ಯಮಗಳು.

ಇನ್ನು ಒಂದು ಹೆಜ್ಜೆ ಮುಂದುವರಿದ ಮಾಧ್ಯಮ ಸೋಷಿಯಲ್ ಮೀಡಿಯಾ. ಸೋಷಿಯಲ್ ಮೀಡಿಯಾವನ್ನು ಇಂದು ಬಹುತೇಕ ಸುದ್ದಿಮನೆಗಳು ಬಳಸಿಕೊಳ್ಳುತ್ತವೆ, ಸುದ್ದಿಮನೆಗಳು ಜನರನ್ನು ಹತ್ತು ಹಲವು ಡಿಜಿಟಲ್ ಹಾದಿಯಲ್ಲಿ ನುಸುಳಿ ಸುದ್ದಿ ಹರಡುತ್ತವೆ.

ಇನ್ನು ಸೋಷಿಯಲ್ ಮೀಡಿಯಾ ಹೊಂದಿರುವವರು ತಮ್ಮದೇ ಒಂದು ಮಿನಿ ಸುದ್ದಿಮನೆಯನ್ನು ಹೊಂದಿರುವಂತೆ ಆಗಿದೆ. ಮೊಬೈಲ್ ಫೋನ್ ಆವಿಷ್ಕಾರ ಮತ್ತು ಅದರಲ್ಲಿ ಇಂಟರ್ನೆಟ್ ಲಭ್ಯತೆ ಸಾವಿರಾರು ಸಾಧ್ಯತೆಗಳನ್ನು ನಮ್ಮೆದುರು ಹರಡಿ ನಿಂತಿವೆ. ಟ್ವಿಟರ್ ಮತ್ತು ಫೇಸ್ ಬುಕ್‌ಗಳ ಮೂಲಕ ಇಂದು ಜನಸಾಮಾನ್ಯ ಕೂಡ ಸುದ್ದಿಯ ಮೂಲ. ಇನ್ನು ರಾಜಕೀಯ ಪಕ್ಷಗಳು, ರಾಜಕಾರಣಿಗಳು, ಸಿನಿಮಾ ತಾರೆಯರು, ಕ್ರೀಡಾಪಟುಗಳು ಜನರಿಗೆ ತಲುಪಲು ತನ್ನದೇ ಸ್ವಂತ ಮಾಧ್ಯಮದಂತೆ ಈ ಸೋಷಿಯಲ್ ಮೀಡಿಯಾವನ್ನು ಬಳಸಿಕೊಳ್ಳುವುದನ್ನು ನೀವೆಲ್ಲ ನೋಡಿರುತ್ತೀರಿ.

ಈ ಡಿಜಿಟಲ್ ಮೀಡಿಯಾ ಇನ್ನೊಂದು ಅಭೂತಪೂರ್ವ ಸಾಧ್ಯತೆಯನ್ನು ಸಾದೃಶಗೊಳಿಸಿದೆ. ಅದೇನೆಂದರೆ Interactive news world. ಒಂದು ಸುದ್ದಿಗೆ ಜನರು ಇಲ್ಲಿ ಪ್ರತಿಕ್ರಿಯಿಸಲು ಸಾಧ್ಯತೆಯಿದೆ. ರಾಜಕಾರಣಿ ಇರಬಹುದು ಅಥವಾ ಸರಕಾರ ಅಥವಾ ಇನ್ಯಾವುದೋ ಪ್ರಸಿದ್ಧ ವ್ಯಕ್ತಿಯಿರಬಹುದು, ತನ್ನ ಹೇಳಿಕೆ ಅಥವಾ ಇನ್ಯಾವುದೋ ಸುದ್ದಿಯನ್ನು ಹೇಗೆ ಜನರು ಪ್ರತಿಕ್ರಿಯಿಸುತ್ತಿದ್ದಾರೆ ಎಂದು ಕ್ಷಣಮಾತ್ರದಲ್ಲಿ ಅರಿಯಬಹುದು. ಬಿಗ್ ಡೇಟಾ ಎಂಬ ತಂತ್ರಜ್ಞಾನದಿಂದ ಸಾಮೂಹಿಕ ಇಚ್ಛೆ, ಜನರು ಏನನ್ನು ಹೇಳಿದರೆ ಇಷ್ಟಪಡುತ್ತಾರೆ ಮತ್ತು ಹೆಚ್ಚಿಗೆ ಪ್ರತಿಕ್ರಿಯಿಸುತ್ತಾರೆ ಎನ್ನುವುದನ್ನು ಅರಿತು ಇಂದಿನ ಚುನಾವಣಾ ಭಾಷಣಗಳು ಸಿದ್ಧವಾಗುತ್ತವೆ. ಜಗತ್ತಿನ ಹೆಚ್ಚಿನ ಚುನಾವಣೆಗಳು ಈಗ ಡಿಜಿಟಲ್. ಚುನಾವಣೆಯಷ್ಟೇ ಅಲ್ಲ, ಹಲವು ಯುದ್ಧಗಳೂ ಡಿಜಿಟಲ್. ಒಂದು ಸಮೀಕ್ಷೆಯ ಪ್ರಕಾರ ಇನ್ನು ನೂರು ವರ್ಷದಲ್ಲಿ ಬಹುತೇಕ ಯುದ್ಧಗಳು ಕೇವಲ ಡಿಜಿಟಲ್ ಯುದ್ಧಗಳೇ ಆಗಿರುತ್ತವೆ.

ಹಿಂದೊಮ್ಮೆ ಅಳಿವು ಉಳಿವಿನ ಯುದ್ಧಕ್ಕೆ ಮಾಧ್ಯಮದ ಬಳಕೆಯಾಗುತ್ತಿದ್ದರೆ ಇಂದು ಮಾಧ್ಯಮವೇ ಯುದ್ಧದ ವಿಷಯ ಮತ್ತು ವಿಚಾರವಾಗಿರುವುದು ಮಾಧ್ಯಮದ ಮಹತ್ವವನ್ನು ಸಾರುತ್ತದೆ ಮತ್ತು ಮಾಧ್ಯಮ ಕಂಡ ಬದಲಾವಣೆಯನ್ನು ಸ್ಪಷ್ಟೀಕರಿಸುತ್ತದೆ.

**ಕೊನೆಯಲ್ಲಿ – ನಾನು ಕಂಡಂತೆ**

ಕೊನೆಯಲ್ಲಿ ನಾನು ಕಣ್ಣಾರೆ ಕಂಡ, ಅನುಭವಿಸಿದ ಸುಮಾರು ಒಂದೂವರೆ ದಶಕದಲ್ಲಿ ನಡೆದ ಮಾಧ್ಯಮದ ಬದಲಾವಣೆಗಳ ಒಂದು ನಿದರ್ಶನ. ನನ್ನದು ಉತ್ತರ ಕನ್ನಡ ಜಿಲ್ಲೆಯ ಒಂದು ಹಳ್ಳಿ. ಉತ್ತರ ಕನ್ನಡದ ಹಲವು ಹಳ್ಳಿಗಳೆಂದರೆ ಅರ್ಧ ಕಿಲೋಮೀಟರಿಗೊಂದು ಕಾಡಿನ ಪ್ರದೇಶದಲ್ಲಿ, ಅಡಿಕೆ ತೋಟಗಳ ಮಧ್ಯೆ ಅಲ್ಲಲ್ಲಿ ಇರುವ ಮನೆಗಳು. ರಸ್ತೆಗಳು ಅಷ್ಟಕ್ಕಷ್ಟೇ, ಎಷ್ಟೇ ಡಾಂಬರು ಹಾಕಿದರೂ ಮಾನ್ಸೂನ್ ಸಮಯದಲ್ಲಿ ಮಳೆಯ ರಭಸಕ್ಕೆ ಕಿತ್ತೆದ್ದು ಬಸ್ಸುಗಳೇ ಬರಲಾಗದಂತೆ ಆಗಿ, ಹಳ್ಳಿಗರು ಮತ್ತೆ ಬಸ್ಸು ಕಾಣುವುದು ಮುಂದಿನ ಬೇಸಿಗೆಯಲ್ಲಿ. ಹೀಗಿರುವಾಗ ಹಳ್ಳಿಯ ಜನರು ದಿನಪತ್ರಿಕೆಗಳನ್ನು ನೋಡುತ್ತಿದ್ದುದು ಅಪರೂಪಕ್ಕೆ ಪಟ್ಟಣಕ್ಕೆ ಹೋದಾಗ ಮಾತ್ರ.

ಆ ಕಾಲದಲ್ಲಿ ನೆಂಟರಿಷ್ಟರ ಪರಸ್ಪರ ಸಂಪರ್ಕ ಸಾಧನವೆಂದರೆ ಪತ್ರ ವ್ಯವಹಾರ. ಆದರೆ ಪತ್ರಗಳು ಸಕಾಲಕ್ಕೆ ನಮ್ಮ ಮನೆಗಳಿಗೆ ತಲುಪುತ್ತಿರಲಿಲ್ಲ. ಅಂಚೆಯಣ್ಣ ನೆನಪಿಗೆ ಬಂದಾಗ ಮನೆಗೆ ತಂದುಕೊಡುತ್ತಿದ್ದ. ಕೆಲವೊಮ್ಮೆ ತಾವು ಬರುತ್ತೇನೆ ಎಂದು ದೂರದ ಊರಿನಿಂದ ನೆಂಟರು–ಇಷ್ಟರು ಕಳುಹಿಸಿದ ಪತ್ರ ಅವರು ಬಂದು ಹೋದ ಮೇಲೆ ತಲುಪಿದ್ದೂ ಉಂಟು. ಅಂದಿನ ಕಾಲದಲ್ಲಿ ಟೆಲಿಗ್ರಾಂಗಳು ಒಂದು ತ್ವರಿತ ಸುದ್ದಿ ರವಾನೆಗೆ ಮಾತ್ರ ಬಳಕೆಯಾಗುತ್ತಿದ್ದ ಮಾಧ್ಯಮ. ಹೆಚ್ಚಾಗಿ ಸಾವಿನ ಸುದ್ದಿ ತಿಳಿಸಲು ಸೀಮಿತವಾದ ಟೆಲಿಗ್ರಾಂ ಬಂತೆಂದರೆ ಒಂದು ತರದ ಆತಂಕ. ಅಂದಿನ ದಿನಗಳಲ್ಲಿ ಸುದ್ದಿಗಾಗಿ ಅಲ್ಲಲ್ಲಿ ಜನರು ವಾರಪತ್ರಿಕೆ, ಮಾಸಪತ್ರಿಕೆಗಳನ್ನು ತರಿಸಿಕೊಳ್ಳಲು ಶುರುಮಾಡಿಕೊಂಡರು.

ಅಂತಹ ಸ್ಥಿತಿಯಲ್ಲಿ ಹಲವು ವರ್ಷಗಳಿಂದ ನಮಗೆ ದಿನನಿತ್ಯದ ಸುದ್ದಿಯ ಮೂಲ ಎಂದರೆ ಬೆಳಿಗ್ಗೆ ಏಳು ಗಂಟೆಗೆ ರೇಡಿಯೊದಲ್ಲಿ ಪ್ರಸಾರವಾಗುತ್ತಿದ್ದ ಪ್ರದೇಶ ಸಮಾಚಾರ ಮಾತ್ರ. "ಪ್ರದೇಶ ಸಮಾಚಾರ, ಓದುತ್ತಿರುವವರು ನಾಗೇಶ್ ಶಾನುಭಾಗ್.. "ಇದು ನಮ್ಮ ಸುಪ್ರಭಾತ. ಚಿಕ್ಕದಾಗಿ, ಚೊಕ್ಕದಾಗಿ ಒಂದಿಷ್ಟು (ಸರಕಾರ ನಿರ್ಧರಿಸಿದಷ್ಟು) ಹಾನಿ ಲಾಭವಿಲ್ಲದ ಸುದ್ದಿಗಳು ಈ ಮೂಲಕ ರವಾನಿಸಲ್ಪಡುತ್ತಿದ್ದವು. ರಾಜಕೀಯ ಸುದ್ದಿಗಳು ಖಾಲಿ ದೋಸೆಯಂತೆ. ಒಟ್ಟಾರೆ ಅಲ್ಲಿ ಬರುತ್ತಿದ್ದ ಸುದ್ದಿಗಳು ಈ ಹಳ್ಳಿಯಾಚೆ ಒಂದು ಜಗತ್ತು ಬದುಕಿದೆ ಎಂಬ ಭಾವವನ್ನು ಮೂಡಿಸುತ್ತಿದ್ದುವೇ ವಿನಃ ಇನ್ನೇನನ್ನೂ ಅಲ್ಲ. ರೇಡಿಯೋಗಿಂತ ಮೊದಲು ಹೊರಜಗತ್ತಿನ ಸಂಪರ್ಕ ಅಷ್ಟಕ್ಕಷ್ಟೇ. ಕ್ರಮೇಣ ಸ್ವಲ್ಪ ಅನುಕೂಲವಿರುವವರು ಟಿವಿ ಖರೀದಿಸಿದರು. ಬೃಹತ್ ಗಾತ್ರದ ಡಿಶ್ ಎಂಟೆನಾಗಳನ್ನು ಸೆಟಲೈಟಿಗೆ ಗುರಿಯಿಟ್ಟು ದೂರದರ್ಶನ ಚ್ಯಾನಲ್ಲುಗಳನ್ನು ನೋಡಲು ಶುರುವಿಟ್ಟುಕೊಂಡರು. ಉದಯ ಟಿವಿ ಮೊದಲ ಖಾಸಗಿ ಕನ್ನಡ ಚ್ಯಾನಲ್ ಮತ್ತು ನಾವು ಕಂಡ ಮೊದಲ ಖಾಸಗಿ ವಾಹಿನಿಯ ವಾರ್ತೆ. ಯದ್ವಾತದ್ವಾ ಮಳೆ ಗಾಳಿಯ ಮಧ್ಯೆ ಡಿಶ್ ಎಂಟೆನಾ ತಿರುಗಿಬಿಡುತ್ತಿತ್ತು. ಇವತ್ತಿಗೂ ನೆನಪಿದೆ, ಒಂದು ರಾತ್ರಿ ಮಳೆ ಗಾಳಿ ಅದೆಷ್ಟು ಜೋರಾಗಿ ಬಂದಿತ್ತೆಂದರೆ ಮಾರನೇ ದಿನ ಬೆಳಿಗ್ಗೆ ಟಿವಿ ಚ್ಯಾನಲ್ ಯಾಕೋ ಬರುತ್ತಿಲ್ಲ ಎಂದು

ಹೋಗಿ ನೋಡಿದರೆ ಡಿಶ್ ಎಂಟೆನಾನೇ ಅಲ್ಲಿ ಇರಲಿಲ್ಲ.. ಪಕ್ಕದ ಗೊಬ್ಬರದ ಗುಂಡಿಯಲ್ಲಿ ಬಿದ್ದ ಡಿಶ್ ಅನ್ನು ಮೇಲಕ್ಕೆತ್ತಲು ಐದಾರು ಜನರು ಭಾರೀ ಸಾಹಸಪಡಬೇಕಾಯಿತು. ಹೀಗೆ ಮಾಧ್ಯಮ ಅಷ್ಟು ಸುಲಭದಲ್ಲಿ ಕೈಗೆಟುಕುತ್ತಿರಲಿಲ್ಲ. ಹೆಚ್ಚಾಗಿ ಟಿವಿ ನೋಡಲು ಮಾಡಿಕೊಳ್ಳುತ್ತಿದ್ದ ತಯಾರಿ ಟಿವಿ ನೋಡುವ ಸಮಯಕ್ಕಿಂತ ಜಾಸ್ತಿಯೇ ಇರುತ್ತಿತ್ತು. ಕ್ರಮೇಣ ಹಳ್ಳಿಯ ಕೆಲ ಯುವಕರು ಕೇಬಲ್ ಸರ್ವಿಸ್ ಶುರುಮಾಡಲು ಮುಂದಾದರು. ಅಡಿಕೆ ಮರಗಳ ನಡುವೆ ಎಳೆದ ಕೇಬಲ್ಲುಗಳು ಅದೆಲ್ಲೋ ಹರಿದು ಬಿದ್ದು ಆ ಮಹಾಕಾರ್ಯವು ನಮ್ಮನ್ನೆಲ್ಲನ್ನು ಹೊರಜಗತ್ತಿಗೆ ಜೋಡಿಸಲು ವಿಫಲವಾಯಿತು. ಈ ಸಮಸ್ಯೆ ಮುಂದೆ DTH (ಚಿಕ್ಕ ಡಿಶ್ ಎಂಟೆನಾಗಳು) ಬಂದ ನಂತರ ಕ್ರಮೇಣ ಪರಿಹಾರವಾಯಿತು.

ಕೆಲ ವರ್ಷಗಳಲ್ಲಿ ಬಸ್ಸುಗಳ ಓಡಾಟ ಜಾಸ್ತಿ ಆಯಿತು. ದಿನ ಪತ್ರಿಕೆಗಳು ಆ ದಿನ ಸಂಜೆಯಾಗುವುದರೊಳಗೆ ಮನೆಗೆ ತಲುಪತೊಡಗಿದವು. ಕ್ರಮೇಣ ಫೋನ್ ಬಂತು. ಫೋನಿನೊಂದಿಗೆ ಇಂಟರ್ನೆಟ್ಟು ಮನೆಯ ಬಾಗಿಲಿಗೆ ಬಂತು. ಮೊಬೈಲ್ ಫೋನ್ ಟವರುಗಳು ಅಲ್ಲಲ್ಲಿ ಬಂದು ನಿಂತವು. ಇಂಟರ್ನೆಟ್ಟಿನಿಂದ ಆದ ಬದಲಾವಣೆ ಅಷ್ಟಿಷ್ಟಲ್ಲ. ಈಗ ದೂರದ ಹೊರದೇಶದಲ್ಲಿರುವವರೊಟ್ಟಿಗೆ ಮಾತನಾಡಲು ಒಂದು ಕ್ಷಣ ಸಾಕು. ಸುದ್ದಿಗಳು, ವಿಡಿಯೋಗಳು ಬೆರಳ ತುದಿಯಲ್ಲಿ ಲಭ್ಯ. ಅಡಿಕೆ ಮೊದಲಾದ ಬೆಳೆಯ ಬೆಲೆಯನ್ನು ಅರಿಯಲು ಅಥವಾ ಇನ್ನ್ಯಾವುದೋ ಕೃಷಿ ಸಂಬಂಧಿತ ವಿಚಾರ ತಿಳಿಯಲು ಈಗ ಹೆಚ್ಚು ಹೊತ್ತು ಬೇಡ. ನಮ್ಮ ಊರಿನಲ್ಲಿ ಈಗ ಹೆಚ್ಚಿನವರು ಫೇಸ್ ಬುಕ್ ಖಾತೆಯನ್ನು ಹೊಂದಿದ್ದಾರೆ. ಹಳ್ಳಿಯ ಹತ್ತು ಹಲವು ಕಾರ್ಯಕ್ರಮಗಳನ್ನು ಸ್ನೇಹಿತರು ಸಾಮಾಜಿಕ ಜಾಲತಾಣದಲ್ಲಿ ಇಂದು ನೇರ ಪ್ರಸಾರ ಮಾಡಿದ್ದನ್ನು ನನಗೆ ಸಪ್ತ ಸಾಗರದಾಚೆ ಕುಳಿತು ನೋಡುವುದೇ ಒಂದು ರೋಮಾಂಚಕ ಅನುಭವ. ಕೇವಲ ೧೫ ವರ್ಷಗಳಲ್ಲಿ ಒಂದು ಪುಟ್ಟ ಹಳ್ಳಿ ಇಂದು ಜಗತ್ತಿಗೇ ತೆರೆದುಕೊಂಡಿದೆ – ಅದಕ್ಕೆ ಮಾಧ್ಯಮ ಮತ್ತು ಅದರಲ್ಲಿ ನಡೆದ ಆವಿಷ್ಕಾರಗಳು ಮತ್ತು ಬದಲಾವಣೆಗಳೇ ಕಾರಣ.

*

# ಒರಟು ಕಾಗದದಿಂದ ನುಣುಪು ಗಾಜಿನೆಡೆಗೆ

■ ಕರುಣಾ ಬಿ. ಎಸ್., Ashburn, VA.

ಪಠನ ಪ್ರಪಂಚ ಬದಲಾಗಿದೆ. ಇದನ್ನು ನಾನು ಓದುವ ರೀತಿಯಲ್ಲಿ ಆಗಿರುವ ಬದಲಾವಣೆಯೆನ್ನಲೋ ಅಥವಾ ಅಕ್ಷರ ಪ್ರಪಂಚದಲ್ಲಿ ಆಗಿರುವ ಬದಲಾವಣೆಯೆನ್ನಬೇಕೋ ತಿಳಿಯದಾಗಿದೆ. ಇದರ ಜಾಡನ್ನು ಹಿಡಿದು ಹೋದಾಗ ಓದಿಗೆ ಅಂಟಿಕೊಂಡಂತೆಯೇ ನನ್ನ ಜೀವನದಲ್ಲಿ, ಯೋಚಿಸುವ ರೀತಿಯಲ್ಲಿ, ಆಸಕ್ತಿಗಳಲ್ಲಿ ಆಗಿರುವ ಮಾರ್ಪಾಡುಗಳೂ ಕಾಣುತ್ತವೆ. ಸುಮಾರು ೫೦ ಹಾಗೂ ೬೦ನೇ ದಶಕದಲ್ಲಿ ಬಹಳ ಸಹಜವೇ ಎಂಬಂತಿದ್ದ ಕಪ್ಪುಬಿಳುಪಿನ ಚಲನಚಿತ್ರಗಳಂತೆ, (ನಾನು ಓದಲು ಶುರುಮಾಡಿದ) ಎಂಬತ್ತರ ದಶಕದ ಸಮಯದಲ್ಲಿನ ಅಕ್ಷರ ಪ್ರಪಂಚವನ್ನೂ ಒಂದು ರೀತಿಯ 'ಬ್ಲಾಕ್ ಅಂಡ್ ವೈಟ್' ಜಮಾನ ಎನ್ನಬಹುದು. ಏಕೆಂದರೆ ದಿನಪತ್ರಿಕೆ, ವಾರಪತ್ರಿಕೆ, ಮಾಸ ಪತ್ರಿಕೆ, ದೂರದರ್ಶನ, ಹೀಗೆ ಅನೇಕ ಸುದ್ದಿ ಮಾಧ್ಯಮಗಳು ಮುಖಪುಟದ ಹೊರತಾಗಿ ಬಹುತೇಕ ಕಪ್ಪು-ಬಿಳುಪಿನಲ್ಲಿಯೇ ತುಂಬಿರುತ್ತಿದ್ದವು. ಆ ಪತ್ರಿಕೆಗಳ ಕೊಂಚ ಒರಟೇ ಎನ್ನಬಹುದಾದ ಪುಟಗಳ ಜೊತೆಗಿನ ಸ್ಪರ್ಶದ ಅನುಭವವಿನ್ನೂ ನನಗೆ ಮರೆಮಾಸದಾಗಿದೆ. ಅಂದಿನಿಂದ ಇಲ್ಲಿಯವರೆಗೆ ಪತ್ರಿಕೆಗಳ ನುಣುಪಾದ, ಹೊಳಪಾದ 'ಗ್ಲಾಸೀ' (Glossy) ಪುಟಗಳ ರೂಪಾಂತರ, ವಿಷಯಗಳ ಪ್ರಸ್ತುತಪಡಿಸುವಿಕೆ, ಸುದ್ದಿಯ ವ್ಯಾಪ್ತಿಗಳಲ್ಲಿ ಆಗಿರುವ ಬದಲಾವಣೆಯೂ ಅಗಾಧವೇ ಎನ್ನಬಹುದು. ಇಂದು ಅದೆಷ್ಟೋ ವಿಷಯಗಳನ್ನು Smart Phoneನಲ್ಲಿಯೇ ಓದಿ ಮುಗಿಸುವ ನಾವು, ಒಂದು ಕಾಲದಲ್ಲಿ ಅದೇ ಮಾಹಿತಿಗಾಗಿ ಸಡಗರದಿಂದ ಎದುರುನೋಡುವುದು ಪರಿಪಾಠವಾಗಿತ್ತು. ಇದೇ ಕಾತರತೆಯು ಗ್ರಂಥಾಲಯದೊಡನೆ, ಪುಸ್ತಕಗಳೊಡನೆ ಬಿಡಿಸಲಾರದ ನಂಟನ್ನು ಬೆಳೆಸಿದವು. ಅನನ್ಯ ಅನುಭವಗಳನ್ನು ನಮ್ಮ ಹೃದಯದಲ್ಲಿ ಪೇರಿಸಿದವು.

ಇಂದು ಒರಟಾದ ಕಾಗದವೂ ಇಲ್ಲ, ಕಪ್ಪು ಬಿಳುಪಿನ ಪ್ರಪಂಚವೂ ಇಲ್ಲ. ಅಂದರೂ ನನಗೇಕೆ Smart Phone ಅಥವಾ ಕಂಪ್ಯೂಟರಿನಲ್ಲಿ ಓದುವುದು

ಆಪ್ಯಾಯಮಾನವೆನಿಸುವುದಿಲ್ಲ? ಜಗತ್ತೇ ನನ್ನ ಕಣ್ಣೆದುರು ಚಿತ್ತಾಕರ್ಷಕವಾಗಿ ತೆರೆದಿಟ್ಟುಕೊಳ್ಳುವ ಅವಕಾಶವಿರುವಾಗ, ವಿಷಯಗಳು ಮನದಾಳಕ್ಕೆ ಇಳಿಯುವುದಿಲ್ಲ? ಎಲ್ಲಕ್ಕಿಂತ ಮುಖ್ಯವಾಗಿ ಇಂದಿಗೂ ಪುಸ್ತಕದ ರೂಪದಲ್ಲಿ ಅಥವಾ ಕಾಗದದಲ್ಲಿ ಓದುವುದು ನೆನಪಿರುವುದೇಕೆ? ಈ ಲೇಖನವನ್ನು ಬರೆಯುತ್ತಾ ಓದಿನ ಪ್ರೇಮದಿಂದ ಇಂತಹ ಅನೇಕ ಪ್ರಶ್ನೆಗಳಿಗೆ ಉತ್ತರವನ್ನು ಕಾಣುವ ಪ್ರಯತ್ನವಾಯಿತು. ಸುಂದರ ಅನುಭವಗಳ ನೆನಪುಗಳಿಗೆ ಜಾರುವ ಅವಕಾಶವಾಯಿತು!

ಎಂಬತ್ತರ ದಶಕದಲ್ಲಿ ಬೆಳೆದ ನಮ್ಮ ಪೀಳಿಗೆಯವರಿಗೆ ಮನರಂಜನೆಯೆನ್ನುವುದು ಕೆಲವೇ ವಿಷಯಗಳಿಗೆ ಸೀಮಿತವಾಗಿತ್ತು. ಇದು ಒಂದು ಬಗೆಯಲ್ಲಿ ವರದಾನವೇ ಆಯಿತು. ಅಂದು ನಮ್ಮ ಪಾಲಿಗೆ ಚಂದಮಾಮ, ಬಾಲಮಿತ್ರ, ಬೊಂಬೆಮನೆ, ಪ್ರಜಾವಾಣಿಯಲ್ಲಿನ ರಾಮನ್, ಸುಧಾ ಪತ್ರಿಕೆಯಲ್ಲಿನ ಪುಟಾಣಿ ಪುಟ್ಟಿ, ಚಿಂಗಾರಿಯೇ ದೊಡ್ಡ ಮನರಂಜನೆ. ಇಂದು YouTube Channelನಲ್ಲಿ ಮಕ್ಕಳು, ಕಾರ್ಟೂನ್, ಕತೆಗಳು, ಹಾಡುಗಳ ಮೂಲಕ ಪಡೆಯುವ ಅನುಭವವನ್ನು, ನಾವು ಬಹುತೇಕ ಪತ್ರಿಕಾ ಮಾಧ್ಯಮದಲ್ಲಿ ಪಡೆಯುತ್ತಿದ್ದೆವು. ಬಹುತೇಕ ಮನೆಗಳಲ್ಲಿ ಮಕ್ಕಳು ಬೊಂಬೆ ಅಥವಾ ಆಟದ ಸಾಮಾನಿಗಾಗಿ ಜಗಳವಾಡುವುದು ವಾಡಿಕೆ. ಆದರೆ ನಮ್ಮ ಮನೆಯಲ್ಲಿ ನಾವು ಸಹೋದರ, ಸಹೋದರಿಯರೆಂದೂ ಮಕ್ಕಳಾಟಿಕೆಗಾಗಿ ಕಚ್ಚಾಡಿದ್ದುದು ನೆನಪಿಲ್ಲ. ಆದರೆ ಮನೆಗೆ ಬರುತ್ತಿದ್ದ ದಿನಪತ್ರಿಕೆ, ವಾರಪತ್ರಿಕೆಗಳನ್ನು ಮೊದಲು ಓದಬೇಕೆನ್ನುವ ಸ್ಪರ್ಧೆ ನಮ್ಮಲ್ಲಿರುತ್ತಿತ್ತು. ಆಮಟ್ಟಿಗೆ ಓದಿನ ರುಚಿ ಹತ್ತಲು ಅಪ್ಪ ಕಾರಣಕರ್ತರಾಗಿದ್ದರು. ಸ್ವತಃ ಸಾಹಿತಿಯಾಗಿ, ಸಾಹಿತ್ಯಾಸಕ್ತರಾಗಿ, ಎಳೆಯ ವಯಸ್ಸಿನಲ್ಲಿಯೇ ನಮ್ಮನ್ನು ಪುಸ್ತಕ ಲೋಕಕ್ಕೆ ಪರಿಚಯಿಸಿದ್ದರು.

ಆಗ ನಮ್ಮ ಜಗತ್ತಿಗೆ 'ಹ್ಯಾರಿ ಪಾಟರ್', 'ಪೋಕೆಮಾನ್', 'ಡೋರೆಮಾನ್', 'ಬ್ಯಾಟ್‌ಮ್ಯಾನ್' ಇನ್ನಿತರ ಮ್ಯಾನ್‌ಗಳ ಪ್ರವೇಶವಾಗಿರಲಿಲ್ಲ. ದೂರದರ್ಶನದಲ್ಲಿ 'ಸ್ಪೈಡರ್‌ಮ್ಯಾನ್' ಹಾಗೂ 'ಹೀ ಮ್ಯಾನ್'ರನ್ನು ಕಾಣುವ ಮುನ್ನ, ಚಂದಮಾಮ, ಬಾಲಮಿತ್ರ, ಬೊಂಬೆಮನೆಗಳೇ ನಮ್ಮ ಮಾಯಾಲೋಕ. ಪ್ರತಿ ಬೇಸಿಗೆ ರಜೆಯಲ್ಲಿಯೂ ವಾಡಿಕೆಯಂತೆ ಅಟ್ಟದ ಮೇಲಿಂದ ಕೆಳಗೆ ಇಳಿಯುತ್ತಿದ್ದ ಚಂದಮಾಮ ಕಟ್ಟು, ಪ್ರತಿ ವರ್ಷವೂ ಹೊಸದೆಂಬಂತೆ ಓದಿಸಿಕೊಂಡು ಹೋಗುವುದರಲ್ಲಿ ಸಫಲವಾಗುತ್ತಿತ್ತು. ಅದೆಷ್ಟು ಬಾರಿ ಬೇತಾಳನ ಕತೆಗಳು, ಕರಡಿ ಕೆಂಗಣ್ಣ, ಮಂತ್ರದ ಮಲ್ಲಿ ಧಾರಾವಾಹಿಗಳನ್ನು ಓದಿಲ್ಲ? ಹೆಜ್ಜೆ ಹೆಜ್ಜೆಗೂ ಕುತೂಹಲವನ್ನು ಕೆರಳಿಸುತ್ತಿದ್ದ "ಮಂತ್ರದ ಮಲ್ಲಿ"ಯ ಧಾರಾವಾಹಿಯನ್ನು ದಿನಾಂಕದ ಪ್ರಕಾರ ಜೋಡಿಸಿಕೊಂಡು ಅದೆಷ್ಟು ಬಾರಿ ಮಂತ್ರಮುಗ್ಧಳಾಗಿಲ್ಲ? ಅದರ ಕೊನೆಯ ಧಾರಾವಾಹಿಯ ಆವೃತ್ತಿ ಇಲ್ಲದಿದ್ದರೂ, 'ಕೊನೆಗೆ ಏನಾಗತ್ತೋ' ಎಂಬ ಕುತೂಹಲವೇಕೆ ಕಾಡದೇ ಇರಲಿಲ್ಲ? ಅಂದು ಪ್ರಾಯಶಃ ಹೊರಗಿನ ಪರಿಸರದಿಂದ ಕಲುಷಿತವಾಗದ ಮುಗ್ಧ ಮನಸ್ಸುಗಳು ನಮ್ಮದಾಗಿದ್ದವು. ಇಂದಿನ ತಂತ್ರಜ್ಞಾನ, ಮಾಹಿತಿಯ ಅಬ್ಬರ ಹಾಗೂ ಹೇರಿಕೆಯಿಂದ ಹೊರತಾಗಿದ್ದ ಕಾಲವಾಗಿತ್ತು. ಓದುವ ರೀತಿಯಲ್ಲೊಂದು ಉತ್ಕಟತೆಯಿತ್ತು.

ಚಿಕ್ಕ ಊರೇ ಎನ್ನುಬಹುದಾಗಿದ್ದ ಧಾರವಾಡದ ನಮ್ಮ ಪುಟ್ಟ ಮನೆಯಲ್ಲಿ ಪುಸ್ತಕಗಳಿಗೊಂದು ವಿಶೇಷ ಸ್ಥಾನವಿತ್ತು. ಮನೆಯ ಸಾಮಾನುಗಳನ್ನಿಡಲು ಸೂಕ್ತವಾದ ಸ್ಥಳವಿಲ್ಲದಿದ್ದರೂ, ಪಡಸಾಲೆಯ ಅಟ್ಟದ ತುಂಬೆಲ್ಲಾ ಅಪ್ಪನ ಪುಸ್ತಕಗಳು ಪೇರಿಸಲ್ಪಟ್ಟಿದ್ದವು. ಪ್ರತಿ ಭಾನುವಾರಕ್ಕಾಗಿ ನಾವು ಕಾತರದಿಂದ ಎದುರು ನೋಡುತ್ತಿದ್ದ ದಿನಗಳವು. ಪ್ರಜಾವಾಣಿಯ ರಾಮನ್ ಅಂದಿನ ಸಂಚಿಕೆಯಲ್ಲಿ ಸೋತಿರುವನೋ ಗೆದ್ದಿರುವನೋ ಎಂಬ ಕುತೂಹಲ; ಪದಬಂಧದ ಆಕರ್ಷಣೆ ಮತ್ತೊಂದೆಡೆ. ಪ್ರಜಾವಾಣಿಯನ್ನು ತರಲು ಅಪ್ಪನೊಡನೆ ಪೇಟೆಯ ಕಡೆಗೆ ಹೊರಟಾಗ ನಮಗೆ ಸಿಗುತ್ತಿದ್ದ ಮಸಾಲೆ ದೋಸೆ, ಕೇಕ್, ಇತ್ಯಾದಿ ತಿನಿಸುಗಳ ಬಳುವಳಿಗಳ ಎದುರು ನೋಡುವಿಕೆಯೂ! ಅದಕ್ಕಾಗಿಯೇ ಹಿಂದಿನ ದಿನದಿಂದಲೇ ಅದನ್ನು ಕಾಯ್ದಿರಿಸುವ ಪ್ರಕ್ರಿಯೆ ಪ್ರಾರಂಭವಾಗುತ್ತಿತ್ತು. 'ಅಪ್ಪಾ, ನಾಳೆ ಪದಬಂಧದ ಪೇಪರ್ ನಿಮ್ದಾದ್ ಮೇಲೆ ನಂಗೆ', 'ರಾಮನ್‌ಪುಟ ನಿಮ್ದಾದ್ ಮೇಲೆ ನಂಗೆ', 'ಅಪ್ಪಾ, ನಾಳೆ ನಾನು ನಿಮ್ಜೊತೆ ಬರ್ತೀನಿ ಪ್ರಜಾವಾಣಿ ತರಕ್ಕೆ'. ಹೀಗೆ ನಮ್ಮ ಕಚ್ಚಾಟ ತಾರಕಕ್ಕೇರುತ್ತಿತ್ತು. ಇಂದು ನನ್ನ Smart Phoneನಲ್ಲಿಯೇ ಪ್ರಜಾವಾಣಿ, ಗೂಗಲ್‌ನ್ಯೂಸ್ ಹಾಗೂ ಇನ್ನಿತರ ಸುದ್ದಿಗಳನ್ನು ಓದಿ ಮುಗಿಸುವಾಗ, ನಮ್ಮ ಅಂದಿನ ಪತ್ರಿಕೆಗಾಗಿದ್ದ ಸ್ಪರ್ಧೆ, ಕುತೂಹಲಗಳು ಧುತ್ತೆಂದು ನೆನಪಾಗುತ್ತವೆ. ಶನಿವಾರ ರಾತ್ರಿಯೇ ಪ್ರಜಾವಾಣಿಯ ಭಾನುವಾರದ ಪುರವಣಿಯನ್ನು ಓದಿ ಮುಗಿಸುತ್ತಿದ್ದರೆ, ಅದೇ ಸಮಯದಲ್ಲಿ ಅಪ್ಪ ಅಲ್ಲಿ ಬೆಂಗಳೂರಿನಲ್ಲಿ ಮುಂಜಾನೆಯ ಕಾಫಿಯನ್ನು ಸವಿಯುತ್ತಾ, ಮೇಜಿನ ಮೇಲೆ ದಿನಪತ್ರಿಕೆಯನ್ನು ಹರಡಿಕೊಂಡು ಓದುತ್ತಿದ್ದರು. ನಾವಿಬ್ಬರೂ ತಂತ್ರಜ್ಞಾನದ ಸಹಾಯದಿಂದ ಒಂದೇ ಸಮಯಕ್ಕೆ ಅದೇ ಸುದ್ದಿ ಹಾಗೂ ವಿಷಯಗಳನ್ನು ಓದಿರುತ್ತಿದ್ದೆವು. ಈ ತಂತ್ರಜ್ಞಾನದಿಂದಲೇ ಏನೋ ಇಂದು ದಿನಪತ್ರಿಕೆಗಳಿಗಿಂತಲೂ ಆಸಕ್ತಿದಾಯಕವಾದ, ರೋಚಕವಾದ ವಿಷಯಗಳು ಅಂತರ್ಜಾಲದಲ್ಲಿ ಸಿಗುವಾಗ ಕಾಟಾಚಾರಕ್ಕೆ ಪುಟಗಳನ್ನು ತಿರುಗಿಸುವಂತಾಗಿದೆ. ಇಡೀ ದಿನ ದಿನಪತ್ರಿಕೆಯು ಅದೇ ಸ್ಥಳದಲ್ಲಿದ್ದರೂ, ಅದನ್ನು ಮೊದಲು ನಾನು ಓದಬೇಕೆನ್ನುವ ಸ್ಪರ್ಧೆಯಿಲ್ಲ ಹಾಗೂ ಸ್ಪರ್ಧಿಗಳೂ ಇಲ್ಲ. ಮೇಜಿನ ಮೇಲೆ ಸುಮ್ಮನೇ ಬಿದ್ದಿರುವ ದಿನಪತ್ರಿಕೆಯು ತನ್ನ ಓದುಗರ ಅಭ್ಯಾಸದಲ್ಲಿ ಆಗಿರುವ ಬದಲಾವಣೆಗಳನ್ನು ಎತ್ತಿ ತೋರಿಸುತ್ತದೆ.

ನಮ್ಮ ಆಸಕ್ತಿಗೆ ಅನುಗುಣವಾಗಿ ಓದಿನ ವಿಷಯಗಳು ಆಯ್ಕೆಯಾಗುವುದೋ ಅಥವಾ ಒಂದು ವಿಷಯವೇ ನಮ್ಮ ಆಸಕ್ತಿಯನ್ನು ರೂಪಿಸುತ್ತದೆಯೋ ತಿಳಿಯದು. ನನ್ನ ವಿಷಯಕ್ಕೆ ಬಂದಾಗ ಒಂದಕ್ಕೊಂದು ಪೂರಕವಾಗಿರುವುದು ಗೋಚರವಾಗುತ್ತದೆ. ಏಕೆಂದರೆ, ಮನೆಗೆ ದಿನಪತ್ರಿಕೆಗಳ ಜೊತೆಗೆ, ತರಂಗ, ಸುಧಾ, ವಾರಪತ್ರಿಕೆಗಳ ಆಗಮನವಾದಂತೆ ವಿಷಯಾಸಕ್ತಿಯ ವ್ಯಾಪ್ತಿಯೂ ಹೆಚ್ಚಿತು. ಒಂದು ರೀತಿಯಲ್ಲಿ ಇದಕ್ಕೆ ಗ್ರಂಥಾಲಯಗಳ ಕೊಡುಗೆಯೂ ಇದೆಯೆನ್ನಬಹುದು. ಅಂದು ಮನೆಯಲ್ಲಿ ನಮಗೆ ಓದಲಿದ್ದ ಪುಸ್ತಕಗಳು ಕೆಲವಾದರೆ, ಗ್ರಂಥಾಲಯದಲ್ಲಿ ಸಿಗುತ್ತಿದ್ದುದು ಹಲವಾರು. ಮನೆಯಲ್ಲಿ

ಕ್ರೀಡೆ, ವಿಜ್ಞಾನ, ಸಿನೆಮಾ, ಅಪ್ಪ-ಅಮ್ಮನಿಗೆ ತಿಳಿಯದಂತೆ ಕದ್ದುಮುಚ್ಚಿ ಓದುವ 'ಕರುಣಾಳು ಬಾ ಬೆಳಕೆ', 'ಕವಲೊಡೆದ ದಾರಿ' ಧಾರಾವಾಹಿಗಳಾದರೆ, ಲೈಬ್ರರಿಯಲ್ಲಿ ಹೇಳತೀರದಷ್ಟು ಅವಕಾಶಗಳು. ಅಪ್ಪ ನಮ್ಮನ್ನು Children's Sectionನಲ್ಲಿ ಕೂಡಿಸಿ ಹೋಗುತ್ತಿದ್ದರೆ, 'ಅಮರಚಿತ್ರ ಕಥೆ', ಕಷ್ಟಪಟ್ಟು ಇಂಗ್ಲೀಷ್ ಓದಿಕೊಂಡಾದರೂ Asterix, Tin-Tin, ಗಿನ್ನೆಸ್‌ರೆಕಾರ್ಡ್ಸ್, "Mathematics Today" ಇನ್ನಿತರ ಪುಸ್ತಕಗಳಲ್ಲಿ ನಮ್ಮ ತಲೆ ಹುದುಗಿಹೋಗಿರುತ್ತಿತ್ತು. ಮನೆಗೆ ಬರುತ್ತಲೂ, ಆಸಕ್ತಿಯೆನಿಸಿದ ವಿಷಯಗಳ ಬಗ್ಗೆ ನಮ್ಮಲ್ಲಿ ಚರ್ಚೆಯಾಗುತ್ತಿತ್ತು. ವಿಜ್ಞಾನ, ಕ್ರೀಡೆ, ಸಾಹಿತ್ಯದ ವಿಷಯಗಳನ್ನು ಚರ್ಚಿಸಲು ಅಪ್ಪ ಹಾಗೂ ಅಣ್ಣ ಮುಖ್ಯ ಜೊತೆಗಾರರಾಗಿದ್ದರು ಹಾಗೂ ಮಾರ್ಗದರ್ಶಕರು. ಇನ್ನು ಸಿನೆಮಾ ಹಾಗೂ ಧಾರಾವಾಹಿಗಳಿಗಾಗಿ ಅಮ್ಮ, ಗೆಳತಿ ಹಾಗೂ ನನ್ನ ಅಕ್ಕ ಜೊತೆಗಾರರೆಂದು ಹೇಳಬೇಕಿಲ್ಲ. ಶಾಲೆಯಲ್ಲಿ 'ಕಪ್ಪಂಚು ಬಿಳಿ ಸೀರೆ' ಧಾರಾವಾಹಿಯನ್ನು ಓದಿಕೊಂಡು ವಾರವಾರವೂ ನನಗೆ ಒಪ್ಪಿಸುತ್ತಿದ್ದ ಗೆಳತಿಯೊಬ್ಬಳಿಗೆ, ನಾನು ಅದೇ ವಾರದ ಮತ್ತೊಂದು ಧಾರಾವಾಹಿಯನ್ನು ಒಪ್ಪಿಸುವುದು ಪರಿಪಾಠವಾಯಿತು. ಕದ್ದು ಮುಚ್ಚಿ ಧಾರಾವಾಹಿಗಳನ್ನು ಓದುವುದರ ಜೊತೆಗೆ ಸಿನೆಮಾ ಪುಟಗಳಲ್ಲಿಯೂ ತಲೆ ಇಣುಕತೊಡಗಿತ್ತು. ಇಂದು Good Reads, Amazon Book Reviews ಇನ್ನಿತರ ಪುಸ್ತಕ ವಿಮರ್ಶಾ ಮೂಲಗಳು ಮಾಡುವ ಕೆಲಸಗಳನ್ನು, ಅಂದು ಮನೆಯವರು ಹಾಗೂ ಗೆಳತಿಯರೇ ಮಾಡುತ್ತಿದ್ದರು. ಯಾವ ಪತ್ರಿಕೆಯಲ್ಲಿ ಹಾಗೂ ಪುಸ್ತಕಗಳನ್ನು ಓದಿದರೆ ನಮಗೆ ಬೇಕಿರುವ ವಿಷಯಗಳು ದೊರೆಯುತ್ತವೆ ಎಂಬ ಸ್ಪಷ್ಟವಾದ ಮಾಹಿತಿ ಸಿಗುತ್ತಿತ್ತು. ಎರಡು ದಶಕಗಳ ಬಳಿಕ ಊಹಿಸಿಕೊಳ್ಳಲೂ ಅಸಾಧ್ಯವೆನ್ನುವಂತೆ ಬದಲಾವಣೆಯನ್ನು ಜಗತ್ತು ಕಂಡಿತ್ತು. ಅಂತರ್ಜಾಲವು ಓದಿನ ಚಹರೆಯನ್ನೇ ಬದಲಿಸಿತ್ತು. ಈಗ ಅಪ್ಪನಿಗೆ ಅಂತರ್ಜಾಲದಲ್ಲಿ ತಮಗೆ ಬೇಕಿರುವ ಮಾಹಿತಿಗಳು ದೊರೆಯುತ್ತವೆಯೇ ಎಂದು ತಿಳಿಯುವ ಕುತೂಹಲ. Life comes to a full circle ಎನ್ನುತ್ತಾರಲ್ಲ ಹಾಗೆ, ಅಂದು ಅಪ್ಪ ಅಕ್ಷರದ ಜಗತ್ತನ್ನು ಪುಸ್ತಕಗಳ ಮೂಲಕ ನಮಗೆ ಪರಿಚಯಿಸಿದ್ದರೆ, ಎರಡು ದಶಕಗಳ ಬಳಿಕ ಓದಿನ ಮತ್ತೊಂದು ಮಜಲನ್ನು ಅಂತರ್ಜಾಲದ ಮೂಲಕ ನಾವು ಅವರೆದುರು ತೆರೆದಿಡುತ್ತಿದ್ದೆವು.

ಇಂದು ಧಾರವಾಡದಲ್ಲಾಗಲೀ ಅಥವಾ ಬೆಂಗಳೂರಿನಲ್ಲಾಗಲೀ ಗ್ರಂಥಾಲಯಗಳ ಸ್ಥಿತಿಗತಿಯು ಹೇಗಿದೆಯೋ ತಿಳಿಯದು. ಆದರೆ ಎಂಬತ್ತರ ಹಾಗೂ ತೊಂಬತ್ತರ ದಶಕದಲ್ಲಿ, ನಾನು ಅವುಗಳ ಪ್ರಯೋಜನ ಪಡೆದಿದ್ದಂತೂ ನಿಜ. ಇದು ಮನರಂಜನೆ ಹಾಗೂ ನನ್ನ ಪಠ್ಯೇತರ ಚಟುವಟಿಕೆಗಳಿಗೆ ವಿಷಯಗಳನ್ನು ಕಲೆಹಾಕಲು ಮೂಲ ತಾಣವಾಗಿತ್ತು. ಕಾಲೇಜಿನ ಮೆಟ್ಟಿಲನ್ನು ಹತ್ತಿದ್ದಾಗ, ಹಿಂದಿನಂತೆ ಕದ್ದು ಮುಚ್ಚಿ ಧಾರಾವಾಹಿಗಳನ್ನು ಓದಬೇಕಿರಲಿಲ್ಲ. ಈಗ ಸಾಯಿಸುತೆ, ಉಷಾ ನವರತ್ನರಾಮ್, ತ್ರಿವೇಣಿ, ಇನ್ನಿತರ ಲೇಖಕಿಯರ ಸಾಮಾಜಿಕ ಕಾದಂಬರಿಗಳು, ಟಿ. ಕೆ. ರಾಮರಾವ್ ಅವರ ಪತ್ತೇದಾರಿ ಕಾದಂಬರಿಗಳನ್ನು ಓದಲು ಕೊಂಚ ಧೈರ್ಯವೂ ಬಂದಿತ್ತು. ಅಮ್ಮನಿಗೆ ಸಾಮಾಜಿಕ ಕಾದಂಬರಿಗಳನ್ನು ಲೈಬ್ರರಿಯಿಂದ

ತಂದು ಕೊಡುವುದು ನೆಪಮಾತ್ರವಷ್ಟೇ! ನಾನು ಮತ್ತು ನನ್ನ ಸಹೋದರ, ಪುಟಗಳನ್ನೂ ಎಗರಿಸಿಕೊಂಡು ಓದುತ್ತಾ ಸುಮಾರು ಒಂದೆರಡು ಗಂಟೆಗಳ ಅವಧಿಯಲ್ಲಿ ಕಾದಂಬರಿಯೊಂದನ್ನು ಮುಗಿಸಿಬಿಡುತ್ತಿದ್ದೆವು.

ಈಗ ಯಾವುದೇ ವಿಷಯವನ್ನು ಕುರಿತಾಗಿ ಮಾಹಿತಿ ಬೇಕಿದ್ದರೂ 'ವಿಕಿಪೀಡಿಯಾ' ನಮ್ಮ ಸೇವೆಗೆ ಸರ್ವದಾ ಸಿದ್ಧವಾಗಿರುತ್ತದೆ. ಆದರೆ ಅಂದು ಶಾಲೆಯಲ್ಲಿನ ಪ್ರಬಂಧದ ಸ್ಪರ್ಧೆಗಾಗಲೀ, ಚರ್ಚಾ ಸ್ಪರ್ಧೆಗಾಗಲೀ ಗ್ರಂಥಾಲಯದ ದೂಳು ಹಿಡಿದ ಪುಸ್ತಕಗಳು, ಎಂದೋ ಉಪಯೋಗಕ್ಕೆ ಬರಬಹುದೆಂದು ಸಂಗ್ರಹಿಸಿಟ್ಟುಕೊಂಡಿದ್ದ ಪತ್ರಿಕೆಗಳ ಲೇಖನಗಳು ಮುಖ್ಯ ವಸ್ತುಗಳಾಗಿದ್ದವು (ಅಂದ ಹಾಗೆ ಪತ್ರಿಕೆಗಳ 'ಕಟ್ಟಿಂಗ್ಸ್' ಎಂದು ಸಂಗ್ರಹಿಸಿಕೊಳ್ಳುತ್ತಿದ್ದ ಅಭ್ಯಾಸ ನನಗೆ ಅನುವಂಶೀಯವಾಗಿ ಬಂದಿತ್ತೇನೋ. ಅಮ್ಮ ಎಂದೋ ಕತ್ತರಿಸಿಟ್ಟಿದ್ದ ಅಡುಗೆ, ಕಸೂತಿ, Embroidary, ಹಳೆಯ ಸಿನೆಮಾ ಹಾಡುಗಳ ಸಂಗ್ರಹ, ಅಪ್ಪನ ಲೇಖನಗಳ ಕಟ್ಟು ಇಂದು ನನ್ನ ಪಾಲಿಗೆ ಅಮೂಲ್ಯವಾದ ಪ್ರಾಚ್ಯವಸ್ತು). ಅದರ ಜೊತೆಗೆ ಅಪ್ಪನಿಗೆ ಹಾಗೂ ಅಣ್ಣನಿಗೆ Essay competition ಇದೆ. ಏನಾದ್ರೂ ಪಾಯಿಂಟ್ಸ್ ಹೇಳಿ' ಎಂದು ಪೀಡಿಸುತ್ತಾ ಸಂಗ್ರಹಿಸುತ್ತಿದ್ದ ವಿಷಯಗಳೂ ಸೇರುತ್ತಿದ್ದವು. ಇದು ನನ್ನ ಅರಿವಿಗೆ ಬರದಂತೆಯೇ ಒಂದು ಕೌಶಲ್ಯವನ್ನು ಕಲಿಸಿತ್ತು – ಎಲ್ಲಿ, ಹೇಗೆ ಮಾಹಿತಿಯ ಸಾರವನ್ನು ಪಡೆಯಬೇಕು? ಯಾವ ಪುಸ್ತಕಗಳನ್ನು, ದಿನಪತ್ರಿಕೆಯ ಪುಟಗಳನ್ನು ಓದಬೇಕು? ಹೇಗೆ ಓದಬೇಕು? ಜೊತೆಗೆ ನನ್ನ ಕನ್ನಡ ಶಬ್ದ ಭಂಡಾರವೂ ಹೆಚ್ಚತೊಡಗಿತು. ಆಗ ಒಂದು ಪ್ರಬಂಧದ ಸ್ಪರ್ಧೆಗಾಗಿ ವಿಷಯಗಳನ್ನು ಕಲೆಹಾಕಲು ವಿವಿಧ ಮೂಲಗಳನ್ನು ಜಾಲಾಡುತ್ತಿದ್ದುದನ್ನು ನೆನೆಸಿಕೊಂಡರೆ, ಇಂದು ಎಲ್ಲದಕ್ಕೂ ಗೂಗಲ್ ಮೊರೆಹೋಗುವ ನನ್ನ ಸೋಮಾರಿತನದ ಬಗ್ಗೆ ಬೇಸರವೆನಿಸುತ್ತದೆ. ಹಾಗೆಯೇ ನಮ್ಮಲ್ಲಿ ಸಹಜವಾಗಿ ಪುಸ್ತಕ ಹಾಗೂ ಪತ್ರಿಕೆಗಳನ್ನು ಓದುವ ಪ್ರಕ್ರಿಯೆ ಕುಂಠಿತವಾಗಿರುವ ಬಗ್ಗೆಯೂ ವಿಷಾದವೆನಿಸುತ್ತದೆ.

ಇತ್ತೀಚೆಗೆ ನಾನು ಯಾವ ಪುಸ್ತಕ ಓದಲೆಂದು ತಡಕಾಡುತ್ತಿದ್ದಾಗ, ನಮಗೆ ಪಿ.ಯು.ಸಿ. ಎರಡನೇ ವರ್ಷದಲ್ಲಿ ಇಂಗ್ಲಿಷ್ ಪಠ್ಯ ಪುಸ್ತಕವಾಗಿದ್ದ "Mill on the Floss" ಕೈಗೆ ಸಿಕ್ಕಿತು. ಸುಮ್ಮನೆ ಹಾಗೆಯೇ ಅದನ್ನು ತಿರುವಿಹಾಕುತ್ತಿದ್ದಾಗ, ಅದರ ಪಾತ್ರಗಳು, ಕತೆಯನ್ನು ನಾನಿಂದೂ ಸಂಪೂರ್ಣವಾಗಿ ಮರೆತಿಲ್ಲವೆಂದು ಆಶ್ಚರ್ಯವೂ ಆಯಿತು. ಏಕೆಂದರೆ ನಮಗೆ ಆ ಪಾಠಗಳನ್ನು ಹೇಳಿಕೊಟ್ಟ ಇಂಗ್ಲಿಷ್ ಅಧ್ಯಾಪಕಿಯು ಬಹಳ ಆಸ್ಥೆಯಿಂದ ಆ ಪಾಠಗಳನ್ನು ಬೋಧಿಸಿದ್ದರು. ನನ್ನನ್ನೂ ಸೇರಿದಂತೆ ನಮ್ಮಲ್ಲಿ ಬಹುತೇಕ ಅನೇಕರಿಗೆ, ಅದರಲ್ಲೂ ಕಾಲೇಜಿನಲ್ಲಿ ವಿಜ್ಞಾನವನ್ನು ಆಯ್ದುಕೊಂಡವರಿಗೆ, ಇಂಗ್ಲಿಷ್/ಕನ್ನಡ ಪಠ್ಯವೆಂದರೆ ಆಟಕ್ಕುಂಟು ಲೆಕ್ಕಕ್ಕಿಲ್ಲ ಎಂಬ ಭಾವನೆ. ಭಾಷಾ ವಿಷಯವೇನಿದ್ದರೂ ಕಲೆ, ವಾಣಿಜ್ಯ ವಿಭಾಗದವರಿಗೆ ಎಂಬ ಉಡಾಫೆಯೂ ಸೇರಿತ್ತೆನ್ನಿ. ನಾನು ಆ ಗುಂಪಿಗೇ ಸೇರಿದವಳಾಗಿದ್ದೆ. ಕನ್ನಡ ಮಾಧ್ಯಮದಲ್ಲಿಯೇ ಓದಿದ್ದರಿಂದ, ಸರಾಗವಾಗಿ ಇಂಗ್ಲಿಷ್ ಸಾಹಿತ್ಯವನ್ನು ಓದಿ ಅರ್ಥೈಸಿಕೊಳ್ಳುವದು ಕಬ್ಬಿಣದ ಕಡಲೆಯೇ ಸರಿ. ಹೀಗಾಗಿ ಭಾಷಾ

ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಸುಮಾರಾದ ಅಂಕಗಳನ್ನು ಪಡೆದರೆ ಸಾಕೆಂದು ನಿರ್ಧರಿಸುತ್ತಿದ್ದೆವು. ಆಗ ಭಾಷಾ ಜ್ಞಾನದ ಮಹತ್ತ್ವವನ್ನು ಅರಿಯುವ ಪ್ರಬುದ್ಧತೆ ನಮ್ಮಲ್ಲಿ ಅನೇಕರಿಗೆ ಇರಲಿಲ್ಲವೆಂದು ತೋರುತ್ತದೆ. ಈಗ ನನ್ನ ವೃತ್ತಿಜೀವನದಲ್ಲಿ ವಿಷಯಗಳನ್ನು ಮಂಡಿಸುವಲ್ಲಿ ಭಾಷೆಯ ಮಹತ್ತ್ವವನ್ನು ಮನಗಂಡಿದ್ದೇನೆ. ನನ್ನ ಮಟ್ಟಿಗೆ, ಇಂಗ್ಲಿಷ್ ಭಾಷೆ ಹಾಗೂ ಸಾಹಿತ್ಯವು ಅಂದು ಕಬ್ಬಿಣದ ಕಡಲೆಯಾಗಿ ಕಂಡರೂ, ಅದನ್ನು ಉಡಾಫೆಯಿಂದ ಕಲಿಯುತ್ತಿದ್ದರೂ, ಕನ್ನಡ ಸಾಹಿತ್ಯೇತರ ಪ್ರಪಂಚವನ್ನೂ ನನಗೆ ಪರಿಚಯಿಸತೊಡಗಿತ್ತು. ಭೌತಶಾಸ್ತ್ರಕ್ಕೆ ಸಂಬಂಧಿಸಿದ ಪುಸ್ತಕಗಳು, ಪಠ್ಯದಲ್ಲಿದ್ದ "ಜ್ಯೂಲಿಯಸ್ ಸೀಸರ್", "ಥಿಂಗ್ಸ್‌ಫಾಲ್‌ಅಪಾರ್ಟ್" ಇವುಗಳನ್ನು ಅಭ್ಯಸಿಸಿದ ಬಳಿಕ, ಆಂಗ್ಲ ಭಾಷೆಯಲ್ಲಿ ಓದುವುದು ಸರಾಗವೆನಿಸತೊಡಗಿತು. ಆಗೊಂದಿಷ್ಟು ಆಂಗ್ಲ ಪುಸ್ತಕಗಳನ್ನು ಓದಿದ ಪಟ್ಟಿಯಲ್ಲಿ, ಅಪ್ಪ ಹಳೆಯ ದಿನಪತ್ರಿಕೆ, ಪುಸ್ತಕಗಳನ್ನು ರದ್ದಿ ಅಂಗಡಿಗೆ ಹಾಕುತ್ತಿದ್ದಾಗ ಅವರಿಗಲ್ಲಿ ಸಿಕ್ಕಿದ್ದ ರಸಾಯನ ಶಾಸ್ತ್ರದ ಪುಸ್ತಕವೂ ಸೇರಿತ್ತು!

ಕೊಂಚ ಸಮಯದ ಹಿಂದೆ ಶಾಲೆಯಲ್ಲಿದ್ದಾಗ ನನ್ನ ಗೆಳತಿಯೊಬ್ಬಳು 'ಕಪ್ಪಂಚು ಬಿಳಿ ಸೀರೆ' ಕತೆಯನ್ನು ನನಗೆ ವಾರವಾರವೂ ಒಪ್ಪಿಸುತ್ತಿದ್ದಳು ಎಂದೆನಷ್ಟೇ. ಗೆಳೆಯರ ಪ್ರಭಾವ ಓದಿನ ಪ್ರಪಂಚದಲ್ಲಿಯೂ ಇಲ್ಲದಿದ್ದರೆ ಹೇಗೆ? ನನ್ನ ಓದಿನ ವಿಚಾರದಲ್ಲಿ ಗೆಳೆಯರ ಕೊಡುಗೆ ಅಪಾರ. ಅದು ಮಹಾತ್ಮ ಗಾಂಧೀಜಿಯವರ ಆತ್ಮಕತೆ– "My Experiments with Truth" –ಯಿಂದ ಆರಂಭವಾಯಿತು. "ಇದನ್ನು ನೀನು ರಜಾ ಸಮಯದಲ್ಲಿ ಓದಲೇಬೇಕು" ಎಂದು ಕಾಲೇಜಿನ ಸಹಪಾಠಿಯೊಬ್ಬಳು ತಾಕೀತು ಮಾಡಿದ್ದಳು. ಅದೇ ಸಮಯಕ್ಕೆ ಅಣ್ಣನಿಂದ "Word power made Easy" ಎನ್ನುವ ಪುಸ್ತಕವೂ ಕೊಡುಗೆಯಾಗಿ ಬಂದಿತ್ತು. ಗಾಂಧೀಜಿಯವರ ಆತ್ಮಕತೆಯಲ್ಲಿ ಅರ್ಥವಾಗದ ಪದಗಳನ್ನು ತಿಳಿಯಲು, ಅಣ್ಣನು ಕೊಟ್ಟಿದ್ದ ಪುಸ್ತಕ ಸಹಾಯ ಮಾಡಿತು. ವೈಜ್ಞಾನಿಕ ಕ್ರಮದಲ್ಲಿ ಪದಗಳನ್ನು ಅಭ್ಯಸಿಸುವುದು ಹೇಗೆ ಎಂದು ನಾನು ಮನಗಂಡೆ. ಜೊತೆ ಜೊತೆಗೇ, ಕೇವಲ ಒಂದು ತಿಂಗಳಿನಲ್ಲಿ ನನ್ನ ಆಂಗ್ಲ ಶಬ್ದ ಭಂಡಾರಕ್ಕೆ ಅನೇಕ ಹೊಸ ಪದಗಳು ಸೇರಿಕೊಂಡವು. ಆ ಒಂದು ತಿಂಗಳಿನ ಅವಧಿಯಲ್ಲಿ ಜಗತ್ತನ್ನು ಹೊಸ ದೃಷ್ಟಿಯಿಂದ ಕಂಡಂತಹ ಅನುಭವ! ಇದನ್ನು ಕಾಲೇಜು ಶುರುವಾದ ಬಳಿಕ ನನ್ನ ಗೆಳತಿಯೊಡನೆ ಹಂಚಿಕೊಳ್ಳುವವರೆಗೂ ಸಮಾಧಾನವಿರಲಿಲ್ಲ. ಕಾಲೇಜು ಶಿಕ್ಷಣ ಮುಗಿಸಿ ವೃತ್ತಿ ಬದುಕನ್ನು ಪ್ರವೇಶಿಸಿದಾಗ ಜೀವನವು ಬೇರೆಯೇ ಮಜಲನ್ನು ತಲುಪಿತ್ತು. ಇಲ್ಲಿಯೂ ಪುಸ್ತಕ ಹಾಗೂ ಓದಿನ ವಿಷಯದಲ್ಲಿ ಗೆಳೆಯರ ಶಿಫಾರಸು, ಪ್ರಭಾವವಿಲ್ಲದಿರಲಿಲ್ಲ. ಚಂದಮಾಮ, ಅಮರ ಚಿತ್ರಕತೆ, ಪತ್ರಿಕೆ, ಧಾರಾವಾಹಿ, ಕಾಲೇಜಿನಲ್ಲಿ ಒಂದಿಷ್ಟು ಆಂಗ್ಲ ಸಾಹಿತ್ಯ, ಹೀಗೆ ನನ್ನ ಓದು ಕೂಡ ಬದಲಾವಣೆಯನ್ನು ಕಾಣದಿದ್ದರೆ ಹೇಗೆ? ಮುಂದಿನ ಹಂತವನ್ನು ಪ್ರವೇಶಿಸದಿದ್ದರೆ ಆದೀತೆ? ಪ್ರಾಯಶಃ ಭಗವಂತ ನಮ್ಮ ಮನಸ್ಸಿನ ಇಚ್ಛಾನುಸಾರವಾಗಿ ಅವಕಾಶಗಳನ್ನು ಒದಗಿಸುತ್ತಾನೆಯೋ ತಿಳಿಯದು. ಗಟ್ಟಿ ಸಾಹಿತ್ಯವನ್ನು ಓದಲು ಮನಸ್ಸು

ಸಿದ್ಧವಾಗುತ್ತಲೇ, ಆಫೀಸಿಗೆ ಹೋಗುವ ಬಸ್ಸಿನಲ್ಲಿ ಕುವೆಂಪುರವರ "ಮಲೆಗಳಲ್ಲಿ ಮದುಮಗಳು" ಪುಸ್ತಕವನ್ನು ಪ್ರತಿದಿನವೂ ಓದುತ್ತಿದ್ದ ಗೆಳತಿಯೊಬ್ಬಳು ಪರಿಚಯವಾದದ್ದು ಕಾಕತಾಳೀಯವೇ ಸರಿ. ಮೊದಲ ಬಾರಿಗೆ ಸ್ನೇಹಿತರೊಡನೆ ಕನ್ನಡ ಸಾಹಿತ್ಯವನ್ನು ಚರ್ಚಿಸುವ ಅವಕಾಶ ದೊರೆತಿದ್ದು ಅಂದೇ! ಇದೇ ಚರ್ಚೆಗಳು ದೇವರು, ವೀಣೆಯ ನೆರಳಿನಲ್ಲಿ, ಏಗ್ದಾಗೆಲ್ಲ ಐತೆ, ನಮ್ಮೂರ ರಸಿಕರು, ಗರುಡಗಂಬದ ದಾಸಯ್ಯ ಇಂತಹ ಅನೇಕ ಪುಸ್ತಕಗಳನ್ನು ಓದಿಸಿದವು.

ಅದೆಷ್ಟು ದಿನ ನಾವು ಸೀಮಿತ ಪರಿಧಿಯಲ್ಲಿ ಇರಲು ಸಾಧ್ಯ? ಬದುಕು ಜಗತ್ತಿನ ಬದಲಾವಣೆಗಳಿಗೆ ಅರಿವಿಲ್ಲದಂತೆಯೇ ಹೊಂದಿಕೊಳ್ಳುತ್ತೇವೆ. ಕಳೆದ ದಶಕದಲ್ಲಿ ಅಂತರ್ಜಾಲದ ಕದಂಬ ಬಾಹುಗಳು ಎಲ್ಲೆಡೆ ಚಾಚಿರಲು, ಸಾಹಿತ್ಯದ ಲಭ್ಯತೆಯೂ ಸುಲಭವಾಗಿ ಓದಿನ ರೀತಿ ಮತ್ತೊಂದು ಆಯಾಮವನ್ನು ಪಡೆಯಿತೆನ್ನಬಹುದು. ಸಾಹಿತ್ಯದ ಚರ್ಚೆಗೆ ಹಾಗೂ ಪುಸ್ತಕಗಳ ಶಿಫಾರಸಿಗೆ ಬಸ್‌ಗೆಳತಿ, ಸಹೋದ್ಯೋಗಿಗಳು, ಮನೆಯಲ್ಲಿನ ಸದಸ್ಯರ ಜೊತೆಗೆ ಅಂತರ್ಜಾಲದ ಕನ್ನಡ ಗುಂಪುಗಳು, ಬ್ಲಾಗುಗಳು, ಒಂದಿಷ್ಟು ಉತ್ತಮ ತಾಣಗಳು ಜೊತೆಯಾದವು. ಸಮಾನ ಮನಸ್ಕರು ಈಗ ಜಗತ್ತಿನ ಮೂಲೆ ಮೂಲೆಯಲ್ಲಿದ್ದರೂ, ತಮ್ಮ ಅನಿಸಿಕೆಗಳನ್ನು ಹಂಚಿಕೊಳ್ಳುವುದು ಸಾಮಾನ್ಯವಾಯಿತು. ತಮ್ಮಲ್ಲೆಲ್ಲೋ ಸುಪ್ತವಾಗಿದ್ದ ಪ್ರತಿಭೆಯನ್ನು ಹಾಗೂ ಅನಿಸಿಕೆಗಳನ್ನು ಬ್ಲಾಗುಗಳ ಮೂಲಕ ಪ್ರಕಟಿಸುವುದೂ ಸುಲಭವಾಯಿತು. ಏಕೆಂದರೆ ಜನರು ನಮ್ಮ ಬರವಣಿಗೆಯನ್ನು ಓದಬೇಕೆಂದರೆ ಮುಂಚಿನಂತೆ ಪತ್ರಿಕೆಗಳಲ್ಲಿ ಪ್ರಕಟವಾಗಲಿ ಎಂದು ಕಾಯುತ್ತಾ ಕೂರಬೇಕಿರಲಿಲ್ಲ. ಈ ಪ್ರಕ್ರಿಯೆಯು ಒಂದಿಷ್ಟು 'ಇಂಟರ್ನೆಟ್ ಸಾಹಿತ್ಯ'ಕ್ಕೂ ದಾರಿಯಾಯಿತು. ಎಲ್ಲರಿಗೂ ಓದಲು ಬರೆಯಲು ಅವಕಾಶ ದೊರೆತಂತಾಯಿತು. ಹಾಗೆಯೇ ಪ್ರಪಂಚದಾದ್ಯಂತ ಓದು ಸಾಹಿತ್ಯ ವೇದಿಕೆಗಳಲ್ಲಿ ಬರೆಯುವ ಅವಕಾಶವೂ ದೊರೆಯಿತು. ಹಾಸಿಗೆಯ ದಿಂಬಿಗೆ ಒರಗಿಕೊಂಡು ಪುಸ್ತಕ ಓದುತ್ತಾ, ಬೆಳಗಿನ ಕಾಫಿಯನ್ನು ಹೀರುತ್ತಾ ದಿನಪತ್ರಿಕೆಗಳಲ್ಲಿ ತಲೆ ಹುದುಗಿಸಿಕೊಳ್ಳುತ್ತಾ ಇದ್ದ ಕಾಲ ಸ್ವಲ್ಪಸ್ವಲ್ಪವೇ ಮರೆಯಾಗತೊಡಗಿತು. ಈಗ ತೊಡೆಯ ಮೇಲೆ ಲ್ಯಾಪ್‌ಟಾಪ್‌ಗಳು, ಕೈಯಲ್ಲಿ ಟ್ಯಾಬ್/ ಕಿಂಡಲ್‌ಗಳು ಬಂದು ಕುಳಿತಿದ್ದವು.

ತಂತ್ರಜ್ಞಾನದ ಫಲವೇನೋ, ನಾನು ಟ್ಯಾಬ್, ಲ್ಯಾಪ್‌ಟಾಪಿನಲ್ಲಿ ದೃಶ್ಯ ಹಾಗೂ ಶ್ರವಣ ಮಾಧ್ಯಮವನ್ನೂ ನನ್ನ ಓದಿಗಾಗಿ ಬಳಸಲು ಅನುಕೂಲವಾಯಿತು. ಪುಸ್ತಕವನ್ನು ಓದದೆಯೇ Audio Book ಮೂಲಕ ಆಲಿಸುವಂತಾದರೆ? ಕನ್ನಡ ಸಾಹಿತ್ಯದಲ್ಲಿ ಈ ಪ್ರಯೋಗವನ್ನು ಪ್ರಖ್ಯಾತ ಲೇಖಕ ಹಾಗೂ ಮಿತ್ರರಾದ, ಶ್ರೀ ವಸುಧೇಂದ್ರ ಸುಮಾರು ಒಂದು ದಶಕದ ಹಿಂದೆಯೇ ಮಾಡಿದ್ದರು. ಬೆಂಗಳೂರಿನಲ್ಲಿದ್ದಾಗ Audio Bookನ ಅಗತ್ಯ ನನಗಷ್ಟು ಕಂಡುಬಂದಿರಲಿಲ್ಲ. ಅಮೆರಿಕ ವಾಸದ ಪ್ರಭಾವವೋ, ಸಾಕೆನಿಸುವಷ್ಟು ಇರುವ ಇಲ್ಲಿನ ನಿಶ್ಶಬ್ದತೆಯನ್ನು ಹೋಗಲಾಡಿಸುವ ಪ್ರಯತ್ನವೋ ತಿಳಿಯದು, ಆಗೊಮ್ಮೆ ಈಗೊಮ್ಮೆ Audio Bookಗಳಿಗೆ ನಾನು ಮೊರೆಹೋಗುವುದೂ ಉಂಟು. ಮೊದಲು

ಸಾಹಿತ್ಯ ವಿಮರ್ಶೆಗಳಿಗೆ ಸಂಬಂಧಿಸಿದಂತಹ ಲೇಖನಗಳಿಗೆ ಪತ್ರಿಕೆಗಳೇ ಮೂಲವಾಗಿದ್ದವು. ಇಂದು You Tubeನಲ್ಲಿ ಇಂತಹ ಅನೇಕ ಉತ್ತಮ ಸಂಗ್ರಹವಿದೆ. ಈಗ ಮನೆಯ ಕೆಲಸವನ್ನು ಮಾಡುತ್ತಲೇ, You Tubeನಲ್ಲಿ ಕಾರ್ಯಕ್ರಮಗಳನ್ನು ಕೇಳುವುದಾಗಿದೆ. ಇನ್ನೂ ಒಂದು ಹೆಜ್ಜೆ ಮುಂದು ಹೋದಾಗ, ಹಿಂದೆ ಅಂದರೆ ಆರೇಳು ವರ್ಷಗಳ ಹಿಂದೆಯೂ ಕೆಲಸದ ಸಂದರ್ಶನಗಳಿಗೆ, ಸಂಬಂಧಿಸಿದ ಪುಸ್ತಕಗಳನ್ನು ಓದುತ್ತಲೇ ತಯಾರಿ ನಡೆಸುತ್ತಿದ್ದೆ. ಅದೇ ಇಂದು ಎಲ್ಲ ಸಿದ್ಧತೆಗಳೂ ಇದೇ ದೃಶ್ಯ, ಶ್ರವಣ ಮಾಧ್ಯಮದ ಮೂಲಕವೇ ಸಾಗುತ್ತದೆ. ಇವೆಲ್ಲವೂ ಧನಾತ್ಮಕ ಬದಲಾವಣೆಯೇ ಸರಿ. ಆದರೂ ಬೆಂಗಳೂರಿನಲ್ಲಿದ್ದಾಗ ಬೆಳಗಾಗುತ್ತಲೇ ಅಂದಿನ ದಿನಪತ್ರಿಕೆ ಬರುವುದು ತಡವಾದರೆ ಚಡಪಡಿಕೆಯಾಗುವುದೇಕೆ? ಗಾಂಧಿ ಬಜ಼ಾರಿನತ್ತ ಹೋದಾಗ ಅರಿವಿಲ್ಲದಂತೆಯೇ ನನ್ನ ಕಾಲುಗಳು 'ಅಂಕಿತ ಪುಸ್ತಕ'ದೆಡೆಗೆ ಧಾವಿಸುವುದೇಕೆ? ಇಂದಿಗೂ ಹಾಸಿಗೆಯ ದಿಂಬಿಗೆ ಒರಗಿಕೊಂಡು ಪುಸ್ತಕ ಓದಿದರಷ್ಟೇ ಸಮಾಧಾನವೆನಿಸುವುದೇಕೆ? ಪ್ರಾಯಶಃ "Change is the only constant thing" ಎನ್ನುವ ಉಕ್ತಿಯು ನನ್ನ ಪಾಲಿಗೆ ನಿಜವೂ ಹೌದು, ಸುಳ್ಳೂ ಹೌದು. ಬದಲಾವಣೆಯೂ ಬೇಕು, ಜೊತೆಗೆ ಹಳೆಯ ಒಂದಿಷ್ಟು ಓದುವ ಅಭ್ಯಾಸಗಳೂ ಜೊತೆಗಿರಬೇಕು.

*

# ಇಪ್ಪತ್ತನೆಯ ಶತಮಾನದ ರಾಜಕೀಯ ಸ್ಥಿತಿ-ಗತಿ

■ ಇಂಗ್ಲಿಷ್ ಮೂಲ: ಗುಂಡು ಶಂಕರ, Freehold, NJ.
■ ಕನ್ನಡ ಭಾವಾನುವಾದ: ಶ್ರೀಕಾಂತ ಬಾಬು, Bridgewater, NJ.

"The more things change, the more they stay the same. History repeating itself, in a more modest vein. Perhaps history has learned a lesson"
-- from Disgrace, a novel by J. M. Coetzee, Nobel Prize for Literature, 2003

ಇಪ್ಪತ್ತನೆಯ ಶತಮಾನದ ಚರಿತ್ರೆಯನ್ನು ಸೂಕ್ಷ್ಮವಾಗಿ ಗಮನಿಸಿದಾಗ ಪಾಶ್ಚಾತ್ಯ ದೇಶಗಳು ತಮ್ಮ ಹಿತಾಸಕ್ತಿಗಳನುಸಾರವಾಗಿ ಆಫ್ರಿಕಾ ಮತ್ತು ಏಷ್ಯಾ ಖಂಡಗಳನ್ನು ರೂಪಿಸಲು ಹೇಗೆ ಪ್ರಯತ್ನಿಸಿದವು ಎನ್ನುವುದನ್ನು ಕಾಣುತ್ತೇವೆ. ಇದನ್ನು ಮೂರು ರೀತಿಯ ದೃಷ್ಟಿಕೋನಗಳಿಂದ ಗಮನಿಸಬಹುದು- ಅನೇಕ ದೇಶಗಳಲ್ಲಿನ ವಸಾಹತುಶಾಹಿ ರಾಜ್ಯಭಾರಗಳು ಕಳೆದ ಶತಮಾನದ ಮಧ್ಯದಲ್ಲಿ ಕೊನೆಗೊಂಡುದುದು, ೧೯೯೧ರಲ್ಲಿ ಸೋವಿಯತ್ ಒಕ್ಕೂಟದ ವಿಭಜನೆಯೊಂದಿಗೆ ಶೀತಲ ಸಮರವು ಕೊನೆಯಾದುದು ಮತ್ತು ಮೂರನೆಯದಾಗಿ ಜಾಗತೀಕರಣ ಮತ್ತು ಮುಕ್ತ ಮಾರುಕಟ್ಟೆಯ ಪ್ರಭಾವಗಳು.

ಕಳೆದ ಶತಮಾನದ ಮುಖ್ಯ ದುರಂತಗಳು ಸಾಮ್ರಾಜ್ಯಶಾಹಿ ಆಡಳಿತದ ಬಿಡುಗಡೆಯಿಂದ ಉಂಟಾದವುಗಳು. ಮೊದಲು ಅವುಗಳನ್ನು ಗಮನಿಸೋಣ. ಸ್ವತಂತ್ರ ಹೊಂದಿದ ಈ ದೇಶಗಳಲ್ಲಿ ಏನೇನು ಬದಲಾವಣೆಗಳು ಆಗಿವೆ? ಈ ದೇಶಗಳು ತಮ್ಮ ಸ್ವಾತಂತ್ರ್ಯ ಪಡೆದುಕೊಂಡಿದ್ದರೂ, ವಸಾಹತುಶಾಹಿ ಪರಂಪರೆಯನ್ನು ನಿಜವಾಗಿಯೂ ತ್ಯಜಿಸಿವೆಯೇ? ಸಾಮ್ರಾಜ್ಯಶಾಹಿ ಮನೋಧರ್ಮವನ್ನು ಎಷ್ಟರಮಟ್ಟಿಗೆ ಬದಲಾಯಿಸಿಕೊಂಡಿವೆ? ಈ ಪ್ರಶ್ನೆಗಳಿಗೆ ನಮಗೆ ಮಿಶ್ರಿತ ಉತ್ತರಗಳು ದೊರೆಯುತ್ತವೆ.

ಇಪ್ಪತ್ತನೆಯ ಶತಮಾನದ ಆರಂಭದಲ್ಲಿ, ಏಷ್ಯಾ ಮತ್ತು ಆಫ್ರಿಕಾದ ಹೆಚ್ಚಿನ ದೇಶಗಳು ಪಾಶ್ಚಾತ್ಯ ಶಕ್ತಿಗಳ ವಸಾಹತುಗಳಾಗಿದ್ದವು. ಬ್ರಿಟನ್ ಮತ್ತು ಫ್ರಾನ್ಸ್ ಅತಿದೊಡ್ಡ

ವಸಾಹತುಶಾಹಿ ಆಡಳಿತಗಾರರಾಗಿದ್ದವು. ಇಂದು, ಈ ಖಂಡಗಳ ಬಹುಪಾಲು ದೇಶಗಳು ವಸಾಹತು ಶಕ್ತಿಗಳಿಂದ ಮುಕ್ತವಾಗಿವೆ. ಸ್ವತಂತ್ರಗೊಂಡು ಹಲವಾರು ವರ್ಷಗಳು ಸಂದಿದ್ದರೂ ಭಾರತವು ಸೇರಿದಂತೆ ಕೆಲವು ರಾಷ್ಟ್ರಗಳನ್ನು ಹೊರತುಪಡಿಸಿ, ಉಳಿದ ಅನೇಕ ದೇಶಗಳಲ್ಲಿ ಗುಲಾಮಗಿರಿಯ ಪರಿಣಾಮಗಳು ಇನ್ನೂ ಹೋಗಿಲ್ಲ.

ಈ ದೇಶಗಳ ಮೇಲೆ ಪಾಶ್ಚಿಮಾತ್ಯ ದೇಶಗಳ ಪ್ರಭಾವ ಇಂದಿಗೂ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಇರುವುದನ್ನು ನೋಡಬಹುದು. ವಿಶ್ವಶಕ್ತಿಗಳ ರಚನೆಯನ್ನು ಈಗ ಮತ್ತೊಮ್ಮೆ ವ್ಯಾಖ್ಯಾನಿಸಲಾಗುತ್ತಿದೆ. ಅನೇಕ ರಾಷ್ಟ್ರಗಳು ಬಲಪಂಥೀಯ ಮತ್ತು ಕೋಮುವಾದದತ್ತ ವಾಲುತ್ತಿದ್ದು ಪ್ರತ್ಯೇಕತಾವಾದವನ್ನು ಸಮರ್ಥಿಸಿಕೊಳ್ಳುತ್ತಿವೆ. ಕಳೆದ ಶತಮಾನದಲ್ಲಿ ಸ್ವತಂತ್ರಹೊಂದಿದ ಅನೇಕ ಮುಂದುವರಿಯುತ್ತಿರುವ ದೇಶಗಳು ತಮ್ಮ ಹಲವಾರು ಆಂತರಿಕ ಸಮಸ್ಯೆಗಳ ಜೊತೆಗೆ ಜಾಗತೀಕರಣದ ಮತ್ತು ಸ್ಥಳೀಯ ಬಲಪಂಥೀಯ ಉಗ್ರಗಾಮಿಗಳ ಪ್ರಾಬಲ್ಯಗಳೊಂದಿಗೆ ಸೆಣೆಸಾಡಬೇಕಾಗಿದೆ. ಆದರೆ ಈ ದೇಶಗಳು ಪಾಶ್ಚಾತ್ಯ ಯೋಚನಾ ಲಹರಿ ಮತ್ತು ವಿಧಾನಗಳಿಗೆ ಶರಣಾಗಿ ಸ್ವಂತಿಕೆಯನ್ನು ಕಳೆದುಕೊಂಡಿವೆ. ಲಾಭವೇ ಅಂತಿಮ ಗುರಿಯೆಂದು ನಂಬಿರುವ ಬಂಡವಾಳಶಾಹಿಗಳ ಹಿಡಿತದಲ್ಲಿ ಈ ರಾಷ್ಟ್ರಗಳು ಸಿಲುಕಿ ತಮ್ಮ ದೇಶಗಳ ಬಡವರ ಮತ್ತು ದುರ್ಬಲರ ಆಸೆ, ಆಕಾಂಕ್ಷೆಗಳನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿವೆ.

ಮತ್ತೊಂದು ಮಹತ್ವದ ವಿಷಯವೆಂದರೆ ಈ ಆಲೋಚನಾ ಸಮರದಲ್ಲಿ ಪಾಶ್ಚಿಮಾತ್ಯ ಚಿಂತನೆಗಳು ಮತ್ತು ವರ್ತನೆಗಳು ಅತ್ಯಂತ ಪ್ರಬಲವಾಗಿರುವುದು. ಮಾನವಕುಲದ ಮೂಲಭೂತ ಅಗತ್ಯಗಳ ಕುರಿತ ಆಲೋಚನೆಗಳು, ವಿಶ್ವದಲ್ಲಿನ ಬಡಜನರ ಅವಶ್ಯಕತೆಗಳು ಮತ್ತು ಅವರಿಗೆ ಏನು ಮಾಡಬೇಕು, ಇತ್ಯಾದಿಗಳ ಕುರಿತಾಗಿ ಪಾಶ್ಚಿಮಾತ್ಯ ನಿಲುವಿಗೆ ಯಾವುದೇ ಪ್ರತಿವಾದವೂ ಇಲ್ಲ. ಇಪ್ಪತ್ತನೇ ಶತಮಾನದ ನಿಜವಾದ ಸಿದ್ಧಾಂತದ ಸಮರವು ಆದರ್ಶಗಳನ್ನು ಕುರಿತದ್ದಾದರೂ, ಶತಮಾನದ ಅಂತ್ಯದಲ್ಲಿ, ಬಂಡವಾಳಶಾಹಿತ್ವವು (ಅದರ ಜಾಗತೀಕರಣ ಮತ್ತು ಲಾಭಕೇಂದ್ರಿತ ವಿಚಾರಗಳೊಂದಿಗೆ) "ಗೆದ್ದಿದೆ" ಎಂದು ನಾವು ಒಪ್ಪಿಕೊಳ್ಳಲೇಬೇಕು. ಯಾವಾಗ ನಮ್ಮ ಆದರ್ಶಗಳನ್ನು ಆರ್ಥಿಕ ಲಾಭಗಳಿಗೆ ಬಲಿಕೊಡುತ್ತೇವೆಯೋ ಆಗ ಬಡವರ ಮತ್ತು ಹಿಂದುಳಿದವರ ಹಿತಾಸಕ್ತಿಗಳನ್ನು ನಾವು ಕಡೆಗಣಿಸಿದ್ದೇವೆಂದು ಒಪ್ಪಿಕೊಳ್ಳಬೇಕಾಗುತ್ತದೆ.

* * *

ಇಪ್ಪತ್ತನೆಯ ಶತಮಾನದ ಆರಂಭದಲ್ಲಿ ಭಾರತವು ವಸಾಹತುಶಾಹಿ ಆಡಳಿತದಲ್ಲಿದ್ದ ಒಂದು ದೊಡ್ಡ ರಾಷ್ಟ್ರವಾಗಿತ್ತು. ಆಳುತ್ತಿದ್ದ ಮತ್ತು ಆಳ್ವಿಕೆಯಲ್ಲಿದ್ದ ರಾಷ್ಟ್ರಗಳ ಸಂಬಂಧ ಮಾಲಿಕ ಮತ್ತು ಗುಲಾಮರ ಸಂಬಂಧದಂತಿತ್ತು. ಬ್ರಿಟಿಷರ ಆಳ್ವಿಕೆಯಲ್ಲಿದ್ದ ಬರ್ಮಾ ದೇಶದಲ್ಲಿ ಕೆಲಸ ಮಾಡಿದ ಬ್ರಿಟನ್ನಿನ ಖ್ಯಾತ ಲೇಖಕ ಜಾರ್ಜ್ ಆರ್ವೆಲ್ ಅವರೇ ಆ

ಸಂಬಂಧವನ್ನು ಈ ರೀತಿಯಲ್ಲಿ ಬಣ್ಣಿಸುತ್ತಾರೆ. "ಗುಲಾಮ ಮತ್ತು ಮಾಲಿಕ. ಮಾಲಿಕ ಒಳ್ಳೆಯವನೋ? ಕೆಟ್ಟವನೊ? ನೇರವಾಗಿ ಮಾತಿನಲ್ಲಿ ಇಷ್ಟನ್ನು ಮಾತ್ರ ಹೇಳಬಹುದು: 'ಈ ನಿಯಂತ್ರಣ ಅತ್ಯಂತ ಅಪಾಯಕಾರಿ ಮತ್ತು ಸ್ವಾರ್ಥದಿಂದ ಕೂಡಿದ್ದು.'"[೧]

ಜಾರ್ಜ್ ಆರ್ವೆಲ್ ಅವರು ಪಾಶ್ಚಿಮಾತ್ಯ ದೇಶಗಳ ಆಳ್ವಿಕೆಗೆ ಒಳಪಟ್ಟ ಕೋಟ್ಯಾಂತರ ಆಫ್ರಿಕ ಮತ್ತು ಏಷ್ಯಾದ ಸಾಮಾನ್ಯ ಪ್ರಜೆಗಳ ನೋವು–ಸಂಕಟಗಳನ್ನು ಕುರಿತ ಆಂತರಿಕ ಒಳನೋಟಗಳ ಚಿತ್ರಣವನ್ನು ಕೊಟ್ಟಿದ್ದಾರೆ. ಆದರೂ ಪಾಶ್ಚಾತ್ಯ ಚಿಂತನೆಯಿಂದ ಪ್ರಭಾವಿತರಾದ ರಾಜಕೀಯ ವ್ಯಕ್ತಿಗಳು, ಮುತ್ಸದ್ದಿಗಳು ಈ ದೇಶಗಳ ಪ್ರಗತಿಯನ್ನು ಅಲ್ಲಿಯ ಅಸಂಖ್ಯಾತ ಪ್ರಜೆಗಳ ಸಾಮೂಹಿಕ ಅನುಭವಗಳನ್ನು ಪರೀಕ್ಷಿಸದೆ ಮತ್ತು ಊಹಿಸದೆ ಕೇವಲ ಪಶ್ಚಿಮದ ಗಾಜಿನಿಂದ ಮಾತ್ರ ನೋಡಿ ತೀರ್ಮಾನಿಸುತ್ತಾರೆ.

ಯೂರೋಪಿನ ಹಲವಾರು ವಿಮರ್ಶಕರು ಪಾಶ್ಚಿಮಾತ್ಯ ದೇಶಗಳ ಸಾಮ್ರಾಜ್ಯಶಾಹಿ ಧೋರಣೆಗಳನ್ನು ಕಟುವಾಗಿ ಟೀಕಿಸಿದ್ದಾರೆ. ೧೯೦೨ರಲ್ಲಿ ಜೋಸೆಫ್ ಕಾನ್ರಾಡ್ ಹೇಳಿದುದನ್ನು ನೋಡಿ: "ಜಾಗತಿಕ ವಿಜಯ ಅಂದರೆ ಹೆಚ್ಚಾಗಿ ನಮಗಿಂತ ಬೇರೆ ಮೈಬಣ್ಣದ ಅಥವಾ ಸ್ವಲ್ಪ ಚಪ್ಪಟೆ ಮೂಗಿನ ಜನಾಂಗವನ್ನು ಆಳುವದು; ಆಳವಾಗಿ ನೋಡಿದರೆ ಇದೇನೂ ಹೆಮ್ಮೆಪಡುವ ಸಂಗತಿಯಲ್ಲ."[೨] ಇದೇ ಸಮಯದಲ್ಲಿ ಬೆಲ್ಜಿಯಮ್ ದೇಶದ ಆಡಳಿತದಲ್ಲಿದ್ದ ಕಾಂಗೋ ದೇಶದ ಜನಸಂಖ್ಯೆಯ ಸುಮಾರು ಅರ್ಧದಷ್ಟು, ಅಂದರೆ ಹತ್ತು ಮಿಲಿಯನ್ ಜನ ಚಿತ್ರಹಿಂಸೆಗಳಿಂದ ಮಡಿದರೆಂದು ವರದಿಯಾಗಿತ್ತು. ನೊಬಲ್ ಪ್ರಶಸ್ತಿ ವಿಜೇತ ಚಿನುವ ಅಚೆಬೆ ಅವರು ಜೋಸೆಫ್ ಕಾನ್ರಾಡರನ್ನು ಕೋಮುವಾದಿ ಎಂದು ಗುರುತಿಸಿ ಅವರ ಬರಹದಲ್ಲಿ ವಸಾಹತುಶಾಹಿಯ ಸಮರ್ಥನೆಯನ್ನು ಗಮನಿಸುತ್ತಾರೆ.[೩]

ಏಷ್ಯಾ ಮತ್ತು ಆಫ್ರಿಕಾ ಖಂಡಗಳ ಮೇಲೆ ಯೂರೋಪಿನ ಪ್ರಾಬಲ್ಯ, ಮೇಲ್ನೋಟಕ್ಕೆ ಕಾಣುವ ಹಿಂಸೆ, ಕ್ರೌರ್ಯ, ಇತ್ಯಾದಿಗಳು ದೊಡ್ಡ ಕಥೆಯ ಒಂದು ಸಣ್ಣ ಭಾಗವೆಂದು ಹೇಳಬಹುದು. ಅವರ ಅನಿಯಂತ್ರಿತ ಮುಕ್ತ ಮಾರುಕಟ್ಟೆಗಳ ಪ್ರಯೋಗದಿಂದ ಕೋಟ್ಯಾಂತರ ಜನರ ದಾರುಣ ಹತ್ಯೆ ನಿಧಾನವಾಗಿ ಈಗಲೂ ನಡೆಯುತ್ತಿರುವುದನ್ನು ಗಮನಿಸಬಹುದು. ೧೯೪೩–೪೪ರ ಭೀಕರ ಬಾಂಗ್ಲಾ ಬರಗಾಲದಲ್ಲಿ ಸರಕಾರದ ಪರಿಹಾರವಿಲ್ಲದೆ ಲಕ್ಷಾಂತರ ಮಂದಿ ಸಾಯುತ್ತಿದ್ದಾಗ, ಬ್ರಿಟನ್ ಪ್ರಧಾನಿ ವಿನ್‌ಸ್ಟನ್ ಚರ್ಚಿಲ್ ಪರಿಹಾರವನ್ನು ಯುದ್ಧದಲ್ಲಿದ್ದ ಯೋಧರಿಗೆ ಕಳುಹಿಸಲು ತೀರ್ಮಾನಿಸಿ ಬರಗಾಲದ ಜನರು ಸತ್ತರೇನಂತೆ, ಅವರು ಮತ್ತೆ ಮೊಲಗಳಂತೆ ಮಕ್ಕಳನ್ನು ಮಾಡಿಕೊಳ್ಳುತ್ತಾರೆಂದು ಹೇಳುತ್ತಾರೆ. ಇದೇ ಬ್ರಿಟಿಷರು ಕೀನ್ಯಾದಲ್ಲಿ ಮಾವ್–ಮಾವ್ ಗುಂಪಿನ ದಂಗೆಯನ್ನು ತಡೆಯಲು ಸಾಮೂಹಿಕ ಕಗ್ಗೊಲೆ, ಹಿಂಸೆಗಳನ್ನು ೧೯೫೦ರ ದಶಕದಲ್ಲಿ ಮಾಡಿದ್ದನ್ನು ನೆನೆಯಬಹುದು.

ಈ ಸಮಯದಲ್ಲಿ ಅಮೆರಿಕಾ ಸಂಯುಕ್ತ ಸಂಸ್ಥಾನದ ಮನ್ರೋ ಸಿದ್ಧಾಂತವು ಚಾಲ್ತಿಯಲ್ಲಿತ್ತು. ಮನ್ರೋ ಸಿದ್ಧಾಂತವು ೧೮೨೩ರಲ್ಲಿ ಪ್ರಾರಂಭವಾದ ಅಮೆರಿಕೆಯ ಮೇಲಿನ ಯುರೋಪಿಯನ್ನರ ವಸಾಹತುಶಾಹಿಯನ್ನು ಖಂಡಿಸುತ್ತದೆ. ಅಲ್ಲದೆ ಯುರೋಪಿಯನ್ ದೇಶಗಳು ಉತ್ತರ ಮತ್ತು ದಕ್ಷಿಣ ಅಮೆರಿಕೆಗಳ ಸ್ವತಂತ್ರ ರಾಷ್ಟ್ರಗಳನ್ನು ವಶಕ್ಕೆ ತೆಗೆದುಕೊಳ್ಳುವ ಯಾವುದೇ ಪ್ರಯತ್ನವನ್ನು "ಅಮೆರಿಕ ಸಂಯುಕ್ತ ಸಂಸ್ಥಾನದತ್ತ ವ್ಯಕ್ತಪಡಿಸಿದ ಅಮೈತ್ರಿಕ ಪ್ರತಿಕ್ರಿಯೆ ಎಂದು ಪರಿಗಣಿಸಲಾಗುವದು" ಎನ್ನುತ್ತದೆ. ಆದಾಗ್ಯೂ, ಮನ್ರೋ ಸಿದ್ಧಾಂತವು, ಅಮೆರಿಕವು ಈಗಾಗಲೇ ಅಸ್ತಿತ್ವದಲ್ಲಿರುವ ಯುರೋಪಿಯನ್ ವಸಾಹತುಗಳನ್ನು ಮಾನ್ಯ ಮಾಡುತ್ತದೆ ಮತ್ತು ಯುರೋಪಿಯನ್ ರಾಷ್ಟ್ರಗಳ ಆಂತರಿಕ ವ್ಯವಹಾರಗಳಲ್ಲಿ ಹಸ್ತಕ್ಷೇಪ ಮಾಡುವುದಿಲ್ಲ ಎಂದು ಹೇಳುತ್ತದೆ. ಆದರೂ, ಅಮೆರಿಕ ದೇಶವು ವಿಜಯ ಮತ್ತು ಆಕ್ರಮಣದ ಸಾಮ್ರಾಜ್ಯಶಾಹಿತ್ವವನ್ನು ಸ್ವೀಕರಿಸಿತು. ಸ್ಪೇನ್‌ನ ಆಡಳಿತದಲ್ಲಿದ್ದ ಕೆರಿಬಿಯನ್ನಿನ ಕೆಲ ಭಾಗಗಳು, ಮತ್ತು ಪೂರ್ವ ಏಷ್ಯಾದ ಫಿಲಿಪೈನ್ ಮತ್ತಿತರ ಪ್ರದೇಶಗಳನ್ನು ನಿಯಂತ್ರಿಸಿತು. ಹಾಗೂ ೧೯೦೩ರಲ್ಲಿ ಅಮೆರಿಕವು, ಬ್ರಿಟಿಷರು ಸೂಯೆಜ್ ಕಾಲುವೆಯ ಮೇಲೆ ಈಜಿಪ್ಟಿನ ಸ್ವಾತಂತ್ರ್ಯವನ್ನು ಸರಿದೂಗಿಸಿದಂತೆ, ಪನಾಮದ ಕಾಲುವೆಯ ಮೇಲಿನ ಪನಾಮವನ್ನು ನಿಯಂತ್ರಿಸಿತು. ಅಂದರೆ 'ಅಮೆರಿಕ ಖಂಡದ ದೇಶಗಳು ಅಲ್ಲಿಯ ಪ್ರಜೆಗಳಿಗೆ ಸೇರಿದ್ದು' ಅನ್ನುವ ಬದಲಿಗೆ 'ಅಮೆರಿಕ ಖಂಡದ ದೇಶಗಳು ಅಮೆರಿಕ ಸಂಯುಕ್ತ ಸಂಸ್ಥಾನಕ್ಕೆ ಸೇರಿದ್ದು' ಎಂದು ಮನ್ರೋ ಸಿದ್ಧಾಂತವನ್ನು ಮಾರ್ಪಡಿಸಲಾಯಿತು. (ಯಾರಿಗೆ ಗೊತ್ತು, ಪರಿಸ್ಥಿತಿ ಹೀಗೆಯೇ ಮುಂದುವರಿದರೆ ಒಂದು ದಿನ ಇಡೀ ಜಗತ್ತೇ ಅಮೆರಿಕ ಸಂಯುಕ್ತ ಸಂಸ್ಥಾನಕ್ಕೆ ಸೇರಬಹುದು).

ಈ ಪ್ರಾಬಲ್ಯವನ್ನು ನೈತಿಕವಾಗಿ ಮತ್ತು ಬೌದ್ಧಿಕವಾಗಿ ಪಶ್ಚಿಮದಲ್ಲಿ ವಿವಿಧ ಸತ್ವರಹಿತ ವಾದಗಳಿಂದ ಸಮರ್ಥಿಸಲಾಯಿತು. ಆಧುನಿಕ ಉದಾರವಾದದ ಪೋಷಕ ಸಂತ ಜಾನ್ ಜಾನ್ಸ್ ಸ್ಟುವರ್ಟ್ ಮಿಲ್ ಕೂಡ ಹೇಳುವುದನ್ನು ನೋಡಿ: "ಜನರ ಸುಧಾರಣೆಗೋಸ್ಕರ ಬಲಾತ್ಕಾರದ ಸರ್ಕಾರ ಕಾನೂನುಬದ್ಧ ವಿಧಾನವಾಗಿದೆ." ಇನ್ನು ಮಕಾಲೆಯ ದುರಹಂಕಾರದ ಹೇಳಿಕೆಯನ್ನು ಕೇಳುವಿರಾ? "... ಉತ್ತಮ ಯುರೋಪಿಯನ್ ಗ್ರಂಥಾಲಯದ ಏಕೈಕ ಶೆಲ್ಫ್ ಭಾರತ ಮತ್ತು ಅರೇಬಿಯಾ ದೇಶಗಳ ಸ್ಥಳೀಯ ಸಾಹಿತ್ಯಕ್ಕೆ ಸಮನಾಗಿದೆ ..." ಎಂದು ವಸಾಹತು ದೇಶಗಳನ್ನು ಜರಿಯುತ್ತಾರೆ.

೨೦ನೇ ಶತಮಾನದ ತಿರುವಿನಲ್ಲಿ, ಪ್ರಜಾಪ್ರಭುತ್ವ ಎಲ್ಲೆಲ್ಲೂ ಕೇಳಿಬರುತ್ತಿದ್ದಾಗ, ಸಾಮ್ರಾಜ್ಯಶಾಹಿಯು ಸ್ವಾತಂತ್ರ್ಯದ ಟ್ರಸ್ಟೀ ಎಂದು ನಟಿಸುತ್ತ, ತೃತೀಯ ವಿಶ್ವಕ್ಕೆ ಪ್ರಜಾಪ್ರಭುತ್ವ ಮತ್ತು ಅಭಿವೃದ್ಧಿಯನ್ನು ತಂದುಕೊಡುವಂತೆ ಕೆಲಸ ಮಾಡಬೇಕಾಯಿತು. ಈ ನಟನೆಯು ಬ್ರಿಟಿಷ್ ಸಾಮ್ರಾಜ್ಯಶಾಹಿಗೆ ವಿಶೇಷವಾಗಿ ಅಗತ್ಯವಾಗಿತ್ತು, ಏಕೆಂದರೆ ಇಂಗ್ಲೆಂಡಿನಲ್ಲಿ ಮಧ್ಯಮ ವರ್ಗದವರು ಅಧಿಕಾರಕ್ಕೇರಿ ಇಂಗ್ಲಿಷ್ ಮನೋಧರ್ಮಕ್ಕನುಸಾರವಾಗಿ ಪವಿತ್ರವಾದ ಸ್ವಯಂ-ಧರ್ಮಿಷ್ಠತೆಗೆ ಆಡಳಿತವನ್ನು ಒಳಪಡಿಸಿದ್ದರು. ಅದು ಸದ್ಗುಣ, ಉದಾರತೆ

ಮತ್ತು ನಿಸ್ವಾರ್ಥ ಪರಹಿತಚಿಂತನೆಯನ್ನೊಳಗೊಂಡು ಅನ್ಯಾಯ ಮತ್ತು ಸ್ವಾರ್ಥಪರ ಶೋಷಣೆಗಳನ್ನು ತಿರಸ್ಕರಿಸಿತ್ತು. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ಬ್ರಿಟಿಷ್ ಜನಸಂಖ್ಯೆಯು ವಸಾಹತು ದೇಶಗಳ ಆಳ್ವಿಕೆಯ ನೀತಿಗೆ ನೈತಿಕ ಸಮರ್ಥನೆಯನ್ನು ಕೇಳಿತು.

ಏಷ್ಯಾ ಮತ್ತು ಆಫ್ರಿಕಾದ ದೇಶಗಳನ್ನು ಅವುಗಳ ಅಯೋಗ್ಯ ಜನರಿಂದ ರಕ್ಷಿಸಬೇಕಾದುದು ಬಹಳ ಮುಖ್ಯವೆನ್ನುವ ಅಧಿಕಪ್ರಸಂಗದ ತರ್ಕಬದ್ಧತೆಯನ್ನು, ವಸಾಹತುಶಾಹಿಯ ಹೊಸರೂಪವನ್ನು, ಯುರೋಪಿಯನ್ ಚಿಂತನೆಯು ಸಮರ್ಥಿಸಿತು. ೧೯೦೦ರ ಹೊತ್ತಿಗೆ ಇಂತಹ ಅಭಿಪ್ರಾಯಗಳು ಗಟ್ಟಿಯಾಗಿ, ಚಕ್ರಾಧಿಪತ್ಯದ ವಿಸ್ತರಣೆಗೆ ಬೇಕಾದ ಪ್ರಚಾರವನ್ನು ಪತ್ರಿಕೆಗಳು ಮತ್ತು ರಾಜಕಾರಣಿಗಳ ಮೂಲಕ ಪಡೆದಿದ್ದವು.

ಯೂರೋಪಿನಲ್ಲಿ ಹೆಚ್ಚು ವ್ಯಕ್ತವಾದ ಉದಾರವಾದಿ ಸಂಪ್ರದಾಯಗಳು ಅದರ ವಸಾಹತುಗಳಿಗೆ ತಲುಪಲಿಲ್ಲವೆನ್ನುವುದು ಏಷ್ಯಾದ ಬುದ್ಧಿಜೀವಿಗಳಿಗೆ ಗೊತ್ತಿತ್ತು. ಇಸ್ಲಾಮಿಕ್ ಆಧುನಿಕತಾವಾದವನ್ನು ಸ್ಥಾಪಿಸಿದ ಮೊಹಮ್ಮದ್ ಅಬ್ದುಹ್ ಅವರು ೧೮೮೫ರಲ್ಲಿ ಯುರೋಪಿಯನ್ನರ ಈ ನಡೆವಳಿಕೆಯನ್ನು ಮನಗಂಡು ಭ್ರಮನಿರಸನವಾಗಿ, "ನಾವು ಈಜಿಪ್ಟಿಯನ್ನರು ಒಮ್ಮೆ ಇಂಗ್ಲೀಷರ ಉದಾರವಾದಿತ್ವ ಮತ್ತು ಸಹಾನುಭೂತಿಯಲ್ಲಿ ನಂಬಿಕೆ ಹೊಂದಿದ್ದೆವು, ಆದರೆ ಇನ್ನು ಮುಂದೆ ಅವರನ್ನು ನಂಬುವುದಿಲ್ಲ, ಏಕೆಂದರೆ ಬರಿಯ ಒಣಮಾತುಗಳಿಗಿಂತ ಕಣ್ಣಿಗೆ ಕಾಣುವ ಸತ್ಯವು ಮಿಗಿಲಾದದ್ದು. ನಾವು ನೋಡುತ್ತಿರುವ ನಿಮ್ಮ ಉದಾರತೆಯೆಲ್ಲವೂ ನಿಮಗಾಗಿ ಮಾತ್ರ, ಮತ್ತು ನಮ್ಮೊಂದಿಗೆ ನಿಮ್ಮ ಸಹಾನುಭೂತಿ, ತಿನ್ನಲು ಯೋಗ್ಯವಾದ ಕುರಿಮರಿಯನ್ನು ತೋಳಕ್ಕೆ ತೋರಿಸಿದಂತಿದೆ" ಎಂದು ಹೇಳುತ್ತಾರೆ.

ಪಂಕಜ್ ಮಿಶ್ರಾ ಅವರ ಪುಸ್ತಕ "From the ruins of empire: The Revolt against the West" ವಸಾಹತುಶಾಹಿ ಕುರಿತಾದ ಏಷ್ಯನ್ ಅಭಿಪ್ರಾಯಗಳನ್ನು ಸಂಗ್ರಹಿಸುತ್ತದೆ. ಚೀನೀ ಚಿಂತಕ ಲಿಯಾಂಗರ, "ಜಾಗತಿಕ ಮಟ್ಟದ ಸಾಮ್ರಾಜ್ಯಶಾಹಿಗೊಳಪಟ್ಟ ಜನಾಂಗಗಳ ನಡುವಿನ ಅಂತ್ಯವಿಲ್ಲದ ಹೋರಾಟವು ಅತ್ಯಂತ ಅಪಾಯಕಾರಿ. ಬಹುತೇಕ ಎಲ್ಲಾ ಯುರೋಪಿಯನ್ ರಾಷ್ಟ್ರಗಳು, ಭರದಿಂದ ಕೈಕೊಂಡ ವಿಸ್ತರಣೆಯ ಅವಧಿಯ ನಂತರ, ದೇಶಾಭಿಮಾನಿ ಉತ್ಸಾಹದಿಂದ ಪ್ರವೇಶಿಸಿದ ಪ್ರಥಮ ವಿಶ್ವಯುದ್ಧ ಈ ಆತಂಕಗಳನ್ನು ದೃಢಪಡಿಸಿತು."[೪] ಮಾತನ್ನು ಉಲ್ಲೇಖಿಸುತ್ತಾರೆ. ಜಪಾನಿನ ಕಲಾ ಇತಿಹಾಸಕಾರ ಕಾಕುರ್ಝೊ ಒಕಕುರಾರ "'ಹಳದಿ ಗಂಡಾಂತರ' (ಜಪಾನಿನ ಆಕ್ರಮಣ ಮತ್ತು ವಿಜಯವನ್ನು ಪಾಶ್ಚಿಮಾತ್ಯರು ವರ್ಣಿಸುವ ಬಗೆ!)ದ ಅಸಂಬದ್ಧ ಕೂಗುಗಳನ್ನು ಎತ್ತಲು ಹಿಂದೆ ಬೀಳದ ಯುರೋಪಿನ ಸಾಮ್ರಾಜ್ಯಶಾಹಿಯು, ಏಷ್ಯಾವೂ ಸಹ "ಬಿಳಿ ದುರಂತ"ದ ಕ್ರೂರ ಮನೋಭಾವಕ್ಕೆ ಎಚ್ಚರಗೊಳ್ಳಬಹುದೆಂದು ಅರಿತುಕೊಳ್ಳಲು ವಿಫಲವಾಗಿದೆ."[೫] ಎನ್ನುವ ಮಾತನ್ನೂ ಉಲ್ಲೇಖಿಸುತ್ತಾರೆ.

ಯುರೋಪಿಯನ್ ವಸಾಹತುಶಾಹಿಗಳು ಸ್ಥಳೀಯ ರಾಜಕೀಯ ಮತ್ತು ಸಾಂಸ್ಕೃತಿಕ ವೈಷಮ್ಯಗಳನ್ನು ಕಡೆಗಣಿಸಿ ಆಫ್ರಿಕಾ ಮತ್ತು ದಕ್ಷಿಣ ಏಷ್ಯಾದಲ್ಲಿ ತಮ್ಮದೇ ಆದ ಪ್ರಾಂತ್ಯಗಳ ಗಡಿರೇಖೆಗಳನ್ನು ಎಳೆಯುತ್ತಾರೆ ಮತ್ತು ಮಿಲಿಟರಿ ನಿಯಂತ್ರಣದಿಂದ ಜನರ ಶಾಂತಿಯನ್ನು ಸ್ಥಾಪಿಸಲೆತ್ನಿಸುತ್ತಾರೆ. ಸ್ಥಳೀಯ ಜನರನ್ನು ಅವರಿಚ್ಛೆಗೆ ವಿರುದ್ಧವಾಗಿ ವಸಾಹತುಶಾಹಿ ಆಡಳಿತಗಾರರು ಸ್ಥಳಾಂತರಿಸುತ್ತಾರೆ. ಬಳಿಕ ಕಾಲಕ್ರಮೇಣ ಯುರೋಪಿಯನ್ ನಿಯಂತ್ರಣದಿಂದ ಸ್ವಾತಂತ್ರ್ಯ ಲಭಿಸಿದಾಗ, ಸ್ಥಳೀಯ ಜನರು ತಮ್ಮದೇ ಆದ ಜನಾಂಗೀಯ, ಸಾಂಸ್ಕೃತಿಕ ಅಥವಾ ರಾಜಕೀಯ ಸಮೂಹಕ್ಕಾಗಿ ಭೂಪ್ರದೇಶಗಳನ್ನು ವಶಪಡಿಸಿಕೊಳ್ಳಲು ಹೋರಾಡಿದ ಕಾರಣ, ಕೆಲವು ಹಿಂದಿನ ವಸಾಹತುಗಳಲ್ಲಿ ಆಂತರಿಕ ದಂಗೆಗಳು ಸ್ಫೋಟಿಸಿದವು. ಬ್ರಿಟೀಷರಿಂದ ಸ್ವಾತಂತ್ರ್ಯದ ನಂತರ, ೧೯೪೭ರ ಭಾರತದ ವಿಭಜನೆಯು ಸ್ಫೋಟಿಸಿದ ಅಂತಃಕಲಹದಲ್ಲಿ ೫೦೦,೦೦೦ ಜನರು ಕೊಲ್ಲಲ್ಪಟ್ಟರು. ಪ್ರಾದೇಶಿಕ ಪ್ರಾಬಲ್ಯಕ್ಕಾಗಿ ನಡೆದ ಹೋರಾಟ, ಹಿಂದೂ, ಸಿಖ್ ಮತ್ತು ಮುಸ್ಲಿಂ ಸಮುದಾಯಗಳ ನಡುವಿನ ಹೊಡೆದಾಟಕ್ಕೆ ದಾರಿಮಾಡಿತು. ಸ್ವತಂತ್ರ ರಾಷ್ಟ್ರದಲ್ಲಿ ತಾವು ಮತೀಯ ಅಲ್ಪಸಂಖ್ಯಾತರಾಗದಂತೆ ಮುಸ್ಲಿಮರು, ಹೊಸದೇಶದ ವಿಭಜನೆಗಾಗಿ ಹೋರಾಡಿದರು, ಇದು ಪಾಕಿಸ್ತಾನದ ಸೃಷ್ಟಿಗೆ ಕಾರಣವಾಯಿತು.

ಸಾಮ್ರಾಜ್ಯಶಾಹಿ ಆಡಳಿತವು ವಸಾಹತುಗಳಲ್ಲಿನ ಪ್ರಜೆಗಳಿಗೆ ಕ್ರೂರವಾಗಿತ್ತು. ಹಾಗಾಗಿ ೨೦ನೇ ಶತಮಾನದ ಆರಂಭದಲ್ಲಿ ಈ ವಸಾಹತು ದೇಶಗಳು ಸ್ವಾತಂತ್ರ್ಯ ಚಳುವಳಿಗಳನ್ನು ಆರಂಭಿಸಿದವು. ಈ ಚಳುವಳಿಗಳ ಮೂಲಕ ವಸಾಹತುಗಾರರಿಂದ ಸ್ವಾತಂತ್ರ್ಯ ಸಿಗುವ ಭರವಸೆ ಕಾಣಬರಲಿಲ್ಲ. ಆದರೆ, ೧೯೦೫ರಲ್ಲಿ, ಏಷ್ಯಾದ ಜಪಾನ್ ದೇಶವು ಪಶ್ಚಿಮದ ರಷ್ಯಾವನ್ನು ಸೋಲಿಸಿದಾಗ ಭರವಸೆಯ ಮೊದಲ ನಿಜವಾದ ಚಿಹ್ನೆ ಹೊರಹೊಮ್ಮಿತು. ಕೊರಿಯಾ ಮತ್ತು ಮಂಚೂರಿಯದಲ್ಲಿನ ಪ್ರಾಬಲ್ಯಕ್ಕಾಗಿ ರಷ್ಯಾ-ಜಪಾನ್ ಯುದ್ಧ ಕಾಣಿಸಿಕೊಂಡಿತು. ಮಧ್ಯಯುಗದ ನಂತರ ಮೊದಲ ಬಾರಿಗೆ, ಯುರೋಪಿಯನ್ ಅಲ್ಲದ ಒಂದು ರಾಷ್ಟ್ರವು ಮಹಾಯುದ್ಧದಲ್ಲಿ ಯುರೋಪಿಯನ್ ಶಕ್ತಿಯನ್ನು ಸೋಲಿಸಿತು. ಜಪಾನ್ ದೇಶದ ವಿಜಯವು ವಸಾಹತು ದೇಶಗಳಲ್ಲಿ ನಾನಾ ರೀತಿಯ ಕನಸುಗಳಿಗೆ ಬುನಾದಿಯಾಯಿತು. ರಾಷ್ಟ್ರೀಯ ಸ್ವಾತಂತ್ರ್ಯ, ಜನಾಂಗೀಯ ಘನತೆ, ಸರಳ ಪ್ರತಿಭಟನೆ, ಇತ್ಯಾದಿ ನೂರಾರು ಕಲ್ಪನೆಗಳಿಗೆ ಹುಟ್ಟುಹಾಕಿತು. ಗಾಂಧಿಯವರು ಆ ಸಮಯದಲ್ಲಿ ಸರಿಯಾಗಿ ಭವಿಷ್ಯ ನುಡಿದಿದ್ದರು " ... ಜಪಾನಿನ ವಿಜಯದ ಬೇರುಗಳು ಎಷ್ಟು ವ್ಯಾಪಕವಾಗಿ ಪಸರಿಸಿದೆಯೆಂದರೆ, ನಮಗೀಗ ಅದರ ಸಂಪೂರ್ಣ ಫಲವನ್ನು ಚಿತ್ರಿಸಿಕೊಳ್ಳಲು ಶಕ್ಯವಿಲ್ಲ"[೬] ಜಪಾನಿನ ಈ ಗೆಲುವು ಏಷ್ಯಾ ಮತ್ತು ಆಫ್ರಿಕಾದಾದ್ಯಂತ ಸ್ವಾತಂತ್ರ್ಯ ಚಳುವಳಿಗಳನ್ನು ಉತ್ತೇಜಿಸಿತು ಮತ್ತು ಸ್ವಾತಂತ್ರ್ಯದ ಆಸೆಯ ಕಿಡಿಯನ್ನು ಹೊತ್ತಿಸಿತು.

ಮೂವತ್ತಾರು ವರ್ಷಗಳ ನಂತರ, ಏಷ್ಯಾದಲ್ಲಿನ ಯುರೋಪಿಯನ್ ಅಧಿಕಾರಕ್ಕೆ ನಿರ್ಣಾಯಕ ಏಟನ್ನು ಜಪಾನ್ ದೇಶ ಕೊಟ್ಟಿತು. ೮ ಡಿಸೆಂಬರ್ ೧೯೪೧ರಂದು ಪ್ರಾರಂಭವಾಗಿ, ಸುಮಾರು ೯೦ ದಿನಗಳಲ್ಲಿ, ಜಪಾನ್ ದೇಶವು ಬ್ರಿಟನ್, ಯು.ಎಸ್.

ಮತ್ತು ನೆದರ್ಲ್ಯಾಂಡ್ಸ್ ದೇಶಗಳನ್ನು, ಪೂರ್ವ ಮತ್ತು ಆಗ್ನೇಯ ಏಷ್ಯಾದ ಫಿಲಿಪೈನ್ಸ್, ಸಿಂಗಾಪುರ್, ಮಲಯ, ಹಾಂಗ್ ಕಾಂಗ್, ಡಚ್ ಈಸ್ಟ್ ಇಂಡೀಸ್, ಸಿಯಾಮಿನ ಹೆಚ್ಚಿನ ಭಾಗಗಳಲ್ಲಿ, ಮತ್ತು ಫ್ರೆಂಚ್ ಇಂಡೋಚೀನಾ, ಮತ್ತು ಬರ್ಮಾಗಳಲ್ಲಿ ಆಶ್ಚರ್ಯಕರ ರೀತಿಯಲ್ಲಿ ಸೋಲಿಸಿ, ೧೯೪೨ರ ಆರಂಭದಲ್ಲಿ ಭಾರತದ ಗಡಿಯಲ್ಲಿ ಬಂದು ನಿಂತಿತ್ತು.

೧೯೪೨ರ ಆರಂಭದಲ್ಲಿ ಸಿಂಗಪೂರ್ ಜಪಾನಿನ ವಶವಾಗುವ ಸ್ವಲ್ಪ ಮುಂಚೆ ಡಚ್ ಪ್ರಧಾನಿ ಪೀಟರ್ ಗೆಬ್ರಾಂಡಿಯವರು ಚರ್ಚಿಲ್ ಮತ್ತು ಇತರ ಮಿತ್ರಪಕ್ಷದ ನಾಯಕರ ಹತ್ತಿರ ತಮ್ಮ ಆತಂಕವನ್ನು ಬಹಿರಂಗಪಡಿಸಿದರು, "ಬಿಳಿಯ ಜನಾಂಗದ ಮೇಲಿನ ಜಪಾನಿನ ಅನ್ಯಾಯ ಮತ್ತು ಅವಮಾನಗಳು, ಅವರನ್ನು ಅಲ್ಪಕಾಲದೊಳಗೆ ದಂಡಿಸದಿದ್ದರೆ, ಬಿಳಿಯರ ಪ್ರತಿಷ್ಠೆಯನ್ನು ಪುನಃ ಪಡೆಯಲಾರದ ರೀತಿಯಲ್ಲಿ ಹಾನಿಗೊಳಿಸುತ್ತದೆ."[೬] ಸುದೀರ್ಘ, ಕಠಿಣ ಹೋರಾಟದ ನಂತರ, ಜಪಾನ್ ಅಂತಿಮವಾಗಿ ಪರಮಾಣು ಬಾಂಬುಗಳ ಮೂಲಕ "ಶಿಕ್ಷೆಗೊಳಗಾಯಿತು". ಜಪಾನಿಯರು ಕೂಡ ತಾವು ಆಕ್ರಮಿಸಿಕೊಂಡಿದ್ದ ಏಷ್ಯಾದ ಅನೇಕ ದೇಶಗಳಲ್ಲಿ ಬಹಳ ಕ್ರೂರವಾಗಿ ವರ್ತಿಸಿದ್ದರು. ಹಾಗಿದ್ದರೂ, ಇದು ಜಪಾನಿನ ನಗರಗಳನ್ನು ಸಂಪೂರ್ಣವಾಗಿ ಧ್ವಂಸಮಾಡಲು ನೈತಿಕ ಸಮರ್ಥನೆಯನ್ನು ಕೊಡುತ್ತದೆ ಎಂದು ನನಗನ್ನಿಸುವುದಿಲ್ಲ. ಆದರೆ ಅನೇಕ ಏಷ್ಯನ್ನರ ದೃಷ್ಟಿಯಲ್ಲಿ, ಸ್ಥಳೀಯರನ್ನು ಭಯ ಮತ್ತು ರಾಜಕೀಯ ಜಡತ್ವದಲ್ಲಿ ಮುಳುಗಿಸಿದ್ದ ಯುರೋಪಿನ ಶಕ್ತಿಯ ಕ್ರಾಂತಿಯನ್ನು ಜಪಾನಿಯರು ಸಂಪೂರ್ಣವಾಗಿ ನಾಶಗೊಳಿಸಿದ್ದರು.

ಯುರೋಪಿನ ಸಾಮರ್ಥ್ಯ ಮತ್ತು ಸಾಗರೋತ್ತರ ವಿಸ್ತರಣದ ಅಪೇಕ್ಷೆಗೆ ಜರ್ಮನಿಯು ಕಡಿವಾಣ ಹಾಕಿತು. ಹಿಟ್ಲರನು ಭಾರತದಲ್ಲಿನ ಬ್ರಿಟಿಷ್ ಸಾಹಸದ ಬಗ್ಗೆ ತೀವ್ರವಾಗಿ ಅಸೂಯೆಪಡುತ್ತ, ಬ್ರಿಟಿಷರ ಆಳ್ವಿಕೆಯನ್ನು– "೩೫೦ ಮಿಲಿಯನ್ ಭಾರತೀಯ ಗುಲಾಮರ ಬಂಡವಾಳಶಾಹಿ ಶೋಷಣೆ" ಎಂದು ಕರೆದನು, ಮತ್ತು ಭಾರತದಲ್ಲಿ ಬ್ರಿಟನ್ನಿನ ಉದಾರ ವರ್ಣಭೇದ ಪ್ರತ್ಯೇಕತೆಯನ್ನು ಅವಗಣಿಸಿ, ಯೂರೋಪಿನಲ್ಲಿ ವಶಪಡಿಸಿಕೊಂಡ ಜನ ಮತ್ತು ಪ್ರದೇಶಗಳೊಡನೆ ಜರ್ಮನಿಯೂ ಇದೇ ರೀತಿಯ ಲಾಭದಾಹೀ ದಬ್ಬಾಳಿಕೆಯಿಂದ ನಡೆದುಕೊಳ್ಳಬೇಕೆಂದು ಆಶಿಸಿದನು. ಭಾರತದ ಮೊದಲ ಪ್ರಧಾನಿಯಾದ ಜವಾಹರಲಾಲ್ ನೆಹರು ಅವರು ೧೯೪೦ರಲ್ಲಿಯೇ, ಯೂರೋಪಿನಲ್ಲಿದ್ದ "ನಾಜಿಸಮ್"ನ್ನು ಪಶ್ಚಿಮದ ಸಾಮ್ರಾಜ್ಯಶಾಹಿಯ "ಅವಳಿ ಸಹೋದರ", ಸಾಮ್ರಾಜ್ಯಶಾಹಿಯು ವಸಾಹತುಗಳಲ್ಲಿ ಮೆರೆದರೆ, ಫ್ಯಾಸಿಸಮ್ ಮತ್ತು ನಾಜಿಸಮ್ ಯೂರೋಪಿನ ಒಳಗೆ ಇದೆಯೆಂದು ನಿಪುಣತೆಯಿಂದ ಗುರುತಿಸಿದ್ದರು.

ಸಿಂಗಪೂರಿನ ಸ್ಥಾಪಕ ಲೀ ಕ್ವಾನ್ ಯೆಯು ಅವರು ತಮ್ಮ ಜೊತೆಯ ಏಷ್ಯನ್ ಪೀಳಿಗೆಯಿಂದ ಕಲಿತ ಪಾಠಗಳನ್ನು "ಯಾರಿಗೂ, ಜಪಾನೀಯರಿಗಾಗಲೀ ಅಥವಾ ಬ್ರಿಟಿಷರಿಗಾಗಲೀ, ನಮ್ಮನ್ನು ತಳ್ಳಲು ಅಥವಾ ಒದೆಯಲು ಹಕ್ಕಿಲ್ಲ" ಎಂದು ನೆನಪಿಸಿಕೊಳ್ಳುತ್ತಾರೆ. ಸ್ಥಳೀಯರ ಅಧೀನತೆಯನ್ನು ರೂಢಿಮಾಡಿಕೊಂಡಿದ್ದ

ಯೂರೋಪಿಯನ್ ಶಕ್ತಿಗಳಿಗೆ, ಯುದ್ಧಾನಂತರ ಜಪಾನೀಯರು ತಿಳಿದೋ, ತಿಳಿಯದೆಯೋ ಹರಿಬಿಟ್ಟ ರಾಷ್ಟ್ರೀಯತೆಯನ್ನು ಪೂರ್ತಿಯಾಗಿ ಗ್ರಹಿಸಲಾಗಲಿಲ್ಲ. ನಂತರವಾಗಿ ಹಗೆ ಸಾಧಿಸುತ್ತಿದ್ದ ಸ್ಥಳೀಯರ ಅಪೇಕ್ಷೆಗೆ ವಿರುದ್ಧವಾಗಿ ಉಳಿಯಬಲ್ಲ ತಮ್ಮ ಸಾಮರ್ಥ್ಯವನ್ನೂ ಅವರು ತಪ್ಪಾಗಿ ನಿರ್ಧರಿಸಿದರು. ಇದು ಅನೇಕ ಹಾನಿಕಾರಕ ಮತ್ತು ನಿರರ್ಥಕ ದಂಗೆಗಳಿಗೆ ಮತ್ತು ವಿಶೇಷವಾಗಿ ಇಂಡೋಚೈನಾದಲ್ಲಿ ಪೂರ್ಣ ಪ್ರಮಾಣದ ಯುದ್ಧಗಳಿಗೆ ಕಾರಣವಾಯಿತು. ಆದರೂ ವಸಾಹತುಗಳ ಪತನದ ವೇಗ ಅಸಾಮಾನ್ಯವಾಗಿತ್ತು.

ಎರಡನೆಯ ಮಹಾಯುದ್ಧ ಕೊನೆಯಲ್ಲಿ ವಸಾಹತುಶಾಲಿ ದೇಶಗಳನ್ನು ದುರ್ಬಲ, ಬಡ ಮತ್ತು ವಸಾಹತುಗಳನ್ನು ಆಳಲು ಅಸಮರ್ಥರನ್ನಾಗಿ ಮಾಡಿತು. ಅನೇಕ ಆಫ್ರಿಕಾ ಮತ್ತು ಏಷ್ಯಾ ದೇಶಗಳು ಎರಡನೆಯ ಮಹಾಯುದ್ಧ ಮುಗಿದ ಎರಡು ದಶಕಗಳಲ್ಲಿ ಸ್ವಾತಂತ್ರ್ಯ ಪಡೆದುಕೊಂಡವು. ವಸಾಹತುಗಳಿಗೆ ಸ್ವತಂತ್ರ ಕೊಡುವುದಕ್ಕೆ ಮೊದಲು (ಉದ್ದೇಶಪೂರ್ವಕ ಅಥವಾ ಅಕಸ್ಮಿಕವಾಗಿ) ಅನೇಕ ಸಮಸ್ಯೆಗಳನ್ನು ಅವುಗಳ ಸ್ವಾತಂತ್ರ್ಯದ ಜೊತೆಗೆ ದಯಪಾಲಿಸಿದವು. ಉದಾಹರಣೆಗಳು ಹಲವು– ಭಾರತ–ಪಾಕಿಸ್ತಾನಗಳ ಕಾಶ್ಮೀರದ ಸಮಸ್ಯೆ, ಇಸ್ರೇಲ್–ಪ್ಯಾಲಿಸ್ಟೈನ್ ಸಮಸ್ಯೆ, ಧರ್ಮ–ಜನಾಂಗಗಳನ್ನು ಲೆಕ್ಕಿಸದೆ ಇರಾಕ್, ಸಿರಿಯ, ಇತ್ಯಾದಿ ದೇಶಗಳನ್ನು ಪಾಲುಮಾಡಿದ್ದು, ಇರಾನಿನ ಜನಪ್ರಿಯ ಸರಕಾರವನ್ನು ಸರ್ವಾಧಿಕಾರಿ ಷಾಗೆ ದಯಪಾಲಿಸಿದ್ದು, ಇತ್ಯಾದಿ, ಇತ್ಯಾದಿ. ಈ ಹೊಸ ದೇಶಗಳು ವಸಾಹತುಶಾಹಿ ಶಕ್ತಿಗಳ ಅವಸರದ ನಿರ್ಗಮ ತಂದ ಈ ಸಮಸ್ಯೆಗಳು ಮತ್ತು ಅದರ ಭೀಕರ ಪರಿಣಾಮಗಳನ್ನು ಇನ್ನೂ, ಎರಡನೆಯ ಮಹಾಯುದ್ಧ ಮುಗಿದ ಎಪ್ಪತ್ತು ವರ್ಷಗಳ ನಂತರವೂ, ಎದುರಿಸುತ್ತಿವೆ.

ಏಷ್ಯಾದ ಮತ್ತು ಆಫ್ರಿಕಾದಲ್ಲಿನ ಅನೇಕ ಜನರಿಗೆ, ಎರಡು ವಿಶ್ವ ಸಮರಗಳು ಮಹತ್ತರ ನೈತಿಕ ಹೋರಾಟಗಳಿಗಿಂತ ಯೂರೋಪಿನ ಪ್ರತಿಸ್ಪರ್ಧಿ ಸಾಮ್ರಾಜ್ಯಗಳ ನಡುವಿನ ಮುಖ್ಯ ಘರ್ಷಣೆಯೆಂದೆನಿಸಿತ್ತು. ಯುರೋಪಿಯನ್ನಿನ ರಾಜಕಾರಣಿಗಳು ಎರಡು ಮಹಾಯುದ್ಧಗಳನ್ನು ಪ್ರಜಾಪ್ರಭುತ್ವ ಮತ್ತು ಫ್ಯಾಸಿಸಮ್ ನಡುವಿನ ನೈತಿಕ ಹೋರಾಟ ಎಂದು ಯುರೋಪಿಯನ್ ಸಾರ್ವಜನಿಕರ ಮುಂದೆ ಪ್ರಸ್ತುತಪಡಿಸಿದರು. ಆದರೆ ಸಾಮ್ರಾಜ್ಯಶಾಹಿಯ ದೀರ್ಘ ಅನುಭವ ಏಷ್ಯನ್ನರ ೨೦ನೇ ಶತಮಾನದ ಅನುಭವಗಳನ್ನು ಯೂರೋಪಿಯನ್ ಅಧಿಪತಿಗಳ ಅನುಭವಕ್ಕಿಂತ ಸಂಪೂರ್ಣವಾಗಿ ಭಿನ್ನವಾಗಿಸಿತು. ಬಿಳೀ ಜನರ ಜಗತ್ತಿನಲ್ಲಿ ಕುಸಿದುಬಿದ್ದ ಅವರ ಸ್ಥಾನಮಾನಗಳನ್ನು ನೋಡಿ ಏಷ್ಯನ್ನರು ಮತ್ತು ಆಫ್ರಿಕನ್ನರು ಸಮಾನವಾಗಿ ರೋಮಾಂಚನಗೊಂಡಿದ್ದರು.

೧೯೩೦ಕ್ಕೆ ಮೊದಲು ಯಾವ ಸ್ವದೇಶೀ ಚಳುವಳಿಯನ್ನೂ ಮಾಡದ ಬರ್ಮಾ ದೇಶ ೧೯೪೮ರಲ್ಲಿ ಸ್ವತಂತ್ರವಾಯಿತು. ಡಚ್ಚರ ಆಡಳಿತದಲ್ಲಿದ್ದ ಇಂಡೋನೇಷಿಯ ಸುಕರ್ಣೋ ನಾಯಕತ್ವದಲ್ಲಿನ ಸ್ವಾತಂತ್ರ್ಯದ ಹೋರಾಟದಲ್ಲಿ ಜಯಶಾಲಿಯಾಗಿ ೧೯೪೯ರಲ್ಲಿ ಸ್ವತಂತ್ರ ರಾಷ್ಟ್ರವಾಯಿತು. ಯುದ್ಧಾನಂತರದ ಅರಾಜಕತೆ ಮಲಯಾ, ಸಿಂಗಪುರ ಮತ್ತು

ಮಲೇಷಿಯಾ ದೇಶಗಳಲ್ಲಿ ದೀರ್ಘಕಾಲದ ಬಂಡಾಯಗಳಲ್ಲಿ ಮುಳುಗಿಸಿದರೂ, ಯುರೋಪಿಯನ್ನರ ನಿಷ್ಕ್ರಮಣದಲ್ಲಿ ಸಂಶಯವೇ ಇರಲಿಲ್ಲ. ಭಾರತ–ಪಾಕಿಸ್ಥಾನಗಳನ್ನು ಕೊನೆಯಿರದ ಸಂಘರ್ಷದಲ್ಲಿ ಕೆಡವಿದ ವಿನಾಶಕಾರಿ ವಿಭಜನೆ, ಎರಡೂ ರಾಷ್ಟ್ರಗಳಿಂದ ಬ್ರಿಟಿಷರ ೧೯೪೭ರಲ್ಲಿ ಅರೆಅವಸರದ ನಿರ್ಗಮನದಲ್ಲಿ ಕೊನೆಗೊಂಡಿತು; ಮರು ವರ್ಷ, ಪ್ಯಾಲೆಸ್ಟೀನಿನಲ್ಲಿ ಕೂಡ ಬ್ರಿಟನ್ನಿನ ಇದೇ ಬೇಜವಾಬ್ದಾರಿ ಮತ್ತು ಕರ್ತವ್ಯ ವಿಮುಖತೆಯ ಸಂಯೋಗ, ಮಧ್ಯಪ್ರಾಚ್ಯದಲ್ಲಿ ಶಾಂತಿ ಮತ್ತು ಸ್ಥಿರತೆಯ ಸಾಧ್ಯತೆಯನ್ನು ತೀವ್ರವಾಗಿ ಕುಗ್ಗಿಸಿತು.

ಆದರೂ, ವಸಾಹತುಗಳ ಅಧಿಕೃತ ಸ್ವಾತಂತ್ರ್ಯ, ಕೆಲವೊಮ್ಮೆ ಕ್ರಾಂತಿಗಳಿಂದ ಬಂದಿದ್ದರೂ, ೧೯೫೦ರ ದಶಕ ಮತ್ತು ೧೯೬೦ರ ದಶಕದ ಆರಂಭದಲ್ಲಿ ಏಷ್ಯಾ ಮತ್ತು ಆಫ್ರಿಕಾದ ಹೆಚ್ಚಿನ ಭಾಗದಲ್ಲಿ ಬದಲಾವಣೆ ತಂದಿತು. ನೆಹರೂ, ಮಾವೋ, ನಾಸರ್ ಮತ್ತು ಸುಕರ್ಣೋ ಮುಂತಾದ ನಾಯಕರು ಮೊದಲಿಗೆ ಬಹಳ ಜನಪ್ರಿಯತೆ ಮತ್ತು ಪ್ರತಿಷ್ಠೆಯನ್ನು ಪಡೆದು, ಡಾಂಭಿಕ ಪ್ರದರ್ಶನದ ಸ್ವಾತಂತ್ರ್ಯೋತ್ತರ ಅಭಿವೃದ್ಧಿಯಲ್ಲಿ ತೊಡಗಿಸಿಕೊಂಡರು. ನೆಹರು ಅವರ ಮಾತಿನಲ್ಲಿಯೇ ಹೇಳುವುದಾದರೆ, "ಯೂರೋಪ್ ೧೦೦ ಅಥವಾ ೧೫೦ ವರ್ಷಗಳಲ್ಲಿ ಏನೇನೆಲ್ಲಾ ಸಾಧಿಸಿದೆಯೋ ಅದನ್ನು ನಾವು ೧೦ ಅಥವಾ ೧೫ ವರ್ಷಗಳಲ್ಲಿ ಮಾಡಬೇಕು" (ಇತಿಹಾಸವು ಈ ಗುರಿಯನ್ನು ಮೂರ್ಖ ಮಹತ್ವಾಕಾಂಕ್ಷೆಯೆಂದು ಸಾಬೀತುಪಡಿಸಿದೆ: ಈ ದೇಶಗಳು ಇನ್ನೂ ಧಾರ್ಮಿಕ, ಜನಾಂಗೀಯ, ಭೌಗೋಳಿಕ ಮತ್ತು ಆರ್ಥಿಕ ಕ್ರೋಢೀಕರಣಗಳನ್ನು ಸಾಧಿಸಲು ಹೆಣಗಾಡುತ್ತಿವೆ.)

ಹೊಸದಾಗಿ ಸ್ವತಂತ್ರ ಪಡೆದ ಈ ದೇಶಗಳು ನಿರಂತರ ಶೀತಲ ಸಮರದ ನಡುವೆ, ತಮ್ಮ ಪರಿಸರವು ಬೆಳವಣಿಗೆಗೆ ಪ್ರತಿಕೂಲವಾಗಿರುವುದನ್ನು ಮನಗಂಡವು. ಸಮರದ ಎರಡು ಪಕ್ಷಗಳ ನಡುವಿನ ಅರ್ಥಶೂನ್ಯ ಆಯ್ಕೆಯನ್ನು ತಿರಸ್ಕರಿಸಿ, ಮೂರನೆಯ ಮಾರ್ಗವನ್ನು ಕಂಡುಕೊಳ್ಳಲು ಈ ದೇಶಗಳ ಒಂದು ಸಣ್ಣ ಗುಂಪಿನ ನಾಯಕರು ಅಲಿಪ್ತ ಚಳವಳಿಯನ್ನು ಸ್ಥಾಪಿಸಿದರು. ಸೋಷಿಯಲಿಸ್ಟ್ ಯುಗೊಸ್ಲಾವಿಯದ ಜೋಶಿಪ್ ಬ್ರೋಜ್ ಟಿಟೊ, ಜವಾಹರಲಾಲ್ ನೆಹರು, ಇಂಡೋನೇಷಿಯಾದ ಸುಕರ್ಣೋ, ಈಜಿಪ್ಟಿನ ಗಮಲ್ ಅಬ್ದೆಲ್ ನಾಸೆರ್ ಮತ್ತು ಘಾನಾದ ಕ್ವಾಮೆ ನಕ್ರುಮಾ ಅವರು ಅಲಿಪ್ತ ಚಳುವಳಿಯ ಸ್ಥಾಪಕ ಪಿತಾಮಹರಾಗಿದ್ದರು. ಅವರ ಕಾರ್ಯಗಳನ್ನು 'The Initiative of Five' ಎಂದು ಕರೆಯಲಾಗುತ್ತಿತ್ತು. (ಭಾರತವು ತನ್ನ ಹೊಸ ಸಂವಿಧಾನದಲ್ಲಿ, ಸಾರ್ವಭೌಮ ಸಮಾಜವಾದಿ ಜಾತ್ಯತೀತ ಪ್ರಜಾಸತ್ತಾತ್ಮಕ ಗಣರಾಜ್ಯ ಎಂದು ಘೋಷಿಸಿದ್ದು, ಅದರ ಆಡಳಿತದಲ್ಲಿ ಸಮಾಜವಾದಿಯಾಗಿ ಪ್ರಜಾಪ್ರಭುತ್ವವನ್ನು ಸಾಧಿಸುವ ಗುರಿಯನ್ನು ಪ್ರತಿಬಿಂಬಿಸುತ್ತದೆ. ಇದು ಪಾಶ್ಚಾತ್ಯ ಪ್ರಜಾಪ್ರಭುತ್ವದ ವಿಚಾರಗಳಿಂದ ಭಿನ್ನವಾದದ್ದು ಎಂದು ಗಮನಿಸಬಹುದು.)

ಫಿಡೆಲ್ ಕ್ಯಾಸ್ಟ್ರೊ ೧೯೭೯ರಲ್ಲಿ ತನ್ನ ಹವಾನಾ ಘೋಷಣೆಯಲ್ಲಿ ಹೇಳಿದಂತೆ, "ಈ ಸಂಘಟನೆಯ ಉದ್ದೇಶವು ಸಾಮ್ರಾಜ್ಯಶಾಹಿ, ವಸಾಹತುಶಾಹಿ, ನವ–ವಸಾಹತುಶಾಹಿ, ವರ್ಣಭೇದ ನೀತಿ, ಮತ್ತು ಎಲ್ಲ ರೀತಿಯ ವಿದೇಶಿ ಆಕ್ರಮಣಶೀಲತೆ ವಿರುದ್ಧದ ಹೋರಾಟದಲ್ಲಿ ಅಲಿಪ್ತ ರಾಷ್ಟ್ರಗಳು ಜೊತೆಯಾಗಿದ್ದು ರಾಷ್ಟ್ರೀಯ ಸ್ವಾತಂತ್ರ್ಯ, ಸಾರ್ವಭೌಮತ್ವ, ಪ್ರಾದೇಶಿಕ ಸಮಗ್ರತೆ ಮತ್ತು ಅಸಂಘಟಿತ ರಾಷ್ಟ್ರಗಳ ಭದ್ರತೆ, ಆಕ್ರಮಣ, ಪ್ರಾಬಲ್ಯ, ಹಸ್ತಕ್ಷೇಪ ಅಥವಾ ಅಧಿಕಾರ ಮತ್ತು ಮಹಾನ್ ಶಕ್ತಿ ಮತ್ತು ರಾಜಕೀಯ ವಿರುದ್ಧವಾಗಿ ಒಗ್ಗಟ್ಟಿನಿಂದ ಹೋರಾಡುವುದಾಗಿದೆ."

ಅಸಂಘಟಿತ ಚಳವಳಿಯ ಹಲವಾರು ಸದಸ್ಯರು ಒಂದಲ್ಲ ಒಂದು ಮಹಾಶಕ್ತಿಯ ಜೊತೆ ನಿಕಟವಾಗಿದ್ದರೂ, ಚಳವಳಿಯು ಸದಸ್ಯರ ನಡುವಿನ ಹಲವಾರು ಸಂಘರ್ಷಗಳ ಹೊರತಾಗಿಯೂ ಶೀತಲ ಸಮರದ ಉದ್ದಕ್ಕೂ ಒಗ್ಗಟ್ಟು ಉಳಿಸಿಕೊಂಡಿದೆ. ಕಾಲಾನಂತರದಲ್ಲಿ, ಕೆಲವು ಸದಸ್ಯರು ಇತರ ಸದಸ್ಯರೊಂದಿಗೆ ಗಂಭೀರ ಘರ್ಷಣೆಗಳನ್ನು ಎದುರಿಸುತ್ತಿದ್ದರು (ಉದಾಹರಣೆಗೆ ಭಾರತ ಮತ್ತು ಪಾಕಿಸ್ತಾನ, ಇರಾನ್ ಮತ್ತು ಇರಾಕ್). ೧೯೭೯ರಲ್ಲಿ ಸೋವಿಯೆತ್ ಒಕ್ಕೂಟವು ಅಫ್ಘಾನಿಸ್ತಾನವನ್ನು ಆಕ್ರಮಿಸಿದಾಗ ಈ ಆಂದೋಲನವು ತನ್ನ ಸ್ವಂತ ಆಂತರಿಕ ವಿರೋಧಾಭಾಸಗಳಿಂದ ಮುರಿದುಹೋಯಿತು. ಸೋವಿಯೆತ್ ಮೈತ್ರಿಕೂಟಗಳು ಆಕ್ರಮಣವನ್ನು ಬೆಂಬಲಿಸಿದರೂ, ಆಂದೋಲನದ ಇತರ ಸದಸ್ಯರು (ವಿಶೇಷವಾಗಿ ಮುಸ್ಲಿಂ ರಾಷ್ಟ್ರಗಳು) ಅದನ್ನು ಖಂಡಿಸಿದರು.

ಶೀತಲ ಯುದ್ಧವನ್ನು ಎದುರಿಸಲು ಹೂಡಲಾಗಿದ್ದ ಅಲಿಪ್ತ ಚಳುವಳಿಯನ್ನು ಇಂದಿನ ಜಗತ್ತಿನಲ್ಲಿ ಪ್ರಸ್ತುತತೆ ಕಂಡುಕೊಳ್ಳಲು ಪ್ರಯಾಸಪಡುತ್ತಿದೆ. ಇಂದು, ಅಲಿಪ್ತ ಚಳುವಳಿಯ ದೇಶಗಳು ವಿಶ್ವಸಂಸ್ಥೆಯ ಸದಸ್ಯರ ಪೈಕಿ ಸುಮಾರು ಮೂರನೆಯ ಎರಡು ಭಾಗವನ್ನು ಪ್ರತಿನಿಧಿಸುತ್ತವೆ ಮತ್ತು ವಿಶ್ವ ಜನಸಂಖ್ಯೆಯಲ್ಲಿ ೫೫%ರಷ್ಟು ಭಾಗವನ್ನು ಹೊಂದಿರುತ್ತವೆ. ಸದಸ್ಯತ್ವವು ನಿರ್ದಿಷ್ಟವಾಗಿ ಅಭಿವೃದ್ಧಿಶೀಲ ಅಥವಾ ಮೂರನೆಯ–ವಿಶ್ವವೆಂದು ಪರಿಗಣಿಸಲ್ಪಡುವ ರಾಷ್ಟ್ರಗಳಲ್ಲಿ ಕೇಂದ್ರೀಕೃತವಾಗಿದೆ, ಆದರೆ ಅಲಿಪ್ತ ಚಳುವಳಿಯಲ್ಲಿ ಹಲವಾರು ಅಭಿವೃದ್ಧಿ ಹೊಂದಿದ ರಾಷ್ಟ್ರಗಳೂ ಸೇರಿವೆ. ಆಲಿಪ್ತ ರಾಷ್ಟ್ರಗಳ ಸಂಘಟನೆಯ ಸ್ಥಾಪನೆಯ ಮೂಲ ಸಿದ್ಧಾಂತಗಳು ಇಂದಿಗೂ ಪ್ರಸ್ತುತವಾದರೂ ಆ ದೇಶಗಳು ತಮ್ಮ ಸ್ವತಂತ್ರತೆಯನ್ನು ಉಳಿಸಿಕೊಳ್ಳುವಲ್ಲಿ ಅಸಫಲವಾಗಿವೆ. ಅಮೆರಿಕ ಪ್ರಾಬಲ್ಯದ ಮತ್ತು ಪಶ್ಚಿಮ ದೇಶಗಳ ನಿಯಂತ್ರಣದಲ್ಲಿರುವ ಬಂಡವಾಳಶಾಹಿ ಪ್ರಪಂಚದಲ್ಲಿ ಆಲಿಪ್ತ ನೀತಿಯು ಯಾವುದೇ ಪರ್ಯಾಯವನ್ನು ಒದಗಿಸುವುದರಲ್ಲಿ ವಿಫಲವಾಗಿದೆ. ಈ ಚಳುವಳಿಯು ನಾವು ವಾಸಿಸುವ ಏಕದೃಷ್ಟಿಕೋನ–ಪ್ರಪಂಚದ ಯಾವುದೇ ಗಂಭೀರವಾದ ಪ್ರತಿಪಾದನೆಯನ್ನು ಪ್ರತಿನಿಧಿಸುವುದಿಲ್ಲ, ಎಲ್ಲವೂ ಬಂಡವಾಳಶಾಹಿ ಮತ್ತು ಅಮೆರಿಕದ ಪ್ರಾಬಲ್ಯ ಹಾಗೂ ಪಶ್ಚಿಮದ ಪ್ರಜಾಪ್ರಭುತ್ವಗಳಿಂದ ನಿಯಂತ್ರಿಸಲ್ಪಡುತ್ತಿವೆ.

೧೯೬೦ರ ದಶಕದಲ್ಲಿ ಜರುಗಿದ, ಇಂಡೋನೇಷಿಯಾದಲ್ಲಿ ಕಮ್ಯೂನಿಸ್ಟರ ಕಗ್ಗೊಲೆ, ವಿಯಟ್ನಾಮಿನಲ್ಲಿ ತೀವ್ರಗೊಂಡ ಅಮೆರಿಕದ ಧಾಳಿ, ಘಾನದಲ್ಲಿ ನಕ್ರುಮಾ ಸರಕಾರದ ಉರುಳುವಿಕೆ ಮತ್ತು ಅಮೆರಿಕದಲ್ಲಿ ನಿಕ್ಸನ್ ಅಧ್ಯಕ್ಷರಾಗಿದ್ದು, ಇತ್ಯಾದಿಗಳು ಭಾಗಶಃ ಮರೆತುಹೋಗಿದ್ದ ಸಾಮ್ರಾಜ್ಯಶಾಹಿ ಯುಗವು ಮತ್ತೆ ದೊಡ್ಡದಾಗಿ ಮರಳಿದೆ ಎಂದು ಬುದ್ಧಿಜೀವಿಗಳು ತೀರ್ಮಾನಕ್ಕೆ ಬರುವಂತೆ ಮಾಡಿದವು. ಅಮೆರಿಕವು ನಿರ್ವಿವಾದವಾಗಿ ವಿಶ್ವದ ಬಲವಾದ ರಾಷ್ಟ್ರವಾಗುವುದರ ಜೊತೆಗೆ ತನ್ನ ಪ್ರಭಾವವನ್ನು ಎಲ್ಲೆಡೆ ಬೀರತೊಡಗಿತು. ೧೯೮೦ರ ವೇಳೆಗೆ ಸೋವಿಯತ್ ಒಕ್ಕೂಟ ದುರ್ಬಲವಾಗುತ್ತ ೧೯೯೧ರಲ್ಲಿ ಪತನಗೊಂಡಿತು.

ಪಾಶ್ಚಿಮಾತ್ಯ ದೇಶಗಳ ಪ್ರಭಾವದಿಂದ ಉಳಿದ ಪ್ರಪಂಚಕ್ಕೆ ಆಗಿರುವ ಪ್ರಯೋಜನಗಳ ಬಗ್ಗೆ ಸಾಕಷ್ಟು ಬರಹಗಳು ಪಶ್ಚಿಮದಲ್ಲಿ ಬಂದಿವೆ, ಆಶ್ಚರ್ಯದ ಸಂಗತಿಯೆಂದರೆ, ಸಾಮ್ರಾಜ್ಯದ ಬದಲಾದ ಇತಿಹಾಸದ ಬಗ್ಗೆ ಅಥವಾ ಪಾಶ್ಚಿಮಾತ್ಯ ಜಗತ್ತಿನೊಡನೆ ಭಾರತ ಮತ್ತು ಚೀನಾ ದೇಶಗಳು ಹೇಗೆ ಸರಿಸಮವಾಗಲು ಹೆಣಗುತ್ತಿವೆ. ಒಂದೊಂದೇ ಏಷ್ಯನ್ ದೇಶಗಳ ಬರಹಗಾರರು, ಚಿಂತಕರು ಮತ್ತು ಚಳುವಳಿಗಾರರು ದೃಢೀಕರಿಸಿರುವ ರೈತರು ಮತ್ತು ಕುಶಲಕರ್ಮಿಗಳ ಜೀವನ ಪಲ್ಲಟ, ಸಾಮಾನ್ಯ ಜನರ ಜೀವನಮಟ್ಟದ ಕುಸಿತ ಮತ್ತು ಸ್ಥಳೀಯ ಸಂಸ್ಕೃತಿಗಳ ವಿನಾಶ, ಇತ್ಯಾದಿಗಳ ಮೂಲಕ ದೌರ್ಜನ್ಯಗಳ ಬಗ್ಗೆ ಉಲ್ಲೇಖ ಇಲ್ಲವೇ ಇಲ್ಲ ಎನ್ನುವಷ್ಟು ಕಡಿಮೆ. ಏಷ್ಯಾ ಮತ್ತು ಆಫ್ರಿಕನ್ ದೇಶಗಳ ಈ ಮೊದಲಿನ ನಾಯಕರು ತಮ್ಮ ವಿಶೇಷ ದೃಷ್ಟಿಕೋನದಿಂದ ಯುರೋಪ್ ಮತ್ತು ಅಮೆರಿಕದ ರಾಜಕೀಯ ಮತ್ತು ಆರ್ಥಿಕ ಆದರ್ಶಗಳನ್ನು ಹೇಗೆ ಪರೀಕ್ಷಿಸಿದರು ಮತ್ತು ಅದಕ್ಕೆ ತಕ್ಕಂತೆ ಸ್ವಯಂ-ಬಲಪಡಿಸುವ ಕೆಲಸಗಳನ್ನು ಹೇಗೆ ನಿರ್ವಹಿಸಿದರು ಎನ್ನುವುದರ ಬಗ್ಗೆ ನಾವು ಹೆಚ್ಚು ಕಲಿತಿರುವುದು ಇನ್ನೂ ಕಡಿಮೆ..

ಆದರೆ ಈ ಪಾಶ್ಚಾತ್ಯ ಪ್ರಭಾವಕ್ಕೆ ಹೇಗೆ ಪ್ರತಿಕ್ರಿಯಿಸುವುದು? ಚೀನಾ ದೇಶವು ಬೆಳವಣಿಗೆಯ ಮತ್ತು ಶಕ್ತಿಪ್ರದರ್ಶನದ ಮಾರ್ಗವನ್ನು ಆರಿಸಿಕೊಂಡಿದೆ. ಡೆಂಗ್ ಕ್ಸಿಯೋಪಿಂಗ್ ಅವರು ೧೯೭೦ರ ದಶಕದ ಅಂತ್ಯದಲ್ಲಿ ಮಾವೋವಾದದಿಂದ ಬೇರ್ಪಟ್ಟು ಮಾರುಕಟ್ಟೆ ಆರ್ಥಿಕತೆಯ ಪರಿವರ್ತನೆಯ ಮೇಲ್ವಿಚಾರಕನಾಗುತ್ತಾರೆ. ಚೀನಾದಾದ್ಯಂತ ಎದ್ದು ಕಾಣುವ ಬಿಲ್ಬೋರ್ಡುಗಳ ಪ್ರದರ್ಶನದ ಮೂಲಕ "ನಮ್ಮ ದೇಶವು ಅಭಿವೃದ್ಧಿಗೊಳ್ಳಬೇಕು" ಎಂದು ಘೋಷಿಸುತ್ತಾರೆ. ಕಮ್ಯುನಿಸ್ಟ್ ಪಾರ್ಟಿಯ ಪಾಲಿಟ್ ಬ್ಯೂರೋಗೆ ಮಾರ್ಗದರ್ಶನ ಮಾಡುವುದರ ಜೊತೆಗೆ "ನಾವು ಅಭಿವೃದ್ಧಿ ಹೊಂದದಿದ್ದರೆ ಹಿಂಸೆಗೆ ಒಳಗಾಗುವೆವು. ಅಭಿವೃದ್ಧಿಯೊಂದೇ ನಮಗಿರುವ ಏಕೈಕ ಕಟು ಸತ್ಯ" ಎಂದು ಹೇಳುತ್ತಾರೆ. ಅವರ ನಂತರದ ಚೀನೀ ನಾಯಕರು ಅದೇ ರೀತಿಯ ಆಕ್ರಮಣಕಾರಿ ವಿಧಾನವನ್ನು ಮುಂದುವರೆಸಿದ್ದಾರೆ. ಭಾರತದಲ್ಲಿ ನರೇಂದ್ರ ಮೋದಿಯ ರಾಷ್ಟ್ರೀಯ ಅಭಿವೃದ್ಧಿಯೂ ಕೂಡ ಇದೇ ಆಕ್ರಮಣಶೀಲ ಮಾರ್ಗವನ್ನು ಆರಿಸಿಕೊಂಡಿದೆ. "ನಾವು ಬಲವಾಗಿ

ಬೆಳೆಯದಿದ್ದರೆ, ನಾವು ಪಕ್ಕಕ್ಕೆ ದೂಕಲ್ಪಡುತ್ತೇವೆ. ನಮ್ಮ ಏಳ್ಗೆಗೆ ಅಭಿವೃದ್ಧಿಯೊಂದೇ ಏಕೈಕ ಮಾರ್ಗ".

ಆದಾಗ್ಯೂ, ಭಾರತದ ಅವಳಿ ಸಹೋದರಿ, ಪಾಕಿಸ್ತಾನವು ಸ್ವಾತಂತ್ರ್ಯದ ನಂತರ ಹೆಚ್ಚು ಕಷ್ಟಗಳನ್ನು ಅನುಭವಿಸಿದೆ. ಪಾಕಿಸ್ತಾನದ ನಾಯಕ ಜುಲ್ಫಿಕಾರ್ ಅಲಿ ಭುಟ್ಟೋ ಅವರು, The Myth of Independence (೧೯೬೯) ಎಂಬ ತಮ್ಮ ಪುಸ್ತಕದಲ್ಲಿ "ನಮ್ಮ ಜನರ ಜೀವನದ ಮೇಲೆ ಪ್ರಭಾವ ಬೀರುವ ನಿರ್ಧಾರಗಳನ್ನು ಮಾಡುವ ಅಪಾರ ಶಕ್ತಿಯನ್ನು ಪೋಸ್ಟ್-ಕಲೊನಿಯಲ್ ನಾಯಕರಾದ ನಾವು ಹೊಂದಿದ್ದೇವೆ" ಎಂದು ಎಚ್ಚರಿಕೆ ನೀಡಿದರು. ಅಮೆರಿಕಾ ಪರವಾದ ಸೇನಾ ದಳದಿಂದ ಅವರು ಸ್ವತಃ ಪದಚ್ಯುತಿಗೊಂಡರು ಮತ್ತು ತದನಂತರ ಕೊಲ್ಲಲ್ಪಟ್ಟರು. ಭುಟ್ಟೋ ಅವರು ಉಳಿದ ಅನೇಕ ಏಷ್ಯನ್ ಮತ್ತು ಆಫ್ರಿಕನ್ ನಾಯಕರಂತೆ ಸದುದ್ದೇಶದಿಂದ ತಮ್ಮ ದೇಶವನ್ನು ಮೇಲೆ ತರಲು ಕಷ್ಟಪಟ್ಟರು. ಆದರೆ ಆ ನಾಯಕರೆಲ್ಲರ ಸಮಸ್ಯೆಗಳು ಒಂದೇ ತೆರನಾಗಿದ್ದವು – ಶತಮಾನಗಳ ಹಿಂದುಳಿಯುವಿಕೆ, ಪ್ರಾಚೀನ ಆರ್ಥಿಕತೆ, ಅನಕ್ಷರತೆ, ಧಾರ್ಮಿಕ ಮತಾಂಧತೆ, ಬುಡಕಟ್ಟು ಕುರುಡುತನ, ದೀರ್ಘಕಾಲದ ಹಸಿವಿನ ಸಮಸ್ಯೆ, ಸಾಮ್ರಾಜ್ಯಶಾಹಿಗಳ ಬೆದರಿಕೆಗಳು, ಭ್ರಷ್ಟಾಚಾರದ ದುರಾಶೆ, ನಿರುದ್ಯೋಗ, ಕೆಂಪು ಪಟ್ಟಿ, ಇತ್ಯಾದಿಗಳು..ಒಂದೇ, ಎರಡೇ..? ಅವರೂ ಕೂಡ ಸಮರ್ಥ ನಾಯಕತ್ವ ಕೊಡುವುದರಲ್ಲಿ ವಿಫಲರಾದರು. ಅವರ ನಂತರ ಸರ್ವಾಧಿಕಾರ ಶೀಘ್ರದಲ್ಲೇ ಅನುಸರಿಸುತ್ತದೆ, ಆ ಸರ್ವಾಧಿಕಾರಿಯೂ ಕೂಡ ಕೆಲವು ವರ್ಷಗಳ ನಂತರ ಪದಚ್ಯುತಗೊಳ್ಳುತ್ತಾನೆ..

೧೯೬೦ರ ಅಂತ್ಯದ ವೇಳೆಗೆ ಅನೇಕ ಪೋಸ್ಟ್-ಕಲೊನಿಯಲ್ ನಾಯಕರ ಅಸಮರ್ಥತೆ, ಭ್ರಷ್ಟಾಚಾರ ಮತ್ತು ಕ್ರೂರತೆಯು ಸ್ಪಷ್ಟವಾಗಿ ಕಂಡುಬಂದಿದೆ. ಸ್ವತಂತ್ರಗೊಂಡ ಹಲವಾರು ವಸಾಹತುಗಳಲ್ಲಿ ರಾಜಕೀಯವಾಗಿ ಅಶಿಕ್ಷಿತರಾಗಿದ್ದ ಸ್ಥಳೀಯ ನಾಯಕರಿಂದ ದಂಗೆಗಳು ಮತ್ತು ನಾಗರಿಕ ಯುದ್ಧಗಳು ದಿನನಿತ್ಯದ ಸಂಗತಿಗಳಾದವು. ಇದರ ಮುಂದೆ ಯುರೋಪಿಯನ್ ಸಾಮ್ರಾಜ್ಯಗಳು ಶಾಂತಿಯುತವಾದುವೆಂದೆನಿಸುತ್ತಿತ್ತು. ಈ ದಶಕಗಳಲ್ಲಿ ವಿ. ಎಸ್. ನೈಪಾಲ್ ಅವರ "half-made postcolonial Societies" ನ ಚಿತ್ರಣಗಳು ಅತೀವವಾಗಿ ಪ್ರಭಾವಶಾಲಿಯಾಗಿದ್ದವು.

ಕಾನ್ರಾಡ್ ಅವರ ಕಾಂಗೋ ಪ್ರಯಾಣವನ್ನು ಅವಲೋಕಿಸಿದ ನೈಪಾಲ್ ಅವರಿಗೆ ಸಾಮ್ರಾಜ್ಯಶಾಹಿ ಮತ್ತು ವಸಾಹತಿಶಾಹಿಯ ನಂತರದ ಯುಗಗಳ ನಡುವೆ ವ್ಯತ್ಯಾಸವೇನೂ ಕಾಣುವುದಿಲ್ಲ. ಇದನ್ನು ಅವರೇ ವಿವರಿಸಿದಂತೆ, "Heart of Darkness" ನಲ್ಲಿನ ಪ್ರಮುಖ ಪಾತ್ರವಾದ ಕರ್ಟ್ಜನ ನಿರಾಕರಣವಾದವನ್ನು ಆಫ್ರಿಕನ್ ನಿರಾಕರಣವಾದಕ್ಕೆ ಹೋಲಿಸುತ್ತ, ಆಫ್ರಿಕಾದ ಪುರುಷರು ತಮ್ಮನ್ನು ಮೂರ್ಖರನ್ನಾಗಿಸಿದುದಕ್ಕೆ ಅತೀವ ಕೋಪಗೊಳ್ಳುತ್ತಿದ್ದರು ಎಂದು ಮಾತ್ರ ಹೇಳಿ ವಸಾಹತುಶಾಹಿಗಳ ದೌರ್ಜನ್ಯವನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ. ನೈಪಾಲ್ ಅವರು ಕಾಂಗೋದಲ್ಲಿ ನಡೆದ ಶೀತಲ-ಯುದ್ಧ ತಂತ್ರಗಳನ್ನಾಗಲೀ ಮತ್ತು

ಇರಾನಿನ ಷಾನ ಕ್ರೂರ ಆಡಳಿತವನ್ನಾಗಲೀ (ಪ್ರಜಾಪ್ರಭುತ್ವದ ಚುನಾಯಿತ ಮೊಸಡೆಗ್ ಬದಲಿಗೆ ಪಶ್ಚಿಮದ ಸಕ್ರಿಯ ಸಹಾಯದಿಂದ ಷಾ ಅಧಿಕಾರಕ್ಕೇರುತ್ತಾನೆ) ಟೀಕಿಸುವುದಿಲ್ಲ. ಆದರೆ ಇಸ್ಲಾಂನ ಸ್ವಾಭಾವಿಕ ದೋಷಗಳನ್ನು ಎತ್ತಿ ತೋರಿಸುತ್ತಾರೆ.

ಸಾಹಿತ್ಯಿಕ ಪ್ರಾಧಿಕಾರತೆಯ ಮೂಲಕ ತ್ವರಿತವಾಗಿ ಖ್ಯಾತಿ ಪಡೆದಿದ್ದರೂ, ನೈಪಾಲ್ ಅವರು ಬಹುಪಾಲು ಸಾಂಸ್ಕೃತಿಕ ಮತ್ತು ಸುಳ್ಳು–ಸಾಮಾನ್ಯೀಕರಣಗಳನ್ನು ಪ್ರಾಪಂಚಿಕ ಸಮಸ್ಯೆಗಳಿಗೆ ನೀಡುತ್ತಾರೆ. ಉದಾಹರಣೆಗೆ, ಮುಸ್ಲಿಂ ದೇಶಗಳು ಹಿಂದುಳಿದಿರುವುದಕ್ಕೆ "ಇಸ್ಲಾಂ ಧರ್ಮ"ವೇ ಕಾರಣ, ಭಾರತದ್ದು "ಗಾಯಗೊಂಡ ನಾಗರಿಕತೆ" ಮತ್ತು "ಆಫ್ರಿಕನ್ ನಿರಾಕರಣವಾದವು" ಆಫ್ರಿಕಾವನ್ನು ಮಾಡಿದೆ, ಇತ್ಯಾದಿ. ಈ ರೀತಿಯ ಅಸಂಬದ್ಧ ವಿಚಾರಗಳಿಂದ ಪಶ್ಚಿಮವಲ್ಲದ ದೇಶಗಳ ಚರಿತ್ರೆಯನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ ಅವರ ಸಮಸ್ಯೆಗಳ ಮೇಲೆ ತೀರ್ಮಾನ ಕೊಡುವುದು ನಿರಾಶೆಯನ್ನುಂಟುಮಾಡುತ್ತದೆ.

೧೯೯೦ರಲ್ಲಿ ನ್ಯೂಯಾರ್ಕಿನ ಬಲಪಂಥೀಯ ವಿಚಾರವಾದಿಗಳ ಜೊತೆಗೆ ಮಾತನಾಡಿದ ನೈಪಾಲ್ ಅವರು, ಶೀತಲ–ಯುದ್ಧದಲ್ಲಿ ಜಯಗಳಿಸಲು ಕಾರಣವಾದ ಮತ್ತು ಪಶ್ಚಿಮದಲ್ಲಿ ಸೃಷ್ಟಿಯಾದ 'ಸಾರ್ವತ್ರಿಕ ನಾಗರಿಕತೆ' ಯನ್ನು ಪಡೆಯುವ ಮೂಲಕ ಎಲ್ಲಾ ಪ್ರತಿಸ್ಪರ್ಧಿ ಸಿದ್ಧಾಂತಗಳು ಮತ್ತು ಮೌಲ್ಯಗಳು ಸ್ಫೋಟಿಸುತ್ತವೆ ಎಂದು ಹೇಳಿದರು. ನೈಪಾಲ್ ಅವರಂತಹ ಶಕ್ತಿಯುತ, ಪ್ರಭಾವಶಾಲಿ ಧ್ವನಿಯಿಂದ 'ನಿಜ ಕಥೆ'ಗೆ ಹಾನಿಯಾಯಿತು. ನೈಪಾಲ್ ಅವರಿಂದ ಇನ್ನೂ ಹೆಚ್ಚಿನ ಸಹಾನುಭೂತಿಯ ನಿರೀಕ್ಷಣೆಯಿದ್ದವರಿಗೆ ನಿರಾಸೆಯಾಯಿತು.

ಹಾಗಾಗಿ, ಪಶ್ಚಿಮವು ಶೀತಲ ಸಮರದ ಅಂತ್ಯ ಮತ್ತು ೯/೧೧ರ ನಡುವೆ ಸ್ವಯಂ–ಅಭಿನಂದನಾ ಚಿತ್ತಸ್ಥಿತಿಯಲ್ಲಿತ್ತು: ಪಾಶ್ಚಾತ್ಯ–ಶೈಲಿಯ ಪ್ರಜಾಪ್ರಭುತ್ವ ಮತ್ತು ಬಂಡವಾಳಶಾಹಿಯು ಧರ್ಮ ಮತ್ತು ಸಂಸ್ಕೃತಿಯ ವಿಶಿಷ್ಟತೆಯನ್ನು ನಿರ್ಮೂಲನೆ ಮಾಡುವುದು ಮಾತ್ರವಲ್ಲದೆ ಅಂತ್ಯಗೊಳಿಸಲು ಘೋಷಣೆ ಮಾಡಲು ಕೂಡಾ ತಯಾರಾಗಿತ್ತು ಉದಾಹರಣೆಗಾಗಿ ಫ್ರಾನ್ಸಿಸ್ ಫಕುಯಾಮಾ ಅವರು "ಇದು ಕೇವಲ ಶೀತಲ ಸಮರದ ಕೊನೆಯಲ್ಲ, ಅಥವಾ ಒಂದು ತಾತ್ಕಾಲಿಕ ಮಧ್ಯಂತರ ಸಮಯವಲ್ಲ; ಮಾನವಕುಲದ ಆದರ್ಶವಾದಿ ವಿಕಾಸದ ಕೊನೆ. ಪಾಶ್ಚಾತ್ಯ ಶೈಲಿಯ ಪ್ರಜಾಪ್ರಭುತ್ವದ ವಿಶ್ವವ್ಯಾಪಿತ್ವ ಮಾನವ ಜನಾಂಗದ ಅಂತಿಮ ಸರಕಾರ."[೮] ಎಂದಿದ್ದರು. ಪಶ್ಚಿಮ ದೇಶಗಳು ಅಲ್–ಖೈದಾದ ಆಕ್ರಮಣವನ್ನು ಕೇವಲ ತಮ್ಮ ರಾಜಕೀಯ ಅಥವಾ ಆರ್ಥಿಕತೆಯ ವಿರೋಧಿ ಎಂದು ಭಾವಿಸದೆ, ಇಸ್ಲಾಂ ಧರ್ಮವನ್ನು ಪಶ್ಚಿಮದ ಉದಾರವಾದದ ಅಸಹಜ ವಿರೋಧಿ ಎಂದು ಕರೆದರು.

ನಾವು ೯/೧೧ ನಂತರದ ಇತ್ತೀಚಿನ ವಿದ್ಯಮಾನಗಳನ್ನು ಗಮನಿಸಿದರೆ, ಕಳೆದ ಶತಮಾನದ ಇತಿಹಾಸದ ಹ್ಯಾಂಗೋವರ್ ಪರಿಣಾಮವನ್ನು ನೋಡಬಹುದು. ಒಟ್ಟೋಮನ್ ಸಾಮ್ರಾಜ್ಯದ ನಂತರ ೧೯೩೦ರ ದಶಕದಲ್ಲಿ ಬ್ರಿಟನ್ ರಚಿಸಿದ ಇರಾಕಿನಂತಹ ದೇಶವು

ದುರಂತದ ಪರಿಣಾಮಗಳನ್ನು ಕಂಡಿದೆ. ಯಾವ ಮುಂದಾಲೋಚನೆಯೂ ಇಲ್ಲದೆ ಶಿಯಾ, ಸುನ್ನಿ ಮತ್ತು ಕುರ್ದಿಶ್ ಜನಸಂಖ್ಯೆಯ ಮಿಶ್ರಣದೊಂದಿಗೆ ಅನಿಯಂತ್ರಿತವಾಗಿ ಸ್ಥಾಪಿಸಲ್ಪಟ್ಟ ಇರಾಕ್ ರಾಷ್ಟ್ರವು ನವ-ವಸಾಹತು ಶಕ್ತಿಯಿಂದ ಉಂಟಾದ ಹಾನಿಕಾರಕ ಯುದ್ಧದ ಕಾರಣದಿಂದ ಅರಾಜಕತೆಯ ಮೂಲಕ ನಾಶವಾಗುವ ಸ್ಥಿತಿಯನ್ನು ಮುಟ್ಟಿತ್ತು. ಇರಾಕ್ ದೇಶಕ್ಕೆ ಮತ್ತೆ ಸುಧಾರಿಸಿಕೊಳ್ಳಲು ಬಹಳ ಸಮಯ ಹಿಡಿಯುತ್ತದೆ. ಮಧ್ಯಪ್ರಾಚ್ಯದಲ್ಲಿ ಪ್ರಜಾಪ್ರಭುತ್ವವನ್ನು ಸ್ಥಾಪಿಸುವುದು ಇರಾಕ್ ಯುದ್ಧದ ಆಶಯವಾಗಿದ್ದರೂ ಇರಾಕ್-ಬುಷ್ ಯುದ್ಧವು ಬಡವರ ಮತ್ತು ಅಶಿಕ್ಷಿತ ಜನರ ವಿರುದ್ಧ ಪಾಶ್ಚಾತ್ಯರ ಅಹಂಕಾರದ ಪ್ರದರ್ಶನವಾಗಿತ್ತು. ಪಾಶ್ಚಾತ್ಯ ಜಗತ್ತು ಕೊಳೆಗೆಟ್ಟ ಅನಾಗರಿಕರನ್ನು ಮೇಲೆತ್ತಲು ಇನ್ನೊಮ್ಮೆ ಬರಹೊರಟಿದೆ!

೨೦ನೇ ಶತಮಾನದಲ್ಲಿ ಅನೇಕ ಪ್ರಾದೇಶಿಕ ಸಾಮ್ರಾಜ್ಯಗಳನ್ನು ಪದಚ್ಯುತಗೊಳಿಸಿದ ವಿಶ್ವದ ವಿವಿಧ ರಾಷ್ಟ್ರಗಳ ಜನರು ೨೧ನೆಯ ಶತಮಾನದಲ್ಲಿ ಅಮೇರಿಕದ ಅಧಿಪತ್ಯಕ್ಕೆ ಮೊಣಕಾಲು ಬಗ್ಗಿಸಲು ಸಿದ್ಧರಾಗಿದ್ದಾರೆಯೆ? "full-spectrum dominance" ನಂತಹ ಕಲ್ಪನೆಗಳನ್ನು ಅಳವಡಿಸಿಕೊಳ್ಳುವ ಅಮೆರಿಕ ಮತ್ತು ಯೂರೋಪಿಯನ್ ನೀತಿನಿರೂಪಕರು ತಮ್ಮಲ್ಲಿ ಈ ಸರಳ ಪ್ರಶ್ನೆಯನ್ನು ಕೇಳಿಕೊಳ್ಳಲು ವಿಫಲರಾಗಿದ್ದಾರೆ: ಎರಡು ಗೆಲ್ಲಲಾಗದ ಯುದ್ಧಗಳು ಮತ್ತು ಅಸಹನೀಯವಾದ ರಾಷ್ಟ್ರ-ನಿರ್ಮಾಣದ ಪ್ರಯತ್ನಗಳು ಮತ್ತು ಅನೇಕ ಅನವಶ್ಯಕ ಪ್ರಾಣಹಾನಿ ನಷ್ಟಗಳ ನಂತರ (ಇರಾಕ್ ಯುದ್ಧದಲ್ಲಿ ಮಡಿದ ಇರಾಕಿಯರ ಸಂಖ್ಯೆಯೇ ೬೦೦,೦೦೦ದಿಂದ ಒಂದು ಮಿಲಿಯ ಎಂದು ಅಂದಾಜಿಸಲಾಗಿದೆ), ಪಶ್ಚಿಮದ ಸಾಮರ್ಥ್ಯದ ಬಗ್ಗೆ ನವ-ಸಾಮ್ರಾಜ್ಯಶಾಹಿಗಳು ಪ್ರಸ್ತುತಪಡಿಸುವ ಈ ಪ್ರಲೋಭನಕಾರಿ ಕಲ್ಪನೆಗಳು ಭರವಸೆ ಹುಟ್ಟಿಸುವುದಿಲ್ಲ, ವಿಶ್ವಾಸಾರ್ಹವಾಗಿಯೂ ಕಾಣುವುದಿಲ್ಲ. ಜಗತ್ತಿಗೆ ಈ 'ಪಶ್ಚಿಮದ ಪ್ರಜಾಪ್ರಭುತ್ವ'ವನ್ನು ಮಾರಾಟಮಾಡುವ ಅಖಂಡ ಮಿನಿ-ಉದ್ಯಮವೇ ಅಸ್ತಿತ್ವದಲ್ಲಿದೆ. ಇತಿಹಾಸದ ವ್ಯಾಖ್ಯಾನ ಮಾಡುವುದು ಖಂಡಿತವಾಗಿಯೂ ದೇಶಭಕ್ತಿಯ ಉದ್ಯಮವೇ, ಮತ್ತು ಇಂದು, ಟ್ರಂಪ್ ಅಮೆರಿಕಾವನ್ನು ಮತ್ತೆ ಬಲಶಾಲಿಯನ್ನಾಗಿ ಮಾಡಲು ಅವನದೇ ಹಾದಿ ಹಿಡಿದಿದ್ದಾನೆ!

ಅರಬ್ ಪ್ರತಿಭಟನೆ ಮತ್ತು ಅದರ ನಂತರದ ದುಷ್ಪರಿಣಾಮಗಳು ತೋರಿಸುವಂತೆ, ಆ ಭಾಗದಲ್ಲಿ ಬಹುಕಾಲದಿಂದ ಕಾಯುತ್ತಿದ್ದ ಭ್ರಮೆ ಮತ್ತು ಸುಳ್ಳುಗಳಿಂದ ಬಿಡುಗಡೆ ಹೊಂದುವ ಪ್ರಯತ್ನಗಳು ಇನ್ನೂ ಮುಂದುವರೆಯುತ್ತವೆ; ಇದೊಂದು ದೀರ್ಘ ಮತ್ತು ಪ್ರಯಾಸದಾಯಕ ಪ್ರಕ್ರಿಯೆಯಾಗಿರುತ್ತದೆ. ಇದೇ ರೀತಿ ಪಶ್ಚಿಮದಲ್ಲೂ ಸಹ ಸಾಮ್ರಾಜ್ಯಶಾಹಿಯ ಮೂಢ ನಂಬಿಕೆ ಮತ್ತು ವರ್ತನೆಗಳಿಂದ ಶುದ್ಧೀಕರಿಸುವ ಪ್ರಯತ್ನವು ಪ್ರಾರಂಭ ಸ್ಥಿತಿಯಲ್ಲಿದೆ.

ಆದರೆ ನವ-ಸಾಮ್ರಾಜ್ಯಶಾಹಿಯ ಕೊನೆಯ ದಶಕದ 'ಸೃಜನಾತ್ಮಕ ನಾಶ'ವು ದೂರದ ಪ್ರದೇಶಗಳಲ್ಲಿನ ಲಕ್ಷಾಂತರ ಜೀವಗಳನ್ನು, ಅಪರಾಧಿಗಳ ಮತ್ತು ಅದರ

ಪ್ರೋತ್ಸಾಹಕರಿಗೆ ಕಂಡೂ ಕಾಣದಂತೆ, ನಾಶಪಡಿಸಿತು. ಪಶ್ಚಿಮದ ಸ್ವಘೋಷಿತ ಪಾತ್ರದ ಮೋಸಮಾಡುವ ಸ್ವರೂಪವೇ ಯುದ್ಧದಲ್ಲಿ ಬಹಿರಂಗವಾಗಿ ವ್ಯಕ್ತಗೊಳ್ಳುವ ಹಿಂಸೆ, ನಾಶ, ದುಃಖ ಮತ್ತು ಇತರರ ಮರಣಕ್ಕೆ ದಾರಿಮಾಡಿಕೊಟ್ಟಿತು ಎನ್ನುವುದು ಈಗ ಸ್ಪಷ್ಟವಾಗಿದೆ.. ಅಮೆರಿಕಾದ ಮುಂದುವರಿದ ತಂತ್ರಜ್ಞಾನ ಯುದ್ಧವನ್ನು ನಂಜುರಹಿತವನ್ನಾಗಿಸಿದೆ: ದೂರದ ಪ್ರದೇಶಗಳಲ್ಲಿ ನಡೆಯುವ ಯುದ್ಧವನ್ನು ಮತ್ತು ನಿಖರವಾಗಿ ಹಾಕಿದ ಬಾಂಬುಗಳಿಂದ ನಾಶವಾಗುವ ಕಟ್ಟಡಗಳನ್ನು ಸಂಜೆ ಸುದ್ದಿಗಳಲ್ಲಿ ಅಮೆರಿಕನ್ನರು ವೀಕ್ಷಿಸುತ್ತಾರೆ. ಯುದ್ಧದಿಂದ ಇಡೀ ರಾಷ್ಟ್ರ ಉಪವಾಸ ಮಲಗುವುದನ್ನು ನಾವು ನೋಡುವುದೇ ಇಲ್ಲ. ಈ ಪರಿಸ್ಥಿತಿಗೆ ಯೆಮನ್ ದೇಶವು ಇತ್ತೀಚಿನ ಬಲಿಪಶು, ಸೌದಿ ಅರೇಬಿಯಾವು ಪಶ್ಚಿಮದ ಪರವಾಗಿ ಯೆಮನ್ನಿನ ಹೌಥಿ ಜನಾಂಗದ ವಿರುದ್ಧ ಕ್ರೂರ ಮತ್ತು ಸಿನಿಕ ಯುದ್ಧ ಮಾಡುತ್ತಿದೆ.

ಇದಲ್ಲದೆ, ಆತ್ಮಶ್ಲಾಘನೆಯ ಇತಿಹಾಸ, ಪಾಶ್ಚಾತ್ಯ ಆದರ್ಶ, ಸಾಧನೆ, ವೈಫಲ್ಯ ಮತ್ತು ಸವಾಲುಗಳ ಬಗ್ಗೆ ಇನ್ನಿಲ್ಲದ ವ್ಯಾಮೋಹ – ಪ್ರಪಂಚದ ಉಪಯುಕ್ತ ತಿಳುವಳಿಕೆಯನ್ನು ಮರೆಮಾಡಬಹುದು. ಯೂರೋಪ್ ಮತ್ತು ಅಮೆರಿಕಾದಲ್ಲಿನ ಬಹುತೇಕ ಜನರಿಗೆ, ಇತಿಹಾಸವೆಂದರೆ ಎರಡನೆಯ ಮಹಾಯುದ್ಧದ ವಿಜಯಗಳು ಮತ್ತು ಸೋವಿಯತ್ ಕಮ್ಯುನಿಸಮ್ಮಿನೊಡನೆಯ ದೀರ್ಘಕಾಲದ ಶೀತಲ ಸಮರಗಳಿಗೆ ಸೀಮಿತವಾಗಿದೆ. ಇದಕ್ಕೆ ವ್ಯತಿರಿಕ್ತವಾಗಿ, ವಿಶ್ವದ ಜನಸಂಖ್ಯೆಯ ಬಹುಪಾಲು ಜನರಿಗೆ, ಆಧುನಿಕ ಜಗತ್ತಿನ ಕೇಂದ್ರವೆಂದರೆ ಏಷ್ಯಾ ಮತ್ತು ಐರೋಪ್ಯ ಸಾಮ್ರಾಜ್ಯಗಳ ಪತನದ ನಂತರ ಇನ್ನೂ ಪೂರ್ಣವಾಗಬೇಕಿರುವ ಏಷ್ಯಾ ಮತ್ತು ಆಫ್ರಿಕಾದ ಬೌದ್ಧಿಕ ಮತ್ತು ರಾಜಕೀಯ ಜಾಗೃತಿ. ಬಹುಚರ್ಚಿತ ಪಶ್ಚಿಮದಿಂದ ಪೂರ್ವಕ್ಕೆ ಶಕ್ತಿಕೇಂದ್ರಗಳ ವರ್ಗಾವಣೆ ಆಗಬಹುದು ಅಥವಾ ಆಗದಿರಬಹುದು. ಆದರೆ ನವ–ಸಾಮ್ರಾಜ್ಯಶಾಹಿಯ ಅಂಧ ಅನುಯಾಯಿಗಳು ಏಷ್ಯಾದ ಮೊದಲ ತಲೆಮಾರಿನ ಚಿಂತಕರು, ಬರಹಗಾರರು ಮತ್ತು ನಾಯಕರ ಕನಸಾಗಿದ್ದ ಈ ಕಾಸ್ಮೋಪಾಲಿಟನ್ ಭವಿಷ್ಯದ ಕಡೆಗಿನ ನಮ್ಮ ಅಭಿವೃದ್ಧಿಯನ್ನು ನಿರಾಕರಿಸುತ್ತಾರೆ.

**ಉಪಸಂಹಾರ**

ಇಂದು ಇಪ್ಪತ್ತನೇ ಶತಮಾನದ ಆರಂಭದಲ್ಲಿ ಆಳುತ್ತಿದ್ದ ವಸಾಹತು ಶಕ್ತಿಗಳು (ಫ್ರಾನ್ಸ್, ಬ್ರಿಟನ್, ಬೆಲ್ಜಿಯಂ) ತಮ್ಮ ಹಿಂದಿನ ಅಸ್ತಿತ್ವಗಳ ಕೇವಲ ನೆರಳುಗಳಾಗಿವೆ. ವಿಪರ್ಯಾಸವೆಂದರೆ, ಸ್ಪೇನ್ ಮತ್ತು ಪೋರ್ಚುಗಲ್ಲಿನ ಹಳೆಯ ಕಡಲ ವಸಾಹತು ಶಕ್ತಿ ಇನ್ನೂ ದುರ್ಬಲವಾಗಿದೆ. ಒಂದಾನೊಂದು ಕಾಲದ ಪ್ರಬಲರು ಈಗ ಹೇಗೆ ಬಿದ್ದಿದ್ದಾರೆ, ನೋಡಿ! ಜಗತ್ತಿನಲ್ಲಿ ಸ್ವಲ್ಪ ನ್ಯಾಯವಿದೆ ಎಂದು ಭಾವಿಸಬಹುದಲ್ಲವೆ!

ಅರಬ್ ಸ್ಪ್ರಿಂಗ್ ನಂತರ, ಅನೇಕ ನಿರಾಶ್ರಿತರು ಈ ಪಶ್ಚಿಮ ದೇಶಗಳಿಗೆ ಪಲಾಯನ ಮಾಡಿದರು. ಈ ದೇಶಗಳು ಕೆಲವು ನಿರಾಶ್ರಿತರನ್ನು ದೊಡ್ಡ ಸಂಖ್ಯೆಗಳಲ್ಲಿ ಸ್ವೀಕರಿಸಿದವು.

ಒಂದಾನೊಂದು ಕಾಲದಲ್ಲಿ ವಸಾಹತು ಶಕ್ತಿಗಳಾಗಿದ್ದ ಈ ದೇಶಗಳಿಗೆ ಈಗ ಅಪರಾಧೀ ಮನೋಭಾವ ಬಂದಿದೆಯೇನೋ ಎಂದೆನಿಸುತ್ತದೆ. ಆದರೆ ಆ ಮುಕ್ತತೆ ಮಾತ್ರ ಅಲ್ಪಕಾಲೀನವಾಗಿದೆ. ಬ್ರಿಟನ್ (where once, the "the sun never sets on the British Empire") ಇನ್ನೂ Brexitನೊಂದಿಗೆ ವ್ಯವಹರಿಸುತ್ತಿರುವಾಗ, ಪ್ರಪಂಚದ ರಾಜಕೀಯದಲ್ಲಿ ಹೆಚ್ಚು ಅಪ್ರಸ್ತುತವಾಗುತ್ತದೆ. ಫ್ರಾನ್ಸ್ ಕೂಡ ತುಂಬಾ ಹಿಂದೆ ಬಿದ್ದಿಲ್ಲ. ಜರ್ಮನಿ ಇನ್ನೂ ಒಂದು ರಾಜಕೀಯ ಮತ್ತು ಆರ್ಥಿಕ ಶಕ್ತಿಯನ್ನು ಉಳಿಸಿಕೊಂಡಿದೆ, ಆದರೆ ಏಂಜೆಲಾ ಮರ್ಕೆಲ್ ಅವರ ಡೆಮಾಕ್ರಟಿಕ್ ಪಾರ್ಟಿ ಜರ್ಮನಿಯಲ್ಲಿ ಬಲಪಂಥೀಯ ಪಕ್ಷಕ್ಕೆ ಅಧಿಕಾರವನ್ನು ಕಳೆದುಕೊಂಡಿದೆ. ಪಶ್ಚಿಮದಲ್ಲಿ ವಿಶ್ವಯುದ್ಧದ ನಂತರದ ತಲೆಮಾರುಗಳು ಕ್ಷೀಣಿಸುತ್ತಿರುವಂತೆ ಮತ್ತು ಇತಿಹಾಸದ ಪಾಠಗಳನ್ನು ಮರೆತುಹೋಗಿರುವಂತೆ, ಹೊಸ ಫ್ಯಾಸಿಸಮ್ ಅಲೆ ಪಶ್ಚಿಮದಲ್ಲಿ ಎಲ್ಲೆಲ್ಲೂ ತಲೆಯೆತ್ತುತ್ತಿರುವುದು ಕಾಣಿಸುತ್ತಿದೆ.

೨೦ನೇ ಶತಮಾನದ ಆರಂಭದಲ್ಲಿ, ಏಷ್ಯಾ ಮತ್ತು ಆಫ್ರಿಕನ್ ಪ್ರದೇಶಗಳ ಅಧಿಕಾರದ ರಾಜಕೀಯ ನಿಯಂತ್ರಣವನ್ನು ವಸಾಹತುಶಾಹಿ ಶಕ್ತಿಗಳು ನಿರ್ವಹಿಸಿದವು. ಪಶ್ಚಿಮದಲ್ಲಿ ಬಲಪಂಥೀಯ ಉಗ್ರಗಾಮಿತ್ವ ಹೆಚ್ಚಾಗುವವರೆಗೆ ಅವರು ಈ ಒಕ್ಕೂಟವನ್ನು ನಿಯಂತ್ರಿಸಿದರು. ಇದರ ಜೊತೆಗೆ ವಸಾಹತುಶಾಹಿ ಆಳ್ವಿಕೆಯ ಹಂಚಿಕೆಯ ಭಿನ್ನಾಭಿಪ್ರಾಯಗಳು ಎರಡು ವಿಶ್ವ ಸಮರಗಳಿಗೆ ಕಾರಣವಾಯಿತು. ವಸಾಹತು ದೇಶಗಳ ಶಕ್ತಿಯ ರಚನೆಗಳು ದುರ್ಬಲವಾದಂತೆ, ಏಷ್ಯಾ ಮತ್ತು ಆಫ್ರಿಕನ್ ದೇಶಗಳು ತಮ್ಮ ಸ್ವಾತಂತ್ರ್ಯವನ್ನು ಪಡೆದುಕೊಂಡವು.

ವಿಶ್ವ ರಾಷ್ಟ್ರಶಕ್ತಿಗಳ ಕ್ರಮ ಎರಡನೆಯ ವಿಶ್ವಸಮರದ ನಂತರ ಸ್ವಲ್ಪ ಬದಲಾಗಿದೆ. ಅಮೆರಿಕ ತನ್ನ ಶಕ್ತಿಯನ್ನು ರಹಸ್ಯವಾಗಿಯೂ ಮತ್ತು ಬಹಿರಂಗವಾಗಿಯೂ ಬಲಪಡಿಸಿಕೊಂಡಿತು. ಸರ್ವಾಧಿಕಾರಿಗಳ ಜೊತೆಗೆ ಸಂಬಂಧ, CIA ಮೂಲಕ ವಿಶ್ವದ ಅನೇಕ ಕಡೆ ಗುಪ್ತ ಚಟುವಟಿಕೆಗಳು, ಅಫ್ಘಾನಿಸ್ಥಾನ, ಇರಾಕ್ ಮತ್ತು ಇತರ ದೇಶಗಳಲ್ಲಿ ಮಿಲಿಟರಿ ಶಕ್ತಿಯ ಬಳಕೆ, ಇತ್ಯಾದಿಗಳಿಂದ ವಿಶ್ವದಲ್ಲಿ ಏಕೈಕ ಸೂಪರ್ ಪವರ್ ಆಗಿದೆ.

ಸಮಕಾಲೀನ ಅಣಕು ಕನ್ನಡಿಯ ಮುಂದೆ ಇಪ್ಪತ್ತನೆಯ ಶತಮಾನದ ಅಂಚುಗಳು ವಿಚಿತ್ರ ಸಮಾನತೆಯನ್ನು ಪಡೆದುಕೊಂಡಿವೆ. ಈ ಶತಮಾನ ಸಾಮ್ರಾಜ್ಯಶಾಹಿಯಿಂದಲೇ ಆರಂಭವಾಗಿ, ಅದರಲ್ಲಿಯೇ ಕೊನೆಯಾಗುತ್ತದೆ. ಈ ಶತಮಾನ ಏಷ್ಯಾದ ಒಂದು ರಾಷ್ಟ್ರ – ಜಪಾನ್ ತಾನೂ ಈ ಸಾಲಿನಲ್ಲಿ ಸೇರಿ ಒಂದು ಸಾಮ್ರಾಜ್ಯವಾಗುವವರೆಗೆ ಪಶ್ಚಿಮ ಉಳಿದ ಭಾಗಗಳ ಕೊಳ್ಳೆಯಿಂದ ಆರಂಭವಾಗುತ್ತದೆ. ಶತಮಾನದ ಕೊನೆಯ ದಶಕದಲ್ಲಿ ಈ ಮಾದರಿ ಮತ್ತೆ ಮರುಕಳಿಸುತ್ತದೆ: ಉದಾರ ಬಂಡವಾಳಶಾಹಿ ಶಕ್ತಿಗಳು ಮತ್ತೆ ಪ್ರವರ್ಧಮಾನಕ್ಕೆ ಬರುತ್ತವೆ, ಈ ಬಾರಿ ಪಾಶ್ಚಿಮಾತ್ಯ ಗುರುಗಳು ಹಾಕಿದ್ದ ಹೆಜ್ಜೆಯಲ್ಲಿ ಬಂಡವಾಳವನ್ನೂ, ನೌಕಾಪಡೆಯನ್ನೂ ಏಷ್ಯಾದ ಎಲ್ಲೆಡೆ ಪಸರಿಸುತ್ತ ಚೀನಾ ಮುನ್ನಡೆಯುತ್ತದೆ. 'ಸಾಮ್ರಾಜ್ಯಶಾಹಿ', 'ಸಾಮ್ರಾಜ್ಯಶಾಹಿ ವಿರೋಧಿ' ಮತ್ತು 'ಏಷ್ಯಾದ

ಉತ್ಕರ್ಷ'ಗಳನ್ನು ಇತಿಹಾಸಕಾರರ ಅಭಿಪ್ರಾಯಗಳಿಂದ ಅಳೆಯುವುದಾದರೆ, ಎರಡನೆ ಮಹಾಯುದ್ಧದ ನಂತರದ ವಸಾಹತುಶಾಹಿಯ ಪತನ ಒಂದು ಮಧ್ಯಂತರದಂತೆ ಕಂಡುಬರುತ್ತದೆ.

೧೯೬೦ರ ದಶಕ ವಸಾಹತುಶಾಹಿಯ ಅಧಿಕೃತ ಪತನ ನಂತರ ಪಾಶ್ಚಿಮಾತ್ಯ ವಸಾಹತುಶಾಹಿಗಳು 'ಉತ್ತರ' ಮತ್ತು 'ದಕ್ಷಿಣ'ಗಳ ನಡುವಿನ ಸಂಬಂಧಗಳನ್ನು ಅರ್ಥಮಾಡಿಸಲು ಬಡಪಾಯಿ ಅವಲಂಬಿಗಳನ್ನು ಮುನ್ನಡೆಸುತ್ತಿರುವುದನ್ನು ನೋಡುವ ಚಪಲವಾಗುತ್ತದೆ. ಆದರೆ ಈ ನೋಟ, ಯುದ್ಧಾನಂತರದ ದಶಕಗಳ ಇತಿಹಾಸದ ಸ್ವರೂಪದಲ್ಲಿ ಅಮೇರಿಕೆ ತನ್ನ ಧ್ಯೇಯೋದ್ದೇಶಗಳನ್ನು ಪುನರ್‌ಸೃಷ್ಟಿಸಿಕೊಂಡಾಗ ಮತ್ತು ಹೊಸ ರಾಷ್ಟ್ರಗಳು ಅವುಗಳನ್ನು ಅದೇ ನಿಬಂಧನೆಯೊಳಗೆ ಒಪ್ಪದಿದ್ದಾಗ ಆದ ಬದಲಾವಣೆಗಳತ್ತ ದೃಷ್ಟಿ ಹಾಯಿಸುತ್ತದೆ. ಶಕ್ತಿಗಳ ಈ ವಿನ್ಯಾಸ ಜಗತ್ತಿನ ವ್ಯವಸ್ಥೆಯನ್ನು ಹೇಗೆ ರೂಪಿಸಿದವು ಎನ್ನುವುದನ್ನು ಅರ್ಥಮಾಡಿಕೊಳ್ಳದಿದ್ದರೆ ಅವುಗಳ ಬದಲಾವಣೆಯ ಮಾರ್ಗವನ್ನೂ ತಪ್ಪಾಗಿ ಗ್ರಹಿಸುತ್ತೇವೆ.

ಸೋವಿಯೆಟ್ ರಷ್ಯಾದ ಪತನದ ನಂತರ ಬಂಡವಾಳಶಾಹಿಯೊಂದೇ ಪ್ರಭಾವಿ ರಾಜಕೀಯ ವಿಚಾರಧಾರೆಯಾಗಿ ನಮಗೆ ಉಳಿದುಕೊಂಡಿದೆ. ಜಗತ್ತು ಪಾಶ್ಚಿಮಾತ್ಯ ಪ್ರಜಾಪ್ರಭುತ್ವಗಳ ಒಕ್ಕೂಟದಿಂದ, ಅವುಗಳು ನಿರ್ಧರಿಸಿದ ನಿಯಮಗಳಿಗೆ ಅನುಸಾರವಾಗಿ ಆಳಿಸಿಕೊಳ್ಳುತ್ತಿದೆ. ಅವುಗಳ ಕೂಗುಬೆಲೆಗೆ ಮನ್ನಣೆಕೊಡದ ರಾಷ್ಟ್ರಗಳು ನಿರ್ದಯವಾಗಿ ಶಿಕ್ಷಿಸಲ್ಪಟ್ಟಿವೆ. (ಇರಾನ್ ಇದಕ್ಕೆ ತೀರಾ ಇತ್ತೀಚಿನ ಉದಾಹರಣೆ) ರಕ್ಷಣೆ ಮತ್ತು ಉದ್ಯಮವಲಯದ ಸಂಕೀರ್ಣ ನಿಯಂತ್ರಣಕ್ಕೆ ಒಳಪಟ್ಟ ಅಮೇರಿಕೆಯೊಂದೇ ಈಗ ಉಳಿದುಕೊಂಡಿರುವ ಶಕ್ತಿ. ಆರ್ಥಿಕ ವ್ಯವಸ್ಥೆ ಬೃಹತ್ ಉದ್ಯಮಗಳ ನಿಯಂತ್ರಣದಲ್ಲಿದೆ ಮತ್ತು ಮಹಾದಾನಿಗಳು ಎರಡೂ ರಾಜಕೀಯ ಪಕ್ಷಗಳನ್ನು ನಿಯಂತ್ರಿಸುತ್ತಿವೆ. ನುಕ್ರಮಾ ಭಯಪಟ್ಟಿದ್ದ ಹೊಸ ವಸಾಹತುಶಾಹಿ ಶಕ್ತಿಯೆಂದರೆ ಈ ಅಮೇರಿಕೆಯೇ. ಅದು ಜಗತ್ತಿನ ಎಲ್ಲ ಮಹತ್ವದ ಆಗುಹೋಗುಗಳನ್ನು ನಿಯಂತ್ರಿಸುತ್ತಿದೆ, ರಷ್ಯಾ ಮತ್ತು ಚೀನಾ ತಮ್ಮ ಅಲ್ಪಸ್ವಲ್ಪ ಪ್ರಭಾವಕ್ಕೆ ತೃಪ್ತಿಪಟ್ಟುಕೊಳ್ಳಬೇಕಾಗಿದೆ. ಜಗತ್ತಿನ ರಾಜಕೀಯ ಇಸ್ಲಾಮ್, ಉತ್ತರ ಕೊರಿಯಾ, ಕೆಲಮಟ್ಟಿಗೆ ರಷ್ಯಾಗಳ ಬೆದರಿಕೆಯ ಬಗೆಗಿನ ಅಮೇರಿಕೆಯ ಗ್ರಹಿಕೆಯ ಪ್ರಭಾವಕ್ಕೆ ಒಳಪಟ್ಟಿದೆ. ಈ ಅಸಮಾನ ಅಮೇರಿಕದ ಪ್ರಭಾವದಿಂದಾಗಿ ಈಗ ಬೆದರಿಕೆಗೆ ಒಳಗಾಗುತ್ತಿರುವ ಜಗತ್ತಿಗೆ ಒಂದು ಭಯವಿದೆ ಮತ್ತು ಇತರ ದೇಶಗಳು ನಿಜವಾಗಿಯೂ ನಂತರವೂ ಮುಕ್ತವಾಗಿವೆಯೇ ಎಂದು ನಾವು ಆಶ್ಚರ್ಯಪಡುತ್ತೇವೆ.

ಈ ದಿನಗಳಲ್ಲಿ ವಸಾಹತುಗಳಾಗಿದ್ದ ದೇಶಗಳ ಆರ್ಥಿಕವಾಗಿ ಹಿಂದುಳಿದ ಜನರು ತಮ್ಮ ದೇಶದಲ್ಲಿನ ಯುದ್ಧ, ಹಿಂಸೆ, ಬಡತನಗಳಿಂದ ದೂರವಾಗಲು ಪಶ್ಚಿಮದ ಶ್ರೀಮಂತ ಪ್ರದೇಶಗಳಿಗೆ ಓಡುತ್ತಿದ್ದಾರೆ. ಅವರಿಗೆ ಯಾವ ಆದರ್ಶಗಳ ಕಟ್ಟುಪಾಡಿಲ್ಲ. ಯಾವಾಗ ಮನುಷ್ಯರಿಗೆ ತಮ್ಮ ಆದರ್ಶಗಳ ಬಂಧನವಿಲ್ಲವೋ ಅಲ್ಲಿ ಇನ್ಯಾವುದೇ ಶಕ್ತಿಯೂ ತಡೆಯಲಾರದು.

ಪಾಶ್ಚಾತ್ಯ ದೇಶಗಳು ತಮ್ಮ ಗತಕಾಲದ ವೈಭವವನ್ನು ಮೆಲುಕುತ್ತ ಮೊದಲನೆಯ ಮತ್ತು ಎರಡನೆಯ ವಿಶ್ವಸಮರಗಳ ಸಾಧನೆಯನ್ನು ಆಚರಿಸುತ್ತಿವೆ (ಇದು ಮೊದಲ ವಿಶ್ವಸಮರದ ಶತಮಾನೋತ್ಸವ). ಆ ಎರಡು ಯುದ್ಧಗಳ ನಂತರ ವಿಶ್ವದಲ್ಲಿ ಶಕ್ತಿಯುತ ರಾಷ್ಟ್ರಗಳ ಕ್ರಮವು ಸಿದ್ಧವಾಯಿತು. ಆ ಯುದ್ಧಗಳ ಕಾಲದಲ್ಲಿ ಅಸಂಖ್ಯಾತ ಸಾವು-ನೋವುಗಳನ್ನು ಅನುಭವಿಸಿದ ಇತರ ರಾಷ್ಟ್ರಗಳನ್ನು ಹೊಸ ವಿಶ್ವಶಕ್ತಿಯ ಕ್ರಮದಲ್ಲಿ ಕೇಳುವವರಿಲ್ಲ. ಆ ರಾಷ್ಟ್ರಗಳು ಬಡದೇಶಗಳಾಗಿಯೇ ಉಳಿದು ಪಾಶ್ಚಾತ್ಯ ದೇಶಗಳ ಹಿಡಿತದಲ್ಲಿ ಸಿಲುಕಿವೆ.

ಖ್ಯಾತ ಜರ್ಮನ್ ಲೇಖಕ ಮತ್ತು ನೋಬಲ್ ಪ್ರಶಸ್ತಿ ವಿಜೇತ ಗಂತರ್ ಗ್ರಾಸ್ ಸೋವಿಯತ್ ಒಕ್ಕೂಟದ ಪತನದ ನಂತರ ಹೇಳಿದ ಉಕ್ತಿ ನೋಡಿ, ಎಷ್ಟು ಅದ್ಭುತವಾಗಿದೆ! "ನಾವೆಲ್ಲರೂ ಈಗ ಅಮೆರಿಕನ್ನರಾದೆವು. ನಾವಿನ್ನು ಅಮೆರಿಕನ್ನರಂತೆ ಚಿಂತಿಸುವುದನ್ನು ಕಲಿಯಬೇಕು."

ಗ್ರಾಸ್ ಅವರು ತಮ್ಮ ನೋಬಲ್ ಪ್ರಶಸ್ತಿಯನ್ನು ಸ್ವೀಕರಿಸಿ ಮಾಡಿದ ಭಾಷಣದಲ್ಲಿ ವಿಶ್ವದಲ್ಲಿನ ಬಡತನವನ್ನು ಕುರಿತು ಹೀಗೆ ಹೇಳಿದರು. "೧೯೭೩ರಲ್ಲಿ, ಅಮೆರಿಕ ಸಂಯುಕ್ತ ಸಂಸ್ಥಾನದ ಸಕ್ರಿಯ ಬೆಂಬಲದೊಂದಿಗೆ ಚಿಲಿಯಲ್ಲಿ ಭಯೋತ್ಪಾದನೆ ಕೃತ್ಯ ಆರಂಭವಾದಾಗ ವಿಲ್ಲಿ ಬ್ರಾಂಡ್ಟ್ ಅವರು ಯುನೈಟೆಡ್ ನೇಷನ್ಸ್ ಜನರಲ್ ಅಸೆಂಬ್ಲಿಯ ಎದುರು ಮಾತನಾಡಿದರು. ಅವರು ಅಸೆಂಬ್ಲಿಯ ಎದುರು ಮಾತನಾಡಿದ ಮೊದಲ ಜರ್ಮನ್ ಚಾನ್ಸಲರ್. ತಮ್ಮ ಮಾತಿನ ನಡುವೆ ಅವರು ವಿಶ್ವದಾದ್ಯಂತ ಬಡತನದ ಸಮಸ್ಯೆಯ ವಿಷಯವನ್ನು ಎತ್ತಿದರು. 'ಹಸಿವಿನ ಸಮಸ್ಯೆ ಕೂಡ ಒಂದು ಯುದ್ಧ!' ಎಂದ ಅವರ ಆಶ್ಚರ್ಯಕರ ಹೇಳಿಕೆಗೆ ಜನರ ಚಪ್ಪಾಳೆ ಬೆರಗುಗೊಳಿಸುವಂತದು. ಆ ಸಮಯದಲ್ಲಿ ನಾನು ನನ್ನ The Flounder ಎಂಬ ಕಾದಂಬರಿ ಬರೆಯುತ್ತಿದ್ದೆ. ಆ ಕಾದಂಬರಿ, ಆಹಾರ ಮತ್ತು ಅದರಿಂದುಂಟಾದ ಸಂಪನ್ಮೂಲದ ಕೊರತೆ, ಅತಿಯಾದ ಹೊಟ್ಟೆಬಾಕತನ ಮತ್ತು ಅವ್ಯಕ್ತ ಹಸಿವೆ, ಶ್ರೀಮಂತ ಮನುಷ್ಯ ತನ್ನ ದಿನನಿತ್ಯದ ಊಟದಲ್ಲಿ ಅನುಭವಿಸುವ ಆನಂದ ಮುಂತಾದ ಮಾನವ ಜನಾಂಗದ ಉಳಿವಿನ ಮೂಲ ಅಸ್ತಿಭಾರವನ್ನು ಕುರಿತದ್ದಾಗಿದೆ. [ಪ್ರಪಂಚದಾದ್ಯಂತದ ಬಡತನದ] ಸಮಸ್ಯೆಯು ಇನ್ನೂ ನಮ್ಮೊಂದಿಗಿದೆ. ಬೆಳೆಯುತ್ತಿರುವ ಸಂಪತ್ತು ಒಂದು ಕಡೆಯಿದ್ದರೆ ಬಡವರ ಜನನ ಪ್ರಮಾಣದ ಬೆಳವಣಿಗೆ ಇನ್ನೊಂದೆಡೆ. ಭದ್ರವಾದ ಕೋಟೆಗಳಲ್ಲಿ ಉತ್ತರ ಮತ್ತು ಪಶ್ಚಿಮದ ಸಿರಿವಂತ ಜನರು ತಮ್ಮನ್ನು ತಾವು ರಕ್ಷಿಸಿಕೊಳ್ಳಬಹುದು, ಆದರೆ ನಿಲ್ಲದ ನಿರಾಶ್ರಿತರ ಹಿಂಡುಗಳು ಅವರ ಸಮವಾಗುವುದರಲ್ಲಿ ಸಂಶಯವಿಲ್ಲ: ಹಸಿದವರ ಶಕ್ತಿಯನ್ನು ಯಾವ ಕೋಟೆಯೂ ತಡೆಯಲಾರದು."[೯]

ಗ್ರಾಸ್‌ನ ಮಾತುಗಳು ಇಂದಿಗೂ ಸತ್ಯವಾಗಿವೆ...

*

**Footnotes**

೧ "Slave and master. Was the master good or bad? Let us simply say that this control is despotic and, to put it plainly, self-interested. If Burma derives some incidental benefit from the English, she must pay dearly for it" (George Orwell).

೨ "...the conquest of the earth, which mostly m eans the taking it away from those who have a different complexion or slightly flatter noses than ourselves, is not a pretty thing when you look into it too much" (Joseph Conrad).

೩ "Joseph Conrad was a thoroughgoing racist. That this simple truth is glossed over in criticisms of his work is due to the fact that white racism against Africa is such a normal way of thinking that its manifestations go completely unremarked" (Chinua Achebe).

೪ "The endless struggle between peoples enjoined by global capitalism as extremely dangerous. The First World War, which almost all European nations entered with great jingoistic fervor, following a period of hectic expansion, confirmed these anxieties" (Liang, Chinese Thinker).

೫ "European imperialism, which does not disdain to raise the absurd cry of the Yellow Peril, fails to realize that Asia may also awaken to the cruel sense of the White Disaster" (Kakuzu Okakura).

೬ "...so far and wide have the roots of Japanese victory spread that we cannot now visualize all the fruit it will put forth" (Mahatma Gandhi).

೭ "Japanese injuries and insults to the White population would irreparably damage white prestige unless severely punished within a short time" (Pieter Gerbrandy, Dutch Prime Minister).

೮ "What we may be witnessing is not just the end of the Cold War, or the passing of a particular period of post-war history, but the end of history as such: that is, the end point of mankind's ideological evolution and the universalization of Western liberal democracy as the final form of human government" (Francis Fukuyama)

೯ "In 1973, just when terror – with the active support of the United States – was beginning to strike in Chile, Willy Brandt spoke before the United Nations General Assembly, the first German chancellor to do so. He brought up the issue of worldwide poverty. The applause following his exclamation "Hunger too is war!" was stunning. I was working on my novel The Flounder at the time. It

deals with the very foundations of human existence including food, the lack and superabundance thereof, great gluttons and untold starvelings, the joys of the palate and crusts from the rich man's table.

The issue is still with us. The poor counter growing riches with growing birth rates. The affluent north and west can try to screen themselves off in security-mad fortresses, but the flocks of refugees will catch up with them: no gate can withstand the crush of the hungry."

# ಐದು ದಶಕಗಳ ಐತಿಹ್ಯ –ಅಮೆರಿಕಾ ರಾಜಕೀಯದ ಒಂದು ಹಿನ್ನೋಟ

■ ಮೈ. ಶ್ರೀ. ನಟರಾಜ, Potomac, MD.

**ಪೀಠಿಕೆ:** ಕಳೆದ ಐದು ದಶಕಗಳಲ್ಲಿ ಅಮೆರಿಕದಲ್ಲಿ ಆಗಿರುವ ರಾಜಕೀಯ ಬದಲಾವಣೆಗಳನ್ನು ಸಮೀಕ್ಷಿಸುವುದು ಅತ್ಯಂತ ಕಷ್ಟದ ವಿಷಯ. ವಿಶ್ವದ ಅತ್ಯಂತ ಶಕ್ತಿಶಾಲಿ ಎನಿಸಿಕೊಂಡ ಅಮೆರಿಕಾದಲ್ಲಿ ಪ್ರಜಾಪ್ರಭುತ್ವ ಗಟ್ಟಿಯಾದ ನೆಲೆಯ ಮೇಲೆ ನಿಂತಿದೆ ಎಂದು ಮೇಲ್ನೋಟಕ್ಕೆ ಎನಿಸಿದರೂ ಎರಡೇ ಪಕ್ಷಗಳ ಈ ರಾಜಕೀಯ ವ್ಯವಸ್ಥೆ, ಭಾರೀ ಮೊತ್ತದ ಹಣವಿಲ್ಲದೇ ಚುನಾವಣೆಯಲ್ಲಿ ಗೆಲ್ಲಲಾಗದ ಪರಿಸ್ಥಿತಿ, ಅದೇ ಕಾರಣಕ್ಕಾಗಿ ಉಮೇದುವಾರರು ಶ್ರೀಮಂತ ದಾನಿಗಳ ದಯೆಯಲ್ಲಿ ಬದುಕಬೇಕಾದ ಅಸಹಾಯಕತೆ, ತಮ್ಮದೇ ಅಜೆಂಡಾಗಳನ್ನುಳ್ಳ 'ಲಾಬೀಹೋಕರ' ಮೇಲೆ ನಿರ್ಭರವಾಗಬೇಕಾದ ಮುಜುಗರ, ಇವೆಲ್ಲ ಅಮೆರಿಕದ ರಾಜಕೀಯವನ್ನು ಸಾಕಷ್ಟು ಕಲುಷಿತಗೊಳಿಸಿವೆ. ಹೆಚ್ಚು ಜನರು ಮತದಾನದಲ್ಲಿ ಭಾಗವಹಿಸದೆ, ಭಾಗವಹಿಸುವವರ ಜನಮತ ಇಬ್ಭಾಗವಾಗಿ ಫಲಿತಾಂಶಗಳು ನಿಶ್ಚಿತತೆಯನ್ನು ಕಳೆದುಕೊಂಡಿವೆ. ಮಾಧ್ಯಮಗಳ ಧೋರಣೆ ಮತ್ತು ಎರಡೂ ರಾಜಕೀಯ ಪಕ್ಷಗಳ 'ಬುಗುರಿ–ಪಂಡಿತ'ರ (ಸ್ಪಿನ್–ಡಾಕ್ಟರ್ಸ್) ನಡುವೆ ನಡೆಯುವ ನಿಲ್ಲದ ಚರ್ಚೆಗಳಿಂದ ಉಂಟಾಗುವ ಸರಳೀಕರಣಗಳಿಂದ ಮತದಾರರ ವರ್ಗೀಕರಣ ನಡೆದಿದೆ. ಉದಾರವಾದಿಗಳು–ಸಂಪ್ರದಾಯವಾದಿಗಳು, ಶ್ವೇತವರ್ಣಶ್ರೇಷ್ಠತಾ–ಪ್ರತಿಪಾದಕರು–ಸರ್ವವರ್ಣ–ಸಮಾನತಾವಾದಿಗಳು, ವಾಮಪಂಥೀಯರು–ಬಲಪಂಥೀಯರು, ಯುದ್ಧಕೋರರು–ಶಾಂತಿಪ್ರಿಯರು, ದೊಡ್ಡ ಸರ್ಕಾರ, ಹೆಚ್ಚು ಕರ, ಮತ್ತು ಹೆಚ್ಚು ಖರ್ಚು ಬಯಸುವವರು–ಅಮಿತ ಸ್ವಾತಂತ್ರ್ಯ, ಕಡಿಮೆ ಕರ ಮತ್ತು ಭಾರೀ ಸೈನ್ಯ–ಮದ್ದು–ಗುಂಡಿನವರು, ಹೀಗೆ ಸಮಾಜ ಸೀಳಿಹೋಗಿದೆ. ಒಟ್ಟಿನಲ್ಲಿ 'ಅತಿ'ಗಳನ್ನು ಬಿಟ್ಟ ಮಧ್ಯಮಮಾರ್ಗವೆಂಬ ಪರಿಕಲ್ಪನೆಯೇ ಮಾಯವಾಗುತ್ತಿದೆ! ಈ ಹಿನ್ನೆಲೆಯೊಂದಿಗೆ

ಅಮೆರಿಕದಲ್ಲಿ ಕಳೆದ ಐದು ದಶಕಗಳಲ್ಲಿ ನಡೆದ ಅಧ್ಯಕ್ಷೀಯ ರಾಜಕೀಯದ ಪ್ರಮುಖ ಘಟನೆಗಳನ್ನು ವೀಕ್ಷಿಸೋಣ. ಹಾಗೂ ಅಮೆರಿಕದ ನೀತಿಯಿಂದಾದ ಪರಿಣಾಮಗಳ ಕೆಲವು ತುಣುಕುಗಳನ್ನು ನೋಡೋಣ.

**ನಿಕ್ಸನ್ ಆಡಳಿತದ ಮುನ್ನ:** ಈ ಐದು ದಶಕಗಳಲ್ಲಿ ಹತ್ತು ಜನ ಅಧ್ಯಕ್ಷರನ್ನು ಅಮೆರಿಕಾ ಕಂಡಿದೆ. ರಿಪಬ್ಲಿಕನ್ ಮತ್ತು ಡೆಮೋಕ್ರ್ಯಾಟಿಕ್ ಪಕ್ಷಗಳು ಆಳ್ವಿಕೆಯನ್ನು ಸುಮಾರು ಸಮಸಮವಾಗೇ ಹಂಚಿಕೊಂಡಿವೆ ಎನ್ನಬಹುದು. ಆಳಿದ ಅಧ್ಯಕ್ಷರಲ್ಲಿ ನಾಲ್ವರು ಅಳಿದಿದ್ದಾರೆ ಕೂಡ. ನಾನು ಭಾರತದಲ್ಲಿ ವಿದ್ಯಾರ್ಥಿಯಾಗಿದ್ದಾಗಲೇ ಡೆಮೊಕ್ರ್ಯಾಟಿಕ್ ಪಕ್ಷಕ್ಕೆ ಸೇರಿದ ಅಮೆರಿಕದ ೩೫ನೇ ಅಧ್ಯಕ್ಷ ಜಾನ್ ಎಫ್ ಕೆನಡಿ (ಜೇಎಫ್‌ಕೆ) ದುರುಳನೊಬ್ಬನ ಗುಂಡಿಗೆ ಬಲಿಯಾಗಿದ್ದ (೧೯೬೩). ಕೆನಡಿ ಕೊನೆಯುಸಿರನ್ನೆಳೆಯುತ್ತಿದ್ದಾಗ, ಆತನ ಉಪಾಧ್ಯಕ್ಷ ಲಿಂಡನ್ ಜಾನ್ಸನ್ (ಎಲ್‌ಬಿಜೆ) ವಿಮಾನದಲ್ಲಿ ಹಾರುತ್ತಿದ್ದ. ಹಾರಾಟದ ನಡುವೆಯೇ ಆತ ೩೬ನೇ ಅಧ್ಯಕ್ಷನಾಗಿ ಪದವಿಯನ್ನು ವಹಿಸಿಕೊಳ್ಳಬೇಕಾಗಿ ಬಂತು. ಜಾನ್ಸನ್ ಕಾಲದಲ್ಲಿ (೧೯೬೩–೬೯) ವಿಯಟ್ನಾಮ್ ಯುದ್ಧ ಮತ್ತಷ್ಟು ಗಂಭೀರವಾಗಿ ಮುಂದುವರೆಯಿತು. ಯುದ್ಧದಿಂದ ಬೇಸತ್ತ ಅಮೆರಿಕದ ಜನ ಬದಲಾವಣೆಯನ್ನು ಬಯಸಿದರು.

**ಕುಪ್ರಸಿದ್ಧ ನಿಕ್ಸನ್ ಮಹಾಶಯ:** ೧೯೬೮ರ ಚುನಾವಣೆಯಲ್ಲಿ ರಿಪಬ್ಲಿಕನ್ ಪಕ್ಷದ ನಿಕ್ಸನ್, ೩೭ನೇ ಅಧ್ಯಕ್ಷನಾಗಿ ಆಯ್ಕೆಯಾದ (೧೯೬೯–೭೪). ಪೂರ್ವ ಮತ್ತು ಆಗ್ನೇಯ ಏಷ್ಯಾದ ದೇಶಗಳನ್ನು ಕಮ್ಯೂನಿಸಂನಿಂದ ಬಚಾಯಿಸಲು (ಅರ್ಥಾತ್, ರಶ್ಯನ್ ಹಾಗೂ ಚೀನೀ ಪ್ರಭಾವದಿಂದ ಹೊರಗುಳಿಸುವ ನೆಪದಿಂದ) ದೂರದ ವಿಯಟ್ನಾಮ್ ಯುದ್ಧದಲ್ಲಿ ಅಮೇರಿಕ ತನ್ನನ್ನು ತಾನೇ ಮುಳುಗಿಸಿಕೊಂಡಿತ್ತು. ದೇಶದ ತರುಣರನ್ನು ಸೈನ್ಯಕ್ಕೆ ಬಲಾತ್ಕಾರವಾಗಿ ಸೇರಿಸಿಕೊಳ್ಳುತ್ತಿದ್ದ ಆ ಕರಾಳ ದಿನಗಳಲ್ಲಿ ನಾನು ಪಿಟ್ಸ್‌ಬರ್ಗ್ ನಗರದಲ್ಲಿ ಬಂದಿಳಿದೆ. ಸಾಧಾರಣವಾಗಿ ಈ ದೇಶದ ಪ್ರತಿ ವಿಶ್ವವಿದ್ಯಾಲಯದಲ್ಲೂ ಪದವಿಯೋತ್ತರ ಅಧ್ಯಯನದಲ್ಲಿ ಆಸಕ್ತಿ ಇದ್ದವರು ಮತ್ತು ರೀಸರ್ಚ್ ಅಥವಾ ಟೀಚಿಂಗ್ ಅಸಿಸ್ಟೆಂಟುಗಳಾಗಿ ಅಲ್ಪ ಮಜೂರಿಯ ಗೇಯ್ಮೆಗೆ ಬರುತ್ತಿದ್ದವರು ಹೊರದೇಶಗಳಿಂದ ಬಂದವರೇ ಆಗಿರುತ್ತಿದ್ದ ಕಾಲವದು, ಅದರಲ್ಲೂ ಹೆಚ್ಚಿನ ಸಂಖ್ಯೆಯವರು ಭಾರತೀಯರು ಮತ್ತು ಚೀನೀಯರು. ಆದರೆ, ೧೯೭೦ರ ಸಂದರ್ಭದಲ್ಲಿ ಪದವಿಯೋತ್ತರ ಸಂಶೋಧನೆಯಲ್ಲಿ ತೊಡಗಿದವರಿಗೆ ಮಿಲಿಟರಿ 'ಡ್ರ್ಯಾಫ್ಟ'ನ್ನು (ಬಲಾತ್ಕಾರವಾಗಿ ಸೈನ್ಯಕ್ಕೆ ಸೇರಿಸಿಕೊಳ್ಳುವ ಕಾನೂನಿಗೆ ಡ್ರ್ಯಾಫ್ಟ್ ಎಂಬ ಹೆಸರು) ತಪ್ಪಿಸಿಕೊಳ್ಳುವ ಅಥವಾ ಮುಂದೂಡುವ ಅವಕಾಶವಿತ್ತು. ಕೆಲವರು ಯುದ್ಧವನ್ನು ವಿರೋಧಿಸಿ ಕೆನಡಾ ಮುಂತಾದ ದೇಶಗಳಿಗೆ ವಲಸೆ ಹೋಗುತ್ತಿದ್ದರೆ, ಇನ್ನು ಕೆಲವರು ಡ್ರ್ಯಾಫ್ಟ್ ತಪ್ಪಿಸಿಕೊಳ್ಳಲು ಎಮ್‌ಎಸ್ ಮತ್ತು ಪಿಎಚ್‌ಡಿ ಮಾಡುವ ನೆವದಲ್ಲಿ ವರ್ಷಗಟ್ಟಲೆ ವ್ಯಾಸಂಗದಲ್ಲಿ ತೊಡಗಿಸಿಕೊಳ್ಳಲಾರಂಭಿಸಿದ್ದರು. ನಿಕ್ಸನ್ನನ ವಿದೇಶಾಂಗ ನೀತಿಯ ಸಲಹೆಗಾರನಾಗಿದ್ದ ಹೆನ್ರಿ ಕಿಸ್ಸಿಂಜರ್ ತಯಾರಿಸಿದ್ದ ನೀಲನಕ್ಷೆಯಲ್ಲಿ

'ವಿಯಟ್‌ಕಾಂಗ್'ಗಳನ್ನು ಇಲಿ ಹೆಗ್ಗಣಗಳಂತೆ ಧ್ವಂಸ ಮಾಡಲು ಅಮೆರಿಕಾ ತನ್ನಲ್ಲಿದ್ದ ಬಾಂಬುಗಳನ್ನೆಲ್ಲ ಅಡ್ಡಾದಿಡ್ಡಿ ಎಸೆದರೂ ಅಮೆರಿಕದ ೪೦-೫೦ ಸಾವಿರ ತರುಣರು ಸತ್ತರೇ ವಿನಃ ಶತ್ರುವನ್ನು ಗೆಲ್ಲುವುದು ಸಾಧ್ಯವಾಗಲಿಲ್ಲ. ಯುದ್ಧ ವಿರೋಧೀ ತರುಣರು ಹಿಪ್ಪಿಗಳಾಗಿ, ಉದ್ದನೆಯ ಕೂದಲು ಬಿಟ್ಟು, ಮಾದಕ ವಸ್ತುಗಳನ್ನು ಸೇವಿಸುತ್ತ, ಯಾರು ಯಾರೊಡನೆ ಬೇಕಾದರೂ ಕೂಡಿಕೆ ಮಾಡಿಕೊಳ್ಳಬಹುದೆಂಬ ಲಂಪಟತನದ ತತ್ತ್ವವನ್ನು ಪ್ರತಿಪಾದಿಸುತ್ತಾ ಅಮೆರಿಕದ ವಿಶ್ವವಿದ್ಯಾಲಯಗಳಲ್ಲಿ ತುಂಬಿಕೊಂಡಿದ್ದ ಕಾಲವದು. ಇಂಥಾ ತರುಣರನ್ನು ಮನಸಾರೆ ದ್ವೇಷಿಸುತ್ತಿದ್ದವ ಅಂದಿನ ಅಧ್ಯಕ್ಷ ನಿಕ್ಸನ್.

**ಛೀಮಾರಿಗಿಂತ ರಾಜೀನಾಮೆಯೇ ಲೇಸು:** ನಿಕ್ಸನ್ ತನ್ನ ವಿರೋಧಿಗಳನ್ನು ವೈರಿಗಳೆಂದೇ ಬಗೆದಿದ್ದವ. ವಿರೋಧ ಪಕ್ಷದವರ ಚುನಾವಣಾ ಕಚೇರಿಯಲ್ಲಿ ನಡೆಯುವ ಚಟುವಟಿಕೆಗಳ ಮೇಲೆ ಕಳ್ಳತನದಿಂದ ಕಣ್ಣು/ಕಿವಿಗಳನ್ನಿಡಲು ಯತ್ನಿಸಿ, ಸಿಕ್ಕಿಬಿದ್ದಾಗ ತಪ್ಪನ್ನು ಮುಚ್ಚಿಕೊಳ್ಳಲು ಸುಳ್ಳಿನ ಮೇಲೆ ಸುಳ್ಳು ಹೇಳಿ ಕೊನೆಗೆ ಛೀಮಾರಿಯಿಂದ ಪಾರಾಗಲು ರಾಜೀನಾಮೆ ಕೊಡಬೇಕಾಯಿತು. ಈ ಸುದ್ದಿ ಅಮೆರಿಕವನ್ನು ಬೆಚ್ಚಿ ಬೀಳಿಸಿತ್ತು. ಅದಕ್ಕೂ ಮುನ್ನ, ನನ್ನ ಪಿಎಚ್‌ಡಿ ವ್ಯಾಸಂಗ ಅರ್ಧಮಟ್ಟದಲ್ಲಿದ್ದಾಗ ಭಾರತ, ಪಾಕಿಸ್ತಾನದೊಂದಿಗೆ ಯುದ್ಧ ಸಾರಿ ಬಂಗ್ಲಾದೇಶವನ್ನು ಹುಟ್ಟು ಹಾಕಿತು. ಭಾರತ-ಪಾಕಿಸ್ತಾನದ ಈ ಬಂಗ್ಲಾದೇಶ್ ಯುದ್ಧ ಮುಗಿಯುವ ಮೊದಲೇ ನಿಕ್ಸನ್ ಮಹಾಶಯ (ಹೆನ್ರಿ ಕಿಸ್ಸಿಂಜರನ ಸೂಚನೆಯಂತೆ) ಅಮೆರಿಕದ ನೌಕಾ ಪಡೆಯನ್ನು ಭಾರತದ ಮೇಲೆ ಛೂ ಬಿಟ್ಟ. ಭಾರತದ ಅಂದಿನ ಪ್ರಧಾನಿ ಇಂದಿರಾ ಗಾಂಧಿ ಪಾಕಿಸ್ತಾನವನ್ನು ಸಂಪೂರ್ಣವಾಗಿ ಬಗ್ಗುಬಡಿಯದಂತೆ ನೋಡಿಕೊಳ್ಳುವುದು ಅಮೆರಿಕದ ವಿದೇಶಾಂಗ ನೀತಿಯ ಮುಖ್ಯ ಅಂಗವಾಗಿತ್ತು. ನಿಕ್ಸನ್ ಹಾಗೆ ನೋಡಿಕೊಳ್ಳದೇ ಹೋಗಿದ್ದರೆ, ಪಶ್ಚಿಮ ಪಾಕಿಸ್ತಾನವೂ ಸೋತು ಚೂರುಚೂರಾಗಿ ಭಾರತಕ್ಕೆ ಶರಣಾಗಬೇಕಿತ್ತು. ಹಾಗಾಗಿದ್ದಿದ್ದರೆ, ದಕ್ಷಿಣ ಏಶ್ಯದ ಇತಿಹಾಸ ಬೇರೆಯೇ ಚಿತ್ರವನ್ನು ಪಡೆಯುತ್ತಿತ್ತು. ಇತರ ದೇಶಗಳ ಒತ್ತಡದ ಕಾರಣ ಭಾರತ ತಾನು ಸೆರೆಹಿಡಿದಿದ್ದ ೯೦,೦೦೦ ಪಾಕೀಸ್ತಾನೀ ಸೈನಿಕರನ್ನು ಬಿಡುಗಡೆ ಮಾಡಬೇಕಾಯಿತು. (ಮುಂದೆ ಅಮೆರಿಕದ ಆಶೀರ್ವಾದದೊಂದಿಗೆ ಪಾಕಿಸ್ತಾನ ಅಣು ಬಾಂಬಿನ ರಹಸ್ಯಗಳನ್ನು ಇತರ ದೇಶಗಳಿಂದ ಕದ್ದು ಬಾಂಬನ್ನು ತಯಾರಿಸಿ ಭಾರತದ ವಿರುದ್ಧ ತೊಡೆ ತಟ್ಟಿತು. ಅಂದಿನಿಂದ ಪಶ್ಚಿಮ ಪಾಕಿಸ್ತಾನ ಭಾರತಕ್ಕೆ ನಿರಂತರ ತಲೆನೋವಾದ ವಿಷಯ ಎಲ್ಲರಿಗೂ ತಿಳಿದ ಇತಿಹಾಸ.) ಹೀಗಾಗಿ ನಿಕ್ಸನ್ ವಾಟರ್‌ಗೇಟ್ ಪ್ರಕರಣದಲ್ಲಿ ಸಿಕ್ಕಿಬಿದ್ದು, ರಾಜೀನಾಮೆ ಕೊಟ್ಟ ಅಧ್ಯಕ್ಷರ ಪೈಕಿ ಮೊದಲಿಗನೆಂಬ ಖ್ಯಾತಿ ಪಡೆದಾಗ ಭಾರತೀಯರಿಗಾದ ಆನಂದ ಅಷ್ಟಿಷ್ಟಲ್ಲ! (ಅಮೆರಿಕದ ಹಿಪ್ಪಿಗಳೂ ಅಷ್ಟೇ ಖುಷಿಯಿಂದ ಕುಣಿದರು ಅನ್ನಿ.) 'ಟ್ರಿಕಿ-ಡಿಕ್' ಎಂಬ ಅಡ್ಡ ಹೆಸರಿನಿಂದ ಪ್ರಸಿದ್ಧನಾಗಿದ್ದ ನಿಕ್ಸನ್ ಛೀಮಾರಿಗೊಳಗಾದ ಹಲವು ವರ್ಷಗಳನ್ನು ತೆರೆಯ ಮರೆಯಲ್ಲಿ ಕಳೆದನಾದರೂ ಪುನರ್ಜನ್ಮ ಪಡೆದವನಂತೆ ಮತ್ತೆ ವಿಶ್ವದ ರಾಜಕೀಯ ರಂಗವನ್ನು ಪ್ರವೇಶಿಸಿ, ಚೀನಾ ದೇಶದೊಂದಿಗೆ ಅಮೆರಿಕ ಉತ್ತಮ ಸಂಬಂಧ

ಬೆಳೆಸಿಕೊಳ್ಳುವಲ್ಲಿ ರಚನಾತ್ಮಕವಾಗಿ ದುಡಿದು ಇತಿಹಾಸದಲ್ಲಿ ಶಾಶ್ವತವಾದ ಹೆಸರು ಮಾಡಿಕೊಂಡುಬಿಟ್ಟ! ಅಂದಿನ ಅಮೆರಿಕ ಸಾಮಾಜಿಕವಾಗಿ ಇಬ್ಭಾಗವಾಗಿ ಹೋಳಾಗಿದ್ದರೂ, ಎರಡೂ ರಾಜಕೀಯ ಪಕ್ಷದ ಪ್ರತಿನಿಧಿಗಳು ವ್ಯಕ್ತಿಗಿಂತ ದೇಶ ಮುಖ್ಯವೆಂಬ ತತ್ತ್ವವನ್ನಾಧರಿಸಿ ನಿಕ್ಸನ್ ರಾಜೀನಾಮೆಗೆ ಕಾರಣರಾದ ಸತ್ಯವನ್ನು ನೆನೆಸಿಕೊಂಡರೆ ಇಂದಿನ ತದ್ವಿರುದ್ಧ ಪರಿಸ್ಥಿತಿಯ ಬಗ್ಗೆ ಮನಸ್ಸು ಬಾಡುತ್ತದೆ!

**ಬಲಿಪಶುವಾದ ಫೋರ್ಡ್:** ನಿಕ್ಸನ್ ರಾಜೀನಾಮೆಗೂ ಮುನ್ನ, ಅವನ ಜೊತೆ ಚುನಾಯಿತನಾಗಿದ್ದ ಉಪಾಧ್ಯಕ್ಷ ಸ್ಪೀರೋ ಆಗ್ನ್ಯೂ, ಲಂಚದ ತಕರಾರಿನಲ್ಲಿ ಸಿಕ್ಕಿ ತಪ್ಪಿತಸ್ಥನೆಂದು ತೀರ್ಪಾದಾಗ ಆತನೂ ರಾಜೀನಾಮೆ ಕೊಟ್ಟಿದ್ದ. ಹಾಗಾಗಿ ಉಪಾಧ್ಯಕ್ಷ ಸ್ಥಾನಕ್ಕೆ ಜೆರ್ರಿ ಫ್ಲೋರ್ಡ್ ಎಂಬಾತನನ್ನು ನಿಕ್ಸನ್ ಆಯ್ದುಕೊಂಡಿದ್ದ. ನಿಕ್ಸನ್ ರಾಜೀನಾಮೆಯ ನಂತರ, ಕಟ್ಟಳೆಯಂತೆ ಫ್ಲೋರ್ಡ್ ಅಧ್ಯಕ್ಷನಾದ (೧೯೭೪–೭೭). ಆದರೆ, ೩೮ನೇ ಅಧ್ಯಕ್ಷನಾಗಿ ಮೂರು ವರ್ಷಕ್ಕಿಂತ ಕಮ್ಮಿ ಆಳಿದ ಫ್ಲೋರ್ಡ್, ಮುಂದಿನ ಚುನಾವಣೆಯಲ್ಲಿ ಸೋತುಹೋದ. ಆತನ ಸೋಲಿಗೆ ಏಕೈಕ ಕಾರಣ, ಆತ ಸುಳ್ಳುಕೋರ ನಿಕ್ಸನ್‌ಗೆ ಕ್ಷಮಾದಾನ ನೀಡಿದನೆಂಬುದೇ ಆಗಿತ್ತು! ಫೋರ್ಡ್ ಬಗ್ಗೆ ಹೇಳುವುದು ಹೆಚ್ಚೇನೂ ಇಲ್ಲ, ಆತ ಒಬ್ಬ ಸಭ್ಯ, ಅಷ್ಟೇನೂ ಬುದ್ಧಿಶಾಲಿಯಲ್ಲದಿದ್ದರೂ ಗೌರವಸ್ಥ. ವಿಯಟ್ನಾಮ್ ಯುದ್ಧದ ಕಹಿ ಅನುಭವ, ಮತ್ತು ವಾಟರ್‌ಗೇಟ್ ಹಗರಣದಿಂದ ನಿಕ್ಸನ್ ಅಧ್ಯಕ್ಷ ಪದವಿಗೆ ತಂದ ಅಪಮಾನ, ಇವುಗಳ ನಡುವೆ ಕುದಿಯುತ್ತಿದ್ದ ಅಮೇರಿಕವನ್ನು ಸಮಾಧಾನಪಡಿಸುವ ಕಷ್ಟದ ಕೆಲಸ ಅವನ ಪಾಲಿಗೆ ಬಿದ್ದಿತ್ತು. ಮತದಾರರು ರಿಪಬ್ಲಿಕನ್ ಪಕ್ಷವನ್ನು ಅಧಿಕಾರದಿಂದ ಕೆಳಗಿಳಿಸಲು ಕಾಯುತ್ತಿದ್ದರು. ಮುಂದಿನ ಚುನಾವಣೆಯಲ್ಲಿ ತನ್ನನ್ನು ತಾನೇ ತ್ಯಾಗಮಾಡಿಕೊಳ್ಳುವ ಪರಿಸ್ಥಿತಿ ಜೆರ್ರಿ ಫ್ಲೋರ್ಡನದಾಯಿತು.

**ಒಳ್ಳೆಯ ವ್ಯಕ್ತಿ, ಅದೃಷ್ಟಹೀನ ಕಾರ್ಟರ್:** ಚುನಾವಣೆಯಲ್ಲಿ ಗೆದ್ದ ಡೆಮೋಕ್ರ್ಯಾಟಿಕ್ ಪಕ್ಷದ ಜಿಮ್ಮಿ ಕಾರ್ಟರ್ ೩೯ನೇ ಅಧ್ಯಕ್ಷನಾಗಿ ಆಡಳಿತ ವಹಿಸಿಕೊಂಡ (೧೯೭೭–೮೧). ಅವನ ಅದೃಷ್ಟವೂ ಖೋಟಾ ಎಂದೇ ಹೇಳಬೇಕು. ಅವನ ಆಡಳಿತದ ಪ್ರಾರಂಭದಲ್ಲೇ ವಿಶ್ವದಲ್ಲಿ ಊರ್ಜೆಯ ಅಭಾವ (ಎನರ್ಜಿ/ಆಯಿಲ್ ಶಾರ್ಟೇಜ್) ಶುರುವಾಯಿತು. ಮಧ್ಯಪ್ರಾಚ್ಯದ ಆಡಳಿತಗಳು ತೈಲದ ಉತ್ಪನ್ನಕ್ಕೆ ಕೃತ್ರಿಮ ಕಡಿವಾಣ ಹಾಕಿದ್ದರ ಕಾರಣ ಪೆಟ್ರೋಲ್ ಬೆಲೆ ಗಗನಕ್ಕೇರಿತು. ತತ್ಫಲಿತಾಂಶವಾಗಿ, ಹಣದುಬ್ಬರ, ನೆತ್ತಿಗೇರಿದ ಬಡ್ಡಿ ದರ, ಇವುಗಳ ಜೊತೆಗೆ, ಮೈಲಿಗಟ್ಟಲೆ ಕ್ಯೂ ನಿಂತು ಕಾರಿಗೆ ಪೆಟ್ರೋಲ್ ತುಂಬಿಸಿದ ಕಹಿ ಅನುಭವ ಅಮೆರಿಕನ್ನರನ್ನು ದಿಕ್ಕೆಡಿಸಿತು. ಅದೇ ಸಮಯದಲ್ಲಿ, ಅಮೆರಿಕದ ಆಪ್ತಮಿತ್ರ, ಇರಾನಿನ ಷಾ ತನ್ನ ದೇಶದಿಂದ ಗಡೀಪಾರಾಗಿ ಬೇರಾವ ದೇಶವೂ ಆತನನ್ನು ಸೇರಿಸಿಕೊಳ್ಳದೇ ಹೋದಾಗ, ತಾತ್ಕಾಲಿಕವಾಗಿ ಅಮೆರಿಕಕ್ಕೆ ಬರಬೇಕಾಯಿತು. ಆಗ ಅಮೆರಿಕದ ಬದ್ಧ ವೈರಿಯಾಗಿದ್ದ ಅಯತೊಲ್ಲ ಖೊಮೈನಿ ಫ್ರಾನ್ಸಿನಿಂದ ಇರಾನಿಗೆ ಹಿಂದಿರುಗಿ ಯುವಕರನ್ನು

ಹುರಿದುಂಬಿಸಿದುದರ ಫಲವಾಗಿ ಅಮೆರಿಕದ ದೂತಾವಾಸದ ಮೇಲೆ ಇರಾನಿನ ಕ್ರಾಂತಿಕಾರೀ ವಿದ್ಯಾರ್ಥಿಗಳು ಮುತ್ತಿಗೆ ಹಾಕಿ ನೂರಾರು ಅಮೆರಿಕನ್ನರನ್ನು ದೂತಾವಾಸದಲ್ಲಿಯೇ ಸೆರೆಯಾಗಿಸಿದರು. ಅವರನ್ನು ಬಿಡಿಸಲು ಕಾರ್ಟರ್ ಕಳಿಸಿದ ಅಮೆರಿಕದ ಹೆಲಿಕಾಪ್ಟರುಗಳು ದುರದೃಷ್ಟವಶಾತ್ ಮರಳುಕಾಡಿನಲ್ಲಿ ಕುಸಿದುಬಿದ್ದು, ಅಧ್ಯಕ್ಷ ಕಾರ್ಟರನ ರಾಜಕೀಯ ಭವಿಷ್ಯವೂ ಕುಸಿದು ಬಿದ್ದಿತು! ಮುಂದಿನ ಚುನಾವಣೆಯಲ್ಲಿ ರೇಗನ್ ವಿರುದ್ಧ ಹೀನಾಯದ ಸೋಲನ್ನು ಕಾರ್ಟರ್ ಅನುಭವಿಸಬೇಕಾಯಿತು. ಆಡಳಿತದ ಕಾರಣ ಹೆಸರು ಮಾಡದಿದ್ದರೂ, ರಾಜಕೀಯದಿಂದ ನಿವೃತ್ತಿ ಪಡೆದ ಕಾರ್ಟರ್ 'ಹ್ಯಾಬಿಟ್ಯಾಟ್ ಫಾರ್ ಹುಮ್ಯಾನಿಟಿ' ಎಂಬ ಸಂಸ್ಥೆಯಲ್ಲಿ ತೊಡಗಿಸಿಕೊಂಡು ವಿಶ್ವದ ನಾನಾ ಬಡ ದೇಶಗಳಲ್ಲಿ ದೀನರಿಗೆ, ದಲಿತರಿಗೆ ಮತ್ತು ದರಿದ್ರರಿಗೆ ತಲೆಯ ಮೇಲೊಂದು ಸೂರು ಇರುವಂತೆ ಲಕ್ಷೋಪಲಕ್ಷ ಮನೆಗಳನ್ನು ಕಟ್ಟುವ ಮಹಾನ್ ಕಾರ್ಯದಲ್ಲಿ ಇಂದಿಗೂ ದುಡಿಯುತ್ತ ಪ್ರಾತಃಸ್ಮರಣೀಯನಾಗಿದ್ದಾನೆ. (ತೊಂಬತ್ತು ದಾಟಿದ, ಕ್ಯಾನ್ಸರನ್ನು ಗೆದ್ದ, ನಗುಮೊಗದ ಧೀಮಂತ ಈತ!).

**ಜನಪ್ರಿಯ ರೇಗನ್:** ಚುನಾವಣೆಯಲ್ಲಿ ಸುಲಭವಾಗಿ ಗೆದ್ದ ೪೦ನೇ ಅಧ್ಯಕ್ಷ ರೇಗನ್ ರಿಪಬ್ಲಿಕನ್ ಪಕ್ಷದ ಅತಿ ಜನಪ್ರಿಯ ಅಧ್ಯಕ್ಷರ ಪೈಕಿಯವನು (೧೯೮೧-೮೯). ಸಿನಿಮಾ ನಟನಾಗಿ ಪ್ರಸಿದ್ಧನಾಗಿ ನಂತರ ಕ್ಯಾಲಿಫೋರ್ನಿಯಾದ ಗವರ್ನರ್ ಆಗಿದ್ದವನು. ಅವನು ಗೆದ್ದನೆಂದು ತಿಳಿದ ಕ್ಷಣವೇ ಹೆದರಿ ನಡುಗಿದ ಇರಾನ್, ಅಮೆರಿಕದ ದೂತಾವಾಸದ ಎಲ್ಲ ಬಂದಿಗಳನ್ನು ಬಿಡುಗಡೆ ಮಾಡಿತು! ಅವನ ಮೂಲಮಂತ್ರವೆಂದರೆ, 'ವೈರಿಗಳನ್ನು ಬಗ್ಗುಬಡಿಯುವ ಶಕ್ತಿಶಾಲೀ ಸೈನ್ಯ ಒಂದಿದ್ದರೆ ಯಾರೂ ನಮ್ಮ ತಂಟೆಗೆ ಬರುವುದಿಲ್ಲ!' ಎಂಟು ವರ್ಷದ ಪೂರಾ ಆಡಳಿತದ ಸುಖವನ್ನುಂಡವನು ಅವನು. ವಿಕಲಮತಿಯೊಬ್ಬನ ಗುಂಡಿಗೆ ಎದುರಾದರೂ ಬದುಕಿ ಉಳಿದ ಅದೃಷ್ಟಶಾಲಿ ಆತ! ಸೋವಿಯಟ್ ಒಕ್ಕೂಟವನ್ನು ಒಡೆದು, ಪೂರ್ವ-ಪಶ್ಚಿಮ ಜರ್ಮನಿಗಳನ್ನು ವಿಭಜಿಸಿದ್ದ ಗೋಡೆಯನ್ನು ಕೆಡವಿದ ಮಹಾನುಭಾವ ಅವನು. ಅಮೆರಿಕನ್ನರಿಗೆ ಒಂದು ರೀತಿಯ ಹೆಮ್ಮೆಯ ಅಧ್ಯಕ್ಷನೆನಿಸಿ, ತಮ್ಮಂಥಾ ಸುಖಿಗಳೇ ಇನ್ನಿಲ್ಲವೆಂಬಂತೆ ಅವರನ್ನು ನಂಬಿಸಿದ ಮಾಯಾವಿ ಆತ. ಆದಾಯ ತೆರಿಗೆಯನ್ನು ಕಡಿಮೆ ಮಾಡಿದ, ತನ್ನದೇ ಬ್ರ್ಯಾಂಡಿನ 'ರೇಗನಾಮಿಕ್ಸ್' ಎಂದು ಕರೆಸಿಕೊಂಡ 'ವೂಡೂ ಎಕನಾಮಿಕ್ಸ್' ಎಂಬ ಅ(ನ)ರ್ಥಶಾಸ್ತ್ರಕ್ಕೆ ಬುನಾದಿ ಹಾಕಿದ. ತಾತ್ಕಾಲಿಕವಾಗಿ ಅವನು ಎಲ್ಲರಿಗೂ ಒಂದು ರೀತಿಯ ಸುಲಭಸುಖವನ್ನು ದಯಪಾಲಿಸಿದರೂ ಮುಂದೆ ಅಮೆರಿಕದ ಭಂಡಾರವನ್ನೇ ಖಾಲಿಮಾಡಲು ಅವನ ತೀರ್ಮಾನಗಳು ಎಡೆಕೊಟ್ಟವು. ಆದರೂ ಶ್ರೀಮಂತರ ಗೆಳೆಯನಾಗಿದ್ದ ಅವನನ್ನು ಅಮೆರಿಕನ್ನರು ದೇವರೆಂದೇ ಪರಿಗಣಿಸಿ ಪ್ರೀತಿಸುವಂತೆ ಮಾಧ್ಯಮಗಳೂ, ರಾಜಕೀಯ ಬುಗುರಿ-ಪಂಡಿತರೂ ನೋಡಿಕೊಂಡರು. ಅವನ ಹೆಸರಿನ ಮೇಲೆ ಶಾಲೆಗಳೇನು, ಪುಸ್ತಕಾಲಯಗಳೇನು, ವಿಮಾನ ನಿಲ್ದಾಣಗಳೇನು? ಭಾರತದಲ್ಲಿ ಗಾಂಧಿ ನೆಹರೂ ಪರಿವಾರದ ಹೆಸರುಗಳು ಹೇಗೆ ರಸ್ತೆ, ಚೌಕ, ಶಾಲೆ, ಪೇಟೆ, ವಿಶ್ವವಿದ್ಯಾಲಯ ಮುಂತಾದವುಗಳಾಗಿ ಕಂಗೊಳಿಸಿವೆಯೋ ಹಾಗೆ. ಅಮೆರಿಕದಲ್ಲಿ ವ್ಯಕ್ತಿ

ಪೂಜೆ ಹೆಚ್ಚಿಲ್ಲದಿದ್ದರೂ 'ಫೌಂಡಿಂಗ್ ಫಾದರ್ಸ್' ಜೊತೆಗೆ ಕೆನಡಿ ಮತ್ತು ರೇಗನ್ ಹೆಸರುಗಳನ್ನು ಅಮೆರಿಕನ್ನರು ಆರಾಧಿಸುತ್ತಾರೆ. ಶತ್ರುಗಳನ್ನೂ ಸಮ್ಮೋಹನಗೊಳಿಸುವ ವ್ಯಕ್ತಿತ್ವ ಅವರಲ್ಲಿತ್ತೇನೋ? (ನಮ್ಮ ಇಂದಿನ ಅಧ್ಯಕ್ಷ ಟ್ರಂಪ್ ಮಹಾಶಯ ರೇಗನ್‌ನನ್ನು ಅನುಕರಿಸುತ್ತ, ತಾನು ಅವನಿಗಿಂತ ಮಿಗಿಲು ಎಂದು ಕೊಚ್ಚಿಕೊಳ್ಳುತ್ತಾ ಅಧಿಕಾರಮತ್ತನಾಗಿದ್ದಾನೆ, ಯಾವಾಗ ಜಾರುತ್ತಾನೋ ಕಾದು ನೋಡಬೇಕಿದೆ!).

**ಸಮರ್ಥ ಬುಷ್**: ರೇಗನ್‌ನಿಗೆ ದೊರೆತ ಎಂಟು ವರ್ಷ ಸಾಲದೇನೋ ಎಂಬಂತೆ ಆತನ ಉಪಾಧ್ಯಕ್ಷ ಬುಷ್ (ಸೀನಿಯರ್) ೪೧ನೇ ಅಧ್ಯಕ್ಷನಾದ (೧೯೮೯-೯೩). ಈತ ಸಮರ್ಥನೇ, ಒಳ್ಳೆಯ ಅನುಭವಸ್ಥ, ಯುದ್ಧನೀತಿ ಮತ್ತು ಕೂಟನೀತಿಗಳಲ್ಲಿ ನಿಪುಣ, ಆದರೆ, ಅವನ ಲೆಕ್ಕಾಚಾರ ಅವನ ರಾಜಕೀಯ ಭವಿಷ್ಯಕ್ಕೆ ಅಷ್ಟೇನೂ ಪ್ರಯೋಜನಕಾರಿಯಾಗಲಿಲ್ಲವೆಂದೇ ಹೇಳಬೇಕು. 'ಇರಲಾರದೇ ಇರುವೆ ಬಿಟ್ಟುಕೊಂಡ' ಎಂಬಂತೆ ಇರಾಕಿನ ಸರ್ವಾಧಿಕಾರಿ ಸದ್ದಾಮ್ ಹುಸೇನನನ್ನು ಕುವೈತ್ ಮೇಲೆ ಛೂ ಬಿಟ್ಟು, ತಾನು ಅವನ ಜೊತೆಗೇ ಇರುವಂತೆ ನಂಬಿಸಿ ಕುತ್ತಿಗೆ ಕೊಯ್ದ! ಅಮೆರಿಕವನ್ನು ನಂಬಿದ ಸದ್ದಾಮ ಕುವೈತಿನ ತೈಲವನ್ನು ಕದಿಯಹೊರಟ. ಕುವೈತಿಗಳು ತರಲೆ ಮಾಡಿ ವಿರೋಧಿಸಿದಾಗ ಅವರ ಮೇಲೆ ಯುದ್ಧ ಸಾರಿದ, ಅವರನ್ನು ಸುಲಭವಾಗಿ ಬಗ್ಗುಬಡಿಯುವೆನೆಂದು ನಂಬಿದ. ಆದರೆ, ನಡೆದದ್ದೇ ಬೇರೆ, ಅಮೆರಿಕಾ ಕುವೈತಿನ ರಕ್ಷಣೆಗೆ ಧಾವಿಸಿ, ಇರಾಕಿನ ಸರ್ವನಾಶಕ್ಕೆ ನಾಂದಿ ಹಾಡಿತು. ಈ ಕೂಟನೀತಿಯ ಬ್ರಹ್ಮನೇ ನಮ್ಮ ಸೀನಿಯರ್ ಬುಷ್ ಮಹಾಶಯ. ಅಮೆರಿಕವೇ ಹುಟ್ಟುಹಾಕಿ ಉಳಿಸಿ ಬೆಳೆಸಿದ ಸದ್ದಾಮ, ಅಮೆರಿಕ ಹೇಳಿದಂತೆ ಕೇಳದಿದ್ದಾಗ ಅವನಿಗೆ ಬುದ್ಧಿ ಕಲಿಸಲೆಂದೇ, ಮಧ್ಯಪ್ರಾಚ್ಯದ ಸಮತೋಲನವನ್ನೇ ನಾಶಮಾಡುವ ಹುನ್ನಾರವನ್ನು ಅಮೆರಿಕ ರಾಜಾರೋಷವಾಗಿಯೇ ಮಾಡಿತು. ಆದರೆ, ಸದ್ದಾಮನನ್ನು ಮತ್ತು ಅವನ ಬಲಶಾಲೀ 'ರಿಪಬ್ಲಿಕನ್ ಗಾರ್ಡ್ಸ್' ಸೈನ್ಯವನ್ನೂ ನಾಶಮಾಡದೇ ಉಳಿಸಿದ್ದು ಅವನ ದೌರ್ಬಲ್ಯವಾಗಿಬಿಟ್ಟಿತು. ಆ ಸಂದರ್ಭದಲ್ಲಿ ಇರಾಕಿನಲ್ಲಿ ಅಮೆರಿಕಾ ನಡೆಸಿದ ಪ್ರಾಣಹಾನಿ ಮತ್ತು ವಿನಾಶ ವರ್ಣನಾತೀತ. ಅದರ ಫಲಿತಾಂಶವನ್ನು ಇಡೀ ಮಧ್ಯಪ್ರಾಚ್ಯ ಇನ್ನೂ ಅನುಭವಿಸುತ್ತಲೇ ಇದೆ. ಬುಷ್ ಯುದ್ಧದಲ್ಲಿ ಗೆದ್ದರೂ ಮುಂದಿನ ಚುನಾವಣೆಯಲ್ಲಿ ಗೆಲ್ಲಲಿಲ್ಲ! ಹನ್ನೆರಡು ವರ್ಷಗಳ ರಿಪಬ್ಲಿಕನ್ ಆಳ್ವಿಕೆಯ ನಂತರ ಬದಲಾವಣೆಯನ್ನು ಬಯಸುತ್ತಿದ್ದ ಅಮೆರಿಕದ ಪ್ರಜೆ.

**ರಾಜೀನಾಮೆಗಿಂತ ಛೀಮಾರಿಯೇ ಲೇಸು:** ಮುಂದೆ ೪೭ನೇ ಅಧ್ಯಕ್ಷನಾಗಿ ಕ್ಲಿಂಟನ್ (೧೯೯೩-೨೦೦೧) ಎಂಬ ಯುವ ರಾಜಕಾರಣಿ ಪ್ರತ್ಯಕ್ಷನಾದ. ಕ್ಲಿಂಟನ್ ಬುದ್ಧಿವಂತ, ಪ್ರತಿಭಾವಂತ, ಆದರೆ ಅಂಥಾ ಗುಣವಂತನಲ್ಲ! ಆತನ ರಾಜ್ಯಭಾರದ ಎಂಟು ವರ್ಷಗಳು ಹಲವು ಕಾರಣಗಳಿಂದ ಹೆಚ್ಚು ಕಾಲ ನೆನಪಿನಲ್ಲುಳಿಯತಕ್ಕವು. ಈ ಎಂಟು ವರ್ಷಗಳು ಸಮೃದ್ಧಿಯ ದಿನಗಳು. ಎಲ್ಲರಿಗೂ ಉದ್ಯೋಗ, ಎಲ್ಲರ ಕೈಯಲ್ಲೂ ಕಾಸು, ಎಲ್ಲೆಲ್ಲೂ

ವಿಕಾಸ. ವಿಶ್ವದಲ್ಲಿ ಶಾಂತಿಯಿದ್ದ ದಿನಗಳು. ಎಲ್ಲವೂ ಚೆನ್ನಾಗಿದ್ದರೂ ಅವನ ಲಂಪಟತನ ಅವನನ್ನು ಬಲಿ ತೆಗೆದುಕೊಂಡಿತು. ಶ್ವೇತಭವನದಲ್ಲಿ ಮಾನಿಕಾ ಲುವೆನ್ಸ್ಕಿ ಎಂಬ ಇನ್‌ಟರ್ನ್ ಆಗಿ ಕೆಲಸಕ್ಕೆ ಸೇರಿದ್ದ ಒಬ್ಬಳು ತರುಣಿಯೊಂದಿಗೆ ಚೆಲ್ಲಾಟವಾಡಿ ಸಿಕ್ಕಿಬಿದ್ದ. ಅವನ ಉನ್ನತಿಯನ್ನು ಸಹಿಸದೇ ಸಮಯ ಕಾಯುತ್ತಿದ್ದ ರಾಜಕೀಯ ವೈರಿಗಳಿಗೆ ಅವನೇ ಆಯುಧಗಳನ್ನು ಒದಗಿಸಿಬಿಟ್ಟ. ಕಾಂಗ್ರೆಸ್ ಅವನಿಗೆ ಛೀಮಾರಿ ಹಾಕಿತು (ಇಂಪೀಚ್ಮೆಂಟ್), ಆದರೆ ಅವನು ಭಂಡ, ನಿರ್ಲಜ್ಜ, ರಾಜಿನಾಮೆ ಕೊಡದೇ ತನ್ನ ಆಡಳಿತಾವಧಿಯನ್ನು ಚೆನ್ನಾಗೇ ಮಾಡಿ ಮುಗಿಸಿದ. ಇಸ್ವಿ ೨೦೦೦ದಲ್ಲಿ 'ವೈ-೨-ಕೆ' ಎಂಬೊಂದು ಸತ್ಯವೋ, ಮಿಥ್ಯವೋ ಎಂದು ಖಡಾಖಂಡಿತವಾಗಿ ಹೇಳಲಾಗದ ಸಾಫ್ಟ್‌ವೇರ್ ಸಮಸ್ಯೆಯೊಂದನ್ನು ಮುಂದುವರೆದ ರಾಷ್ಟ್ರಗಳು ಎದುರಿಸಬೇಕಾಗಿ ಬಂದ ಫಲವಾಗಿ ಭಾರತದಂಥ ಹಲವು ರಾಷ್ಟ್ರಗಳ ಟೆಕ್ಕಿಗಳು ಆ ಸಮಸ್ಯೆಯನ್ನು ಪರಿಹರಿಸುವ ಜಾದೂಗಾರರಾದರು. ಸಹಸ್ರಾರು ಸಂಖ್ಯೆಯಲ್ಲಿ ಅಮೆರಿಕಕ್ಕೆ ಲಗ್ಗೆ ಇಟ್ಟರು, ಕೋಟಿಗಟ್ಟಲೆ ಡಾಲರುಗಳನ್ನು ಗಳಿಸಿ ಭಾರತವನ್ನು ಶ್ರೀಮಂತಗೊಳಿಸಿದರು. ಸಾಕಷ್ಟು ಆದಾಯ ತೆರಿಗೆಯನ್ನು ಕಟ್ಟಿ ಅಮೆರಿಕ ಸರ್ಕಾರದ ಖೋತಾ ಬಜೆಟ್ಟನ್ನು ತುಳುಕುವಂತೆ ಮಾಡಿ ಕ್ಲಿಂಟನ್‌ಗೆ ಒಳ್ಳೆಯ ಹೆಸರು ಬರುವಂತೆ ಮಾಡಿದರು!

**ಗೊಂದಲಮಯ ಚುನಾವಣೆಯಲ್ಲಿ ಗೆದ್ದೆನೆಂದ ಕುಮಾರ ಬುಷ್:** ಮುಂದಿನ ಚುನಾವಣೆಯಲ್ಲಿ ೪೩ನೇ ಅಧ್ಯಕ್ಷನಾಗಬೇಕಿದ್ದವನು ಕ್ಲಿಂಟನ್ನನ ಉಪಾಧ್ಯಕ್ಷ ಆಲ್ ಗೋರ್, ಆದರೆ ಆದದ್ದೇ ಬೇರೆ. ಅಮೆರಿಕದಂಥ ಮುಂದುವರೆದ ದೇಶದಲ್ಲಿ ಮತಗಳನ್ನು ಎಣಿಸುವಲ್ಲಿ ಇನ್ನಿಲ್ಲದ ಗೊಂದಲವಾಯಿತು (ಭಾರತದ ಚುನಾವಣಾ ಆಯೋಗಕ್ಕೆ ಗುತ್ತಿಗೆ ಕೊಟ್ಟಿದ್ದಿದ್ದರೆ, ಯಾವ ಗೊಂದಲವೂ ಇಲ್ಲದಂತೆ ಎಣಿಕೆಯಾಗಬಹುದಿತ್ತೇನೋ?) ಹೆಚ್ಚಿನ ಸಂಖ್ಯೆಯಲ್ಲಿ ಜನಪ್ರಿಯ ಮತಗಳನ್ನು ಗಳಿಸಿದರೂ (ಫ್ಲಾರಿಡಾ ಪ್ರಾಂತ್ಯವೊಂದರ ಕಾರಣ) ೪೧ನೇ ಅಧ್ಯಕ್ಷ ಹಿರಿಯ ಬುಷ್ಷನ ಮಗ ಕಿರಿಯ ಬುಷ್ ೪೩ನೇ ಅಧ್ಯಕ್ಷನಾಗಿ ಆಯ್ಕೆಯಾದ (೨೦೦೧-೨೦೦೯). ಅವ ಒಳ್ಳೆಯವನೇ, ಆದರೆ ಅಪ್ಪನಂತೆ ಬುದ್ಧಿವಂತನಲ್ಲ. ಟೆಕ್ಸಸ್ ಪ್ರಾಂತ್ಯದ ಗವರ್ನರ್ ಆಗಿ ಅನುಭವವಿತ್ತು, ಮತ್ತು ರಿಪಬ್ಲಿಕನ್ ಪಕ್ಷದ ಬೆಂಬಲ ಚೆನ್ನಾಗಿತ್ತು, ಎಲ್ಲಕ್ಕಿಂತ ಮುಖ್ಯ ಅದೃಷ್ಟ ಚೆನ್ನಾಗಿತ್ತು. ಗೆದ್ದು ಬಂದ. ಆದರೆ, ಸೆಪ್ಟೆಂಬರ್ ೧೧, ೨೦೦೧ರಲ್ಲಿ ಅಮೆರಿಕದ ಸಿರಿಕೇಂದ್ರ (ವರ್ಲ್ಡ್ ಟ್ರೇಡ್ ಸೆಂಟರ್) ಮತ್ತು ರಕ್ಷಣಾದಳಗಳ ಕೇಂದ್ರವಾದ ಪೆಂಟಗನ್ ಮೇಲೆ ಹಲವು ಧರ್ಮಾಂಧರು ನಡೆಸಿದ ದಾಳಿ ಅಮೆರಿಕವನ್ನು ತತ್ತರಿಸುವಂತೆ ಮಾಡಿತು. ಅದರ ಜೊತೆಗೆ, ಅವನ ಮನಸ್ಸಿನಲ್ಲೂ ಒಂದು ಹುಳು ಕೊರೆಯುತ್ತಲೇ ಇತ್ತು! ಸದ್ದಾಮ ಇನ್ನೂ ಉಳಿದೇ ಇದ್ದಾನಲ್ಲ, ಅವನನ್ನು ಹೇಗಾದರೂ ಮಾಡಿ ಮುಗಿಸಿಬಿಡಬೇಕೆಂಬ ದುರ್ಬುದ್ಧಿ ಹುಟ್ಟಿತು. ಮುಖ್ಯವಾಗಿ, ಸದ್ದಾಮ್ ಸೀನಿಯರ್ ಬುಷ್ ಚಿತ್ರವನ್ನು ತನ್ನ ಕಾಲು ತಿಕ್ಕುವ ಫುಟ್ ರಗ್‌ನಂತೆ ಉಪಯೋಗಿಸಿ ಅವಮಾನಗೊಳಿಸುತ್ತಿದ್ದನೆಂದು ತಿಳಿದು ಜೂನಿಯರ್ ಬುಷ್ ಬೆಂಕಿಯಾದ! ಅದರ

ಜೊತೆಗೆ ಅವನ ಉಪಾಧ್ಯಕ್ಷನಾಗಿದ್ದ ಯುದ್ಧಕೋರ ಡಿಕ್ ಚೇನಿಯ ದುರ್ಬೋಧನೆಯ ಪ್ರಭಾವ ಮಿತಿಮೀರಿತ್ತು. ತೈಲವನ್ನು ಉತ್ಪಾದಿಸುವ ಅಮೆರಿಕದ ಕಂಪೆನಿಗಳ ಕೈವಾಡವೂ ಸೇರಿಕೊಂಡಿತು. ಆಕ್ರಮಣ ನಡೆಸಿದ್ದ ಸೌದೀ ರೇಬಿಯದ ಒಸಾಮಾ ಬಿನ್ ಲಾಡೆನ್ನನ್ನೂ ಮತ್ತು ಪಾಕೀಸ್ತಾನದ ಪಾತಕಿಗಳನ್ನೂ ಮರೆತೇ ಬಿಟ್ಟು, ಬುಷ್ ನೇತೃತ್ವದಲ್ಲಿ ಅಮೆರಿಕ ಆಫ್ಘಾನಿಸ್ತಾನದ ಮೇಲೂ ಎರಡನೇ ಬಾರಿ ಇರಾಕಿನ ಮೇಲೂ ಯುದ್ಧ ಸಾರಿತು. ಆಕ್ರಮಣ ಮಾಡಲು ಕಾರಣವನ್ನು ಹುಡುಕಬೇಕಷ್ಟೆ? ಪರಾಕ್ರಮಿಗಳಿಗೆ ಕಾರಣವೂ ಬೇಕೆ? ಅದೇನೂ ಕಷ್ಟವಾಗಲಿಲ್ಲ, 'ತೋಳ–ಕುರಿಮರಿ' ಕಥೆ ಗೊತ್ತಲ್ಲ, "ನೀನೋ–ನಿಮ್ಮಪ್ಪನೋ ಬೈದಿರಬೇಕು" – ಸರಿ ಗೂಢಚಾರರನ್ನು ಕಳಿಸಿ, ಇರಾಕಿನಲ್ಲಿ ವಿನಾಶಕಾರೀ ಆಯುಧಗಳ ಭಾರೀ ಸಂಗ್ರಹಣೆ ಇದೆ ಎಂದು ಒಂದು (ಹಸೀ ಸುಳ್ಳಿನ) ವರದಿಯನ್ನು ತಯಾರಿಸಿ, ಕಾಲಿನ್ ಪವೆಲ್ ಎಂಬ ಸಭ್ಯ ಸೈನ್ಯಾಧಿಕಾರಿಯಿಂದ ಸಂಯುಕ್ತ ರಾಷ್ಟ್ರ ಸಭೆಯಲ್ಲಿ ಹೇಳಿಕೆ ಕೊಡಿಸಿ ಎಲ್ಲರಿಗೂ ನಂಬಿಕೆ ಹುಟ್ಟಿಸಿದರು. ಇದೊಂದು ರೀತಿಯಲ್ಲಿ ಧರ್ಮರಾಯನ ಕೈಲಿ ಅಶ್ವತ್ಥಾಮ (ನೆಂಬ ಆನೆಯು) ಸತ್ತ ಮಾತನ್ನು ಉದ್ಘೋಷಿಸಿ ಗುರು ದ್ರೋಣ ಶಸ್ತ್ರ ಸನ್ಯಾಸ ಹೂಡುವಂತೆ ಮಾಡಿ, ಕೌರವನ ಅಂತ್ಯಕ್ಕೆ ಕಾರಣವಾದ ಹಾಗೆ. ಅಂತೂ ಯುದ್ಧಕ್ಕೆ ಕಾರಣ ಸಿಕ್ಕಿಬಿಟ್ಟಿತು, ಜಗತ್ತಿನ ಇತರ ಪ್ರಬಲ ರಾಷ್ಟ್ರಗಳೂ ದನಗೂಡಿಸಿದವು, ಮಿಕ್ಕ ರಾಷ್ಟ್ರಗಳು ಮುಗುಮ್ಮಾಗಿ ತಲೆಯಾಡಿಸಿದವು. ಎಲ್ಲರೂ ಸೇರಿ ಸದ್ದಾಮನನ್ನು ಮುಗಿಸಿಬಿಟ್ಟರು. ಆ ಯುದ್ಧದಲ್ಲಿ ಕ್ರೌರ್ಯ ಮತ್ತು ಅಮಾನವೀಯ ವಿನಾಶ ಮತ್ತೊಮ್ಮೆ ತಾಂಡವವಾಡಿತು. ಇರಾಕ್ ಮತ್ತು ಸುತ್ತಮುತ್ತ ಉಂಟಾದ ಅಲ್ಲೋಲ ಕಲ್ಲೋಲದಿಂದ ಅಲ್ಲಿನ ಜನತೆ ಕಂಗೆಟ್ಟು ಕಂಗಾಲಾಗಿದ್ದಲ್ಲದೇ, ಅಲ್ಲಿ ಉಂಟಾದ ರಾಜಕೀಯ ಅಸ್ಥಿರತೆ ಇನ್ನೂ ಸಮತೋಲನಕ್ಕೆ ಬಂದಿಲ್ಲ. ಕ್ಲಿಂಟನ್ ಆಳ್ವಿಕೆಯಲ್ಲಿ ಬೊಕ್ಕಸದಲ್ಲಿ ಬಿಟ್ಟುಹೋಗಿದ್ದ ಟ್ರಿಲಿಯನ್‌ಗಟ್ಟಲೆ ಡಾಲರಗಳನ್ನು ಈ ಯುದ್ಧ ತಿಂದು ನೀರು ಕುಡಿಯಿತು, ಅಮೇರಿಕದ ಭಂಡಾರ ಬರಿದಾಯಿತು, ದೇಶ ಸಾಲಮಯವಾಯಿತು (ಆದರೆ, ಆ ಹಣ ಎಲ್ಲೂ ಹೋಗಲಿಲ್ಲ, ರಿಪಬ್ಲಿಕನ್ನರ ಪ್ರಿಯ ಮಿತ್ರರುಗಳಾದ ಶ್ರೀಮಂತರ ಜೋಬನ್ನು ಸೇರಿಕೊಂಡಿತು ಅನ್ನಿ, ರಿಪಬ್ಲಿಕನ್ನರಂತೂ ಮೀಸೆ ತಿರುವುವುದನ್ನು ಇನ್ನೂ ಬಿಟ್ಟಿಲ್ಲ.) ಅಲ್ಲಿಗೆ, ರಿಪಬ್ಲಿಕನ್ನರಿಂದ ಒಂದಿಷ್ಟು ಬಿಡುವು ದೇಶಕ್ಕೆ ಬೇಕಾಗಿ, ಜನತೆ ಮತ್ತೆ ಡೆಮೋಕ್ರ್ಯಾಟರತ್ತ ದೃಷ್ಟಿ ಹಾಯಿಸಿತು.

**ಶ್ಯಾಮಲ ವರ್ಣದ ಮೊದಲ ಅಧ್ಯಕ್ಷ ಒಬಾಮ:** ಮುಂದೆ ನಡೆದ ಚುನಾವಣೆ ಅಮೆರಿಕದ ಚರಿತ್ರೆಯ ಒಂದು ಮುಖ್ಯ ತಿರುವನ್ನು ಪಡೆಯಿತು. ಮೊಟ್ಟ ಮೊದಲ ಬಾರಿಗೆ ಕಪ್ಪು ವರ್ಣದ (ಹೆಚ್ಚಿನ ರಾಜಕೀಯ ಅನುಭವವೇ ಇಲ್ಲದ) ಆದರೆ ಅತ್ಯಂತ ಬುದ್ಧಿವಂತನೂ, ಯೋಗ್ಯನೂ ಆದ ಯುವಕ ಬರಾಕ್ ಒಬಾಮ ೪೪ನೇ ಅಧ್ಯಕ್ಷನಾಗಿ ಚುನಾಯಿತನಾದ (೨೦೦೯–೨೦೧೭)! ನಿರೀಕ್ಷಿಸಿದಂತೆ, ಅವನ ವಿರೋಧಿಗಳು ಅವನ ಆಳ್ವಿಕೆಗೆ ಏನೇನು ವಿಘ್ನಗಳನ್ನು ಒಡ್ಡಬಹುದೋ ಅದೆಲ್ಲವನ್ನೂ ಒಡ್ಡಿದರು. ಅವನು

ಅಮೆರಿಕದ ಪ್ರಜೆಯೇ ಅಲ್ಲವೆಂದರು. ಅವನ ಜನ್ಮಪತ್ರಿಕೆಯೇ ನಿಜವಲ್ಲವೆಂದರು. ಬಿಳಿ ಮನೆಯಲ್ಲಿ (ಶ್ವೇತಭವನದಲ್ಲಿ) ಕರಿಯನೊಬ್ಬನನ್ನು ಕಂಡು ಕುದಿದರು, ಶಪಿಸಿದರು, ಕೆಟ್ಟದ್ದನ್ನು ಬಯಸಿದರು, ಅಸಹಕಾರವನ್ನು ಘೋಷಿಸಿದರು. ಇಷ್ಟಾದರೂ ದೇಶದ ಪ್ರತಿಯೊಬ್ಬ ಪ್ರಜೆಗೂ ಆರೋಗ್ಯ ವಿಮೆಯನ್ನು ಕೊಡಲು ಆತ ಏರ್ಪಾಡು ಮಾಡಿದ, ಆದರೆ ಅದನ್ನು ಪೂರ್ಣವಾಗಿ ಜಾರಿಗೆ ತರಲು ಅವನ ವಿರೋಧಿಗಳು ಇನ್ನೂ ಅವಕಾಶ ಕೊಟ್ಟಿಲ್ಲವೆಂಬುದು ಕಟುಸತ್ಯ. ಆತ ಕಲ್ಪಿಸಿದ 'ಒಬಾಮಾ ಕೇರ್' ಹದಗೆಟ್ಟು ವಿಸ್ಫೋಟಗೊಳ್ಳುವಂತೆ ಅವನ ರಾಜಕೀಯ ವೈರಿಗಳು ಇಂದಿಗೂ ದುಡಿಯುತ್ತಿರುವುದನ್ನು ನೆನೆಸಿಕೊಂಡರೆ ಅತೀವ ದುಃಖವಾಗುತ್ತದೆ, ಅಮೆರಿಕಾ ಇನ್ನೇನು ಬದಲಾವಣೆಗಳನ್ನು ಕಾಣಬಹುದೋ ಎಂಬ ದಿಗಿಲಾಗುತ್ತದೆ. ಆದರೂ ಧೃತಿಗೆಡದೆ, ಆತ ನಿರುದ್ಯೋಗಿಗಳ ಸಂಖ್ಯೆಯನ್ನು ತಹಬಂದಿಗೆ ತಂದು, ದೇಶದ ಕೋಶವನ್ನು ಮತ್ತೆ ಸಮತೋಲನಗೊಳಿಸುವ ಕಷ್ಟದ ಕೆಲಸವನ್ನು ಮಾಡಿ, ಪ್ರಪಂಚದ ಶಾಂತಿಗಾಗಿ ಶ್ರಮಿಸಿದ. ಇರಾನಿನೊಂದಿಗೆ ಶಾಂತಿಯ ಒಪ್ಪಂದ ಮಾಡಿಕೊಂಡ, ಅಲ್ಲಿಯವರೆಗೂ ವೈರಿಗಳಂತೆ ಕಾಣುತ್ತಿದ್ದ ಕ್ಯೂಬಾ ಜೊತೆಗೆ ಮೈತ್ರಿಯನ್ನು ಘೋಷಿಸಿದ. ಹೆಚ್ಚಿನ ಯಾವ ಕಳಂಕವೂ ಆಡಳಿತದಲ್ಲಿ ಕಾಣಿಸಿಕೊಳ್ಳದಂತೆ ದುಡಿದು ವಿಶ್ರಾಂತನಾದ. (ವಿಶ್ವಶಾಂತಿಗಾಗಿ ದುಡಿದ ಒಬಾಮ ನೊಬೆಲ್ ಪಾರಿತೋಷಕವನ್ನು ಗಳಿಸಿದ್ದರಲ್ಲಿ ಆಶ್ಚರ್ಯವೇನಿಲ್ಲವೆಂದು ಆತನ ಮಿತ್ರರಿಗೆ ಎನಿಸಿದರೂ ರಿಪಬ್ಲಿಕನ್ನರು ಆ ಬಗ್ಗೆ ಇನ್ನೂ ಬಾಯಿ ಬಡಿದುಕೊಳ್ಳುವುದನ್ನು ಬಿಟ್ಟಿಲ್ಲ!).

**ಆತ್ಮರತಿಯಲ್ಲಿ ತೊಡಗಿರುವ ಟ್ರಂಪ್ ಮಹಾಶಯ:** ದೇಶದ ದೌರ್ಭಾಗ್ಯವೆಂದರೆ, ಯಾರು ಒಬಾಮನನ್ನು ಅಮೇರಿಕನ್ನನೇ ಅಲ್ಲವೆಂದು ವಾದಿಸುತ್ತಿದ್ದನೋ, ಒಬಾಮಾ ಜಾರಿಗೆ ತಂದ ದೇಶದ ಪ್ರತಿ ಪ್ರಜೆಗೂ ದೊರಕಬೇಕಿದ್ದ ಆರೋಗ್ಯವಿಮೆಯನ್ನು ಕಿತ್ತುಹಾಕಲು ಶಪಥ ಮಾಡಿದ್ದನೋ ಆ ಟ್ರಂಪ್ ಮಹೋದಯ, ೪೫ನೇ ಅಧ್ಯಕ್ಷನಾಗಿ ಚುನಾಯಿತನಾದ! ಡೆಮೋಕ್ರ್ಯಾಟಿಕ್ ಪಕ್ಷದವರು ಪ್ರಪ್ರಥಮ ಬಾರಿಗೆ ಮಹಿಳಾ ಅಭ್ಯರ್ಥಿಯೊಬ್ಬಳನ್ನು ಚುನಾವಣೆಗೆ ನಿಲ್ಲಿಸಿದ್ದರು. ಆಕೆಯೇ ಹಿಲರಿ ಕ್ಲಿಂಟನ್ (ಅಧ್ಯಕ್ಷ ಬಿಲ್ ಕ್ಲಿಂಟನ್ ಮಡದಿ). ಆಕೆ ತನ್ನ ಪ್ರತಿಸ್ಪರ್ಧಿಗಿಂತ ಜನಪ್ರಿಯ ಮತಗಳ ಲೆಕ್ಕದಲ್ಲಿ ಮೂರು ಮಿಲಿಯನ್'ಗಿಂತ ಹೆಚ್ಚು ಮತಗಳನ್ನು ಪಡೆದಿದ್ದರೂ ಅಮೆರಿಕದ 'ಎಲೆಕ್ಟಾರಲ್ ವೋಟ್ ಗಣನೆಯ' ಲೆಕ್ಕದಿಂದ ಸೋತುಹೋದಳು. ರಷ್ಯಾ ದೇಶ ಅಮೆರಿಕದ ಚುನಾವಣೆಯಲ್ಲಿ ಮೂಗು ತೂರಿಸಿತೆಂದೂ, ಹಿಲರಿಯ ವಿರುದ್ಧ ಸುಳ್ಳು ಸುದ್ದಿಯನ್ನು ಮತದಾರರಲ್ಲಿ ಹಂಚಿತೆಂದೂ, ಆ ಕಾರಣ ಹಿಲರಿ ಸೋತಳೆಂದೂ ಅನೇಕರು ನಂಬಿದ್ದಾರೆ. ಅದರ ಜೊತೆಗೆ, ಚುನಾವಣೆಗೆ ಕೆಲವೇ ದಿನಗಳಿರುವಾಗ ವಿಚಾರಣೆಗಳೆಲ್ಲವನ್ನೂ ಮುಗಿಸಿದ್ದ ಮೊಕದ್ದಮೆಯನ್ನು ಮತ್ತೊಮ್ಮೆ ತೆರೆದು, ಎಫ್.ಬಿ.ಐ. ಮತದಾರರ ಮನಸ್ಸಿನಲ್ಲಿ ಹಿಲರಿಯ ಬಗ್ಗೆ ಅನುಮಾನವುಂಟುಮಾಡಿ ಇದ್ದಕ್ಕಿದ್ದಂತೆ ಮೊಕದ್ದಮೆಯನ್ನು ಮುಗಿಸಿ ಆಕೆ ತಪ್ಪಿತಸ್ಥಳಲ್ಲವೆಂಬ ತೀರ್ಪನ್ನಿತ್ತು,

ಗೊಂದಲವುಂಟುಮಾಡಿದ್ದೇ ಅವಳ ಸೋಲಿಗೆ ಕಾರಣವೆಂದು ಇನ್ನು ಕೆಲವರ ಮತ. ಹೇಗಿದ್ದರೂ ಗೆಲವು ತನ್ನದೇ ಎಂಬ ಧೋರಣೆಯ ಹಮ್ಮಿನಿಂದ ಹಿಲರಿ ಕೆಲವು ರಾಜ್ಯಗಳಿಗೆ ಕೊನೆಯ ದಿನಗಳಲ್ಲಿ ಭೇಟಿ ಕೊಡದೇ ಇದ್ದದ್ದೇ ಅವಳ ಸೋಲಿಗೆ ಕಾರಣವೆಂದು ಕೆಲವರು ನಂಬಿದ್ದಾರೆ. ಒಟ್ಟಿನಲ್ಲಿ ಇವೆಲ್ಲಾ ಸೇರಿಕೊಂಡೇ ಆಕೆ ಸೋತಳು. ಕಪ್ಪು ವರ್ಣದ ಅಧ್ಯಕ್ಷನ ನಂತರ ಮಹಿಳೆಯೊಬ್ಬಳನ್ನು ಅಧ್ಯಕ್ಷ ಸ್ಥಾನದಲ್ಲಿ ನೋಡಲು ಅಮೆರಿಕಾ ಸಿದ್ಧವಿರಲಿಲ್ಲವೆಂಬುದಂತೂ ಖಾತ್ರಿಯಾಯಿತು. ವಿಯಟ್ನಾಮ್ ಯುದ್ಧವೊಂದರಲ್ಲೇ ನಲವತ್ತೈವತ್ತು ಸಾವಿರ ತರುಣರನ್ನು ಕಳೆದುಕೊಂಡ ಅಮೆರಿಕ, ಮಧ್ಯಪ್ರಾಚ್ಯ ಮತ್ತು ಆಗ್ನೇಯ ಏಷ್ಯಾಗಳಲ್ಲಿ ಮಿಲಿಯಗಟ್ಟಲೆ ಅಮಾಯಕರನ್ನು ನಿರ್ದಯೆಯಿಂದ ಕೊಂದ ಅಮೆರಿಕ, ಬೆಂಗಾಜ಼ಿಯಲ್ಲಿ ಕೇವಲ ನಾಲ್ಕು ಮಂದಿ ರಾಯಭಾರಿ ಕಛೇರಿಯ ಸಿಬ್ಬಂದಿ ಸತ್ತಿದ್ದಕ್ಕೆ ಇನ್ನಿಲ್ಲದ ಹಗರಣ ಮಾಡಿತು. ಅದಕ್ಕೆ ಹಿಲರಿಯೇ ಕಾರಣ ಎಂದು ಸಾರಿ ತಿಂಗಳುಗಟ್ಟಲೆ ವಿಚಾರಣೆ ನಡೆಸಿತು. ರಿಪಬ್ಲಿಕನ್ ರಾಜಕಾರಣಿಗಳ ಅಪಪ್ರಚಾರವನ್ನು ನಿರಂತರವಾಗಿ ಫಾಕ್ಸ್ ನ್ಯೂಸ್ ಪ್ರಸಾರ ಮಾಡುತ್ತ, ಒಬ್ಬ ಮಹಿಳೆ ಅಧ್ಯಕ್ಷಳಾಗಬಹುದಿದ್ದ ಅವಕಾಶವನ್ನು ಇಲ್ಲವಾಗಿಸಿತು, ಹಿಲರಿಯ ಭವಿಷ್ಯವನ್ನೇ ನಾಶಮಾಡಿಬಿಟ್ಟಿತು.

**ಇಂದಿನ ದುಃಸ್ಥಿತಿ:** ಕಳೆದ ಒಂದೆರಡು ವರ್ಷಗಳ ಬೆಳವಣಿಗೆಯನ್ನು ಗಮನಿಸಿದರೆ, ಟ್ರಂಪ್ ಮಹಾಶಯನಂಥ ಅಪ್ರಬುದ್ಧ ಅಧ್ಯಕ್ಷ ಇಲ್ಲಿಯವರೆಗೂ ಅಮೆರಿಕದಲ್ಲಿ ಯಾರೂ ಚುನಾಯಿತರಾಗಿರಲಾರರು ಎಂಬುದು ಗಮನಕ್ಕೆ ಬರುತ್ತದೆ. ತನ್ನ ಇಡೀ ಸಂಸಾರವನ್ನು ಆಡಳಿತವರ್ಗದಲ್ಲಿ ಸೇರಿಸಿಕೊಂಡಿರುವ, ತನ್ನ ಆದಾಯ ತೆರಿಗೆಯ ವಿವರವನ್ನು ಬಹಿರಂಗ ಪಡಿಸದ, ಭಂಡ ಈತ. ಮಿತ್ರದೇಶಗಳೊಂದಿಗೆ ಕಾಲು ಕೆರೆದುಕೊಂಡು ಜಗಳವಾಡುವವ ಈತ. ಇತರ ದೇಶಗಳೊಂದಿಗೆ ನಡೆಸುವ ಅಂತಾರಾಷ್ಟ್ರೀಯ ವ್ಯಾಪಾರದ ನಿಯಮಗಳನ್ನು ಮುರಿಯುತ್ತಿರುವವ ಈತ. ಇತರ ದೇಶಗಳೊಂದಿಗೆ ಅಮೆರಿಕದ ಚುನಾಯಿತ ಅಧ್ಯಕ್ಷರು ಹಿಂದೆ ಮಾಡಿಕೊಂಡಿರುವ ಒಪ್ಪಂದಗಳನ್ನು ಮುರಿಯುತ್ತಿರುವವ ಈತ. ಇಲ್ಲಿಯವರೆಗೂ ಅಮೆರಿಕದ ವೈರಿಗಳಾಗಿದ್ದವರನ್ನು ಹತ್ತಿರದ ಬಂಧುಗಳಂತೆ ಕಂಡು ತಬ್ಬಿಕೊಳ್ಳುವವ ಈತ. ಸುಳ್ಳಿನ ಸುರಿಮಳೆಯನ್ನೇ ನಿರ್ಭಯವಾಗಿ ಸುರಿಸುವ, ಸರ್ವಾಧಿಕಾರಿಯಂತೆ ನಡೆದುಕೊಳ್ಳುತ್ತಿರುವವ ಈತ. ಅಮೆರಿಕಾ ದೇಶಕ್ಕೆ ಬಂದು ನೆಲೆಸಬಯಸುವ ನಿರಾಶ್ರಿತರ ಸಂಸಾರಗಳನ್ನು ಒಡೆದು ತಾಯಿಯರಿಂದ ಮಕ್ಕಳನ್ನು ಬೇರ್ಪಡಿಸಿ ಬೋನುಗಳಲ್ಲಿ ಕೂಡಿಹಾಕುತ್ತಿರುವವ ಈತ. ಅಮೆರಿಕದ ಹತ್ತಿರದ ಮಿತ್ರದೇಶಗಳಾದ ಕೆನಡಾ, ಯೂರೋಪಿಯನ್ ಒಕ್ಕೂಟ ಮುಂತಾದವರ ಜೊತೆ ಇರುವ ನಿಕಟ ಸಂಪರ್ಕವನ್ನು ಕಡಿದುಕೊಳ್ಳುತ್ತಾ ಬದ್ಧವೈರಿಯಾದ ರಷ್ಯಾ ಜೊತೆ ಸ್ನೇಹಹಸ್ತ ನೀಡುತ್ತಿರುವವ ಈತ. ಇಂಥಾ ಟ್ರಂಪ್ ಮಹಾಶಯ ಅಮೆರಿಕವನ್ನು, ವಿಶ್ವವನ್ನು ಯಾವ ದಿಕ್ಕಿನಲ್ಲಿ ಓಡಿಸಿಕೊಂಡು ಹೋಗುತ್ತಾನೋ ಕಾದು ನೋಡಬೇಕಿದೆ. ಆದರೆ ಇಂಥ ಲಂಪಟನೂ, ವರ್ಣದ್ವೇಷಿಯೂ, ಸ್ವಾರ್ಥಿಯೂ, ಅಸಹಿಷ್ಣುವೂ ವಿಶ್ವದ ಅತಿ ಶಕ್ತಿಶಾಲೀ ದೇಶದ ಅಧ್ಯಕ್ಷನಾಗಿದ್ದಾನೆಂದರೆ

ಅಚ್ಚರಿಯಾಗುತ್ತದೆ. ಅವನ ಕೈಯಲ್ಲಿ ಅಮೆರಿಕದ ಅಣ್ವಸ್ತ್ರಗಳನ್ನು ವಿಶ್ವದ ಯಾವ ದೇಶದ ಮೇಲೆ ಬೇಕಾದರೂ ಹೂಡುವ ಗುಂಡಿಗಳಿವೆಯೆಂದರೆ ನಡುಕವಾಗುತ್ತದೆ. ಅವನನ್ನು ಮೆಚ್ಚಿ ಮತ ಕೊಟ್ಟು ಗದ್ದುಗೆಗೇರಿಸುವವರ ಸಂಖ್ಯೆ ಸಾಕಷ್ಟಿದೆ ಎಂದ ಮೇಲೆ ಪ್ರಜಾಪ್ರಭುತ್ವ ಎತ್ತ ಸಾಗುತ್ತಿದೆ ಎಂಬ ಪ್ರಶ್ನೆ ಏಳದಿರದು! (ಶ್ವೇತಭವನದ ಅಧಿಕಾರಿಗಳೇ ಅವನ ಸ್ಥಿಮಿತವಿಲ್ಲದ ಅಲ್ಪಬುದ್ಧಿಮತ್ತೆಯ ಬಗ್ಗೆ ನಡುಗಿ ಕಿಂಕರ್ತವ್ಯಮೂಢರಾಗಿ ಬೇನಾಮೀ ಲೇಖನಗಳನ್ನು ಬರೆದು ಪತ್ರಿಕೆಗಳಿಗೆ ಕಳುಹಿಸುತ್ತಿದ್ದಾರೆಂದರೆ, ಪರಿಸ್ಥಿತಿಯ ಗಂಭೀರತೆಯನ್ನು ಕಿಂಚಿತ್ತಾದರೂ ಊಹಿಸಿಕೊಳ್ಳಬಹುದೇನೋ?)

**ತಡೆ ಮತ್ತು ಸಮತೋಲನ:** ಅಮೆರಿಕದ ಸಂವಿಧಾನವನ್ನು ಕಡೆದ ಶಿಲ್ಪಿಗಳು ಸಾಕಷ್ಟು ದೂರಾಲೋಚನೆಯಿಂದ 'ತಡೆ ಮತ್ತು ಸಮತೋಲನ' (ಚೆಕ್ಸ್ ಅಂಡ್ ಬ್ಯಾಲೆನ್ಸಸ್) ಸೂತ್ರವನ್ನನುಸರಿಸಿ, ಆಡಳಿತಕ್ರಮವನ್ನು ರೂಪಿಸಿದ್ದಾರೆ. ಈ ಸೂತ್ರದ ಪ್ರಕಾರ, ಇಡೀ ದೇಶದ ಜನತೆ ಆಯ್ಕೆ ಮಾಡುವ ಒಬ್ಬ ಅಧ್ಯಕ್ಷ ದೇಶದ ಕಾನೂನಿಗೆ ಒಪ್ಪಿಗೆ ನೀಡಿ ಅದನ್ನು ಜಾರಿಮಾಡುವ ಆಡಳಿತದ ರೂವಾರಿ. ರಾಷ್ಟ್ರಹಿತಕ್ಕೆ ಬೇಕಾಗುವ ಕಾನೂನನ್ನು ಪ್ರಸ್ತಾವಮಾಡಿ, ಅದರಿಂದಾಗಬಹುದಾದ ಅನುಕೂಲ-ಪ್ರತಿಕೂಲಗಳನ್ನು ಕೂಲಂಕಷವಾಗಿ ವಿಶ್ಲೇಷಿಸಿ ಅಂತಿಮ ಕರಡನ್ನು ಸಿದ್ಧಪಡಿಸಿ ಅಧ್ಯಕ್ಷನ ಸಹಿಗಾಗಿ ಕಳುಹುವ ಜವಾಬ್ದಾರಿ ಅಮೆರಿಕದ 'ಕಾಂಗ್ರೆಸ್'ಗೆ. ಕಾಂಗ್ರೆಸ್ಸ್ ಎಂದರೆ ಎರಡು ಘಟಕಗಳುಳ್ಳ ಸಂಸ್ಥೆ: ಪ್ರತಿ ಪ್ರಾಂತ್ಯ ಚುನಾಯಿಸುವ ಎರಡೆರಡು ಸೆನೆಟರುಗಳ 'ಮೇಲ್ಮನೆ' ಮತ್ತು ಜನಸಂಖ್ಯೆಗೆ ಅನುಗುಣವಾಗಿ ಚುನಾಯಿತರಾಗುವ ಐವತ್ತು ಪ್ರಾಂತ್ಯಗಳ ಸುಮಾರು ಐನೂರಕ್ಕೂ ಮಿಕ್ಕು ಭೌಗೋಳಿಕ ಕ್ಷೇತ್ರಗಳ ಪ್ರತಿನಿಧಿಗಳ 'ಕೆಳಮನೆ'. ಕಾನೂನಿನ ವಿಷಯದಲ್ಲಿ ಭಿನ್ನಾಭಿಪ್ರಾಯ ಉಂಟಾದಲ್ಲಿ ಅದನ್ನು ವಿಶ್ಲೇಷಿಸಿ ಸಂವಿಧಾನದ ಅಡಿಯಲ್ಲಿ ಅದರ ಅರ್ಥವನ್ನು ವಿವರಿಸಲು ಪ್ರಾಂತೀಯ ಮತ್ತು ರಾಷ್ಟ್ರೀಯ ನ್ಯಾಯಾಲಯಗಳ ಹಂದರ. ಇವರೆಲ್ಲರ ಮೇಲೆ ಕಣ್ಣಿಡಲು ಸ್ವತಂತ್ರವಾದ ಸಮಾಚಾರ ಮಾಧ್ಯಮ! ಹೀಗೆ, 'ಪ್ರಜೆಯೇ ಸರ್ವಶಕ್ತ' ಎಂಬ ಸೂತ್ರದ ಶಕ್ತಿಶಾಲೀ ವ್ಯವಸ್ಥೆಯೇ ಅಮೆರಿಕದ ಪ್ರಜಾಪ್ರಭುತ್ವದ ಆಧಾರಸ್ತಂಭಗಳು. ಅಲ್ಲದೇ, ಪ್ರತಿಯೊಂದು ಅಂಗದ ಕರ್ತವ್ಯಗಳು, ಅವುಗಳ ಅಧಿಕಾರ ಮತ್ತು ಇತಿಮಿತಿಗಳು ಪ್ರತ್ಯೇಕವಾಗಿ ಸ್ಪಷ್ಟಪಡಿಸಲ್ಪಟ್ಟಿವೆ. ಹೀಗಿದ್ದರೂ ಪಕ್ಷಗಳ ರಾಜಕೀಯ ಅಮೆರಿಕದ ಆಂತರಿಕ ಮತ್ತು ವಿದೇಶಾಂಗ ನೀತಿಗಳನ್ನು ಆಗಿಂದಾಗ್ಗೆ ಮೇಲೆ ಕೆಳಗೆ ಮಾಡುತ್ತಲೇ ಬಂದಿದೆ. ಇತ್ತೀಚೆಗೆ, ಮತದಾನದ ಪ್ರಕ್ರಿಯೆ ಅನೇಕ ವೇಳೆ ಗೊಂದಲವನ್ನುಂಟುಮಾಡುತ್ತಲೇ ಇದೆ. ಚುನಾಯಿತರಾಗಲು ಬೇಕಾದ ಹಣ ಮಿತಿಮೀರಿ ಬೆಳೆದಿರುವುದರಿಂದ ಶ್ರೀಮಂತರ ಮತ್ತು ದೊಡ್ಡ ದೊಡ್ಡ ಕಂಪನಿಗಳ ಪ್ರಭಾವ ಮತದಾನದ ಫಲಿತಾಂಶದ ಮೇಲೆ ಹೆಚ್ಚಾಗುತ್ತಿದೆ. ಸುದೈವದ ವಿಷಯವೆಂದರೆ, ಅನ್ಯಾಯಮಾರ್ಗವನ್ನು ಅನುಸರಿಸಿದ ನಾಯಕರನ್ನು ಕೆಳಗಿಳಿಸಲೂ ಇಲ್ಲಿನ ವ್ಯವಸ್ಥೆಯಲ್ಲಿ ಅವಕಾಶವಿದೆ. ಈ ಕಳೆದ ಐದು ದಶಕಗಳಲ್ಲಿ, ಚುನಾಯಿತ ಪ್ರತಿನಿಧಿಗಳು ತಪ್ಪುಗಳನ್ನು ಮಾಡುತ್ತಲೇ ಇದ್ದಾರೆ, ಹಲವರು

ಸಿಕ್ಕಿಬಿದ್ದು ದಂಡನೆಯನ್ನು ಅನುಭವಿಸಿಯೂ ಇದ್ದಾರೆ.

**ಸಮಾರೋಪ:** ನಿಕ್ಸನ್ನನಿಂದ ಟ್ರಂಪನವರೆಗೆ ಚಕ್ರ ಒಂದು ಸಂಪೂರ್ಣ ಸುತ್ತು ಹೊಡೆದಿದೆ. ಛೀಮಾರಿಗೆ ಒಳಗಾಗುವ ಬದಲು ರಾಜೀನಾಮೆ ನೀಡಿದ ನಿಕ್ಸನ್ ಒಂದು ಕಡೆಯಾದರೆ, ಯಾವ ಛೀಮಾರಿಗೂ ಹೆದರದ ಭಂಡ ಟ್ರಂಪ್ ಮತ್ತೊಂದು ಕಡೆ ಇದ್ದಾನೆ. ಆತ ಚುನಾಯಿತನಾದ ದಿನದಿಂದಲೂ ಕುದಿಯುತ್ತಿರುವ ಕೊಳಗವನ್ನು ಗೊಟಾಯಿಸುತ್ತಲೇ ಇದ್ದಾನೆ. ಮಿತ್ರ ದೇಶಗಳೇ ಇರಲಿ, ಶತ್ರುದೇಶಗಳೇ ಇರಲಿ, ಎಲ್ಲರೂ 'ಮುಂದೇನು?' 'ಮುಂದೇನು?' ಎಂದು ಗಾಬರಿಯಿಂದ ಅಸ್ಥಿರರಾಗುವಂತೆ ತನ್ನ ಆಟವನ್ನು ಆಡುತ್ತಿದ್ದಾನೆ. ಯಾರೂ ಮಾಡದದಿದ್ದನ್ನು ತಾನು ಮಾಡುವೆನೆಂಬ ಹುಚ್ಚು ದುರಹಂಕಾರ ಅವನಲ್ಲಿ ಇಟ್ಟಾಡುತ್ತಿದೆ. ತನ್ನ ಮಾರ್ಗವನ್ನು ಅನುಮೋದಿಸದವರನ್ನು ವಜಾ ಮಾಡುವುದೇ ಆತನ ದೊಡ್ಡ ಪ್ರತಿಭೆಗಳಲ್ಲಿ ಒಂದಾಗಿದೆ. ಚೀನಾದೊಂದಿಗೆ ವ್ಯಾಪಾರಯುದ್ಧ, ಮಿತ್ರಹೀನ ಉತ್ತರ ಕೊರಿಯಾದೊಂದಿಗೆ ಮೈತ್ರಿಯ ನಾಟಕ, ಒಪ್ಪಂದವಿರುವ ಇರಾನಿನೊಂದಿಗೆ ವಾಗ್ದಾನದ್ರೋಹ, ನೆಚ್ಚಿನ ಮೈತ್ರಿಕೂಟವಾದ ಯೂರೋಪಿನೊಂದಿಗೆ ಅನಗತ್ಯ ವೈಮನಸ್ಯ, ನೆರೆಯವರಾದ ಕೆನಡಾ ಮತ್ತು ಮೆಕ್ಸಿಕೋ ಜೊತೆ ಕಾಲು ಕೆರೆದುಕೊಂಡು ಕಲಹ, ಬದ್ಧ ವೈರಿಯಾದ ರಶ್ಯಾದೊಂದಿಗೆ ಪ್ರೇಮ ಸಲ್ಲಾಪ! ಅಮೆರಿಕಕ್ಕೆ ಉತ್ತಮ ಭವಿಷ್ಯವನ್ನರಸಿ ಕಾನೂನು ರೀತ್ಯಾ ಬರುವ ವಲಸಿಗರಲ್ಲಿ ಮತ್ತು ನಿರಾಶ್ರಿತರಾಗಿ ಆಶ್ರಯ ಬಯಸಿ ಬರುವವರಲ್ಲಿ ಕಾನೂನನ್ನು ಗೌರವಿಸುವವರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ, ಆದರೂ, ಕಾನೂನನ್ನು ಲೆಕ್ಕಿಸದೇ ಒಳನುಗ್ಗುವ ಹಲವರಿದ್ದಾರೆ. ಈ ಸಮಸ್ಯೆ ಹಳೆಯದು, ಹಿಂದಿನ ಯಾವ ಅಧ್ಯಕ್ಷನಿಗೂ ಇದನ್ನು ಸರಿಪಡಿಸಲು ಸಾಧ್ಯವಾಗಿಲ್ಲ. ಆದರೆ, ಟ್ರಂಪ್ ಮಹಾಶಯ ಒಂದೇ ಏಟಿಗೆ ಎಲ್ಲ ಸಮಸ್ಯೆಗಳಿಗೂ ಪರಿಹಾರವನ್ನು ಮಂತ್ರದಂಡದಿಂದ ಒದಗಿಸುವ ಸನ್ನಾಹದಲ್ಲಿ ಅಮಾನುಷವಾಗಿ ವರ್ತಿಸುತ್ತಿದ್ದಾನೆ. ಒಂದೇ ಎರಡೇ ಟ್ರಂಪ್ ಆಟದ ವೈಖರಿ? ಇದು ಎಲ್ಲಿ, ಯಾವಾಗ, ಯಾವ ರೀತಿಯಲ್ಲಿ ಪರ್ಯವಸಾನಗೊಳ್ಳುವುದೋ ಕಾದು ನೋಡಬೇಕಿದೆ. ಆತನ ಟೀಮಿನಲ್ಲಿದ್ದ ಖದೀಮರು ಒಬ್ಬೊಬ್ಬರಾಗಿ ಕಾನೂನಿನ ಬಲೆಗೆ ಬೀಳುತ್ತಲೇ ಇದ್ದಾರೆ. ಯಾವಾಗ ಟ್ರಂಪ್ ಸಿಕ್ಕಿಬೀಳುತ್ತಾನೋ ಹೇಳಲಾಗದು. ಅವ ಮಹಾ ಅದೃಷ್ಟವಂತ, ಹೀಗಾಗಿ ಸಿಕ್ಕಿಬೀಳದೇ ಇರುವ ಸಾಧ್ಯತೆಯೇ ಹೆಚ್ಚು!

ಬದಲಾವಣೆ ಎಂಬುದು ಅನಿವಾರ್ಯ ಮತ್ತು ಅನೇಕ ವೇಳೆ ಅಪೇಕ್ಷಣೀಯ. ರಾಜಕೀಯದಲ್ಲಿ ಏನೇ ಬದಲಾವಣೆಯಾದರೂ ರಾಜಕಾರಣಿಗಳ ಸ್ವಾರ್ಥ, ಲೋಭ ಮತ್ತು ಸಂಕೀರ್ಣತೆ ಬದಲಾಗುವುದು ಸಾಧ್ಯವಿಲ್ಲವೇನೋ? ಬದಲಾವಣೆಯನ್ನು ಬಯಸುವವರಿಗೆ ಹಲವು ಬದಲಾವಣೆಗಳಿಂದ ವಾಕರಿಕೆ ಬಂದರೆ ಅಚ್ಚರಿಯಿಲ್ಲ, ಆದರೆ ಬದಲಾವಣೆಯೊಂದೇ ತಪ್ಪಿಸಲಾಗದ ನಿತ್ಯಸತ್ಯ! ಅದೊಂದು ರೀತಿ ಮಹಿಳೆಯರ ರವಿಕೆಯ ತೋಳು, ಕತ್ತು ಮತ್ತು ಬೆನ್ನಿನ ವಿನ್ಯಾಸದಂತೆ ಮೇಲಕ್ಕೂ ಕೆಳಕ್ಕೂ ಉದ್ದಕ್ಕೂ ಅಗಲಕ್ಕೂ ಲಾಳೀ ಹೊಡೆಯುವ ಚಚ್ಚೌಕ-ಚಕ್ರ!

*

## ಮಾತೃಭೂಮಿ ಶಾಪಿಂಗ್ ಮಾಲ್ ಆದಾಗ

■ ನಳಿನಿ ಮೈಯ, Darien, IL.

ಮೊನ್ನೆ ತಾನೆ ಊರಿಗೆ ಹೋಗಿದ್ದೆ
ನನ್ನ ಇಂಡಿಯಾ! ನಾನು ಹುಟ್ಟಿ ಬೆಳೆದ ತಾಣ!
ಅಲ್ಲಿ ನೆರೆಮನೆಯವರೂ ಬಂಧುಗಳಿದ್ದಂತೆ
ಹೂ ಮಾರುವವರು, ಹಾಲು ಮಾರುವವರು
ಎಲ್ಲರೂ ಆಪ್ತರೇ
ಕುಶಲ ಕೇಳಾಟ, ಒಡನಾಟ, ರೇಗಾಟ, ಗೊಣಗಾಟ, ಕುಣಿದಾಟ
ಎಲ್ಲದರಲ್ಲೂ ಆತ್ಮೀಯತೆ, ಆಪ್ಯಾಯಮಾನತೆ!
ಎಂದೆಲ್ಲ ಕನವರಿಸುತ್ತಾ

ಹೋಗಿ ನೋಡಿದರೆ...
'ಹಾಲಿಗೆ ನೀರು ಬೆರೆಸಿದ್ದೀ' ಎಂದು ತಕರಾರು ಮಾಡಲು
ಹಾಲಿನವನೇ ಇಲ್ಲ
ಚೌಕಾಸಿ ಮಾಡಲು ಹೂವಾಡಿಗನಿಲ್ಲ, ಹಾವಾಡಿಗನೂ ಇಲ್ಲ
ಬಳೆಗಾರ ಚನ್ನಯ್ಯನಿಲ್ಲ, ಚಮ್ಮಾರ ಮಾದಯ್ಯನಿಲ್ಲ
'ಮಲ್ಗೆ ವೂ', 'ಅಳೆ ಪಾತ್ರೆ' ಎಂದೆಲ್ಲ ಕೂಗುತ್ತಾ ಬೀದಿಯಲ್ಲಿ ಹೋಗುವವರಿಲ್ಲ!
ಹಣ್ಣು, ತರಕಾರಿ ಎಲ್ಲ ಪ್ಲಾಸ್ಟಿಕ್ ಕೊಟ್ಟೆಯೊಳಗೆ
ಮುಖಕ್ಕೆ ಬೆಲೆ ಚೀಟಿ ಅಂಟಿಸಿಕೊಂಡು ಕುಳಿತಿವೆ
ಸ್ಪರ್ಶ ಸುಖವಿಲ್ಲ, ಗಂಧ ಸುಖವಿಲ್ಲ
ಮನುಷ್ಯರೂ ಅಷ್ಟೇ
ಪಾರದರ್ಶಕ ಕೋಟೆಯೊಳಗೆ ಯೂನಿಫಾರಂ ಧರಿಸಿ ನಿಂತ
ಸೇಲ್ಸ್ ಗರ್ಲ್, ಸೇಲ್ಸ್ ಮ್ಯಾನುಗಳು
ಯೋಗಕ್ಷೇಮ ವಿಚಾರಣೆ ಇಲ್ಲ, ಸ್ನೇಹದ ನಗುವಿಲ್ಲ

ಇಡೀ ಇಂಡಿಯಾವೇ ಒಂದು ಶಾಪಿಂಗ್ ಮಾಲ್ ಆಗಿ
ಅಲ್ಲಿ ನಿಯಾನ್ ಲೈಟಿನಲ್ಲಿ ದಿಕ್ಕು ತೋರದೆ
ತಬ್ಬಿಬ್ಬಾಗಿ ನಿಂತಿದ್ದ ಗಿರಾಕಿ ನಾನಾಗಿದ್ದೆ
ತಾಯಿಯನ್ನು ಕಳಕೊಂಡ ಅನಾಥೆಯಾಗಿದ್ದೆ
ತವರನ್ನು ಕಳಕೊಂಡ ತಬ್ಬಲಿ ಮಗಳಾಗಿದ್ದೆ
ನನ್ನೂರಲ್ಲೇ ಪರಕೀಯಳಾಗಿದ್ದೆ ನಾನು

ವಾಪಾಸು ಬಂದಾಗ...
ಪಕ್ಕದ ಮನೆಯ ಸೂಸನ್ನು, ಆಚೆ ಮನೆಯ ಕ್ಯಾರೆನ್ನು
'ವೆಲ್ಕಂ ಬ್ಯಾಕ್' ಎನ್ನುತ್ತಾ ಮುಗುಳ್ನಕ್ಕರು
ಅಲ್ಲಿತ್ತು ಆಪ್ತತೆ, ಅಲ್ಲಿತ್ತು ಆತ್ಮೀಯತೆ
ಮತ್ತೆ 'ಮನೆ'ಗೆ ಬಂದ ಸಂತೃಪ್ತಿಯ ಭಾವ ಎದೆಯಲ್ಲಿ
ಕೈಯಲ್ಲಿದ್ದ ಪರ್ಸ್ ಒಳಗಿಂದ ಅಮೆರಿಕನ್ ಪಾಸ್ ಪೋರ್ಟ್
ನನ್ನ ಕಡೆ ನೋಡಿ ಕಣ್ಣು ಮಿಟುಕಿಸಿ ನಗುತ್ತಿತ್ತು.

*

# ನಾ ಕಂಡಂತೆ ನ್ಯೂಜೆರ್ಸಿ : ಅಂದು-ಇಂದು

■ ಡಾ. ಎಂ. ಜಿ. ಪ್ರಸಾದ್, Maplewood, NJ.

**ಹಿನ್ನೆಲೆ**

ಕಳೆದ ಮೂವತ್ತೆಂಟು ವರ್ಷಗಳಿಂದ ನ್ಯೂಜೆರ್ಸಿಯಲ್ಲಿ ವಾಸವಾಗಿರುವ ನಾನು, ಅಂದಿನಿಂದ ಇಂದಿನವರೆಗೂ ನ್ಯೂಜೆರ್ಸಿಯಲ್ಲಿ ಆಗಿರುವ ಬದಲಾವಣೆಗಳನ್ನು ನನಗೆ ಕಂಡಂತೆ ವಿಚಾರ ಮಾಡಿ ಬರೆಯುವುದೇ ಈ ಲೇಖನದ ಉದ್ದೇಶ. ನಾವು ಗಮನಿಸಿರುವಂತೆ ಅಂದಿನಿಂದ ಇಂದಿನವರೆಗೂ ನ್ಯೂಜೆರ್ಸಿಯಲ್ಲಿ, ನಮ್ಮ ಜೀವನದ ಮೇಲೆ ಪ್ರಭಾವವನ್ನು ಉಂಟುಮಾಡುವ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಆಧ್ಯಾತ್ಮಿಕ ಕ್ಷೇತ್ರಗಳಲ್ಲಿ ಬಹಳ ಬದಲಾವಣೆಗಳು ಆಗಿವೆ. ಈ ಬದಲಾವಣೆಗಳು ನಮ್ಮ ಜೀವನದಲ್ಲಿ ಮುಖ್ಯವಾದ ಪಾತ್ರಗಳನ್ನು ವಹಿಸುವುದಷ್ಟೇ ಅಲ್ಲದೆ ಅಮೆರಿಕಾದ ಸಮಾಜದಲ್ಲಿ ಆಗುತ್ತಿರುವ ಪರಿವರ್ತನೆಗಳನ್ನೂ ಎತ್ತಿ ಹಿಡಿಯುತ್ತವೆ.

**ನ್ಯೂಜೆರ್ಸಿಗೆ ಬಂದ ದಾರಿ**

ನನ್ನ ಜೀವನದ ಮೊದಲ ೨೭ ವರ್ಷಗಳನ್ನು ಬೆಂಗಳೂರು ಮತ್ತು ಮದ್ರಾಸುಗಳಲ್ಲಿ ಕಳೆದೆನು. ೧೯೭೧ರಲ್ಲಿ ಬೆಂಗಳೂರಿನಲ್ಲಿ ಬಿ.ಇ. ಮೆಕ್ಯಾನಿಕಲ್ ಇಂಜಿನೀರಿಂಗ್ ಡಿಗ್ರಿ ಮುಗಿಸಿ ನಂತರ ೧೯೭೨ರವರೆಗೆ ಬಿಎಂಎಸ್ ಇಂಜಿನೀರಿಂಗ್ ಕಾಲೇಜಿನಲ್ಲಿ ಲೆಕ್ಚರರ್ ವೃತ್ತಿಯಲ್ಲಿದ್ದು, ನಂತರ ೧೯೭೩ರಿಂದ ೧೯೭೭ರವರೆಗೆ ಬೆಂಗಳೂರಿನ ಎಚ್‌ಎಎಲ್‌ನ ಹೆಲಿಕಾಪ್ಟರ್ ವಿಭಾಗದಲ್ಲಿ ವೃತ್ತಿಯನ್ನು ಮಾಡಿ, ನಂತರ ೧೯೭೭ರಿಂದ ೧೯೮೦ರವರೆಗೆ ಅಮೇರಿಕಾದಲ್ಲಿನ ಪರ್ಡ್ಯೂ ವಿಶ್ವವಿದ್ಯಾಲಯದಲ್ಲಿ ಪಿಎಚ್.ಡಿ. ಮಾಡಿ ಶಬ್ದ ವಿಜ್ಞಾನದಲ್ಲಿ ಪ್ರಬಂಧ ಬರೆದೆನು. ನಂತರ ನ್ಯೂಜೆರ್ಸಿಯಲ್ಲಿನ ಸ್ಟೀವನ್ಸ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯ ಮೆಕ್ಯಾನಿಕಲ್ ಇಂಜಿನೀರಿಂಗ್ ವಿಭಾಗದಲ್ಲಿ ೧೯೮೦ರಿಂದ ೨೦೧೭ರವರೆಗೆ ಪ್ರೊಫೆಸರ್ ವೃತ್ತಿಯಲ್ಲಿದ್ದು ೨೦೧೭ರಿಂದ ಪ್ರೊಫೆಸರ್ ಎಮೆರಿಟಸ್ ಆಗಿ

ನೇಮಕಗೊಂಡಿದ್ದೇನೆ. ಹೀಗೆ ೧೯೮೦ರಿಂದ ೨೦೧೭ರವರೆಗೆ ೩೮ ವರ್ಷಗಳ ಕಾಲ ನ್ಯೂಜೆರ್ಸಿಯಲ್ಲಿ ವಾಸವಾಗಿದ್ದೇನೆ.

೧೯೭೭ರಲ್ಲಿ ನಾನು ಅಮೇರಿಕಾಕ್ಕೆ ಬಂದ ಒಂದು ವರ್ಷದ ನಂತರ ಅಂದರೆ ೧೯೭೮ರಲ್ಲಿ ನನ್ನ ಪತ್ನಿ ಗೀತಾ ಹಾಗೂ ನಮ್ಮ ಮೊದಲ ಮಗನಾದ ಒಂದು ವರ್ಷ ವಯಸ್ಸಿನ ತೇಜಸ್ವಿ (ತೇಜು) ನನ್ನನ್ನು ಪರ್ಡ್ಯೂ ವಿಶ್ವವಿದ್ಯಾಲಯದಲ್ಲಿ ಸೇರಿಕೊಂಡರು. ನಂತರ ನನಗೆ ಮತ್ತು ನನ್ನ ಪತ್ನಿ ಗೀತಾಳಿಗೆ ೧೯೮೩ಲ್ಲಿ ನನ್ನ ಎರಡನೇ ಗಂಡು ಮಗು ಯಶಸ್ವೀ (ರಾಜು)ಯ ಜನನ ನ್ಯೂಜೆರ್ಸಿಯಲ್ಲಿ ಆಯಿತು.

ಹೀಗೆ ಸಂಕ್ಷಿಪ್ತವಾಗಿ ನಾನು ಮತ್ತು ನನ್ನ ಕುಟುಂಬ ನ್ಯೂಜೆರ್ಸಿಗೆ ಬಂದ ದಾರಿಯನ್ನು ನೋಡಿದಂತೆ, ನನ್ನ ಮತ್ತು ನನ್ನ ಕುಟುಂಬದ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ಹಿನ್ನೆಲೆಯನ್ನು ಸಂಕ್ಷಿಪ್ತವಾಗಿ ನೀಡಬೇಕು. ಏಕೆಂದರೆ ದೀರ್ಘಕಾಲ ಅಮೇರಿಕಾದಲ್ಲಿ ವಾಸಮಾಡಿರುವಾಗ ಹುಟ್ಟಿ ಬೆಳೆದ ವಾತಾವರಣದಲ್ಲಿ ನಾವು ರೂಢಿಸಿಕೊಂಡು ಬಂದ ಮೌಲ್ಯಗಳು ನಮ್ಮಲ್ಲಿ ಆಳವಾಗಿ ಬೇರೂರಿರುತ್ತವೆ. ಆದ್ದರಿಂದ ನಮ್ಮಲ್ಲಿ ಹಾಗೂ ನಾವು ದೀರ್ಘಕಾಲ ವಾಸಮಾಡಿದ ಅಮೇರಿಕಾದ ನ್ಯೂಜೆರ್ಸಿ ವಾತಾವರಣದಲ್ಲಿ ಪರಸ್ಪರ ಬದಲಾವಣೆಗಳು ಆಗುವುದು ಅನಿವಾರ್ಯ. ನಮ್ಮ ವಾತಾವರಣದಲ್ಲಿ ಆಗುವ ಬದಲಾವಣೆಗಳಿಗೆ ನಾವೂ ಕಾರಣರಾಗುತ್ತೇವೆ. ಆದ್ದರಿಂದ ನಮ್ಮ ಹಿನ್ನೆಲೆಯ ಬಗ್ಗೆ ಸಂಕ್ಷಿಪ್ತವಾಗಿ ಹೇಳುವುದಾದರೆ ಸಾಮಾಜಿಕವಾಗಿ ನಾವು ಮೊದಲಿನಿಂದಲೂ ಸಸ್ಯಾಹಾರಿಗಳಾಗಿ ಕರ್ನಾಟಕದ ವಿಶೇಷವಾಗಿ ಬೆಂಗಳೂರಿನ ಅಡುಗೆಯ ರುಚಿಯಲ್ಲಿ ಬೆಳೆದವರು. ಸಾಂಸ್ಕೃತಿಕ ಕ್ಷೇತ್ರದಲ್ಲಿ ನನಗೆ ನಾಟಕಗಳಲ್ಲಿ ಭಾಗವಹಿಸುವ ಆಸಕ್ತಿಯಿದ್ದು ಚಿಕ್ಕಂದಿನಿಂದಲೂ ಬೆಂಗಳೂರಿನ ಸ್ಕೂಲು ಹಾಗೂ ಕಾಲೇಜುಗಳಲ್ಲಿ ಅನೇಕ ನಾಟಕಗಳಲ್ಲಿ ಭಾಗವಹಿಸಿದ್ದೇನೆ. ನನ್ನ ಪತ್ನಿ ಗೀತಾ ಚಿಕ್ಕಂದಿನಲ್ಲಿ ಭರತನಾಟ್ಯವನ್ನು ಕಲಿತು ಹಾಸನ ಮತ್ತು ಬೆಂಗಳೂರಿನಲ್ಲಿ ಅನೇಕ ಕಾರ್ಯಕ್ರಮಗಳನ್ನು ನೀಡಿದ್ದುಂಟು. ನಂತರ ಆಧ್ಯಾತ್ಮಿಕ ಕ್ಷೇತ್ರದಲ್ಲಿ ನನಗೆ ಆಸಕ್ತಿಯಿದ್ದು, ಬೆಂಗಳೂರು ಹಾಗೂ ಮದ್ರಾಸಿನಲ್ಲಿ ವಿದ್ವಾಂಸರಾದ ಶ್ರೀ ಶ್ರೀನಿವಾಸಮೂರ್ತಿ, ಶ್ರೀ ಶ್ರೀಕಂಠ ಕುಮಾರಸ್ವಾಮಿ ಮತ್ತು ಶ್ರೀ ಪುಟ್ಟನರಸಿಂಹ ಶಾಸ್ತ್ರಿಗಳಿಂದ ವೇದಾಧ್ಯಯನ ಮಾಡಿದೆನು. ಇದರ ಜೊತೆಗೆ ಬೆಂಗಳೂರಿನ ನ್ಯಾಷನಲ್ ಕಾಲೇಜಿನಲ್ಲಿ ಸಂಸ್ಕೃತ ಪ್ರಾಧ್ಯಾಪಕರಾಗಿದ್ದ ಪ್ರೊ. ಎಚ್. ಎಸ್. ವರದದೇಶಿಕಾಚಾರ್ಯ (ಅವರು ಸಂನ್ಯಾಸ ಸ್ವೀಕಾರ ಮಾಡಿ ಶ್ರೀ ಶ್ರೀ ರಂಗಪ್ರಿಯ ಸ್ವಾಮಿಗಳೆಂದು ನಾಮಾಂಕಿತಗೊಂಡರು.) ಅವರಿಂದ ಆಧ್ಯಾತ್ಮಿಕ ಕ್ಷೇತ್ರದಲ್ಲಿ ತೀವ್ರ ಆಸಕ್ತಿ ಹುಟ್ಟಿ ಬೆಳೆದು, ನಂತರ ನಾನು ಕರ್ನಾಟಕದ ಮಹಾಯೋಗಿ ಶ್ರೀ ಶ್ರೀರಂಗ ಸದ್ಗುರುವಿನ ಬಳಿ ಅಧ್ಯಾತ್ಮ ದೀಕ್ಷೆ ಪಡೆದು ಸನಾತನ ಧರ್ಮದಲ್ಲಿ ಆಸಕ್ತಿ ಹಾಗೂ ಶ್ರದ್ಧೆ ಮೂಡಿ ಭಾರತದಲ್ಲಿದ್ದಾಗಲೇ ನನ್ನ ಜೀವನದಲ್ಲಿ ಬದಲಾವಣೆಗಳುಂಟಾದವು. ಈ ರೀತಿಯಾಗಿ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಆಧ್ಯಾತ್ಮಿಕ ಕ್ಷೇತ್ರಗಳಲ್ಲಿ ನನ್ನ ಜೀವನದ ಮೊದಲ ೨೭ ವರ್ಷಗಳಲ್ಲಿ ಪಡೆದ

ಹಿನ್ನೆಲೆಯಿಂದ ಬಂದು ಮುಂದಿನ ೪೧ ವರ್ಷಗಳು ಅಮೇರಿಕಾದಲ್ಲಿದ್ದು, ಇದರಲ್ಲಿಯೂ ೩೮ ವರ್ಷಗಳು ನ್ಯೂಜೆರ್ಸಿಯಲ್ಲಿನ ವಾಸದ ಅವಧಿಯಲ್ಲಿ ಅಂದಿನ ಕಾಲಕ್ಕೂ ಹಾಗೂ ಇಂದಿನ ಕಾಲಕ್ಕೂ ತುಲನೆ ಮಾಡಿ ನ್ಯೂಜೆರ್ಸಿಯಲ್ಲಿ ಆಗಿರುವ ಬದಲಾವಣೆಗಳನ್ನು ಗುರುತಿಸಿ ವಿಚಾರ ವಿಮರ್ಶೆ ಮಾಡುವುದೇ ಈ ಲೇಖನದ ಗುರಿ.

**ಸಾಮಾಜಿಕ ಕ್ಷೇತ್ರದಲ್ಲಿ ಅಂದು–ಇಂದು**

೧೯೮೦ರಲ್ಲಿ ನ್ಯೂಜೆರ್ಸಿಯಲ್ಲಿ ಸುಲಭವಾಗಿ Indian Groceries ಸಿಗುತ್ತಿರಲಿಲ್ಲ. ಆಗ ದಿನ ನಿತ್ಯ ಅಡುಗೆಗೆ ಬೇಕಾದ ತೊಗರಿಬೇಳೆ ಮುಂತಾದ ಮುಖ್ಯವಾದ ಪದಾರ್ಥಗಳನ್ನು ನ್ಯೂಯಾರ್ಕ್‌ನಲ್ಲಿನ ಅಂಗಡಿಯಿಂದ ತರುತ್ತಿದ್ದೆವು. ನ್ಯೂಯಾರ್ಕ್‌ನಲ್ಲಿ Indian Groceriesನ ಅಂಗಡಿಯ ಜೊತೆಗೆ ೨೨೦ ವೋಲ್ಟೇಜಿನ ಎಲೆಕ್ಟ್ರಾನಿಕ್ಸ್ ವಸ್ತುಗಳು ಸಿಗುವ ಅಂಗಡಿಯೂ ಇತ್ತು. ಭಾರತದಿಂದ ಆಗ ಬರುತ್ತಿದ್ದ ಅನೇಕ ಬಂಧು ಮಿತ್ರರಿಗಾಗಿ ೨೨೦ ವೋಲ್ಟೇಜಿನ ಎಲೆಕ್ಟ್ರಾನಿಕ್ಸ್ ವಸ್ತುಗಳನ್ನು ನ್ಯೂಯಾರ್ಕ್‌ಗೆ ಹೋಗಿ ಖರೀದಿ ಮಾಡುತ್ತಿದ್ದೆವು. ನಮಗೆ ಆಗ ಈ ರೀತಿಯ ಅಂಗಡಿಗಳಿಗೆ ಹೋಗುವ ಸಂಭ್ರಮವೇನೋ ಇತ್ತು. ಇದೇ ರೀತಿ ಇಂಡಿಯನ್ ರೆಸ್ಟೋರೆಂಟ್‌ಗಳೂ ನ್ಯೂಜೆರ್ಸಿಯಲ್ಲಿ ಅಷ್ಟಾಗಿ ಇರಲಿಲ್ಲ. ಅದಕ್ಕೂ ನ್ಯೂಯಾರ್ಕ್‌ಗೆ ಹೋಗಬೇಕಾಗಿತ್ತು.

೧೯೮೦ ಕಳೆದು ಕೆಲವರ್ಷಗಳಲ್ಲಿಯೇ ನ್ಯೂಜೆರ್ಸಿಯಲ್ಲಿ ನಾನು ಕೆಲಸ ಮಾಡುತ್ತಿದ್ದ ಇನ್‌ಸ್ಟಿಟ್ಯೂಷನ್ ಇರುವ ಜಾಗವಾದ ಹೊಬೋಕನ್ನಲ್ಲಿ ಒಂದು Indian Groceries ಅಂಗಡಿ ಬಂದದ್ದು ನನಗೆ ಬಹಳ ಅನುಕೂಲವೂ ಮತ್ತು ಸಂತೋಷವೂ ಆಯಿತು. ಏಕೆಂದರೆ ಅದರಿಂದ ಸುಲಭವಾಗಿ ಬೇಕೆಂದಾಗ Indian Grocery ತರಬಹುದಾದ ಸನ್ನಿವೇಶ ಉಂಟಾಯಿತು. ಹಾಗೆಯೇ ಮುಂದುವರೆದು ನ್ಯೂಜೆರ್ಸಿಯಲ್ಲಿ ಅನೇಕಾನೇಕ Indian Groceries ಅಂಗಡಿಗಳೂ, Indian restaurantಗಳೂ ಹಾಗೂ Indian Electronics ಅಂಗಡಿಗಳೂ ಒಂದೊಂದಾಗಿ ಆರಂಭಗೊಂಡವು. ಅದರಲ್ಲೂ ಒಂದು ವಿಶೇಷವೇನೆಂದರೆ ಈ ಎಲ್ಲ ಅಂಗಡಿಗಳೂ ಎಡಿಸನ್ ಎಂಬ ಊರಿನಲ್ಲಿ ಮೊದಲು ಆರಂಭವಾದವು. ಈ ಅಂಗಡಿಗಳೆಲ್ಲಾ ಆರಂಭವಾಗಿದ್ದು ಸುಮಾರು ೧೯೮೦ರ ಮಧ್ಯ ಕಾಲದಲ್ಲಿ ಎನ್ನಬಹುದು. ಎಡಿಸನ್ ಊರಿನ ಓಕ್ ಟ್ರೀ ರೋಡನ್ನು ಈಗ Little India ಎಂಬ ಹೆಸರಿನಿಂದಲೂ ಕರೆಯುವುದುಂಟು. ೧೯೮೦ರಲ್ಲಿ ನ್ಯೂಯಾರ್ಕ್ ನಗರದಲ್ಲಿನ ಇಂತಹ ಅಂಗಡಿಗಳಿರುವ ಜಾಗ Little India ಎಂದು ಕರೆಯಲ್ಪಡುತ್ತಿತ್ತು. ಈಗ ನ್ಯೂಜೆರ್ಸಿಯಲ್ಲಿನ ಎಡಿಸನ್ ಊರಿನಂತೆ ಅನೇಕಾನೇಕ ಜಾಗಗಳಲ್ಲಿ Indian Grocery stores, restaurants ಹಾಗೂ Electronics ಅಂಗಡಿಗಳು ಇವೆ. ಇದಕ್ಕೆ ಕಾರಣ ಭಾರತೀಯರು ನ್ಯೂಜೆರ್ಸಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ ಎನ್ನುವುದು ಮತ್ತು IT ರೆವೊಲ್ಯೂಷನ್ ಎಂತಲೂ ಹೇಳಬಹುದು. ಏಕೆಂದರೆ ಬಹಳ ಹಿಂದೆ ಭಾರತದಿಂದ

ಅಮೇರಿಕಾಕ್ಕೆ ಉನ್ನತ ವ್ಯಾಸಂಗಕ್ಕೆ ಬಂದು, ವ್ಯಾಸಂಗ ಮುಗಿಸಿ, ನಂತರ ಉದ್ಯೋಗಕ್ಕಾಗಿ ನಿಂತು ಹಾಗೆ ಅಮೇರಿಕಾದಲ್ಲಿ ನೆಲೆಸುತ್ತಿದ್ದರು. ಆದರೆ IT (Information Technology) ರೆವೊಲ್ಯೂಷನ್ ಆದ ಮೇಲೆ ಅನೇಕಾನೇಕ ಯುವಕ ಯುವತಿಯರು ಭಾರತೀಯ ಕಂಪನಿಗಳಿಂದ ನೇಮಕಗೊಂಡು ಅಮೇರಿಕಾಕ್ಕೆ ಬಂದು ಕೆಲಸ ಮಾಡುತ್ತಾ ವಾಸವಾಗಿರುವರು. ಇದರ ಜೊತೆಗೆ ಭಾರತೀಯ ಕಂಪನಿಗಳೇ ಅಮೇರಿಕಾದಲ್ಲಿ ಶಾಖೆಗಳನ್ನು ತೆರೆದಿವೆ. ಈ ಮೂಲಕವಾಗಿಯೂ ಅನೇಕಾನೇಕ ಭಾರತೀಯರು ಅಮೇರಿಕಾದಲ್ಲಿ ಕೆಲಸ ಮಾಡುತ್ತಾ ವಾಸವಾಗಿರುವರು. ನನಗೆ ತಿಳಿದಂತೆ ನ್ಯೂಜೆರ್ಸಿಯಲ್ಲಿ ಹೆಚ್ಚು ಭಾರತೀಯರು ವಾಸಮಾಡುತ್ತಿದ್ದಾರೆ. ಹಾಗೆಯೇ ಇಂದು ನ್ಯೂಜೆರ್ಸಿಯಲ್ಲಿ ಸಾಮಾಜಿಕ ಕ್ಷೇತ್ರದಲ್ಲಿ ಆಗಿರುವ ಬದಲಾವಣೆಗಳು ಬಹಳ ಮಹತ್ತರವಾದುವು. ಏಕೆಂದರೆ ಬರೀ Indian Grocery ಸಿಗುವುದಷ್ಟೇ ಅಲ್ಲ, ಮಾವಳ್ಳಿ ಟಿಫಿನ್ಸ್, ಅಡಿಗಾಸ್ ಮುಂತಾದ ಹೆಸರಾಂತ ಸಾಂಬಾರ ಪದಾರ್ಥಗಳು, ಪುಡಿಗಳು ಮತ್ತು ಖಾದ್ಯ ವಸ್ತುಗಳು ಸಿಗುತ್ತವೆ. ಎಲ್ಲ ರೀತಿಯ ತರಕಾರಿಗಳೂ ಸಿಗುತ್ತವೆ. ಆದ್ದರಿಂದ ಇಂದು ನ್ಯೂಜೆರ್ಸಿಯಲ್ಲಿ ದಕ್ಷಿಣ ಭಾರತೀಯರಿಗೆ ಅದರಲ್ಲೂ ಕನ್ನಡಿಗರಿಗೆ ಯಾವುದೇ ಅಡುಗೆಯಾಗಲೀ ತಿಂಡಿತಿನಿಸಾಗಲೀ ಮಾಡುವುದಕ್ಕೆ ಬೇಕಾದ ಎಲ್ಲ ಸಾಮಗ್ರಿಗಳೂ ಹಿಂದಿಗಿಂತ ಇಂದು ಸುಲಭವಾಗಿ ಸಿಗುತ್ತವೆ.

**ಸಾಂಸ್ಕೃತಿಕ ಕ್ಷೇತ್ರದಲ್ಲಿ ಅಂದು –ಇಂದು**

ಭಾರತದಿಂದ ಯಾವುದೇ ಕಾರಣಕ್ಕಾಗಿ ಅಮೇರಿಕಾಗೆ ವಲಸೆ ಬಂದು ವಾಸವಾಗಿರುವ ಭಾರತೀಯರಿಗೆ ಹಾಗೂ ಕನ್ನಡಿಗರಿಗೆ ಮೊದಲು ಸಾಮಾಜಿಕ ಅಂದರೆ ಊಟ, ಬಟ್ಟೆ ಮತ್ತು ವಸತಿ ಇವುಗಳಿಗೆ ಬೇಕಾದ ಬದಲಾವಣೆಗಳು ಆಗಿ ಜೀವನ ನಿರ್ವಹಣೆ ಒಂದು ಸಮಸ್ಥಿತಿಗೆ ಬಂದ ಮೇಲೆ ಮನಸ್ಸಿಗೆ ಸಾಂಸ್ಕೃತಿಕ ವಿಷಯಗಳ ಅಗತ್ಯ ಬರುತ್ತದೆ. ನಾವು ೧೯೮೦ಕ್ಕೆ ನ್ಯೂಜೆರ್ಸಿಗೆ ಬಂದು ಕೆಲಸ ಹಾಗೂ ಬಾಡಿಗೆ ಮನೆ ಇತ್ಯಾದಿಗಳು ಸಮಸ್ಥಿತಿಗೆ ಬಂದ ಮೇಲೆ, ನಮ್ಮ (ಅಂದರೆ ನಾನು ಹಾಗೂ ನನ್ನ ಪತ್ನಿ ಗೀತಾ) ಮನಸ್ಸಿನಲ್ಲೂ ನನ್ನ ನಾಟಕ ಕಲೆಯ ಆಸಕ್ತಿ ಹಾಗೂ ಗೀತಾಳ ನೃತ್ಯ ಕಲೆಯ ಆಸಕ್ತಿ ಇವುಗಳನ್ನು ಹೇಗೆ ಉಪಯೋಗಿಸಬೇಕು ಎಂದು ಯೋಚನೆ ಬಂತು. ಆ ಸಮಯಕ್ಕೆ ಸರಿಯಾಗಿ ನ್ಯೂಯಾರ್ಕ್ ಕನ್ನಡ ಕೂಟದ ವನವಿಹಾರದ (picnic) flyer ಸಿಕ್ಕಿತು. ನಮಗೆ ನ್ಯೂಜೆರ್ಸಿಯಲ್ಲಿ ನನ್ನ cousin ಡಾ. ಶಾಂತಿ ಹಾಗೂ ಅವರ ಪತಿ ಡಾ. ಯೋಗಾನಂದ ಅವರ ಆಸರೆ ಹಾಗೂ ಮಾರ್ಗದರ್ಶನ ಬಹಳ ಸಹಕಾರಿಯಾಗಿತ್ತು.

ನ್ಯೂಜೆರ್ಸಿಯಲ್ಲಿ ೧೯೮೦ರ ಕಾಲಕ್ಕೆ ಕನ್ನಡ ಸಂಘಗಳಿರಲಿಲ್ಲ. ನ್ಯೂಯಾರ್ಕ್ ಕನ್ನಡ ಕೂಟದ ವನವಿಹಾರದ flyerನಲ್ಲಿದ್ದ ಕೂಟದ ಕಾರ್ಯದರ್ಶಿಗಳಾದ ಶ್ರೀ ಚಂದ್ರಶೇಖರರಾವ್‌ಗೆ phone ಮಾಡಿದಾಗ ಅವರು ಬಹಳ ಸಹೃದಯತೆಯಿಂದ ಹೊಸಬರಾದ ನಮ್ಮನ್ನು ಸ್ವಾಗತಿಸಿದರು. ಇದರ ಜೊತೆಗೆ ನನ್ನ cousin ಡಾ. ಶಾಂತಿ

ಹಾಗೂ ಅವರ ಪತಿ ಡಾ. ಯೋಗಾನಂದ ಅವರು ನ್ಯೂಯಾರ್ಕ್ ಕನ್ನಡ ಕೂಟದ ಸದಸ್ಯರಾಗಿದ್ದರು. ನಾನು, ಗೀತಾ ಹಾಗೂ ಪುತ್ರ ತೇಜಸ್ವಿ ನ್ಯೂಯಾರ್ಕ್‌ನಲ್ಲಿ ನಡೆದ ಕನ್ನಡ ಕೂಟದ ವನವಿಹಾರದಲ್ಲಿ ಭಾಗವಹಿಸಿದಾಗ ನಮ್ಮ ಸಾಂಸ್ಕೃತಿಕ ಕಲೆಗಳಿಗೆ ನ್ಯೂಯಾರ್ಕ್ ಕನ್ನಡ ಕೂಟದ ವೇದಿಕೆ ಸಿಕ್ಕಿತೆಂಬ ಭಾವನೆ ಮೂಡಿತ್ತು. ಆಗ ಕನ್ನಡ ಕೂಟದ ಅಧ್ಯಕ್ಷಿಣಿಯಾದ ಶ್ರೀಮತಿ ಸತ್ಯ ವಿಶ್ವನಾಥ್ ಅವರನ್ನು ಮಾತಾಡಿಸಿದಾಗ ಅವರ ಸಹೃದಯತೆ ತುಂಬಿದ ಉತ್ತೇಜನವೂ ಸಿಕ್ಕಿತು.

ನ್ಯೂಜೆರ್ಸಿಯಲ್ಲೇ ವಾಸ ಹಾಗೂ ಕೆಲಸ ಮಾಡುತ್ತಿದ್ದ ನಮಗೆ ನ್ಯೂಯಾರ್ಕ್ ಕನ್ನಡ ಕೂಟವೇನೂ ಹತ್ತಿರ ಇರಲಿಲ್ಲ. ನಾವು ಎರಡು ಟನಲ್ಲುಗಳನ್ನು ದಾಟಿ ಹೋಗಬೇಕಾಗಿತ್ತು. ಆದರೆ ಸಾಂಸ್ಕೃತಿಕ ಚಟುವಟಿಕೆಗಳು ನಮ್ಮ ಜೀವನದ ಅವಿಭಾಜ್ಯ ಅಂಗವಾಗಿದ್ದವು. ಇದರ ಜೊತೆಗೆ ನಮ್ಮ ಮಗ ತೇಜಸ್ವಿಗೆ ನಾಲ್ಕು ವರ್ಷ ವಯಸ್ಸು. ಅವನಿಗೂ ನಾವು ನಮ್ಮ ಸಾಂಸ್ಕೃತಿಕ ಶಿಕ್ಷಣ ನೀಡಬೇಕಿತ್ತು. ಹೀಗಾಗಿ ನಾನು ಮತ್ತು ಗೀತಾ ಮಕ್ಕಳಿಂದ ನಾಟಕ ಹಾಗೂ ನೃತ್ಯ ನಾಟಕಗಳನ್ನು ನ್ಯೂಯಾರ್ಕ್ ಕನ್ನಡ ಕೂಟದ ಕಾರ್ಯಕ್ರಮಗಳಲ್ಲಿ ಪ್ರದರ್ಶನ ಮಾಡಿದೆವು. ನ್ಯೂಜೆರ್ಸಿಯಿಂದ ನ್ಯೂಯಾರ್ಕಿಗೆ ವಾರಾಂತ್ಯದಲ್ಲಿ ಹೋಗುವುದು ನಮಗೆ ಬಹಳ ಸಹಜವಾಗಿಬಿಟ್ಟಿತ್ತು. ಇದರ ಜೊತೆಗೆ ನಾನು ಕಾರ್ಯಕಾರಿ ಸಮಿತಿ ಸದಸ್ಯನಾದೆ. ಹಾಗೆಯೇ ಕೂಟದ ಪತ್ರಿಕೆಯಾದ "ಸುದ್ದಿ ಸಾರಂಗಿ"ಯ ಸಂಪಾದಕನೂ ಆದೆ. ಒಟ್ಟಿನಲ್ಲಿ ನನ್ನ ಅಂದಿನ ಕಾಲ ಅಂದರೆ ೧೯೮೦ರಿಂದ ಸುಮಾರು ೨೦೦೦ದವರೆಗೂ ನ್ಯೂಜೆರ್ಸಿ ಕನ್ನಡಿಗರು ನ್ಯೂಯಾರ್ಕ್ ಕನ್ನಡ ಕೂಟದ ಕಾರ್ಯಕಲಾಪಗಳಲ್ಲಿ ಭಾಗವಹಿಸಬೇಕಾಗಿತ್ತು. ನಾವು ಈ ಇಪ್ಪತ್ತು ವರ್ಷಗಳಲ್ಲಿ ಮಕ್ಕಳಿಂದ ಹಾಗೂ ವಯಸ್ಕರಿಂದ ಸುಮಾರು ಐವತ್ತಕ್ಕೂ ಮೀರಿ ನಾಟಕ ಹಾಗೂ ನೃತ್ಯ ನಾಟಕಗಳನ್ನು ಪ್ರದರ್ಶಿಸಿದ್ದೇವೆ. ಈ ಪ್ರದರ್ಶನಗಳನ್ನು ನ್ಯೂಯಾರ್ಕ್ ಕನ್ನಡ ಕೂಟ, ತ್ರಿವೇಣಿ ಕನ್ನಡ ಕೂಟ ಹಾಗೂ ವಾಷಿಂಗ್ಟನ್ ಡಿ.ಸಿ.ಯಲ್ಲಿರುವ ಕಾವೇರಿ ಕನ್ನಡ ಕೂಟದ ವೇದಿಕೆಗಳಲ್ಲಿ ಪ್ರಸ್ತುತಪಡಿಸಿದ್ದೇವೆ.

ನ್ಯೂಜೆರ್ಸಿಯಲ್ಲಿ ಕನ್ನಡ ಭಾಷೆ, ಸಾಹಿತ್ಯ ಹಾಗೂ ಕಲೆಗಳಿಗೆ ಸಂಬಂಧಿಸಿದಂತೆ ಮಹಾ ಬದಲಾವಣೆಯಾಗಿದ್ದು ೧೯೮೦ರ ನಂತರ ಎಂದು ಹೇಳಬಹುದು. ಆ ದೊಡ್ಡ ಬದಲಾವಣೆಯಾಗಿದ್ದು ಬೃಂದಾವನ ಕನ್ನಡ ಕೂಟದ ಆರಂಭದಿಂದ ಎನ್ನಬಹುದು. ಏಕೆಂದರೆ ನ್ಯೂಜೆರ್ಸಿ ಒಂದು ರಾಜ್ಯವಷ್ಟೆ. ಅಂದಿನ ಕಾಲದಲ್ಲಿ ನ್ಯೂಜೆರ್ಸಿಯ ಉತ್ತರ ಭಾಗದಲ್ಲಿರುವವರು ಅಂದರೆ ನ್ಯೂಯಾರ್ಕಿಗೆ ಹತ್ತಿರವಿರುವವರು ನ್ಯೂಯಾರ್ಕ್ ಕನ್ನಡ ಕೂಟದಲ್ಲಿ ಭಾಗವಹಿಸುತ್ತಿದ್ದೆವು. ನ್ಯೂಜೆರ್ಸಿ ದಕ್ಷಿಣ ಭಾಗದಲ್ಲಿರುವವರು ಅಂದರೆ ಪೆನ್ಸಿಲ್ವೇನಿಯಾ ಹತ್ತಿರವಿರುವವರು ತ್ರಿವೇಣಿ ಕನ್ನಡ ಕೂಟದಲ್ಲಿ ಸಾಮಾನ್ಯವಾಗಿ ಭಾಗವಹಿಸುತ್ತಿದ್ದರು. ಬೃಂದಾವನ ಕನ್ನಡ ಕೂಟ ೨೦೦೪ರಲ್ಲಿ ಸ್ಥಾಪನೆಯಾಗಿ ನ್ಯೂಜೆರ್ಸಿಯಲ್ಲಿ ಕನ್ನಡ ಸಾಂಸ್ಕೃತಿಕ ಕಾರ್ಯಕಲಾಪಗಳಿಗೆ ಮನೆ ದೊರಕಿತು ಎಂದು ಹೇಳಬಹುದು.

ಬೃಂದಾವನ ಕನ್ನಡ ಕೂಟದಿಂದ "ಬೃಂದಾವನ ವಾಣಿ" ಎಂಬ ದ್ವೈಮಾಸಿಕ ಪತ್ರಿಕೆಯು ಪ್ರಕಟಗೊಳ್ಳುತ್ತಿದೆ. ಅದರ ಜೊತೆಗೆ ಸಾಹಿತ್ಯ ಬೃಂದಾವನದ ಭಾಗವಾಗಿ ಅಕ್ಷರ ಭಂಡಾರವೆಂಬ ಕನ್ನಡ ಪುಸ್ತಕಗಳ ಗ್ರಂಥಾಲಯ ಆರಂಭವಾಗಿ ಕನ್ನಡಿಗರು ಕನ್ನಡ ಪುಸ್ತಕಗಳನ್ನೋದುವ ಸದವಕಾಶವೂ ಉಂಟಾಗಿದೆ. ಇದರ ಜೊತೆಗೆ ಬೃಂದಾವನ ಸದಸ್ಯರಲ್ಲಿ ಕೆಲವರು 'ದರ್ಪಣ' ಎಂಬ ಮಾಸಪತ್ರಿಕೆಯನ್ನು e-publication ಆಗಿ ಪ್ರಕಟಿಸುತ್ತಿದ್ದಾರೆ.

ಇದರ ಜೊತೆಗೆ 'ಅಕ್ಕ' ಸಮ್ಮೇಳನವು ೨೦೧೦ ಮತ್ತು ೨೦೧೬ರಲ್ಲಿ ಎರಡು ಬಾರಿ ನ್ಯೂಜೆರ್ಸಿಯಲ್ಲಿ ನಡೆಯಿತು. ಅಲ್ಲದೆ ನ್ಯೂಜೆರ್ಸಿಯಲ್ಲಿ ನಡೆಯುವ ಪ್ರಸ್ತಾಪ ಕಾರ್ಯಕ್ರಮಗಳಲ್ಲಿ ವಿಶೇಷವಾಗಿ ಕರ್ನಾಟಕದಿಂದ ಬಂದ ವಿದ್ವಾಂಸರಿಂದ ಕನ್ನಡದಲ್ಲಿ ವಿದ್ವತ್ಪೂರ್ಣ ಭಾಷಣಗಳಿರುತ್ತವೆ. ಪ್ರಸ್ತಾಪ ಕಾರ್ಯಕ್ರಮಗಳ ಮತ್ತೊಂದು ವೈಶಿಷ್ಟ್ಯವೆಂದರೆ ಇವು ಪ್ರಸ್ತಾಪ ಸದಸ್ಯರ ಮನೆಗಳಲ್ಲಿ ನಡೆಯುತ್ತವೆ. ಮತ್ತೊಂದು ವಿಶೇಷದ ವಿಷಯವೆಂದರೆ ಅಮೇರಿಕಾದಾದ್ಯಂತ ಕನ್ನಡ ಸಾಹಿತ್ಯಕ್ಕೇ ಮೀಸಲಾಗಿರುವ ೨೦೦೪ರಲ್ಲಿ ಸ್ಥಾಪನೆಗೊಂಡ 'ಕನ್ನಡ ಸಾಹಿತ್ಯ ರಂಗ'ದಲ್ಲಿ ನ್ಯೂಜೆರ್ಸಿಯ ಅನೇಕ ಕನ್ನಡಿಗರು ಸಕ್ರಿಯವಾಗಿ ಭಾಗವಹಿಸುತ್ತಾರೆ.

ಒಟ್ಟಿನಲ್ಲಿ ಸಾಂಸ್ಕೃತಿಕ ಕ್ಷೇತ್ರದಲ್ಲಿ ಅಂದರೆ ಕನ್ನಡ ಸಾಹಿತ್ಯ ಹಾಗೂ ಸಾಂಸ್ಕೃತಿಕ ದೃಷ್ಟಿಯಲ್ಲಿ ನ್ಯೂಜೆರ್ಸಿಯಲ್ಲಿ ನಾ ಕಂಡಂತೆ ಅಂದಿನ ಎಂದರೆ ೧೯೮೦ರ ಕಾಲ ಮತ್ತು ಇಂದಿನ ಎಂದರೆ ೨೦೧೮ರ ಕಾಲವನ್ನು ತುಲನೆ ಮಾಡಿ ನೋಡಿದಾಗ ಕನ್ನಡ ವಾತಾವರಣ ಹಾಗೂ ಕನ್ನಡ ಸಾಹಿತ್ಯ, ಸಂಸ್ಕೃತಿ ಹಾಗೂ ಕಲೆಗೆ ಅವಕಾಶ ಮತ್ತು ಪ್ರೋತ್ಸಾಹ ಬೆಳೆದಿದೆ. ನ್ಯೂಜೆರ್ಸಿಯಲ್ಲಿ ನನ್ನ ದೃಷ್ಟಿಯಲ್ಲಿ ಆಗಿರುವ ಬೃಹತ್ ಬದಲಾವಣೆಯಿದು. ಈ ಬದಲಾವಣೆ ನ್ಯೂಜೆರ್ಸಿಯ ಕನ್ನಡಿಗರಲ್ಲದ ಇತರ ಸ್ಥಳೀಯ ನಾಗರಿಕರ ಮೇಲೂ ಪ್ರಭಾವ ಬೀರುತ್ತಿದೆ.

ಮತ್ತೊಂದು ನಾ ಕಂಡ ಗಮನಾರ್ಹ ಬದಲಾವಣೆಯೆಂದರೆ ಭಾರತೀಯ ಸಂಗೀತ ಮತ್ತು ನೃತ್ಯವನ್ನು ಹೇಳಿಕೊಡುವ ಶಿಕ್ಷಕ-ಶಿಕ್ಷಕಿಯರ ಸಂಖ್ಯೆ ಮತ್ತು ಈ ಕಲೆಗಳನ್ನು ಕಲಿಯುವವರ ಸಂಖ್ಯೆಯೂ ಹೆಚ್ಚಿದೆ. ನಾ ಕಂಡಂತೆ ೧೯೮೦ರಲ್ಲಿ ನ್ಯೂಜೆರ್ಸಿಯಲ್ಲಿ ಸಂಗೀತ ಹಾಗೂ ನೃತ್ಯ ಶಿಕ್ಷಕಿಯರು ಬೆರಳಲ್ಲಿ ಎಣಿಸುವಷ್ಟಿದ್ದರು. ಆಗ ನನಗೆ ತಿಳಿದಂತೆ ಶಿಕ್ಷಕಿಯರು ತಾವೇ ದೂರ ಪ್ರಯಾಣ ಮಾಡಿ ತರಗತಿಗಳನ್ನು ನಡೆಸಿ ಪಾಠ ಹೇಳಿಕೊಡುತ್ತಿದ್ದರು. ೧೯೯೦ರ ನಂತರ ಶಿಕ್ಷಕಿಯರ ಸಂಖ್ಯೆ ಹೆಚ್ಚುತ್ತಿದ್ದಂತೆ ಕಲಿಯುವ ವಿದ್ಯಾರ್ಥಿ ಹಾಗೂ ವಿದ್ಯಾರ್ಥಿನಿಯರ ಸಂಖ್ಯೆಯೂ ಹೆಚ್ಚುತ್ತಾ ಬಂತು. ೨೦೦೮ರಲ್ಲಿ ಸಂಗೀತ ಹಾಗೂ ನೃತ್ಯಕಲೆಯಲ್ಲಿ ನ್ಯೂಜೆರ್ಸಿಯಲ್ಲಿ ಆಗುವ ರಂಗಪ್ರವೇಶಗಳ ಸಂಖ್ಯೆಯಿಂದಲೇ ಶಿಕ್ಷಕಿಯರು ಹಾಗೂ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಬಹಳ ಹೆಚ್ಚಾಗಿರುವುದು ನಮಗೆ ಅರಿವಾಗುತ್ತದೆ. ಈ ಬದಲಾವಣೆ ಸ್ವಾಗತಾರ್ಹ. ಏಕೆಂದರೆ ನಮ್ಮ ಮುಂದಿನ ಜನಾಂಗಕ್ಕೆ ಭಾರತೀಯ ಸಂಸ್ಕೃತಿ ಹಾಗೂ ಕಲೆಗಳು ಸಂಗೀತ ಮತ್ತು ನೃತ್ಯಗಳ ಮೂಲಕವಾದರೂ ಹೋಗುತ್ತಿವೆ ಎಂಬ ಸಂತೋಷ.

ಈ ರೀತಿ ಅಂದಿನಿಂದ ಇಂದಿನವರೆಗೂ ಆಗಿರುವ ಬದಲಾವಣೆಗಳನ್ನೂ, ನ್ಯೂಜೆರ್ಸಿಯ ಸಾಂಸ್ಕೃತಿಕ ವಾತಾವರಣವನ್ನೂ, ಕರ್ನಾಟಕದಿಂದ ನ್ಯೂಜೆರ್ಸಿಗೆ ಪ್ರವಾಸಕ್ಕೆ ಬಂದವರು ನೋಡಿ ಆನಂದಿಸಿ ಆಶ್ಚರ್ಯ ಹಾಗೂ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ.

**ಆಧ್ಯಾತ್ಮಿಕ ಕ್ಷೇತ್ರದಲ್ಲಿ ಅಂದು-ಇಂದು**

ಭಾರತೀಯರ ಹಾಗೂ ಕನ್ನಡಿಗರ ಜೀವನದಲ್ಲಿ ಭೌತಿಕ ಜೀವನದ ಜೊತೆಗೆ ಅಥವಾ ಭೌತಿಕ ಜೀವನವು ಒಂದು ಸಮಸ್ಥಿತಿಗೆ ಬಂದ ನಂತರ ಸಾಂಸ್ಕೃತಿಕ ಹಾಗೂ ಆಧ್ಯಾತ್ಮಿಕ ಕ್ಷೇತ್ರಗಳ ಚಟುವಟಿಕೆಗಳು ಬೇಕಾಗುತ್ತಿವೆ. ಮೇಲೆ ನೋಡಿದಂತೆ ನ್ಯೂಜೆರ್ಸಿಯಲ್ಲಿ ಅಂದಿನಿಂದ ಇಂದಿನವರೆಗೂ ಸಾಂಸ್ಕೃತಿಕ ಕ್ಷೇತ್ರದಲ್ಲಿ ಮಹಾ ಬದಲಾವಣೆಗಳು ಉಂಟಾಗಿವೆ. ಅದೇ ರೀತಿ ಆಧ್ಯಾತ್ಮಿಕ ಕ್ಷೇತ್ರದಲ್ಲಿಯೂ ನ್ಯೂಜೆರ್ಸಿಯಲ್ಲಿ ಕಳೆದ ೩೮ ವರ್ಷಗಳಲ್ಲಿ ಬೃಹತ್ ಬದಲಾವಣೆಗಳಾಗಿವೆ. ಇಲ್ಲಿ ಆಧ್ಯಾತ್ಮಿಕ ಕ್ಷೇತ್ರದ ಬದಲಾವಣೆಗಳನ್ನು ಮುಖ್ಯವಾಗಿ ದೇವಾಲಯಗಳ ಸ್ಥಾಪನೆಗಳ ಮೂಲಕ ನೋಡಲಾಗಿದೆ. ಏಕೆಂದರೆ ದೇವಾಲಯವು ಆಧ್ಯಾತ್ಮಿಕ ಕಾರ್ಯಗಳಿಗೆ ಒಂದು ರೀತಿಯಾದ ಕೇಂದ್ರದಂತೆ ಎಂದು ಹೇಳಬಹುದು.

೧೯೭೦ರಲ್ಲಿ ನ್ಯೂಜೆರ್ಸಿಯಲ್ಲಿ ಸಾಂಪ್ರದಾಯಿಕ (traditional) ದೇವಾಲಯವಿರಲಿಲ್ಲ. ನಮಗೆ ಹತ್ತಿರದ ದೇವಸ್ಥಾನವೆಂದರೆ ನ್ಯೂಯಾರ್ಕಿನ, ಫ್ಲಷಿಂಗಿನಲ್ಲಿದ್ದ ಶ್ರೀ ಮಹಾವಲ್ಲಭ ಗಣಪತಿ ದೇವಸ್ಥಾನ. ಅದು ಅಮೇರಿಕಾದ ದಕ್ಷಿಣ ಭಾರತೀಯ ಸಂಪ್ರದಾಯದ ಪ್ರಥಮ ದೇವಸ್ಥಾನ. ೧೯೭೦ರಲ್ಲಿ ದೇವಸ್ಥಾನದ ಸಂಸ್ಥೆಯು (The Hindu Temple Society of North America) ರೂಪುಗೊಂಡು ೧೯೭೭ರಲ್ಲಿ ಸಾಂಪ್ರದಾಯಿಕ ದೇವಸ್ಥಾನವು ಪ್ರತಿಷ್ಠಿತವಾಯಿತು. ಇದನ್ನು ಎಲ್ಲರೂ ನ್ಯೂಯಾರ್ಕ್ ಗಣೇಶನ ದೇವಸ್ಥಾನ ಎಂದು ಕರೆಯುವ ರೂಢಿಯುಂಟು. ನಾವು ರೆಗ್ಯುಲರ್ ಆಗಿ ನ್ಯೂಯಾರ್ಕಿನ ಗಣೇಶನ ದೇವಸ್ಥಾನಕ್ಕೆ ಹೋಗುತ್ತಿದ್ದೆವು.

ಇನ್ನೊಂದು ವಿಶೇಷವೇನೆಂದರೆ ನ್ಯೂಯಾರ್ಕ್ ಕನ್ನಡ ಕೂಟದ ಅನೇಕ ಸದಸ್ಯರು ನ್ಯೂಯಾರ್ಕಿನ ಗಣೇಶನ ದೇವಸ್ಥಾನದಲ್ಲೂ ಸ್ವಯಂಸೇವಕರಾಗಿದ್ದರು. ನ್ಯೂಯಾರ್ಕಿನ ಗಣೇಶನ ದೇವಸ್ಥಾನದಲ್ಲಿ ಹಿಂದೂ ಧರ್ಮದ ಕ್ಲಾಸುಗಳನ್ನು ನಡೆಸುವುದಕ್ಕಾಗಿ ನಾನೂ ನ್ಯೂಜೆರ್ಸಿಯಿಂದ ನ್ಯೂಯಾರ್ಕ್‌ಗೆ ಹೋಗುತ್ತಿದ್ದೆ. ಹೀಗೆ ಅಂದಿನ ೧೯೭೦ರ ಕಾಲದಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳಿಗಾಗಿ ಹಾಗೂ ಧಾರ್ಮಿಕ ಮತ್ತು ಆಧ್ಯಾತ್ಮಿಕ ಕಾರ್ಯಗಳು ಮತ್ತು ಹಬ್ಬಗಳಿಗಾಗಿ ಸುಮಾರು ವಾರಕ್ಕೊಮ್ಮೆಯಂತೆ ಕನ್ನಡ ಕೂಟ ಮತ್ತು ಗಣೇಶನ ದೇವಸ್ಥಾನಕ್ಕೆ ನಾವು ನ್ಯೂಜೆರ್ಸಿಯಿಂದ ನ್ಯೂಯಾರ್ಕಿಗೆ ಹೋಗುತ್ತಿದ್ದೆವು. ಈ ರೀತಿ ಬಾರಿಬಾರಿಗೆ ಹೋಗುತ್ತಿದ್ದುದು ನಮಗೆ ಸುಲಭವಲ್ಲದಿದ್ದರೂ ಏನೋ ಒಂದು ಸಂಭ್ರಮ. ಏಕೆಂದರೆ ನಮಗೆ ನಮ್ಮ ಕನ್ನಡ ಸ್ನೇಹಿತರೊಡನೆ ಮಿಲನ, ನಮ್ಮ ರುಚಿಗೆ ತಕ್ಕಂತೆ ಊಟ ಹಾಗೂ ನಮ್ಮವರೊಡನೆ ಹಬ್ಬ ಹಾಗೂ ಉತ್ಸವಗಳ ಆಚರಣೆ ಸಂತೋಷವನ್ನು ತರುತ್ತಿತ್ತು.

ಇದರ ಜೊತೆಗೆ ಆಗಾಗ ಪಿಟ್ಸ್‌ಬರ್ಗಿನ ಶ್ರೀ ವೆಂಕಟೇಶ್ವರನ ದೇವಾಲಯಕ್ಕೂ ನಾವು ನ್ಯೂಜೆರ್ಸಿಯಿಂದ ಹೋಗುತ್ತಿದ್ದೆವು.

ನ್ಯೂಜೆರ್ಸಿಯಲ್ಲಿ ಧಾರ್ಮಿಕ ಹಾಗೂ ಆಧ್ಯಾತ್ಮಿಕ ಕ್ಷೇತ್ರಗಳಲ್ಲಿ ಆದ ಅನೇಕ ಬದಲಾವಣೆಗಳಲ್ಲಿ ಒಂದು ಬದಲಾವಣೆಗೆ ಆಧಾರವಾದ ಘಟನೆಯೊಂದು ಈ ರೀತಿ ಇದೆ. ೧೯೮೦ರಲ್ಲಿ ನಾನು ನ್ಯೂಜೆರ್ಸಿಗೆ ಬಂದ ನಂತರ ನ್ಯೂಯಾರ್ಕ್ ಕನ್ನಡ ಕೂಟದ ಗಣೇಶನ ಹಬ್ಬದ ದಿನ ಮಾಡಿದ ಪೂಜೆಯ ವೇದ ಘೋಷದಲ್ಲಿ ಭಾಗವಹಿಸಿದೆನು. ಪೂಜೆಯ ನಂತರ ಕನ್ನಡ ಕೂಟದ ಸದಸ್ಯರೂ ಹಾಗೂ ನ್ಯೂಜೆರ್ಸಿ ನಿವಾಸಿಗಳೂ ಆಗಿದ್ದ ಶ್ರೀ ಎಂ. ಎಲ್. ನಾಗರಾಜ, ಶ್ರೀ ಬಿ. ಆರ್. ರಾಮಪ್ರಸಾದ್ ಮತ್ತು ಶ್ರೀ ಗಣೇಶಪ್ರಸಾದ್ ಅವರುಗಳು ನ್ಯೂಜೆರ್ಸಿಯಲ್ಲಿ ನನ್ನ ಜೊತೆ ವೇದಪಾಠದ ಸತ್ಸಂಗವನ್ನು ಆರಂಭಿಸುವ ಸಲಹೆಯನ್ನು ಮುಂದಿಟ್ಟರು. ಹೀಗೆ ಮೊದಲಿಗೆ ಒಟ್ಟು ನಾವು ನಾಲ್ಕು ಜನ ವಾರಕ್ಕೊಮ್ಮೆ ಒಬ್ಬೊಬ್ಬರ ಮನೆಯಲ್ಲಿ ವೇದಪಾಠ ಸತ್ಸಂಗವನ್ನು ಆರಂಭಿಸಿದೆವು. ಆಗ ನ್ಯೂಜೆರ್ಸಿಯಲ್ಲಿ ಸಾಂಪ್ರದಾಯಿಕವಾದ (traditional) ದೇವಸ್ಥಾನಗಳು ಅದರಲ್ಲೂ ದಕ್ಷಿಣ ಭಾರತೀಯ ದೇವಸ್ಥಾನಗಳಂತೂ ಇರಲಿಲ್ಲ. ಪ್ರತಿ ವಾರ ನಡೆಯುತ್ತಿದ್ದ ವೇದಪಾಠ ಸತ್ಸಂಗದಲ್ಲಿ ನಾವು ನಾಲ್ಕು ಜನರ ಜೊತೆಗೆ ಆಗಾಗ ಶ್ರೀ ಗೋಪಾಲ ಕುಕ್ಕೆ, ಶ್ರೀ ಕೃಷ್ಣಮೂರ್ತಿ ವೆಂಕಟರಾಮನ್ ಮತ್ತು ಡಾ. ಯಜ್ಞಸುಬ್ರಮಣ್ಯಂ ಸೇರುತ್ತಿದ್ದರು. ಈ ಸತ್ಸಂಗದ ಜೊತೆಗೆ ೧೯೭೬ರಲ್ಲಿ ಶ್ರೀಮತಿ ವಂದನಾ ಮತ್ತು ಡಾ. ಮಹೇಂದ್ರ ಜಾನಿಯವರ ಮನೆಯಲ್ಲಿಯೇ ಸಣ್ಣದಾಗಿ ಆರಂಭವಾಗಿದ್ದ ವಿವೇಕಾನಂದ ವಿದ್ಯಾಪೀಠ ಎಂಬ ಆಧ್ಯಾತ್ಮಿಕ ಸಂಸ್ಥೆಯ ವಾರಾಂತ್ಯ ತರಗತಿಗಳಲ್ಲಿ (weekend classes) ನಾನು ಶಿಕ್ಷಕನಾಗಿಯೂ ಸ್ವಯಂ ಸೇವೆಯನ್ನು ಸಲ್ಲಿಸುತ್ತಿದ್ದೆನು.

ಇದೇ ಸಮಯದಲ್ಲಿ ನ್ಯೂಜೆರ್ಸಿಯ ದಕ್ಷಿಣ ಭಾಗದಲ್ಲಿ ಕನ್ನಡಿಗರೇ ಆದ ಡಾ. ತಿರುಮಲರಾಯ ಹಳೇಮನೆ ಮತ್ತು ಶ್ರೀ ರಾಘವನ್ ಪ್ರತಿವಾದಿ ತಮ್ಮ ಅನೇಕ ಮಿತ್ರರೊಡಗೂಡಿ ೧೯೮೮ರ ಸುಮಾರಿಗೆ ಹಿಂದೂ ಅಮೆರಿಕನ್ ಟೆಂಪಲ್ ಅಂಡ್ ಕಲ್ಚರಲ್ ಸೆಂಟರ್ ಎಂಬ ಸಂಸ್ಥೆಯನ್ನು ಆರಂಭಿಸಿದರು. ನಾನು ಮತ್ತು ಡಾ. ಯಜ್ಞಸುಬ್ರಮಣ್ಯಂ HATCC (Hindu American Temple and Cultural Center, HATCC) ಸಂಸ್ಥೆಯ ಮಿತ್ರರ ಸಲಹೆಯಂತೆ HATCC ಸಂಸ್ಥೆಯನ್ನು ಸೇರಿ ಆ ಸಂಸ್ಥೆಯ ಮೂಲಕ ಹಿಂದೆ ಹೇಳಿದ ವಿವೇಕಾನಂದ ವಿದ್ಯಾಪೀಠವನ್ನು ಕೂಡಿಸಿ ವಿಜ್ಞಾನ ಹಾಗೂ ಆಧ್ಯಾತ್ಮಿಕ ಸಮ್ಮೇಳನವನ್ನು ಮಾಡಿದೆವು. HATCC ಮೂಲಕ ಅನೇಕ Education classes ನಡೆಸುತ್ತಿದ್ದೆವು. HATCC ಸಂಸ್ಥೆಗೆ Education classes ಜೊತೆಗೆ ಶ್ರೀಕೃಷ್ಣನ ದೇವಾಲಯವನ್ನು ಮಾಡಬೇಕೆಂಬ ಯೋಜನೆಯಿತ್ತು. ನ್ಯೂಜೆರ್ಸಿಯಲ್ಲಿ ಬದಲಾವಣೆಗಳ ಬಿರುಗಾಳಿಯೇ ಬಂದಂತೆ ಸುಮಾರು ಅದೇ ಸಮಯದಲ್ಲಿ ಅಂದರೆ ೧೯೮೯ರಲ್ಲಿ ಶ್ರೀ ಜನಾರ್ದನ ರೆಡ್ಡಿ ಮತ್ತು ಶ್ರೀ ಪ್ರಸಾದ್ ರಾವ್ ಯರ್ಲಗಡ್ಡ ಎಂಬ ತೆಲುಗರು ಹಾಗೂ

ಅನೇಕಾನೇಕ ಮಿತ್ರರೊಡಗೂಡಿ ಹಿಂದೂ ಟೆಂಪಲ್ ಅಂಡ್ ಕಲ್ಚರಲ್ ಸೊಸೈಟಿ (Hindu Temple and Cultural Society) ಎಂಬ ಸಂಸ್ಥೆಯು ಶ್ರೀ ವೆಂಕಟೇಶ್ವರನ ದೇವಾಲಯವನ್ನು ಕಟ್ಟುವ ಉದ್ದೇಶದಿಂದ ಆರಂಭಗೊಂಡಿತು.

ಇದೇ ಸಮಯಕ್ಕೆ ಸರಿಯಾಗಿ ಮತ್ತೊಂದು ವಿಶೇಷ ಘಟನೆ ನ್ಯೂಜೆರ್ಸಿಯಲ್ಲಿನ ಆಧ್ಯಾತ್ಮಿಕ ಬದಲಾವಣೆಗೆ ಸ್ಫೂರ್ತಿ ನೀಡಿತು. ಅದೇನೆಂದರೆ ನಾನು ಬೆಂಗಳೂರಿನಿಂದ ಪರಮಪೂಜ್ಯ ಶ್ರೀ ಪರಮಾನಂದ ಭಾರತಿ ಸ್ವಾಮಿಯವರ ಪ್ರಪ್ರಥಮ ಅಮೇರಿಕಾ ಯಾತ್ರೆಯನ್ನು ೧೯೭೮ರಲ್ಲಿ ಯೋಜನೆ ಮಾಡಿದೆನು. ಅವರ ಯಾತ್ರೆ ನ್ಯೂಜೆರ್ಸಿಯಿಂದ ಆರಂಭವಾಯಿತು. ಸ್ವಾಮೀಜಿಯವರು ಅವರ ಪೂರ್ವಾಶ್ರಮದಿಂದಲೂ ನನಗೆ ಚಿರಪರಿಚಿತರು. ಅವರು ಉತ್ತಮ ವಿಜ್ಞಾನಿಗಳಾಗಿದ್ದವರು, ಪೂರ್ವಾಶ್ರಮದಲ್ಲಿ ಐ.ಐ.ಟಿ. ಮದ್ರಾಸ್‌ನಲ್ಲಿ ಪ್ರೊಫೆಸರ್ ಆಗಿದ್ದವರು. ನ್ಯೂಜೆರ್ಸಿಯಿಂದ ಆರಂಭಿಸಿ ಅಮೇರಿಕಾದ ಅನೇಕ ರಾಜ್ಯಗಳಲ್ಲಿ ವಿಜ್ಞಾನ ಹಾಗೂ ಸನಾತನ ಧರ್ಮದ ಸಮನ್ವಯ ವಿಷಯದಲ್ಲಿ ಅವರಿಂದ ಪ್ರವಚನಗಳು ಮತ್ತು ಆಧ್ಯಾತ್ಮಿಕ ಸತ್ಸಂಗಗಳನ್ನು ನಾನು ಮತ್ತು ನನ್ನ ಅನೇಕ ಮಿತ್ರರು ಒಡಗೂಡಿ ಸಫಲವಾಗಿ ನಡೆಸಿದೆವು. ವಿಶೇಷವಾಗಿ ನ್ಯೂಜೆರ್ಸಿಯಲ್ಲಿ ಅವರ ನೇತೃತ್ವದಲ್ಲಿ ಧರ್ಮ ಸಮ್ಮೇಳನ, ಗಾಯತ್ರೀ ಯಜ್ಞ ಹಾಗೂ ಸಾಮೂಹಿಕ ಪೂಜೆಗಳನ್ನು ಏರ್ಪಡಿಸಿದೆವು. ನ್ಯೂಜೆರ್ಸಿಯಲ್ಲಿನ ಧಾರ್ಮಿಕ ಹಾಗೂ ಆಧ್ಯಾತ್ಮಿಕ ಕ್ಷೇತ್ರಗಳಲ್ಲಿನ ಸಾಮೂಹಿಕ ಚಟುವಟಿಕೆಗಳು ವೃದ್ಧಿಯಾಗುವುದಕ್ಕೆ ಪರಮಪೂಜ್ಯ ಸ್ವಾಮಿ ಶ್ರೀ ಪರಮಾನಂದ ಭಾರತಿಯವರು ಭಾರತದಿಂದ ಅನೇಕ ಬಾರಿ ನ್ಯೂಜೆರ್ಸಿಗೆ ಬಂದು ಸ್ಫೂರ್ತಿ ನೀಡಿದುದಲ್ಲದೇ ಅವುಗಳಲ್ಲಿ ಅವರೂ ಸಹ ಭಾಗವಹಿಸಿದುದು ಪ್ರಧಾನ ಕಾರಣವೆಂದು ನ್ಯೂಜೆರ್ಸಿಯ ಅನೇಕ ಹಿರಿಯರಿಗೆ ತಿಳಿದಿದೆ. ನ್ಯೂಜೆರ್ಸಿಯಲ್ಲಿ ೧೯೭೮ರಿಂದ ಆರಂಭವಾಗಿ ಈ ಕಾಲದವರೆಗೂ ಅನೇಕ ದೇವಸ್ಥಾನಗಳು ಆರಂಭವಾಗಿ ಧಾರ್ಮಿಕ ಹಾಗೂ ಆಧ್ಯಾತ್ಮಿಕ ಕಾರ್ಯಕ್ರಮಗಳು ಅಸಂಖ್ಯಾತವಾಗಿವೆ.

ಈ ರೀತಿ ನ್ಯೂಜೆರ್ಸಿಯಲ್ಲಿ ಅನೇಕ ಧಾರ್ಮಿಕ ಕಾರ್ಯಕ್ರಮಗಳು ನಡೆಯುತ್ತಿದ್ದಂತೆ ದಕ್ಷಿಣ ಭಾರತೀಯ ಸಾಂಪ್ರದಾಯಿಕ ದೇವಸ್ಥಾನಗಳಲ್ಲಿ ಮೊದಲನೆಯದಾಗಿ ಸ್ಥಾಪಿತವಾದುದೇ ನ್ಯೂಜೆರ್ಸಿಯ ಬ್ರಿಡ್ಜ್ ವಾಟರ್ ನಗರದ ಶ್ರೀ ವೆಂಕಟೇಶ್ವರ ದೇವಾಲಯ. ಇದನ್ನು ಕಟ್ಟಿದ ಸಂಸ್ಥೆ ಮೇಲೆ ಹೇಳಿದ ಹಿಂದೂ ಟೆಂಪಲ್ ಅಂಡ್ ಕಲ್ಚರಲ್ ಸೊಸೈಟಿ. ದೇವಸ್ಥಾನವೊಂದನ್ನು ಕಟ್ಟುವುದಕ್ಕೆ ಬೇಕಾದುದು ಮೊದಲನೆಯದಾಗಿ ದೈವಕೃಪೆ, ಎರಡನೆಯದಾಗಿ ಭಕ್ತಾದಿ ಜನಗಳ ಸಹಕಾರ ಮತ್ತು ಮೂರನೆಯದಾಗಿ ಭಕ್ತಾದಿ ಜನಗಳ ಧನಬಲ. ಈ ದೇವಸ್ಥಾನದ ನಿರ್ಮಾಣಕ್ಕೆ ದೈವಕೃಪೆ ಹಾಗೂ ಕೆಲವು ಭಕ್ತಾದಿಗಳ ಧನಬಲ ಒದಗಿ ಬಂದಿತ್ತು. ಅನೇಕ ಭಕ್ತಾದಿ ಜನಗಳ ಸಹಕಾರ, ಸೇವೆ ಹಾಗೂ ಧನಬಲವೂ ಬೇಕಾಗಿತ್ತು. ಅದಕ್ಕಾಗಿ ಒಂದು ಒಳ್ಳೆಯ ಯೋಜನೆ ಮಾಡಿದೆವು. ಯಾರಾದರೂ ತಮ್ಮ ಮನೆಯಲ್ಲಿ ಶ್ರೀ ವೆಂಕಟೇಶ್ವರ ಸ್ವಾಮಿಯ ಪೂಜೆ ಮಾಡಬೇಕೆಂದು ಇಷ್ಟಪಟ್ಟರೆ,

ವಾರಾಂತ್ಯದಲ್ಲಿ ನಾವು ಕೆಲವರು ಅವರ ಮನೆಗೆ ಹೋಗಿ, ದೇವಸ್ಥಾನದ ಸಂಸ್ಥೆಯ ಪರವಾಗಿ ಪೂಜೆ ಮಾಡುತ್ತಿದ್ದೆವು. ಪೂಜೆಯ ನಂತರ ಅಲ್ಲಿ ನೆರೆದಿದ್ದ ಭಕ್ತಾದಿಗಳಿಗೆ ದೇವಸ್ಥಾನದ ಯೋಜನೆ ಹಾಗೂ ನಕ್ಷೆ ತೋರಿಸಿ ಅವರ ಸಹಕಾರ, ಸೇವೆ ಹಾಗೂ ಧನದ ಕಾಣಿಕೆಯನ್ನೂ ಕೋರುತ್ತಿದ್ದೆವು.

ಈ ರೀತಿಯಾಗಿ ಅನೇಕಾನೇಕ ಭಕ್ತರ ಒಕ್ಕೂಟ, ಸಹಾಯ ಮತ್ತು ಧನ ಎಲ್ಲವೂ ಕೂಡಿ, ೧೯೯೨ರಲ್ಲಿ ನ್ಯೂಜೆರ್ಸಿಯ ಬ್ರಿಡ್ಜ್ ವಾಟರ್ ನಗರದಲ್ಲಿ ಶ್ರೀ ವೆಂಕಟೇಶ್ವರ ದೇವಸ್ಥಾನ ಸಾಂಪ್ರದಾಯಿಕ ರೀತಿಯಲ್ಲಿ ಸ್ಥಾಪಿತಗೊಂಡಿತು. ಈ ದೇವಸ್ಥಾನ ಸ್ಥಾಪಿತವಾದ ಮೇಲೆ ನ್ಯೂಜೆರ್ಸಿಯಲ್ಲಿ ಧಾರ್ಮಿಕ, ಆಧ್ಯಾತ್ಮಿಕ, ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಅಪಾರವಾದ ಚಟುವಟಿಕೆಗಳು ಆರಂಭವಾದುವು. ಶ್ರೀ ವೆಂಕಟೇಶ್ವರ ದೇವಾಲಯದಲ್ಲಿ ಪ್ರಧಾನ ದೇವತೆಯಾದ ಶ್ರೀ ವೆಂಕಟೇಶ್ವರ ಸ್ವಾಮಿಯ ಜೊತೆಗೆ ಶ್ರೀ ಶಿವ ಪರಿವಾರ, ಶ್ರೀ ರಾಮ ಪರಿವಾರ ಮುಂತಾದ ದೇವತೆಗಳ ಸನ್ನಿಧಿಯೂ ಇದೆ. ಆದ್ದರಿಂದ ಈ ದೇವಸ್ಥಾನಕ್ಕೆ ಎಲ್ಲಾ ದೇವತೆಗಳ ಭಕ್ತಾದಿಗಳೂ ಬರುತ್ತಾರೆ.

ಧಾರ್ಮಿಕ ಕ್ಷೇತ್ರದಲ್ಲಿ ಅನೇಕ ಹಬ್ಬ ಹರಿದಿನಗಳ ಉತ್ಸವಗಳನ್ನು ಆಚರಿಸಲಾಗುತ್ತದೆ. ಆಧ್ಯಾತ್ಮಿಕ ಕ್ಷೇತ್ರದಲ್ಲಿ ಅನೇಕ ಆಧ್ಯಾತ್ಮಿಕ ವಿಷಯಗಳನ್ನು ಆಧರಿಸಿ ಪ್ರವಚನಗಳು ನಡೆಯುತ್ತವೆ. ಭಾಷೆಗಳನ್ನು ಮತ್ತು ಸನಾತನ ಧರ್ಮದ ತತ್ವಗಳನ್ನು ಹೇಳಿಕೊಡುವ ತರಗತಿಗಳು ನಡೆಯುತ್ತವೆ. ದೇವಾಲಯದ ಆರಂಭದ ಕಾಲದಲ್ಲಿ ನಾನು ಶೈಕ್ಷಣಿಕ ಸಮಿತಿಯ ಅಧ್ಯಕ್ಷನಾಗಿ ಹಾಗೂ ನನ್ನ ಪತ್ನಿ ಗೀತಾ ಸಾಂಸ್ಕೃತಿಕ ಸಮಿತಿಯ ಉಪಾಧ್ಯಕ್ಷೆಯಾಗಿ ಸೇವೆಯನ್ನು ಸಲ್ಲಿಸಿದೆವು. ಇದರ ಜೊತೆಗೆ ದೇವಸ್ಥಾನದ ಆವರಣದಲ್ಲಿ ಬಾಲಕ, ಬಾಲಕಿಯರಿಗೆ ಸನಾತನ ಧರ್ಮ ಶಿಬಿರಗಳನ್ನು ಬೇಸಿಗೆ ರಜೆಯ ಸಮಯದಲ್ಲಿ ಆರಂಭಿಸಿದೆವು. ೨೬ ವರ್ಷಗಳ ನಂತರ ಈಗಲೂ ನಾವು ಆಗ ಆರಂಭಿಸಿದ ಶೈಕ್ಷಣಿಕ ಶಿಬಿರಗಳ ಕಾರ್ಯಕ್ರಮಗಳು ಚೆನ್ನಾಗಿ ನಡೆಯುತ್ತಿವೆ. ಈ ದೇವಸ್ಥಾನದ ರಾಜಗೋಪುರ ಮತ್ತು ಧ್ವಜಸ್ಥಂಭದ ಪ್ರತಿಷ್ಠಾಪನೆ ೧೯೯೮ರಲ್ಲಿ ನೆರವೇರಿತು.

ಶ್ರೀ ವೆಂಕಟೇಶ್ವರ ದೇವಸ್ಥಾನದ ನಂತರ ಹಿಂದೂ ಅಮೆರಿಕನ್ ಟೆಂಪಲ್ ಅಂಡ್ ಕಲ್ಚರಲ್ ಸೆಂಟರ್ ಸಂಸ್ಥೆಯ ಮೂಲಕ ಶ್ರೀ ಗುರುವಾಯೂರಪ್ಪನ್ ದೇವಾಲಯ ಕಟ್ಟುವ ಯೋಜನೆ ಹಾಕಿಕೊಳ್ಳಲಾಯಿತು. ಸಾಂಪ್ರದಾಯಿಕ ದೇವಸ್ಥಾನವನ್ನು ಕಟ್ಟುವುದಕ್ಕೆ ಪೂರ್ವಭಾವಿಯಾಗಿ ಸುಮಾರು ೧೯೯೫ರಲ್ಲಿ ತಾತ್ಕಾಲಿಕವಾಗಿ ಶ್ರೀ ಗುಂಡಣ್ಣ ಎನ್ನುವವರ ಮನೆಯ ಬೇಸ್‌ಮೆಂಟ್ (Basement) ನಲ್ಲಿ ದೇವಾಲಯದಂತೆ ಅರ್ಚನಾದಿ ಪೂಜೆಗಳನ್ನು ನಡೆಸಲಾಯಿತು. ನಂತರ ೨೦೧೨ರಲ್ಲಿ ಸಾಂಪ್ರದಾಯಿಕ ದೇವಾಲಯವು ನ್ಯೂಜೆರ್ಸಿಯ ಮಾರ್ಗನ್‌ವಿಲ್ ನಗರದಲ್ಲಿ ಸ್ಥಾಪನೆಗೊಂಡಿತು. ಈ ದೇವಸ್ಥಾನದಲ್ಲಿ ಪ್ರಧಾನ ದೇವತೆ ಶ್ರೀ ಗುರುವಾಯೂರಪ್ಪನ್. ಆದರೆ ಇಲ್ಲಿ ಸನಾತನ ಧರ್ಮದ ಅನೇಕ ದೇವತಾ ಮೂರ್ತಿಗಳು ಪ್ರತಿಷ್ಠಾಪಿತವಾಗಿವೆ. ಈ ದೇವಸ್ಥಾನದಲ್ಲಿಯೂ ಶ್ರೀ ವೆಂಕಟೇಶ್ವರ

ದೇವಸ್ಥಾನದಂತೆ ಧಾರ್ಮಿಕ, ಆಧ್ಯಾತ್ಮಿಕ, ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ಕಾರ್ಯಕ್ರಮಗಳು ನಡೆಯುತ್ತವೆ. ನ್ಯೂಜೆರ್ಸಿಯ ಭಾರತೀಯರಿಗೆ ಮತ್ತು ವಿಶೇಷವಾಗಿ ಕನ್ನಡಿಗರಿಗೆ ಈ ಎರಡು ದೇವಾಲಯಗಳ ಮೂಲಕ ವೈವಿಧ್ಯಮಯ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ಅವಕಾಶ ಬಹಳವಾಗಿ ಇದೆ.

ನಾ ಕಂಡಂತೆ ಅಂದು ನ್ಯೂಯಾರ್ಕ್ ದೇವಾಲಯಕ್ಕೆ ಬಹಳವಾಗಿ ಹೋಗುತ್ತಿದ್ದವರಿಗೆ ನ್ಯೂಜೆರ್ಸಿಯಲ್ಲೇ ಎರಡು ಸಾಂಪ್ರದಾಯಿಕ ದೇವಾಲಯಗಳಿಗೆ ಹೋಗುವ ಅವಕಾಶವಾಗಿದ್ದು ಒಂದು ದೊಡ್ಡ ಬದಲಾವಣೆ. ಇದೇ ರೀತಿ ನ್ಯೂಜೆರ್ಸಿಯಲ್ಲಿ ಮತ್ತೊಂದು ದೊಡ್ಡ ಬದಲಾವಣೆಯಾಯಿತು. ೨೦೦೨ರಲ್ಲಿ ಉಡುಪಿಯ ಪುತ್ತಿಗೆ ಮಠದ ಪೂಜ್ಯ ಶ್ರೀ ೧೦೦೮ ಶ್ರೀ ಸುಗುಣೇಂದ್ರ ತೀರ್ಥ ಸ್ವಾಮಿಯವರಿಂದ ನ್ಯೂಜೆರ್ಸಿಯಲ್ಲಿ ಶ್ರೀಕೃಷ್ಣ ವೃಂದಾವನ ಸಂಸ್ಥೆ ಸ್ಥಾಪಿತವಾಯಿತು. ಈ ಸಂಸ್ಥೆಯ ಮೂಲಕ ಅನೇಕ ಧಾರ್ಮಿಕ, ಆಧ್ಯಾತ್ಮಿಕ, ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ಕಾರ್ಯಕ್ರಮಗಳು ನಡೆಯುತ್ತಿವೆ. ಈ ಕೃಷ್ಣ ವೃಂದಾವನದಲ್ಲಿ ಎಲ್ಲ ಭಕ್ತರು ಭಾಗವಹಿಸಿದರೂ ಕನ್ನಡಿಗರಾದ ಭಕ್ತರಿಗೆ ವಿಶೇಷ. ನಂತರ ೨೦೦೯ರಲ್ಲಿ ಶ್ರೀಕೃಷ್ಣ ವೃಂದಾವನ ಸಂಸ್ಥೆಯನ್ನು ಎಡಿಸನ್ ನಗರದ ದೊಡ್ಡ ಕಟ್ಟಡಕ್ಕೆ ವರ್ಗಾಯಿಸಲಾಯಿತು. ಈ ಕಟ್ಟಡಕ್ಕೆ ಬಂದ ಮೇಲೆ ಕಾರ್ಯಕ್ರಮಗಳು ಬಹಳವಾಗಿ ವೃದ್ಧಿಗೊಂಡವು. ಇಲ್ಲಿನ ಇನ್ನೊಂದು ವಿಶೇಷವೇನೆಂದರೆ ಅನೇಕ ವಿಶೇಷ ಕಾರ್ಯಕ್ರಮಗಳಲ್ಲಿ ಪೂಜ್ಯ ಶ್ರೀ ಸುಗುಣೇಂದ್ರ ತೀರ್ಥ ಸ್ವಾಮಿಗಳು ಉಡುಪಿಯಿಂದ ಇಲ್ಲಿಗೆ ಬಂದು ಭಾಗವಹಿಸುತ್ತಾರೆ. ಇಷ್ಟೇ ಅಲ್ಲದೆ ಪೂಜ್ಯ ಶ್ರೀ ಸ್ವಾಮಿಯವರು ನ್ಯೂಜೆರ್ಸಿ ಮೊದಲುಗೊಂಡು ಅಮೆರಿಕಾದ ಇತರ ಅನೇಕ ನಗರಗಳಲ್ಲಿ ಸಂಸ್ಥೆಗಳನ್ನು ಸ್ಥಾಪಿಸಿದ್ದಾರೆ.

೨೦೧೭ರಲ್ಲಿ ನ್ಯೂಜೆರ್ಸಿಯ ಎಡಿಸನ್ನಿನ ಶ್ರೀಕೃಷ್ಣ ವೃಂದಾವನದ ಕಟ್ಟಡದಲ್ಲಿ ವಿಶೇಷವಾದ ಗರ್ಭಗೃಹ ಸ್ಥಾಪಿತವಾಗಿ ಅದರಲ್ಲಿ ವಿಶೇಷವಾದ ಸಾಲಿಗ್ರಾಮ ಶಿಲೆಯಲ್ಲಿ ಮಾಡಿದ ಶ್ರೀಕೃಷ್ಣನ ವಿಗ್ರಹವನ್ನು ಪೂಜ್ಯ ಶ್ರೀ ಸುಗುಣೇಂದ್ರ ತೀರ್ಥ ಸ್ವಾಮೀಜಿಯವರೇ ಪ್ರತಿಷ್ಠಾಪನೆ ಮಾಡಿದರು. ಹೀಗೆ ಕನ್ನಡಿಗರಿಗೆ ವಿಶೇಷವಾಗಿ ಹಾಗೂ ಭಾರತೀಯ ಮತ್ತು ಅಮೆರಿಕನ್ ಭಕ್ತರಿಗೆ ಶ್ರೀಕೃಷ್ಣ ವೃಂದಾವನ ಅನೇಕ ವೈವಿಧ್ಯಮಯ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ಅವಕಾಶ ನೀಡುತ್ತಿದೆ. ಹೀಗೆಯೇ ಇನ್ನೂ ಅನೇಕ ದೇವಸ್ಥಾನಗಳು ನ್ಯೂಜೆರ್ಸಿಯಲ್ಲಿ ಸ್ಥಾಪಿತವಾಗಿವೆ ಹಾಗೂ ಸ್ಥಾಪಿತವಾಗಲಿವೆ. ಇಲ್ಲಿನ ಮತ್ತೊಂದು ಬೃಹತ್ ದೇವಾಲಯವೆಂದರೆ ನ್ಯೂಜೆರ್ಸಿಯ ರಾಬಿನ್ಸ್ ವಿಲ್‌ನಲ್ಲಿ (Robinsville) ಸ್ಥಾಪಿತವಾಗಿರುವ ವಿಶ್ವಾದ್ಯಂತ ಹೆಸರಾದ ಶ್ರೀ ಸ್ವಾಮಿನಾರಾಯಣ ಸಂಸ್ಥೆಯ ದೇವಸ್ಥಾನ. ನ್ಯೂಜೆರ್ಸಿಯ ಪ್ರಿನ್ಸ್‌ಟನ್‌ಲ್ಲಿ ದುರ್ಗಾಮಂದಿರ ೧೯೯೦ರ ಸುಮಾರಿಗೆ ಸ್ಥಾಪಿತವಾಯಿತು. ಹಾಗೆಯೇ ಸಾಮರ್ಸೆಟ್ ನಗರದಲ್ಲಿ ಶ್ರೀವಾರಿ ವೆಂಕಟೇಶ್ವರ ದೇವಾಲಯ ಸ್ಥಾಪಿತವಾಗಲಿದೆ. ಒಟ್ಟಿನಲ್ಲಿ ಸನಾತನ ಧರ್ಮದ ದೇವಾಲಯ ಹಾಗೂ ಸಂಸ್ಥೆಗಳನ್ನು ಸೇರಿಸಿ ನೋಡಿದರೆ

ನ್ಯೂಜೆರ್ಸಿಯಲ್ಲಿ ಅವು ೬೫ಕ್ಕೂ ಮೀರಿವೆ. ಇದರಲ್ಲಿ ಬಹುತೇಕ ದೊಡ್ಡ ಸಾಂಪ್ರದಾಯಿಕ ದೇವಾಲಯಗಳು ನಾ ಕಂಡಂತೆ ೧೯೮೦ರ ನಂತರ ಸ್ಥಾಪಿತವಾಗಿವೆ.

**ಸಾರಾಂಶ**

ಒಟ್ಟಿನಲ್ಲಿ ನಾ ಕಂಡಂತೆ ನ್ಯೂಜೆರ್ಸಿಯಲ್ಲಿ ಅಂದಿನ (ಅಂದರೆ ೧೯೮೦ರಲ್ಲಿ) ಇಂದಿನ (ಅಂದರೆ ೨೦೧೮ರಲ್ಲಿ) ಪರಿಸ್ಥಿತಿಯನ್ನು ತುಲನೆ ಮಾಡಿ ನೋಡಿದಾಗ ಬೃಹತ್ ಬದಲಾವಣೆಗಳಾಗಿವೆ. ಕನ್ನಡಿಗರಾದ ನಮಗೆ ಉದ್ಯೋಗ ಜೀವನವನ್ನು ಬಿಟ್ಟು ಉಳಿದ ಪ್ರಧಾನ ವಿಷಯಗಳಾದ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಹಾಗೂ ಆಧ್ಯಾತ್ಮಿಕ ಜೀವನ ವ್ಯವಸ್ಥೆ ಬಹಳ ಮುಖ್ಯವಾದುವು. ಏಕೆಂದರೆ ಸಾಮಾಜಿಕ ಜೀವನದಲ್ಲಿ ಮುಖ್ಯವಾಗಿ ನಮ್ಮ ಭೌತಿಕತೆಗೆ ಪ್ರಾಧಾನ್ಯ, ಸಾಂಸ್ಕೃತಿಕ ಜೀವನದಲ್ಲಿ ನಮ್ಮ ಮನಸ್ಸು ಹಾಗೂ ಭಾವನೆಗಳಿಗೆ ಪ್ರಾಧಾನ್ಯ, ಧಾರ್ಮಿಕ ಹಾಗೂ ಆಧ್ಯಾತ್ಮಿಕ ಜೀವನದಲ್ಲಿ ನಮ್ಮ ಶ್ರದ್ಧೆ, ನಂಬಿಕೆ ಮತ್ತು ಸಂಪ್ರದಾಯಗಳಿಗೆ ಪ್ರಾಧಾನ್ಯ. ಆದ್ದರಿಂದ ನಮ್ಮ ಉದ್ಯೋಗ ಅಥವಾ ವೃತ್ತಿಜೀವನದ ಅನುಕೂಲತೆಯ ಜೊತೆಗೆ ಈ ಮೇಲಿನ ಮೂರು ರೀತಿಯ ಜೀವನ ವಿಧಾನ ನಮ್ಮ ಆಸುಪಾಸಿನಲ್ಲೇ ಅಂದರೆ ಸುತ್ತಮುತ್ತಲ ಪರಿಸರದಲ್ಲೇ ನಮಗೆ ದೊರಕಿತೆಂದರೆ ಸಂತೋಷವುಂಟಾಗುತ್ತದೆ. ಈ ದೃಷ್ಟಿಯಲ್ಲಿ ನಾ ಕಂಡಂತೆ ನ್ಯೂಜೆರ್ಸಿಯಲ್ಲಿ ಅಂದಿನ ೧೯೮೦ರ ಪರಿಸರಕ್ಕೆ ಇಂದಿನ ಅಂದರೆ ೨೦೧೮ರ ಪರಿಸರವನ್ನು ತುಲನೆ ಮಾಡಿ ನೋಡಿದಾಗ ಇಂದು ಬಹಳ ಸುಲಭವಾಗಿ ಈ ಮೇಲೆ ವಿಚಾರ ಮಾಡಿದ ಮೂರು ಕ್ಷೇತ್ರಗಳಲ್ಲೂ ಅನುಕೂಲವಾದ ಹಾಗೂ ಸಂತೋಷದಾಯಕ ವಾತಾವರಣವಿದೆ ಎನ್ನುವುದು ನಿಸ್ಸಂಶಯ ಹಾಗೂ ಅನುಭವ ವೇದ್ಯ. ಇದೇ ರೀತಿ ಕನ್ನಡತನ ಹಾಗೂ ಭಾರತೀಯ ವಾತಾವರಣ ನ್ಯೂಜೆರ್ಸಿ ಹಾಗೂ ಅಮೇರಿಕಾದಲ್ಲಿ ಪಸರಿಸುತ್ತಿರಲಿ.

*

# ಮುಕ್ತಾ

■ **ಶಶಿಕಲಾ ಚಂದ್ರಶೇಖರ್,** Boyds, MD.

ಎಂದಿನಂತೆ ಇಂದೂ ಹಳೆಯ ವರ್ಷ ಕಳೆದು ಹೊಸ ವರ್ಷ ಶುರುವಾಗಿದೆ. ಹೊಸ ವರ್ಷದ ಹೊಸ್ತಿಲಲ್ಲಿ ನಿಂತು ನೆನಪಿರುವ ವರ್ಷಗಳನ್ನು ಪ್ರತ್ಯೇಕಿಸುವ ಗೆರೆಗಳ ಅಂತರದೊಳಗೆ ಸಾಮಾನ್ಯವಾದ ಅಂಶವೊಂದು ಅವಳ ಅರಿವನ್ನು ತಟ್ಟುತ್ತದೆ– 'ಬದಲಾವಣೆ'! ಕಂಡ ಬದಲಾವಣೆಗಳನ್ನು ಹತ್ತಿರದಿಂದ ನೋಡುವವಳಂತೆ, ಕೊರಳು ಕೊಂಕಿಸಿ ಕಣ್ಣು ಕಿರಿದುಗೊಳಿಸಿ ಒಳಗಣ್ಣರಳಿಸಿ ಏನನ್ನೋ ಹುಡುಕುವಂತೆ ತಡಕಿ ಕೆದಕುತ್ತಾಳೆ.

ಎಂದಿನಂತೆ ಭೂಮಿ ಸೂರ್ಯನನ್ನು ಸುತ್ತಲು ಮುನ್ನೂರ ಅರವತ್ತೈದು ದಿನಗಳ ಸಮಯ ತೆಗೆದುಕೊಂಡಿದ್ದರೂ, ಹಿಂದಿನ ವರ್ಷ ಕಂಡ ಭೂಮಿ ಅದೇ ಭೂಮಿಯಲ್ಲಾ ಇದು ಬದಲಾದ ಭೂಮಿ ಎಂದುಕೊಳ್ಳುತ್ತಾಳೆ ಅವಳು. ದೇಶಗಳ ಒಳ–ಹೊರ ವ್ಯವಹಾರಗಳು ಬದಲಿಸಿ, ಜನಜೀವನದ ಬಾಹ್ಯ–ಅಂತರ್ ಚಹರೆ ಬದಲಿಸಿದೆ. ಗಾಳಿಯ ದಿಕ್ಕು ಬದಲಾಗಿದೆ, ನದಿ ಪಾತ್ರ ಬದಲಿಸಿದೆ, ಇಲ್ಲಾ ಬತ್ತಿದೆ, ಇಲ್ಲಾ ನೀರ ಹರಿವು ತೆಳುವಾಗಿದೆ. ಹರಿಕೇನ್ ಹಾವಳಿ, ಕಾಳ್ಗಿಚ್ಚು ಪರಿಸರ ಮಾಲಿನ್ಯದಿಂದಾಗಿ ಇನ್ನೂ ಹೆಚ್ಚಾಗಿವೆ. ಬದುಕಿನ ಎಲ್ಲಾ ಹಾದಿಯಲ್ಲಿ ಒಳನುಸುಳಿರುವ ತಂತ್ರಜ್ಞಾನ ಅಚ್ಚರಿ ಹುಟ್ಟಿಸುವ ಮಟ್ಟಿಗೆ ದೈನಂದಿನ ಜೀವನದ ದಿಕ್ಕನ್ನೇ ಬದಲಿಸಿದೆ. ಬದಲಾವಣೆ ಜೀವನದ, ಪ್ರಕೃತಿಯ, ಕಾಲದ ಅನಿವಾರ್ಯ ಭಾಗ ನಿಜ. ಹಾಗೇ ನನ್ನ ಬದುಕಿನ ಬದಲಾವಣೆ ಅನಿವಾರ್ಯವಾ? ಎಂದು ಯೋಚಿಸುತ್ತಾಳೆ.

'ನೆನಪು' ಓಡಿಸಿಕೊಂಡು ಹೋಗಲು ಬಂದ ಪ್ರಿಯ ಜೊತೆಗಾರನಾದರೆ, ಮನಸ್ಸು ಪ್ರಿಯಕರನ ಹಿಂದೆ ಯಾವ ಕ್ಷಣದಲ್ಲಾದರೂ ಓಡಿಹೋಗಲು ಸಿದ್ಧಳಿರುವ ಪ್ರೇಯಸಿಯಂತೆ. ಹತ್ತು ಸೆಕೆಂಡುಗಳಲ್ಲಿ ಅಂಗೈಯಲ್ಲಿ ಬೇಕೆನಿಸಿದವರ ಮುಖ ಕಾಣಿಸುವ ಮಾಂತ್ರಿಕ ದರ್ಪಣದಂತಿರುವ iPhone Xನ್ನು ಕೈಯಲ್ಲಿ ಹಿಡಿದು ದಿಟ್ಟಿಸುತ್ತ ಮೂರು ದಶಕಗಳ ನೆನಪುಗಳ ಮಳಿಗೆಗೆ ತನ್ನನ್ನು ತಾನು ತೆರೆದುಕೊಳ್ಳುತ್ತಾಳೆ ಮುಕ್ತಾ.

ಮುಕ್ತಾ ಮೂರು ದಶಕಗಳ ಹಿಂದೆ ಹುಟ್ಟೂರನ್ನು ೮,೫೦೦ ಮೈಲಿ ಹಿಂದೆ ಬಿಟ್ಟು, ಅಂದು ಇಡೀ ಪ್ರಪಂಚ 'ಅಮರಾವತಿ' ಎಂದೇ ನಂಬಿದ್ದ ಈ ಭೂಭಾಗಕ್ಕೆ ಬಂದಾಗ, ಅವಳು ಹುಟ್ಟಿದ ಮನೆಯಲ್ಲಾಗಲೀ, ನೆರೆಮನೆಗಳಲ್ಲಾಗಲೀ ದೂರವಾಣಿಯೇ ಇರಲಿಲ್ಲ. ಹುಟ್ಟೂರಿನ ಸೀಮೆ ದಾಟಿ ಹೋಗದೇ ಬೆಳೆದ ಹುಡುಗಿ ಮುಕ್ತಾ. ಕಾಲಿರಿಸಿದ ಹೊಸನೆಲದ ಬೆರಗು, ಅಚ್ಚರಿ, ಬೆರಗು, ದಿಗ್ಭ್ರಮೆ, ಅಂತೆಯೇ ಮೊದಲಬಾರಿಗೆ ಊರ ಸೀಮೆದಾಟಿ ಬಂದ ತಬ್ಬಲಿ ನೋವು, ಒಂಟಿತನದ ಬಾಧೆ, ಇದನ್ನೆಲ್ಲಾ ಹಂಚಿಕೊಳ್ಳಲು ನೀಲಿ ಬಣ್ಣದ (ಬಹುಶಃ ಎಲ್ಲರ ನೆನಪಿನಿಂದ ಮಾಸೇ ಹೋಗಿರಬಹುದಾದ) ಅಂಚೆ ಪತ್ರ ಒದಗಿ ಬರುತ್ತಿದ್ದವು. ಅವಳ ಅಕ್ಷರಗಳ ಕೂಗು ಅವಳ ಆಪ್ತರನ್ನು ತಲುಪಲು ೧೫ ದಿನ, ಅತ್ತಲಿಂದ ಹಿತ ತರುವ ಅಂಚೆ ಬರಲು ಮತ್ತೆ ೧೫ ದಿನಗಳು! ಅಟ್ಲಾಂಟಿಕ್ ಸಾಗರದ ಮೇಲೆ ಅತ್ತಲಿಂದ ಇತ್ತ, ಇತ್ತಲಿಂದ ಅತ್ತ ಹಾರಾಡುತ್ತಿದ್ದ ಅಂಚೆ ಪತ್ರಗಳು (ಕಣ್ಣೀರು ಬಿದ್ದು ಚಿತ್ತಾದ ಅಕ್ಷರಗಳು) ಆ ದಶಕದ ಖುಷಿ, ವಿರಹ, ಹೊಸ ನೆಲದ ನೋಟ, ಹಳೆನೆಲದ ಕಥೆಗಳನ್ನು ತಮ್ಮೊಳಗೆ ಅಡಗಿಸಿಕೊಂಡು ಕಂತೆಯಾಗಿ ಅಲ್ಲೂ ಇಲ್ಲೂ ಕುಳಿತಿವೆ.

ಆ ದಿನಗಳಲ್ಲಿ ಅಂಚೆಯಲ್ಲಿ ತಿಳಿಸಿದ ನಿಗದಿತ ದಿನ ಅವಳ ಅಮ್ಮ ಅಂಗಡಿಯ ಬಳಿ ಕಾದಿರುತ್ತಿದ್ದರು. ಮುಕ್ತಾ ಅವಳಪ್ಪನ ಅಂಗಡಿಯ ಹತ್ತಿರದ ಕಂಪನಿಯ ನಂಬರಿಗೆ ಫೋನ್ ಮಾಡಿ ಕರೆದು, ಅವಳಪ್ಪನನ್ನು ಕೂಗುವಂತೆ ತಿಳಿಸುವಳು. ಅವರಲ್ಲಿಗೆ ಬರಲು ೧೦ ನಿಮಿಷಗಳ ಅಂತರ. ಅವಳು ಮತ್ತೆ ಕರೆಯುವಾಗ ಫೋನ್‌ನಲ್ಲಿ ಅಪ್ಪನ ಧ್ವನಿ! ಜೊತೆಗೆ ಅಮ್ಮನ ಮಾತು. ಅತ್ತು ಕರೆದು, ಚೆನ್ನಾಗಿದ್ದೀಯ? ಅಲ್ಲಿ ಈಗ ಗಂಟೆ ಎಷ್ಟು ಎನ್ನುವ ಹೊತ್ತಿಗೆ ಮುಗಿಯುತ್ತಿತ್ತು ಮಾತು. (ನಿಮಿಷಕ್ಕೆ AT & T charge $4.17!) ದೂರವಾಣಿ ಇಲಾಖೆಗೆ ಅರ್ಜಿ ಕೊಟ್ಟು, ಮೇಲೆ, ತುರ್ತು ಸೇವೆಗಾಗಿ ರೂ. ೧೫೦೦ ಶುಲ್ಕ ಕಟ್ಟಿದ ಎರಡು ವರ್ಷಗಳ ನಂತರ ಅವಳ ತವರುಮನೆಗೆ ದಪ್ಪಗಾತ್ರದ ಕರೀ ತಿರುಗು ದೂರವಾಣಿ ಡಬ್ಬ ಬಂತು, ನಾಲ್ಕೇ ಅಂಕೆಯ ನಂಬರ್ – ೨೫೩೨!!

ಅವಳ ಮನ ತೂಗಲಾರದ ಭಾರದಿಂದ ಹೊರೆ ಅನ್ನಿಸಿ, ಪಿಯಾನೋ ಮುಂದೆ ಕುಳಿತು ಕೀಲಿ ಮೇಲೆ ಬೆರಳಾಡಿಸತೊಡಗಿದಳು. ಮುಂದೆಂದೂ ಪಿಯಾನೋ ಬಾರಿಸಲಾರೆನೇನೋ ಎಂಬ ಅನುಮಾನ ಮೂಗಿನುದ್ದಕ್ಕೆ ನುಗ್ಗಿ ಮುಳುಗುವಷ್ಟು ಎತ್ತರಕ್ಕೆ ಬಂದಂತಾಗಿ ಅದು ಪೂರ ಮುಳುಗಿಸಿಬಿಡುವಷ್ಟರಲ್ಲಿ ತನಗೆ ಗೊತ್ತಿರುವ ಎಲ್ಲಾ ಕೃತಿಗಳನ್ನು ನುಡಿಸಿಬಿಡಬೇಕೆನ್ನುವ ಆತುರದಿಂದ ವೇಗವಾಗಿ ಕೀಲಿಗಳನ್ನು ಒತ್ತತೊಡಗಿದಳು.

ಮನ ದಣಿದ ನಂತರ ಪಿಯಾನೋ ಬಿಟ್ಟೆದ್ದ ಮುಕ್ತಾ ನಿಧಾನವಾಗಿ ನಡೆದು ಸಾಲಾಗಿ ಜೋಡಿಸಿಟ್ಟ ಕಾಳು, ಬೇಳೆ, ಹಿಟ್ಟಿನ ಡಬ್ಬ ಸವರುತ್ತಾ ಪ್ಯಾನ್ಟ್ರಿ ಮುಂದೆ ನಿಂತಳು. ಇಲ್ಲಿಂದ ಕೊಂಡೊಯ್ಯುತ್ತಿದ್ದ cassette player, 2 in 1, CD player, rice cooker, camera, ಇಂಡಿಯಾ ಬಜಾರ್ ಸೀರೆಗಳು, ಆಟಿಕೆಗಳಿಗೆ ಬದಲಾಗಿ ಬಂದ ಸ್ಟೀಲ್ ಡಬ್ಬಗಳವು. ಆ

ಡಬ್ಬದೊಳಗೆ ಅಡಗಿ ಬಂದಿದ್ದ ಚಟ್ನಿ, ಸಾಂಬಾರ್ ಪುಡಿ, ರಾಗಿ-ಜೋಳದ ಹಿಟ್ಟು, ಕಡಲೆ, ಜೀರಿಗೆ, ಹುರಳೀ ಕಾಳು, ಚಕ್ಕುಲಿ, ಸೋಹನ್ ಪಾಪಡಿ, ಪಾಕದ ಕಡ್ಲೆ... ಈಚೀಚೆಗೆ ಅಲ್ಲಿ ಸಿಗುವುದೆಲ್ಲಾ ಧಾರಾಳವಾಗಿ, ಸುಲಭವಾಗಿ ಇಲ್ಲೂ ಸಿಕ್ಕು, ಇಲ್ಲಿ ಸಿಗುವುದೆಲ್ಲಾ ಅಲ್ಲೂ ಧಾರಾಳವಾಗಿ ಸಿಕ್ಕು, ಯಾರಿಗೂ ಯಾವುದರಲ್ಲೂ ಆಸ್ಥೆ ಇಲ್ಲದಂತಾಗಿದೆ. ಸಾಮಾನ್ಯವಾಗಿ ನಮ್ಮ ದಿನಬಳಕೆಯ ದಿನಸಿಗಾಗಿ ಹಳೇ ದಿನಗಳಂತೆ ೧-೨ ಗಂಟೆ ಡ್ರೈವ್ ಮಾಡಿಕೊಂಡು ಭಾರತೀಯ ದಿನಸಿ ಅಂಗಡಿ ಹುಡುಕಿಕೊಂಡು ಹೋಗಬೇಕಿಲ್ಲ. ೧೦ ನಿಮಿಷದ ಅಂತರದಲ್ಲಿ ಒಂದೆರಡು, ಕೆಲವೊಮ್ಮೆ ಅದಕ್ಕೂ ಜಾಸ್ತಿ ಅಂಗಡಿಗಳು ಒಂದೇ ಕೇರಿಯಲ್ಲಿ ಕಾಣಬರುತ್ತವೆ. ದುಂಡಾದ ಭೂಮಿ ಚಪ್ಪಟೆಯಾಗಿ ಏಕವಾದಂತೆ.

ಎರಡು ತಿಂಗಳ ಹಿಂದೆ ಇಂದು ನಿಂತ ಜಾಗದಲ್ಲೇ ನಿಂತು ಪ್ಯಾಂಟ್ರಿಯ ಕದ ತೆರೆದು ನಿಂತ ಮುಕ್ತಾ ಅಂದು ಅವಾಕ್ಕಾಗಿದ್ದಳು. ಪ್ಯಾಂಟ್ರಿಯಲ್ಲಿ ಹಾಲಿನ ಕ್ಯಾನ್! ಅವಳಿಗೆ ಗಂಡನ ಮೇಲೆ ಇನ್ನಿಲ್ಲದಷ್ಟು ಸಿಟ್ಟು ಬಂತು. ಆಮೇಲೆ ನೆನಪಾಯಿತು ಊರಲ್ಲೇ ಇಲ್ಲದ ಫಾಲಾಕ್ಷ ಈ ಕೆಲಸ ಮಾಡಲು ಸಾಧ್ಯವೇ ಇಲ್ಲಾ. ಅಂದರೆ ನಾನೇ!? ಇದ್ದಕ್ಕಿದ್ದಂತೆ ಅವಳಿಗೆ ತಾನೆಲ್ಲಿದ್ದೀನಿ ಎನ್ನುವ ಅರಿವೇ ಹೋಗಿ ಕಕ್ಕಾಬಿಕ್ಕಿಯಾಗಿದ್ದಳು. ಕೆಲಗಳಿಗೆಗಳ ನಂತರ ಸಾವರಿಸಿಕೊಂಡು ಹಾಲನ್ನು ಚೆಲ್ಲಿದ್ದಳು. ಮೊಸರು ತೆಗೆಯಲು ಫ್ರಿಡ್ಜ್ ಬಾಗಿಲನ್ನು ತೆಗೆದ ಅವಳಿಗೆ ಅಲ್ಲಿ ಕಂಡಿದ್ದು ಸಕ್ಕರೆ ಡಬ್ಬ. ಅವಾಕ್ಕಾಗಿ ಚಲಿಸದ ಗೊಂಬೆಯಂತೆ ನಿಂತೇ ಬಿಟ್ಟಿದ್ದಳು.

ಹೀಗೆ ಸಣ್ಣ ಪುಟ್ಟ ಮರೆಗುಳೀ ಘಟನೆಗಳು ಮುಂದೆಯೂ ನಡೆದವು. ಒಮ್ಮೆ ಫೋನ್ ಮಾಡಿ, ಅದು ರಿಂಗ್ ಆಗಿ ಅತ್ತಲಿಂದ 'ಹಲೋ' ಎಂಬ ಉತ್ತರ ಬರುವ ವೇಳೆಗೆ ಯಾರನ್ನು ಕರೆದಿದ್ದೆ, ಏಕೆ ಕರೆದಿದ್ದೆ ಎನ್ನುವ ಗೊಂದಲ, ಗಾಬರಿಯಾಗಿ ಫೋನ್ ಇಟ್ಟುಬಿಟ್ಟಿದ್ದಳು. ಈ ಎಲ್ಲಾ ಘಟನೆಗಳ ನಡುವೆ ಅಂತರವಿದ್ದರಿಂದ, ಅವಳು ಹೆಚ್ಚು ಯೋಚಿಸುವ ಗೋಜಿಗೆ ಹೋಗಲಿಲ್ಲ. ಕೆಲಸದ stress ಅಥವಾ senior moment ಇರಬೇಕು, ಎಂದು ಸಮಜಾಯಿಶಿ ಕೊಟ್ಟುಕೊಂಡು ತನಗೆ ತಾನೇ ಸಾಮಾಧಾನ ಮಾಡಿಕೊಂಡಳು. ಸದ್ಗುರು ಹೇಳಿದಂತೆ ಪ್ರತೀದಿನ ಧ್ಯಾನ ಮಾಡಬೇಕು ಎಂದುಕೊಂಡಳು.

ವಾರದ ಹಲವಾರು ಸಂಜೆ, ಪ್ರತಿ ವಾರಾಂತ್ಯದ ದಿನಗಳಲ್ಲಿ ಸಾಕರ್ ಪ್ಲೆಕ್ಸ್‌ನಲ್ಲಿ ನಡೆದಾಡುವುದು ಅವಳ ನೆಚ್ಚಿನ ಹವ್ಯಾಸಗಳಲ್ಲೊಂದು. ಐವತ್ತಕ್ಕೂ ಮೀರಿದ ಸಾಕರ್ ಮೈದಾನಗಳು ಒಂದೇ ಎಡೆ ಇದ್ದು, ಅದರಂಚಿನಲ್ಲಿ bikers, skaters, walkersಗಳಿಗಾಗಿ ಇಡೀ ಮೈದಾನ ಸುತ್ತುವರೆದ ಕಿರಿದಾದ ಟಾರ್ ರಸ್ತೆ ಇದೆ. ರಸ್ತೆಯ ಬಲ ಅಂಚಿಗೆ ಕಾಡಿನ ಸೆರಗಿನಂತೆ ಕಾಣುವ ಜಾಗ. ಉದ್ದುದ್ದ ಮರಗಳ ಗುಂಪು. ಅದರ ಮಧ್ಯೆ ಜಿಂಕೆ, ಮೊಲ ಓಡಾಡಿಕೊಂಡಿರುತ್ತವೆ. ಚಿಟ್ಟೆ, ಪಕ್ಷಿ ಹಾರಾಡಿಕೊಂಡಿರುತ್ತವೆ ಕೂಡ. ಬೇಸಿಗೆ ಸಂಜೆಯಲ್ಲಿ ಮಿಂಚು ಹುಳಗಳ ದಂಡೂ ಕಾಣಬಹುದು. ಅದಕ್ಕೆಂದೇ ಇದು ಮುಕ್ತಾಳಿಗೆ ಆಪ್ತವಾದ ಜಾಗ.

ಅಂದೊಂದು ದಿನ ಮಲಗಿರುವ ಫಾಲಾಕ್ಷನನ್ನು ಎಬ್ಬಿಸದೇ, ತಾನೊಬ್ಬಳೇ ತಿರುಗಾಟಕ್ಕೆ ಹೊರಟಳು. ಹೋಗುವ ಮುನ್ನ ಎಲ್ಲಿ ಹೋಗುತ್ತಿರುವೆ ಎಂದು ಫ್ರಿಡ್ಜ್ ಮೇಲೆ ಚೀಟಿ ಅಂಟಿಸಿ ಹೊರಟಳು.

ಬಹಳಷ್ಟು ಸಮಯ ಕಾದ ನಂತರವೂ ಮನೆಗೆ ಬಾರದ ಮುಕ್ತಾಳನ್ನು ಹುಡುಕಿ ಬಂದ ಅವನಿಗೆ ಕಂಡದ್ದು ಸಾಕರ್ ಫ್ಲಕ್ಸ್ ನಡುವೆ ಇರುವ ಕೃತಕ ಸರೋವರದಂಚಿನ ಬೆಂಚಿನ ಮೇಲೆ ಮಂಡಿಯಲ್ಲಿ ತಲೆ ಹುದುಗಿಸಿಕೊಂಡು ಕುಳಿತ ಮುಕ್ತಾ! ಪಕ್ಕದಲ್ಲಿ ಕುಳಿತ ಫಾಲಾಕ್ಷ ನವಿರಾಗಿ ಅವಳ ಭುಜದ ಮೇಲೆ ಕೈ ಹಾಕಿದಾಗ ಹೌಹಾರಿದ ಮುಕ್ತ ಗಾಬರಿಯಿಂದ ಅವನ ಮುಖ ನೋಡಿದಳು. 'ಮುಕ್ತಾ' ಎನ್ನುವ ಅವನ ಧ್ವನಿ ಕೇಳಿ ಫಾಲಾಕ್ಷನ ಭುಜಕ್ಕೊರಗಿ ಅಳತೊಡಗಿದಳು.

ಮುಂದೆ ನಡೆದದ್ದಲ್ಲಾ ಇಷ್ಟೇ– ಡಾಕ್ಟರುಗಳ ಭೇಟಿ, ತಪಾಸಣೆ, ವಿವಿಧ ನಮೂನೆಯ ಪರೀಕ್ಷೆ, ಮುಂದೆ ಆಗಬಹುದಾದ ವ್ಯತ್ಯಯ! ನಿರೀಕ್ಷಿಸಬಹುದಾದ ವರ್ತನೆ. ತೆಗೆದುಕೊಳ್ಳಬೇಕಾದ ಜಾಗ್ರತೆ......

ಫಾಲಾಕ್ಷನಿಗೆ ಅರ್ಥವಾದದ್ದು ಅವಳಿಗಾಗಲಿಲ್ಲ. 'bio marker', 'early on set', 'brain cell abnormalities referred to as plaques or tangles', '...hinders brain cell communications and tangles prevent nutrients from reaching the brain cell...', 'brain cell dies' ಪದಗಳ ಸಮೂಹ, ಬಿಡಿ ಬಿಡಿ ವಾಕ್ಯಗಳು – ಆದರೂ ಅವಷ್ಟು ಸಾಕಿತ್ತು ಅವಳ ಮುಂದಿನ ಉಳಿದ ದಿನಗಳನ್ನು ಊಹಿಸಲು.

ಸಾಕರ್ ಫ್ಲಕ್ಸ್ ಘಟನೆಯ ನಂತರ ಮುಕ್ತಾ ಕೆಲಸಕ್ಕೆ ರಾಜೀನಾಮೆ ನೀಡಲೆನ್ನುವ ಫಾಲಾಕ್ಷನ ಸಲಹೆ ಅವಳಿಗೂ ಸರಿ ಎನ್ನಿಸಿತು. ಹದಿನೈದು ವರ್ಷಗಳ ನಂಟು ಬಿಡುವುದು ಸುಲಭ ನಿರ್ಧಾರವಾಗಿರಲಿಲ್ಲ. ಮೃದುಭಾಷಿ, ಮೆದು ಹೃದಯಿ ಮುಕ್ತಾ ಎಲ್ಲರೊಡನೆ ಒಂದಾಗಿ, ಸಲೀಸಾಗಿ communicate ಮಾಡುವ ಕೌಶಲ್ಯ ಇರುವವಳು. ಅವಳ ಮಕ್ಕಳ ವಯಸ್ಸಿನ ಯುವ ಸಹೋದ್ಯೋಗಿಗಳೂ ಅವಳ ಫ್ಯಾನ್‌ಗಳೇ. IBM ೩೬೦/೩೭೦/ ೩೯೦ series computer ಬಗ್ಗೆ ಹಾಗೂ ತಾನು Basic Assably language programer ಆಗಿದ್ದ ವಿಷಯ ಅವಳು ಹೇಳುವಾಗ ಅವರೆಲ್ಲರೂ ಒಕ್ಕೊರಲಿನಿಂದ ಅವಳಿಗೆ you have come a long way baby ಎಂಬ ಜೈಕಾರ ಹಾಕ್ತಾರೆ. ಊರು ಗಾತ್ರದ ಅಂದಿನ computer ಎಲ್ಲಿ? ಈಗಿನ MacBook Air ಎಲ್ಲಿ? ಎನ್ನುತ್ತಾರೆ. ಮುಕ್ತಾ ೧೯೯೧ರಲ್ಲಿ $೩೦೦೦ ಕೊಟ್ಟು ಕೊಂಡ Macintosh ಬಗ್ಗೆ ಹೇಳಿದ್ದು ಕೇಳಿ, ಅಯ್ಯೊ ಪಾಪ ಅದರ ಬದಲು ಆ ಕಂಪನಿಯ ಸ್ಟಾಕ್ ಕೊಂಡಿದ್ರೆ ನೀನು ಯಾವಾಗಲೋ ರಿಟೈರ್ ಆಗಬಹುದಿತ್ತು ಎಂದು ನಾಟಕೀಯ ಮರುಕ ತೋರುತ್ತಾರೆ. ಸೈಬರ್ ಲೋಕದ ಬದಲಾವಣೆಗಳ ಬಗ್ಗೆ ಗಂಟೆಗಟ್ಟಲೆ ಮಾತನಾಡುತ್ತಾರೆ. ಶುಕ್ರವಾರ ಸಂಜೆಗಳು happy-hourಗೆ ಹೋಗ್ತಾರೆ. ಟ್ರಂಪ್ ವಿರೋಧಿಸುವ ಮೆರವಣಿಯಾಗಲಿ, ಗನ್ ವಿರೋಧಿ Stoneman Douglas

High School ಮಕ್ಕಳ ಪರವಾದ ಮೆರವಣಿಗೆಯಾಗಲಿ ಅವರೆಲ್ಲಾ ಒಟ್ಟಿಗೇ ಶ್ವೇತಭವನದೆದುರು ಪೋಸ್ಟರ್ ಹಿಡಿದು ನಿಲ್ಲುತ್ತಾರೆ. ಮಧ್ಯಾಹ್ನಗಳಲ್ಲಿ ಒಟ್ಟಾಗಿ ಹಂಚಿ ಉಣ್ಣುತ್ತಾರೆ. ಅಂತಹ ಸ್ನೇಹಪರ ವಲಯ ಬಿಡುವುದು ಅವಳಿಗೆ ಕಷ್ಟವಾಗಿತ್ತು.

ಫಾಲಾಕ್ಷ ಬರುವುದದಕ್ಕೆ ಇನ್ನೂ ೨ ಗಂಟೆ ಇತ್ತು. ಬೇಸ್‌ಮೆಂಟಿನಿಂದ ಯಾವುದಾದರೂ ಪುಸ್ತಕ ತಂದು ಓದೋಣ ಎಂದುಕೊಂಡಳು. ಪುಸ್ತಕದ ಕಪಾಟಿನಿಂದ ಪುಸ್ತಕಗಳನ್ನು ತೆಗೆದು ಹಾಳೆ ತಿರುವತೊಡಗಿದಳು. "ಮುಕ್ತ ನಮ್ಮ ಮನೆಗೆ ಬಂದ ದಿನ" ೯/೯/೧೯೯೬, "ಮೆಚ್ಚಿನ ಮುಕ್ತಾ ಮತ್ತು ಫಾಲಾಕ್ಷ ದಂಪತಿಗಳಿಗೆ" ೧/೮/೧೯೮೭, "ನಿಮ್ಮ ಆತ್ಮೀಯ ಸತ್ಕಾರಕ್ಕಾಗಿ" ೧/೩/೨೦೧೨. ಆ ಪುಸ್ತಕದ ಸ್ಪರ್ಶ, ಅದರ ಹಿಂದಿದ್ದ ನೆನಪು ಹಿತವಾಗಿತ್ತು. ವಿಷಾದದಿಂದ, ಆ ಪುಸ್ತಕಗಳನ್ನು ಅದೇ ಜಾಗದಲ್ಲಿಟ್ಟು ದೂರ ಸರಿದು ನಿಂತಳು. ಕಣ್ಣೀರ ಧಾರೆ ಕೆನ್ನೆಯ ಮೇಲೆ ಸುರಿಯುತ್ತಿತ್ತು. ಬದುಕಿನ ಹಾದಿಯಲ್ಲಿ ಹೆಜ್ಜೆ ಗುರುತು ಬಿಟ್ಟು ಹೋದವರೆಷ್ಟು ಜನ. ಈ ನೆನಪೆಲ್ಲಾ ಆವಿಯಾಗಿ ಹೋಗುವ ಸಾಧ್ಯತೆ ಅಸಾಧ್ಯ ಎಂದುಕೊಂಡವಳಿಗೆ ವಾಸ್ತವತೆಯ ಸಹಮತ ತನ್ನ ಜೊತೆಗಿಲ್ಲ ಎನ್ನಿಸಿತು.

ಬೇಸ್‌ಮೆಂಟಿನಿಂದ ಮೇಲೆ ಬಂದ ಅವಳ ನೋಟ ಹರಿದಿದ್ದು ಮನೆಯ ಹಿಂದಿನ ಅಂಗಳದಲ್ಲಿ ಬೆಳೆದು ನಿಂತ ಅಂಜೂರದ ಗಿಡದ ಮೇಲೆ. ಹತ್ತು ವರ್ಷದ ಹಿಂದೆ ಹಿರಿಯ ಮಗಳು Mother's Day ದಿನ ನೆಟ್ಟಿದ್ದಳು. ಹುಟ್ಟುಹಬ್ಬಗಳ ಉಡುಗೊರೆಯಾಗಿ ನೆಟ್ಟ ಅಪರೂಪ ಬಣ್ಣಗಳ ಪಿಯೋನಿ ಮತ್ತು ಗುಲಾಬಿ ಗಿಡಗಳು ಹಲವಾರು. ಪ್ಯಾಟಿಯೋ ಅಂಚಿಗೆ ಹೂವಿನ ಬಳ್ಳಿ ಹಬ್ಬಿಸಲು ಕಿರಿಯ ಮಗಳು ಕೈಯ್ಯಾರೆ ಕಟ್ಟಿ ನಿರ್ಮಿಸಿದ ಚಪ್ಪರದ ಫ್ರೇಮ್. ಈಗ ಕಾಣುತ್ತಿರುವ ನೋಟ; ಅದರ ಹಿಂದಿನ ಪ್ರೀತಿ ಎಲ್ಲಾ ಬರಿದಾಗುವ ನಿಶ್ಚಿತ ಸಾಧ್ಯತೆಯ ಖಚಿತತೆ ಅವಳನ್ನು ಇರಿಯಿತು. ಡಾ. ಮಾಸ್ಕೋವಿಚ್‌ನ ಕರುಣೆ ತುಂಬಿದ ಮುಖ ಆರ್ದ್ರತೆಯ ಮಾತುಗಳು ನೆನಪಾದವು: "Keep doing what you are doing. Don't let small things bother you."

"How could I?", "How could I?" ಎನ್ನುವ ಅವಳ ಚೀರಿಗೆ ಡಾ. ಮಾಸ್ಕೋವಿಚ್ ಅವರ ಮಾರ್ಜನಿ. ಆ ಧ್ವನಿ ತನ್ನೊಟ್ಟಿಗೆ ನಡೆಯಬೇಕಿದೆ, ತನ್ನ ನೆನಪಿನ ಕೋಶದಲ್ಲಿ ಉಳಿದಿರುವ ತನಕ– at least ಫಾಲಾಕ್ಷ ಮಕ್ಕಳಿಗೆ ವಿಷಯ ತಿಳಿಸಿದ ತಕ್ಷಣವೇ ಇಬ್ಬರೂ ಓಡಿಬಂದರು. ಮಕ್ಕಳ ಮುಖ ನೋಡುತ್ತಿದ್ದಂತೆ ಮುಕ್ತಾ ತನ್ನ ಭಾವನೆಗಳ ಮೇಲೆ ಹಿಡಿತ ಸಾಧಿಸಲು ಪ್ರಯತ್ನಿಸಿದಳು.

"ನಿಮ್ಮ ನೆನಪನ್ನೆಲ್ಲಾ ಮರೆತೇಬಿಡುವೆ" ಎಂದು ಅಳುಮಿಶ್ರಿತ ನಡುಗು ಧ್ವನಿಯಲ್ಲಿ ಹೇಳಿದಳು. ಹಿರಿಯ ಮಗಳು ಮುಕ್ತಾಳ ತಲೆಯನ್ನು ತನ್ನ ಕುತ್ತಿಗೆಗೆ ಆನಿಸಿಕೊಂಡು "ನಾವ್ಯಾರೂ ಮರೆಯುವುದಿಲ್ಲವಲ್ಲಾ" ಅಂದಳು. ಬೆಳೆಬೆಳೆಯುತ್ತಾ ಕಾಲ ಕಳೆದಂತೆ ನಮ್ಮ ಪಾತ್ರಗಳು ನನಗೇ ಗೊತ್ತಾಗದಂತೆ ಬದಲಾಗಿದೆ. ನಾನು ಮಗಳಾಗಿ ಅವಳು ತಾಯಾಗಿ ಸ್ಥಿತ್ಯಂತರವಾಗಿಬಿಟ್ಟಿದ್ದೇವೆ!

"ನಾನು ನಿಮ್ಮೆಲ್ಲರಿಗೂ ಹೊರೆ ಆಗಿಬಿಡ್ತೀನಿ" ಎಂದವಳಿಗೆ ಮಗಳು, "ನಾವು ನಿನಗೆ ಎಂದಾದರೂ ಹೊರೆ ಅನ್ನಿಸಿದ್ವಾ ಹೇಳು?" ಎಂದು ಬಾಗಿ ಆಲಂಗಿಸಿದಳು. ಆ ಗಳಿಗೆ ಹೊರಹೋದ ಶ್ವಾಸ ಮರಳಿ ಬಾರದಿರಬಾರದೇ ಎಂದುಕೊಂಡಳು. ಮಕ್ಕಳ ಸನಿಹ, ಅವರ ಭರವಸೆ ಮಾತು, ಆಶಾದಾಯಕ ಮುನ್ನೋಟ ಅವಳಲ್ಲಿ ತುಸು ಚೇತರಿಕೆ ತಂದಿತು.

ಅಣುಅಣುವಿನಲ್ಲಿ ಬೆರೆತು ಕರಗಿಹೋಗಿರುವ ತನ್ನವರನ್ನೆಲ್ಲಾ, ಉತ್ಕಟವಾಗಿ ಪ್ರೀತಿಸಿ ಬಾಳಿದ ಗಳಿಗೆಗಳನ್ನೆಲ್ಲಾ ಮರೆಸುವಷ್ಟು ಕ್ರೂರಿಯಾ ಈ ಖಾಯಿಲೆ? ದಿನ, ತಿಂಗಳು, ವರ್ಷ ಕಳೆದಂತೆ ಬದುಕಿನ ಒಂದೊಂದು ಪುಟವನ್ನು ಹರಿಹರಿದು ಎಸೆವ ಕೈಗಳಿರುವ ಈ ಖಾಯಿಲೆ, ನಾನು ಬದುಕಿದ್ದೇ ಸುಳ್ಳೆನ್ನುವ ಸ್ಥಿತಿಗೆ ತಳ್ಳಲಿದೆ ಎಂದುಕೊಂಡಳು. ಇಡೀ ಮನೆ ಸುತ್ತಿ ಸೂರಿಗಂಟಿದ ಶ್ಯಾಂಡಲಿಯರ್ ತಲೆ ಮೇಲೆ ಬೀಳುವಂತಾಯ್ತು. ಅದೇ ಸಮಯಕ್ಕೆ ಫಾಲಾಕ್ಷ ಗರಾಜ್ ಬಾಗಿಲು ತೆಗೆದಿದ್ದು ಕೇಳಿಸಿತು. ಮುಕ್ತಾ ಸಾವರಿಸಿಕೊಂಡು ಬಾಗಿಲ ಬಳಿ ಬಂದಳು.

ಅಂದು ರಾತ್ರಿ ಮಲಗುವ ಮುನ್ನ ಫಾಲಾಕ್ಷನ ಮುಂದೆ ಕುಳಿತು ಅವನ ಕೈ ಹಿಡಿದು ಹೇಳತೊಡಗಿದಳು.

"ಬೆಳಗ್ಗೆ ರೂಪ ಜೊತೆ Sunrise Seniour Careಗೆ ಹೋಗಿದ್ದೆ. They are specialised in Alzheimer patient care" ವಿವರಗಳೆಲ್ಲಾ ಆಲ್ಲಿರುವ folderನಲ್ಲಿದೆ. ದಿನ ಕಳೆದಂತೆ ಬರಬರುತ್ತಾ ಒಂದು ದಿನ ನನ್ನ ಮೆದುಳಿನಿಂದ ನಾವು ಕಟ್ಟಿಕೊಂಡ ಜೀವನ ಮರೆ ಆಗಿ ಹೋಗುತ್ತೆ. ನಿಮ್ಮ ಪ್ರೀತಿ, ಅಂತಃಕರಣ ಪೂರಾ ಮರೆಯಾಗಿ ಹೋಗಿ, ನನಗೇ ಗೊತ್ತಿಲ್ಲದಂತೆ ನಾನು ತಾಳ್ಮೆ ಕಳೆದುಕೊಳ್ಳುವೆ. ಉದ್ವಿಗ್ನಳಾಗುವೆ. delusional ಆಗುವೆ. ಸಣ್ಣ ಕೆಲಸಗಳೂ ನನ್ನಿಂದಾಗದು. ಕಡೆಗೆ ನನ್ನ ದೈನಂದಿನ ಕೆಲಸವೂ ಆಗಲಾರದು. ದೇಹದ ಅವಸಾನವಲ್ಲದಿದ್ದರೂ, ಮೆದುಳಿನ ಅವಸಾನದ ಮುನ್ನಾದಿನದ ಲಕ್ಷಣಗಳವು. ನನ್ನ CEO 'Queen of Communication' ಎನ್ನುತ್ತಿದ್ದಳು. ಅದು ನನ್ನ ವ್ಯಕ್ತಿತ್ವದ ಬಲವಾಗಿತ್ತು. ಅದರ ಬಗ್ಗೆ ನನಗೆ ಅತೀವ ಹೆಮ್ಮೆ ಇತ್ತು. ಆ ಗುಣ ನನ್ನಿಂದ ಮರೆಯಾಗುತ್ತೆ. ಇದನ್ನೆಲ್ಲಾ ಇಷ್ಟು ವಿವರವಾಗಿ ನಾಳೆ ಕಳೆದಂತೆ ಹೇಳಬಲ್ಲೆ ಎಂಬ ನಂಬಿಕೆ ನನಗೇ ಇಲ್ಲಾ. ೩೫ ವರ್ಷದ ಸಹಜೀವನ ಏನು ಹೇಳಲಿ? ಪ್ರತೀ ಗಳಿಗೆ ನನ್ನ ಜೀವಕ್ಕೆ ಪ್ರೀತಿ, ಗೌರವ, ಸುಖ, ನೆಮ್ಮದಿ, ಸುರಕ್ಷೆ ಕೊಟ್ಟಿದ್ದೀರಿ. ನಿಮ್ಮನ್ನು ಮರೆಯುವ ಶಿಕ್ಷೆ ಎಷ್ಟೊಂದು ಘೋರ? ನನ್ನ ದೇಹವನ್ನೆಂದೂ abuse ಮಾಡಿಲ್ಲ ನನಗ್ಯಾಕೆ ಈ ಶಿಕ್ಷೆ ಎಂದು ಕೇಳಿಕೊಳ್ಳುವೆ? ಇದಕ್ಕೆಲ್ಲಾ ಕಾರಣ ಏನು? ಅದಕ್ಕುತ್ತರ 'ಬದಲಾವಣೆ' ಅಷ್ಟೇ! plaques & tangles!! ಎಷ್ಟು ಸರಳ ಅಷ್ಟೇ ಕ್ರೂರ... ದಯವಿಟ್ಟು ನನ್ನನ್ನು Sunriseಗೆ ಸೇರಿಸಿ. ನನ್ನ ಸ್ಥಿತಿಯ ಪರಿಣಾಮ ನಿಮ್ಮ ಮತ್ತು ಮಕ್ಕಳ ಜೀವನದ ಮೇಲಾಗದಿರಲಿ. ಮನೆ ಮಾರಿ ಸಣ್ಣ ಮನೆಗೆ ಸ್ಥಳಾಂತರಿಸಿ. ಕೆಳಗೆ ಎರಡು suitcaseಗಳಿವೆ. ಇಬ್ಬರು

ಮಕ್ಕಳಿಗೆ ಸೇರಿದ್ದು. ಅವರು ನನಗಾಗಿ ಮಾಡಿದ cards, ಅವರ ಜೊತೆ ನಾನು ಮಾಡಿದ project, ಅವರು ಮೊದಲು ಹಾಕಿದ ಲಂಗ, ಶೂ, ಹೀಗೇ ಹಲವಾರು keep sake itemsಗಳಿವೆ. ಅವರ ಜೊತೆ ನಾನು ಆನಂದಪಟ್ಟ ಕ್ಷಣಗಳು ಎಷ್ಟೊಂದು. ಅದನ್ನೆಲ್ಲಾ recap ಮಾಡಿ ಬರೆದ ಪತ್ರಗಳಿವೆ. ಅವರ ಮಕ್ಕಳನ್ನು ಬೆಳೆಸುವ ಸ್ಥಿತಿಯಲ್ಲಿ ನಾನಿರುವುದಿಲ್ಲಾ ಎಂಬ ಶಂಕೆ ನನಗಿದೆ. ದಯಮಾಡಿ ನೀವಾಗಲಿ ಮಕ್ಕಳಾಗಲಿ ನನ್ನ ಮನೆಯಲ್ಲಿರಿಸಿಕೊಂಡು ಆರೈಕೆ ಮಾಡಬೇಕು ಎನ್ನುವ ದುಃಸ್ಸಾಹಸಕ್ಕೆ ಕೈ ಹಾಕಬೇಡಿ. Please ಮಾತು ಕೊಡಿ?..."

ಫಾಲಾಕ್ಷ, "ಬೆಳಕು ಹರಿಯುವುದರಲ್ಲಿ ಎಲ್ಲಾ ಬದಲಾಗುವುದಿಲ್ಲಾ. ಮುಂದೆ ಎಂದೋ ಬರುವ ದಿನ ನೆನೆದು ಅಳುವ ಜಾಯಮಾನ ನಿನ್ನದಲ್ಲಾ. ಇತ್ತೀಚೆಗೆ ಭರವಸೆ ಮೂಡಿಸುವ ಸಂಶೋಧನೆಗಳು ನಡೆದಿವೆ, ಹಾಗೂ ನಡೆಯುತ್ತಲೇ ಇವೆ. ನಿನ್ನ ಆರೈಕೆ ನನ್ನ ಜವಾಬ್ದಾರಿ, ಅದು ನನ್ನ ಹೊಣೆ, ನನ್ನ ಕರ್ತವ್ಯ ಮತ್ತು ನನ್ನ ಪ್ರೀತಿ. ಮಕ್ಕಳೂ ಅದನ್ನೇ ಹೇಳಿದ್ದು. ಸಮಾಧಾನವಾಗಿರು. ಒಟ್ಟಾಗಿ ಪರಿಸ್ಥಿತಿಯನ್ನು ಎದುರಿಸೋಣ. ನೀನು ಅಂದುಕೊಂಡಂತೆ ವಿಪರೀತವಾದದ್ದೇನೂ ಆಗೋಲ್ಲ. ನಿನ್ನ ಕಾಯಿಲೆಯ ಲಕ್ಷಣ ಉಲ್ಬಣವಾದಾಗ ನೋಡೋಣ. ಎಂದೋ ಬರುವ ಸ್ಥಿತಿಗೆ ಈಗಲೇ ಯಾಕೆ ಹೆದರುವೆ? ನಾನಿದ್ದೀನಲ್ಲಾ? ನನ್ನಲ್ಲಿ ನಂಬಿಕೆ ಇದೆಯಲ್ಲಾ?"

ಏನನ್ನೋ ಹೇಳಹೊರಟ ಅವಳ ಬಾಯಿಯ ಮೇಲೆ ಬೆರಳಿಟ್ಟ ಫಾಲಾಕ್ಷ.

ಆ ರಾತ್ರಿ ಮಗುವಾಗಿ ಅವನ ತೋಳಲ್ಲಿ ಮಲಗಿದಳು ಮುಕ್ತಾ.

*

## ಹೇಗಿತ್ತು? ಹೇಗಾಯ್ತು?

■ ತ್ರಿವೇಣಿ ಶ್ರೀನಿವಾಸರಾವ್, Aurora, IL.

ನಮ್ಮ ಕಣ್ಣೆದುರೆ ಆಗಿವೆಯಲ್ಲ
ಏನೆಲ್ಲಾ ಎಷ್ಟೆಲ್ಲಾ ಬದಲಾವಣೆ
ಬೇಕಾದ್ದು ಬಂತು; ಬೇಡದ್ದ ತಂತು
ಎಲ್ಲವೂ ಕಾಲದ ಚಿತಾವಣೆ

ಬಚ್ಚಲಮನೆಯ ಮೂಲೆಯಲ್ಲಿತ್ತಲ್ಲ
ಕರಿ ಬಡಿಸಿಕೊಂಡ ಆ ಹಂಡೆ
ಅದಾವಾಗ ಮಾಯವಾಯಿತೊ ಕಾಣೆ
ಬಾಯ್ಲರ್, ಗೀಸರ್ಗಳ ನಾ ಕಂಡೆ

ಹೊಗೆಯುಗುಳುವ ಸೌದೆ ಒಲೆ
ಇಜ್ಜಲು ತುಂಬಿದ ಅಗ್ಗಿಷ್ಟಿಕೆ
ಮರೆಯಾಗಿವೆ ಹೊಸಗಾಲಕೆ ನಾಚಿ
ಅಡುಗೆಗೆ ಅನಿಲದ ನೆಂಟಸ್ತಿಕೆ

ಬುಡ್ಡಿ ದೀಪವು ಉಗುಳುವ ಕಪ್ಪಿಗೆ
ಮನೆ ಗೋಡೆಗಳೇ ಹಾಳು
ಝಗಮಗಿಸುವ ದೀಪದ ಸೊಬಗಿಗೆ
ಸ್ವರ್ಗವೇ ಭೂಮಿಯ ಪಾಲು

ತಾಮ್ರದ ಹಂಡೆ, ಕಂಚಿನ ತಪ್ಪಲೆ
ಕೊಳಗ, ಡಬರಿ, ಪರಾತಗಳು

ಮಿನುಗುವ ಸ್ಟೀಲು, ಪ್ಲಾಸ್ಟಿಕ್ಕಿಗೆ ಬೆದರಿ
ಅಟ್ಟದ ಮೂಲೆಯ ಗುಜರಿಗಳು!

ಸೋಪಿನ ನೊರೆಯಲಿ ನೆನೆದಿಹ ಬಟ್ಟೆ
ಬಿಸಿಲಲಿ ಹರವಿ ಮಡಿಸುವ ನಾನು
ಒಗೆಯುವ ತೊಳೆಯುವ ರೂಢಿಯ ಬಿಟ್ಟೆ
ಅಗಸಗೂ ಬಳಸಲು ಬಂತು ಮೆಷೀನು

ಲೇಖನಿ ಹಿಡಿದು ಬರೆಯುತ್ತಿದ್ದೆವು
ನಲ್ಲಗೆ ಪ್ರೇಮದ ಸವಿಪತ್ರ
ಬರಹದ ಕಲೆಯನೆ ಮರೆಯಲು ಜನತೆ
ಹಿರಿದಿದೆ ಗಣಕದ ಕೀ–ಪಾತ್ರ

ಹೆಣ್ಣೆಂದರೆ ಮಡದಿ, ಮಕ್ಕಳ ತಾಯಿ
'ಮನೆಯೇ ಹೆಣ್ಣಿನ ಗುಡಿ' ಎನ್ನುವ ತಂತ್ರ
ಬಂಧನದಿಂದ ಬಿಡುಗಡೆಯತ್ತ
ಸ್ವಾವಲಂಬನೆಯ ಸರಿಗಮ ಸಮಾನ ಮಂತ್ರ

ಒಂದು ಗಂಡಿಗೆ ಒಂದಿದೆ ಹೆಣ್ಣು
ಎನ್ನುವ ಭಾವಕೆ ಬಿದ್ದಿದೆ ಹಿಡಿ ಮಣ್ಣು
ಸಲಿಂಗ ಪ್ರೇಮಕೂ ಸಮ್ಮತಿಯೆನ್ನು
ಜೈಯೆನ್ನು ಕಾಮನಬಿಲ್ಲಿನ ಲಾಂಛನಕಿನ್ನು!

ಬದಲಾವಣೆಯೇ ಅಖಂಡ ನಿಯಮ
ಕಾಲಪುರುಷ ತಾನಿದರ ರೂವಾರಿ
ಅನುದಿನ ಅನುಚಣ ಹೊಸ ಆಯಾಮ
ತಕರಾರೆತ್ತದೆ ಮುನ್ನಡೆಯುವ ದಾರಿ!

*

# ಎತ್ತಣ ಮಾಮರ ಎತ್ತಣ ಕೋಗಿಲೆ

■ ಪ್ರಸನ್ನ ಸಂತೇಕಡೂರು, Richmond, VA.

ಪ್ರೊಫೆಸರ್ ವೆಂಕಟೇಶ್ ಮಧ್ಯರಾತ್ರಿ ಯಾವುದೋ ಅಪರಿಚಿತ ಪಕ್ಷಿಯ ಇಂಪಾದ ಹಾಡನ್ನು ಕೇಳಿ ನಿದ್ರೆಯಿಂದ ಎದ್ದು ಕುಳಿತರು. ಆ ಹಾಡು ಅವರ ಮನೆಯ ಹಿಂದಿನ ಕಾಡಿನಿಂದ ಗಾಳಿಯಲ್ಲಿ ಅಲೆ ಅಲೆಯಾಗಿ ತೇಲಿ ತೇಲಿ ಬರುತಿತ್ತು. ಪಕ್ಕದಲ್ಲಿ ಮಲಗಿದ್ದ ಪತ್ನಿ ಶ್ಯಾಮಲ ಗಾಢ ನಿದ್ರೆಯಲ್ಲಿದ್ದರು. ಪ್ರೊಫೆಸರ್ ತಮ್ಮ ಮೊಬೈಲ್ ಫೋನ್ ತೆಗೆದು ಸಮಯವನ್ನು ನೋಡಿದರು. ಇನ್ನೂ ರಾತ್ರಿ ಒಂದು ಗಂಟೆ! ಹಾಗೆಯೇ ಕುಳಿತು, ಆ ಪಕ್ಷಿ ಯಾವುದಿರಬೇಕು? ಎಂದು ತಮಗೆ ತಾವೇ ಯೋಚಿಸುತ್ತಿದ್ದರು. ಸ್ವಲ್ಪ ಹೊತ್ತಿನ ನಂತರ ಅವರಿಗೆ ತೀರ ಪರಿಚಿತವಿದ್ದ ಆ ಇಂಪಾದ ಧ್ವನಿ ಕೋಗಿಲೆಯದೇ ಎಂದು ತಿಳಿದು ಒಂದು ಬಗೆಯ ವಿಚಿತ್ರ ರೋಮಾಂಚನವಾಯಿತು. ಪಕ್ಕದಲ್ಲಿ ಮಲಗಿದ್ದರೂ ಅವರ ನಡುವೆ ಎಂದೋ ಎದ್ದಿದ್ದ ಗೋಡೆಯ ಇನ್ನೊಂದು ಬದಿಯಿಂದ ಪತ್ನಿ ಶ್ಯಾಮಲಾರ ಗೊರಕೆ ಆ ನಿಶ್ಶಬ್ದದಲ್ಲೂ ದೂರದಲ್ಲೆಲ್ಲೋ ಗುಡುಗುತ್ತಿರುವ ಹಾಗೆ ಕೇಳಿಸುತಿತ್ತು. ಆ ಸುಂದರವಾದ ಮನೆಯ ಅತೀ ಸುಂದರ ಬೆಡ್ ರೂಮಿನ ಕಿಟಕಿಯಲ್ಲಿ ಕಣ್ಹಾಯಿಸಿದರೆ ಅಮೆರಿಕಾದ ಆಗಸ್ಟ್ ತಿಂಗಳ ನೀರವ ರಾತ್ರಿ. ಎಲ್ಲಾ ದಿಕ್ಕುಗಳಲ್ಲೂ ಬರೀ ಕತ್ತಲೆ. ಚಿಮ್ಮುಂಡಿಗಳು (chirping cricket) ಯಾವುದೋ ಮರಗಳ ಮೇಲೆ ಕುಳಿತು ಅರಚುತ್ತಿದ್ದವು. ಆ ಅರಚುವಿಕೆಯಲ್ಲೂ ಕೇಳಿಸಿದ ಕೋಗಿಲೆಯ ಧ್ವನಿ ಅವರ ನೆನಪಿನಾಳದಿಂದ ಯಾವುದೋ ಗತಕಾಲದ ದಿನಗಳು ಜ್ಞಾಪಕಕ್ಕೆ ಬರುವಂತೆ ಮಾಡಿತು. ಅಮೆರಿಕಾ ದೇಶಕ್ಕೆ ಬಂದು ಸುಮಾರು ನಲವತ್ತು ವರ್ಷಗಳಿಂದಲೂ ಕಾಡುತ್ತಿರುವ ಆ ಕೋಗಿಲೆಯ ಇಂಪಾದ ಧ್ವನಿ ಆ ದಿನ ಏಕೋ ತನ್ನ ಅದ್ಭುತ ಶಕ್ತಿಯಿಂದ ಪ್ರೊಫೆಸರ್ ವೆಂಕಟೇಶ್ ಅವರ ಅಂತರಂಗದ ಮೃದಂಗವನ್ನು ನಗಾರಿಯ ರೀತಿ ಬಾರಿಸುವಂತೆ ಮಾಡಿತ್ತು.

ಅಮೆರಿಕಾಕ್ಕೆ ಬಂದ ಹೊಸದರಲ್ಲಿದ್ದ ಬಾಡಿಗೆಯ ಅಪಾರ್ಟ್‌ಮೆಂಟಿನಿಂದ ಈ ಮನೆಗೆ ಬಂದು ಕಳೆದ ಮೂವತ್ತು ವರ್ಷಗಳಲ್ಲಿ ವೆಂಕಟೇಶ್ ಅವರಿಗೆ ಸಾವಿರಾರು

ಸಲವಾದರೂ ಈ ಇಂಪಾದ ಧ್ವನಿ ಕೇಳಿಸಿದೆ. ಆದರೆ, ಅದು ಇಂದಿನಷ್ಟು ತೀವ್ರವಾಗಿ ಅವರನ್ನ ಕಾಡಿರಲಿಲ್ಲ. ಆ ಕಾಡುವಿಕೆಗೆ ಎರಡು ಕಾರಣಗಳಿದ್ದವು. ಒಂದು, ಅವರು ಭಾರತದಿಂದ ಈ ದೇಶಕ್ಕೆ ಬಂದು ಅಷ್ಟು ದೀರ್ಘಕಾಲವಾಗಿದ್ದರೂ ಅವರಲ್ಲಿದ್ದ 'ನಾನು ಈ ದೇಶದವನಲ್ಲ, ಹೊರಗಿನವನು' ಎಂಬ ಭಾವನೆ. ಇನ್ನೊಂದು ಆ ಕೋಗಿಲೆಯ ಧ್ವನಿ. ಅವರು ಪ್ರತಿದಿನ ಅಮೆರಿಕಾದ ರಸ್ತೆಗಳಲ್ಲಿ ಕಾರಿನಲ್ಲಿ ಚಲಿಸುವಾಗ ಇಲ್ಲಿನ ಕಾರುಗಳು, ಟ್ರಾಫಿಕ್ಕು, ಗಗನಚುಂಬಿ ಕಟ್ಟಡಗಳು ಎಷ್ಟೇ ಆಕರ್ಷಣೀಯವಾಗಿದ್ದರೂ ಹುಟ್ಟಿಬೆಳೆದಿದ್ದ ಮಲೆನಾಡಿನ ಶಿವಮೊಗ್ಗ ಜಿಲ್ಲೆಯ ತಮ್ಮ ಸೋಮನಹಳ್ಳಿಯಷ್ಟು ಈ ದೇಶ ಅವರ ಹೃದಯಕ್ಕೆ ಹತ್ತಿರವಾಗಲಿಲ್ಲ. ಇಲ್ಲಿನ ಯಾವುದೇ ವಸ್ತುವನ್ನ ಕಂಡರೂ ಮನಸ್ಸು ಸೋಮನಹಳ್ಳಿಯಲ್ಲಿದ್ದ ವಸ್ತುವನ್ನೋ, ಗದ್ದೆ-ತೋಟಗಳನ್ನೋ, ಅಲ್ಲಿನ ಸುಂದರ ಪರಿಸರವನ್ನೋ ನೆನೆಯುತಿತ್ತು ಮತ್ತು ತಕ್ಷಣವೇ ಆ ಪರಿಸರದ ಜೊತೆ ಇಲ್ಲಿನ ಪರಿಸರವನ್ನ ಹೋಲಿಸಿ ನೋಡುತಿತ್ತು. ಅವರ ಮನಸ್ಸು ಆ ರೀತಿ ವರ್ತಿಸಲು ಕಾರಣವಾಗಿದ್ದ ಮಲೆನಾಡಿನ ಆ ಸೋಮನಹಳ್ಳಿ ಭೂಮಿಯ ಮೇಲಿರುವ ನಂದನವನದಂತೆ ಸದಾ ಹಸಿರಿನಿಂದ ಕಂಗೊಳಿಸುತ್ತಿತ್ತು. ಆ ಊರಿನ ಒಂದು ಮೂಲೆಯಲ್ಲಿ ಗೋವಿಂದಪುರಕ್ಕೆ ಹೋಗುವ ದಾರಿಯಲ್ಲಿ ತಾವರೆ, ನೈದಿಲೆ ಹೂಗಳಿಂದ ಕಂಗೊಳಿಸುತ್ತಿದ್ದ ಒಂದು ಸುಂದರ ಸರೋವರವಿತ್ತು. ಅದರ ಪಕ್ಕದಲ್ಲಿಯೇ ಇದ್ದ ಮಾವಿನಕೊಪ್ಪಲು. ಅಲ್ಲಿದ್ದ ಬೇರೆ ಬೇರೆ ಜಾತಿಯ ಮಾವಿನ ಮರಗಳು. ಅದರ ಸುತ್ತ ಇದ್ದ ಅಡಿಕೆ ತೋಟಗಳು, ಭತ್ತ, ಕಬ್ಬಿನ ಗದ್ದೆಗಳು, ಹಳೆಯ ಕಾಲದ ದೊಡ್ಡ ಹಾಳುಬಿದ್ದ ದೇವಾಲಯಗಳು, ಭದ್ರಾ ಮತ್ತು ತುಂಗಾ ಜಲಾಶಯಗಳಿಂದ ಹರಿದು ಬರುತ್ತಿದ್ದ ಕಾಲುವೆಗಳು ಸೋಮನಹಳ್ಳಿಗೆ ಇನ್ನಷ್ಟು ಮೆರುಗು ಕೊಟ್ಟಿದ್ದವು. ಇಂತಹ ಸುಂದರವಾದ ಹಳ್ಳಿಯನ್ನು ನೆನೆದು ಮತ್ತೆ ಅಲ್ಲಿಗೇ ಮರಳಿ ಬದುಕಬೇಕು ಎಂದು ಸದಾ ಅಂದುಕೊಳ್ಳುತ್ತಿದ್ದರು.

ಪ್ರೊಫೆಸರ್ ವೆಂಕಟೇಶ್ ಅವರಿಗೆ ತಮ್ಮ ಹಾಗೆ ಭಾರತದಿಂದ ವಲಸೆ ಬಂದು ಇಲ್ಲಿ ನೆಲೆಸಿರುವವರನ್ನು ಮೊದಲು ಕಂಡಾಗಲೆಲ್ಲಾ ಇವರೆಲ್ಲಾ ಸದಾ ಸುಖಿಗಳು. ಇವರೆಲ್ಲರ ಜೀವನ ಸದಾ ನೆಮ್ಮದಿಯಿಂದ ಕೂಡಿದ್ದು ಯಾರಿಗೂ ಜೀವನದಲ್ಲಿ ದುಃಖಗಳೇ ಇಲ್ಲ ಎಂದು ಭಾವಿಸಿದ್ದರು. ತಾವು ಮಾತ್ರ ಸದಾ ದುಃಖಿಯೆಂದುಕೊಂಡಿದ್ದರು. ಅದರ ಜೊತೆಗೆ ಭಾರತದಿಂದ ತುಂಬಾ ದಿನ ಹೊರಗೆ ನೆಲೆಸಿದ್ದರಿಂದ ಅವರು ವಿಚಿತ್ರ ಡೈಯಾಸ್ಪೊರದಿಂದ ಬಳಲುತ್ತಿದ್ದರು. ಅವರಿಗೆ ಸದಾಕಾಲ ಅನಾಥ ಪ್ರಜ್ಞೆ ಕಾಡುತಿತ್ತು. ಇಲ್ಲಿಗೆ ತಾನೊಬ್ಬನೆ ಎಲ್ಲಿಂದಲೋ ಬಂದಿದ್ದೇನೆ ಎಂದು ಅಂದುಕೊಳ್ಳುತ್ತಿದ್ದರು. ಇದರ ಜೊತೆಗೆ ಇದ್ದೊಬ್ಬ ಮಗಳು ಸಾಗರಿಕಾ ತನ್ನ ವೈದ್ಯಕೀಯ ವಿದ್ಯಾಭ್ಯಾಸವನ್ನು ಮುಗಿಸಿ, ಕ್ಯಾಲಿಫೋರ್ನಿಯಾದ ಸ್ಯಾನ್ ಫ್ರಾನ್ಸಿಸ್ಕೋ ನಗರಕ್ಕೆ ಹೋಗಿ ಅಲ್ಲೊಬ್ಬ ಲ್ಯಾಟಿನೋ ಹುಡುಗನನ್ನು ಮದುವೆಯಾಗಲು ನಿಶ್ಚಯಿಸಿದ್ದಳು. ಅವಳು ಪಶ್ಚಿಮ ಕರಾವಳಿಗೆ ಹೋಗಿ

ನೆಲೆಸಿರುವುದು ಪ್ರೊಫೆಸರ್ ವೆಂಕಟೇಶ್ ಅವರಿಗೆ ಸುತರಾಂ ಇಷ್ಟವಿರಲಿಲ್ಲ. ಲ್ಯಾಟಿನೋ ಹುಡುಗನನ್ನು ಮದುವೆಯಾಗುತ್ತಿರುವುದು ಇನ್ನೂ ಇಷ್ಟ ಇರಲಿಲ್ಲ.

ವೆಂಕಟೇಶ್ ಅವರು ಅಮೆರಿಕಾಗೆ ಬಂದಾಗ ಇನ್ನೂ ಅವಿವಾಹಿತರಾಗಿದ್ದರು. ನ್ಯೂಯಾರ್ಕ್ ನಗರದ ಪ್ರತಿಷ್ಠಿತ ವಿಶ್ವವಿದ್ಯಾಲಯವೊಂದರಲ್ಲಿ ಭಾಷಾಶಾಸ್ತ್ರದಲ್ಲಿ ಪಿಎಚ್.ಡಿ. ಮುಗಿಸಿ ಅಲ್ಲಿಯೇ ಸ್ವಲ್ಪ ದಿನ ಕೆಲಸ ಮಾಡಿ ಆಮೇಲೆ ವರ್ಜಿನೀಯಾ ಸಂಸ್ಥಾನದ ರಾಜಧಾನಿಯಾಗಿರುವ ಈ ಊರಿನ ವಿಶ್ವವಿದ್ಯಾನಿಲಯವೊಂದರಲ್ಲಿ ಅಧ್ಯಾಪಕರಾಗಿ ಸೇರಿಕೊಂಡರು. ಆದರೆ, ಈ ದೇಶಕ್ಕೆ ಹೊಂದಿಕೊಳ್ಳಲು ಆಗದೆ ಸ್ವಲ್ಪ ದಿನದ ನಂತರ ಭಾರತಕ್ಕೆ ಹಿಂತಿರುಗಲು ನಿರ್ಧರಿಸಿದರು. ಅದೇ ಸಮಯಕ್ಕೆ ಅವರ ತಂದೆಯ ಸ್ನೇಹಿತರೊಬ್ಬರು ತಮ್ಮ ಮಗಳನ್ನು ಇವರಿಗೆ ಮದುವೆ ಮಾಡಲು ಪ್ರಸ್ತಾಪಿಸಿದರು. ಇವರು ತಮ್ಮ ತಂದೆ ಕಳುಹಿಸಿದ್ದ ಹುಡುಗಿಯ ಫೋಟೋವನ್ನು ನೋಡಿದರು. ಹುಡುಗಿ ಬಹಳ ಸುಂದರವಾಗಿದ್ದು ಆಂಗ್ಲ ಭಾಷೆಯಲ್ಲಿ ಎಂ.ಎ. ಕೂಡ ಮಾಡಿದ್ದಳು. ಇವರಿಗೆ ಹುಡುಗಿಯೇನೋ ಇಷ್ಟವಾದಳು. ಆದರೆ, ಹುಡುಗಿ ಮತ್ತು ಹುಡುಗಿಯ ತಂದೆ ಒಂದು ಷರತ್ತನ್ನು ಹಾಕಿದರು. ಆ ಷರತ್ತಿನ ಪ್ರಕಾರ ಇವರು ಶಾಶ್ವತವಾಗಿ ಅಮೆರಿಕಾದಲ್ಲಿ ನೆಲೆಸುವುದಾದರೆ ಮಾತ್ರ ಮದುವೆಗೆ ನಮ್ಮ ಒಪ್ಪಿಗೆ ಇದೆ ಎಂಬುದಾಗಿತ್ತು. ಅವರ ಆ ಷರತ್ತಿಗೆ ಕಾರಣವೂ ಇತ್ತು. ಆ ಹುಡುಗಿಯ ಅಕ್ಕ ಮತ್ತು ಅಣ್ಣ ಅಮೆರಿಕಾದಲ್ಲಿಯೇ ಶಾಶ್ವತವಾಗಿ ನೆಲೆಸಿದ್ದರು. ತಮ್ಮ ಈ ಮಗಳ ಮದುವೆಯ ನಂತರ ಅವರ ಅಪ್ಪ ಅಮ್ಮ ಕೂಡ ಇಲ್ಲಿಯೇ ನೆಲೆಸಲು ನಿರ್ಧರಿಸಿದ್ದರು. ವಲಸೆ ಹಕ್ಕಿಯಂತಿದ್ದ ವೆಂಕಟೇಶ್ ಅವರು ತಮ್ಮ ಹೆಂಡತಿಯ ಮನೆಯವರ ಅನುಕೂಲಕ್ಕಾಗಿ ಮದುವೆಯಾಗಿ ಶಾಶ್ವತವಾಗಿ ಅಮೆರಿಕಾದಲ್ಲಿಯೇ ನೆಲೆಸುವ ಹಾಗೆ ಆಯಿತು.

ಅಮೆರಿಕಾದಲ್ಲೇನೋ ನೆಲೆಸಿದರು. ಮೊದಮೊದಲು ತುಂಬಾ ಅನ್ಯೋನ್ಯವಾಗಿದ್ದ ಗಂಡ ಹೆಂಡತಿ ಒಂದು ಹೆಣ್ಣು ಮಗು ಆಗುವುದರೊಳಗೆ ಹಾವು ಮುಂಗಸಿಗಳಾದರು. ಅದೇ ದಾಂಪತ್ಯದಲ್ಲಿ ಮೂವತ್ತು ವರ್ಷವಾದರೂ ಅನ್ಯೋನ್ಯತೆ ಎಂಬ ಪದವನ್ನ ಅವರು ಮತ್ತೆ ಕೇಳಲಿಲ್ಲ. ಪ್ರತಿದಿನ ಒಂದಲ್ಲ ಒಂದು ವಿಷಯಕ್ಕೆ ಜಗಳ, ಗಲಾಟೆ, ಮುನಿಸು. ಅವುಗಳ ಮಧ್ಯದಲ್ಲಿಯೇ ಮಗಳು ಬೆಳೆದು ಮದುವೆಗೆ ಬಂದರೂ ಸಮರಸವೆಂಬ ಪದದ ಅರ್ಥವೇ ಅವರಿಬ್ಬರಿಗೂ ತಿಳಿಯಲಿಲ್ಲ. ಅದಕ್ಕೆ ಬಲವಾದ ಕಾರಣವೂ ಇತ್ತು. ಅದು ಮದುವೆಗಿಂತ ಮುಂಚೆ ವೆಂಕಟೇಶ್ ಅವರಿಗೆ ಬೇರೊಂದು ಹುಡುಗಿಯ ಮೇಲಿದ್ದ ಒಲವು. ಆ ಒಲವಿನದೊಂದು ದೊಡ್ಡ ಕತೆ. ಅದನ್ನ ವೆಂಕಟೇಶ್ ಅವರು ದೊಡ್ಡ ಕಾದಂಬರಿ ಬರೆಯಬಹುದಿತ್ತು.

ಅದು ಸುಮಾರು ನಲವತ್ತೈದು ವರ್ಷಗಳ ಹಿಂದೆ. ವೆಂಕಟೇಶ್ ಇನ್ನೂ ಶಿವಮೊಗ್ಗದ ಒಂದು ಪ್ರೌಢಶಾಲೆಯಲ್ಲಿ ಓದುತ್ತಿದ್ದರು. ಅವರದು ಬಾಲಕರ ಪ್ರೌಢಶಾಲೆ. ಅದೊಂದು

ತುಂಬಾ ಕಟ್ಟುನಿಟ್ಟಿನ ಶಾಲೆಯಾದರೂ ಅಲ್ಲಿನ ಹುಡುಗರು ಅತೀ ಕಿಲಾಡಿಗಳು. ಗುರುಗಳು ಎಷ್ಟು ಬುದ್ಧಿ ಹೇಳಿದರೂ, ಬೆತ್ತದಿಂದ ಪೆಟ್ಟು ಕೊಟ್ಟರೂ ಯಾವುದಕ್ಕೂ ಬಗ್ಗುತ್ತಿರಲಿಲ್ಲ. ಗುರುಗಳಿಗೇ ಹಿಡಿದು ಬಾರಿಸಿದ್ದೂ ಉಂಟು.

ಇಂತಹ ಕುಖ್ಯಾತ ಶಾಲೆಯ ಪಕ್ಕದಲ್ಲಿಯೇ ಅಷ್ಟೇ ಕುಖ್ಯಾತವಾಗಿದ್ದ ಇನ್ನೊಂದು ಬಾಲಕಿಯರ ಪ್ರೌಢಶಾಲೆ ಇತ್ತು. ಅದು ಇನ್ನೂ ಕಟ್ಟುನಿಟ್ಟಿನ ಶಾಲೆ. ಆ ಶಾಲೆಯಲ್ಲೊಬ್ಬಳು ಗಯ್ಯಾಳಿ ಟೀಚರ್. ಆ ಶಾಲೆಯ ಹುಡುಗಿಯರೇನಾದರೂ ಹೋಂ ವರ್ಕ್ ಮಾಡದಿದ್ದರೆ, ಶಾಲೆಗೆ ತಡವಾಗಿ ಬಂದರೆ, ಆ ದಿನದ ಪಠ್ಯಪುಸ್ತಕ ತರದಿದ್ದರೆ, ಎಲ್ಲದಕ್ಕೂ ಹೊರಗೆ ಬಿಸಿಲಿನಲ್ಲಿ ನಿಲ್ಲಿಸುವ ಶಿಕ್ಷೆ ಕೊಡುತ್ತಿದ್ದಳು. ಒಂದು ದಿನ ವೆಂಕಟೇಶ್ ಆ ಹುಡುಗಿಯರ ಶಾಲೆಯ ಮುಂದೆ ಹೋಗುವಾಗ ಅಲ್ಲಿ ನಾಲ್ಕು ಜನ ಹುಡುಗಿಯರಿಗೆ ಆ ಗಯ್ಯಾಳಿ ಟೀಚರ್ ಶಿಕ್ಷೆಕೊಟ್ಟು ಸುಡುವ ಬಿಸಿಲಿನಲ್ಲಿ ನಿಲ್ಲಿಸಿದ್ದಳು. ಅದರಲ್ಲೊಬ್ಬಳು ಹುಡುಗಿ ಆ ಶಿಕ್ಷೆಗೆ ತಲೆಕೆಡಿಸಿಕೊಳ್ಳದೆ ಶಾಲೆಯ ಪಕ್ಕದಲ್ಲಿಯೇ ಇದ್ದ ಮಾವಿನ ಮರದ ಮೇಲೆ ಇಂಪಾಗಿ ಹಾಡುತ್ತಿದ್ದ ಕೋಗಿಲೆಯನ್ನು ನೋಡುತ್ತಿದ್ದಳು. ವೆಂಕಟೇಶ್ ಅಲ್ಲಿ ಸಾಗುವಾಗ ಆಕಸ್ಮಿಕವಾಗಿ ಆ ಹುಡುಗಿಯ ಕಣ್ಣು ವೆಂಕಟೇಶ್ ಮೇಲೆ ಬಿತ್ತು. ವೆಂಕಟೇಶ್ ಕೂಡ ಅವಳನ್ನೇ ದಿಟ್ಟಿಸಿದಾಗ ಕಣ್ಣಿಗೆ ಕಣ್ಣು ಕಲೆತು ಇಬ್ಬರಿಗೂ ವಯೋಸಹಜವಾದ ಅವ್ಯಕ್ತ ಆನಂದವಾಗಿತ್ತು. ಮರದ ಮೇಲೆ ಕೋಗಿಲೆ. ಕೆಳಗೆ ಸುಂದರ ಹುಡುಗಿ. ಆ ಹುಡುಗಿಯ ಪಕ್ಕದಲ್ಲಿಯೇ ಇದ್ದ ಇನ್ನೂ ಮೂವರು ಹುಡುಗಿಯರು ಇವಳನ್ನು ರೇಗಿಸಲು ಆರಂಭಿಸಿದರು. ವೆಂಕಟೇಶನಿಗೆ ಆ ತಕ್ಷಣ ಅದು ಏಕೆಂದು ಅರ್ಥವಾಗಲಿಲ್ಲ. ಜೊತೆಗೆ ಆ ಹುಡುಗಿಯನ್ನು ವೆಂಕಟೇಶ್ ಮೊದಲೇ ಎಲ್ಲೋ ನೋಡಿದ ಹಾಗೆ ಅನಿಸಿತು. ಸ್ವಲ್ಪ ಯೋಚಿಸಿದಾಗ ಅವಳು ಇವರ ಸೋಮನಹಳ್ಳಿಯಿಂದಲೇ ಇವನು ಪ್ರಯಾಣಿಸುತ್ತಿದ್ದ ಬಸ್ಸಿನಲ್ಲಿಯೇ ಶಿವಮೊಗ್ಗಕ್ಕೆ ಪ್ರಯಾಣಿಸುತ್ತಿದ್ದಳು. ಅವಳು ಸೋಮನಹಳ್ಳಿಯಲ್ಲಿಯೇ ಬಸ್ಸು ಇಳಿದು ಆ ಸರೋವರದ ಏರಿಯ ಮೇಲೆ ನಡೆದು ತನ್ನ ಹಳ್ಳಿ ಗೋವಿಂದಪುರಕ್ಕೆ ಹೋಗುತ್ತಿದ್ದಳು. ಆ ದಿನದಿಂದ ವೆಂಕಟೇಶ್ ಕೋಗಿಲೆಯ ಇಂಪಾದ ಧ್ವನಿಗೆ ಮನಸೋಲುವಂತಾಯಿತು. ಜೊತೆಗೆ ವೆಂಕಟೇಶ್‌ನ ಮನಸ್ಸು ಶಿವಮೊಗ್ಗದ ಬಸ್ ನಿಲ್ದಾಣದಲ್ಲಿ, ಸೋಮನಹಳ್ಳಿಯ ಬಸ್ಸುಗಳಲ್ಲಿ, ಸರೋವರದ ಏರಿಯ ಮೇಲೆ ಆ ಹುಡುಗಿಯನ್ನು ಸದಾ ಹುಡುಕುತಿತ್ತು. ವೆಂಕಟೇಶ್ ಕೆಲವೊಮ್ಮೆ ಅವಳಿಗಿಂತ ಮೊದಲೇ ಶಾಲೆಯಿಂದ ಹೊರಟು ಊರನ್ನು ತಲುಪಿದ್ದರೆ, ಆ ಊರಿನ ಸರೋವರದ ಹತ್ತಿರ ಇರುವ ಮಾವಿನಮರಗಳ ಮೇಲೆ ಏರಿ ಕುಳಿತು ಅವಳ ಬರುವಿಕೆಗಾಗಿ ಶಬರಿಯ ಹಾಗೆ ಕಾಯುತ್ತಿದ್ದ. ಅಲ್ಲಿದ್ದ ಹಲವಾರು ವಿಧದ ಮಾವಿನಮರಗಳನ್ನು ಮತ್ತು ಮಾವಿನಕಾಯಿಗಳನ್ನು ದೇವರು ನನಗಾಗಿಯೇ ಸೃಷ್ಟಿಸಿದ್ದಾನೆ ಎಂದು ವೆಂಕಟೇಶ್ ಮೊದಲೇ ಬಹಳ ಸಲ ಅಂದುಕೊಂಡಿದ್ದ. ಆ ಹುಡುಗಿ ಆ ಸ್ಥಳಕ್ಕೆ ಬಂದಾಗ ಕೋಗಿಲೆಯ ಧ್ವನಿಯನ್ನು ಆಲಿಸುತ್ತಿದ್ದಳು. ಆ ಧ್ವನಿ ಕೇಳದಿದ್ದರೆ ಆ ಪಕ್ಷಿಯನ್ನು ಎಲ್ಲಾ ಮಾವಿನ ಮರಗಳ ಮೇಲೆ ಹುಡುಕುತ್ತಿದ್ದಳು. ಒಂದು

ದಿನ ಕೋಗಿಲೆ ಕೂಗುವುದನ್ನು ನೋಡುತ್ತ ನಿಂತಿದ್ದ ಆ ಹುಡುಗಿಯನ್ನು ಕಂಡ ವೆಂಕಟೇಶ್ ಮರುದಿನದಿಂದ ಮಾವಿನ ಮರದ ಮೇಲೆ ತಾನೇ ಕುಳಿತು ಅವಳು ಅಲ್ಲಿಗೆ ಬರುವ ಸಮಯಕ್ಕೆ ಕೋಗಿಲೆಯ ರೀತಿ ಇಂಪಾಗಿ ಹಾಡುತ್ತಿದ್ದ. ಆ ಧ್ವನಿ ಅಲ್ಲಿದ್ದ ಅಡಿಕೆ ತೋಟಗಳಿಗೆ ಬಡಿದು ಪ್ರತಿಧ್ವನಿಸುತಿತ್ತು. ಆ ಪ್ರತಿಧ್ವನಿ ಆ ಹುಡುಗಿಯ ಹೃದಯವೀಣೆಯ ತಂತಿಯನ್ನು ಮೀಟಿತ್ತು. ಅಂದಿನಿಂದ ಆ ಹುಡುಗಿ ಕೂಡ ಆ ಮಾವಿನ ಮರದ ಮೇಲೆ ಮನುಷ್ಯ ರೂಪದ ಕೋಗಿಲೆಯನ್ನು ಕೂಡ ಹುಡುಕುತಿದ್ದಳು. ಅವನನ್ನು ಮರದ ಮೇಲೆ ಕಂಡು ಸಂತೋಷಪಡುತ್ತಿದ್ದಳು. ಆ ರೀತಿ ಸಂತೋಷಪಡುತ್ತಿದ್ದ ಅವಳ ಅನುರಾಗದಿಂದ ಅವನಿಗೆ ಮಾವಿನ ಮರದ ಮೇಲೆ ಇನ್ನೂ ಪ್ರೀತಿ ಹೆಚ್ಚಿತು. ಖಂಡಿತವಾಗಿ ದೇವರು ಈ ಮಾವಿನ ಮರಗಳನ್ನು ನನಗಾಗಿಯೇ ಸೃಷ್ಟಿಸಿರುವುದು ಎಂದು ಅವನಿಗೆ ಬಲವಾಗಿ ಅನಿಸಿತು. ಆ ನಂತರ ಅವಳು ಕೂಡ ಬಸ್ಸುಗಳಲ್ಲಿ, ಸೋಮನಹಳ್ಳಿಯ ಬಸ್ ನಿಲ್ದಾಣದಲ್ಲಿ, ಶಿವಮೊಗ್ಗದ ಬಸ್ ನಿಲ್ದಾಣದಲ್ಲಿ, ತನ್ನ ಶಾಲೆಯ ಪಕ್ಕದ ಚರ್ಚಿನ ಹತ್ತಿರ ಎಲ್ಲಾ ಕಡೆ ವೆಂಕಟೇಶ ಅಲ್ಲಿ ಇರಬಹುದೇ ಎಂದು ವಾರೆಗಣ್ಣಿನಲ್ಲಿಯೇ ಹುಡುಕುತ್ತಿದ್ದಳು.

ಈ ರೀತಿ ಇಬ್ಬರೂ ಕೂಡ ಮೌನವಾಗಿಯೇ ಒಬ್ಬರಿಗೊಬ್ಬರನ್ನು ನೋಡಲು ಸದಾ ಹಂಬಲಿಸುತ್ತಿದ್ದರು. ಆದರೆ ಎದುರಿಗೆ ಬಂದರೂ, ಕೆಲವೊಮ್ಮೆ ಬಸ್ಸಿನಲ್ಲಿ ಪಕ್ಕದಲ್ಲಿಯೇ ನಿಂತಿದ್ದರೂ ಎಂದೂ ಒಬ್ಬರಿಗೊಬ್ಬರು ಮಾತನಾಡಲಿಲ್ಲ. ಪಕ್ಕದಲ್ಲಿ ನಿಂತಾಗ ಇಬ್ಬರಿಗೂ ತಮ್ಮ ರಕ್ತದ ಒತ್ತಡ ಹೆಚ್ಚಾಗಿ ಹೃದಯ ಡಿಂಡಿಮವಾಗುತಿತ್ತು. ಆ ಅಂತರಂಗದ ಡಿಂಡಿಮ ಯಾವುದೋ ವಯೋಸಹಜವಾದ ಅವ್ಯಕ್ತ ಭಯವನ್ನು ಮೂಡಿಸುತಿತ್ತು. ಆ ಭಯದ ನಡುವೆಯೂ ಹಬ್ಬ ಹರಿದಿನಗಳಲ್ಲಿ, ಜಾತ್ರೆ, ಸಂತೆಗಳಿಗೆ ತಮ್ಮ ಸೋಮನಹಳ್ಳಿಯ ಹುಡುಗಿಯರ ಹಾಗೆ ಬಂದು ಸೀರೆ ಅಥವಾ ಲಂಗ ದಾವಣಿಯಲ್ಲಿ ನಗುತ್ತಿದ್ದ ಅವಳನ್ನು ಕಂಡು ಮದುವೆಯಾದರೆ ಇವಳನ್ನೇ ಎಂದು ಅಂದುಕೊಳ್ಳುತ್ತಿದ್ದ ವೆಂಕಟೇಶ. ಒಂದು ದಿನ ಅವನಿಗೆ ಆಶ್ಚರ್ಯ ಕಾದಿತ್ತು. ಆ ದಿನ ಸೋಮನಹಳ್ಳಿಯ ಕಾಲಭೈರವೇಶ್ವರ ದೇವಸ್ಥಾನಕ್ಕೆ ಅವಳ ತಾಯಿಯ ಜೊತೆ ಬಂದಿದ್ದ ಅವಳು, ಅದೇ ಸಮಯಕ್ಕೆ ದೇವಸ್ಥಾನಕ್ಕೆ ಹೋಗಿದ್ದ ವೆಂಕಟೇಶ್ ಅಮ್ಮನ ಜೊತೆ ಇವರ ಮನೆಯ ಕಡೆಯೇ ಬರುತ್ತಿದ್ದರು. ಇವನಿಗೆ ಮೊದಲಿಗೆ ಒಂದು ರೀತಿ ಗಾಬರಿಯಾದರೂ ಅವರು ನಗುತ್ತಾ ಬರುತ್ತಿದ್ದದ್ದನ್ನು ಕಂಡು ಸಮಾಧಾನಗೊಂಡ. ಅವರು ನೇರವಾಗಿ ಮನೆಯೊಳಗೆ ಬಂದು ನಡುಮನೆಯಲ್ಲಿ ಕುಳಿತರು. ಅವಳ ಅಮ್ಮ ಇವನ ಅಮ್ಮ ಏನೋ ಹಳೆಯ ವಿಚಾರಗಳನ್ನೆಲ್ಲಾ ಮಾತನಾಡುತ್ತಿದ್ದರು. ಅದು ಇವನ ರೂಮಿಗೂ ಕೇಳಿಸುತಿತ್ತು. ಅದೇ ಸಮಯಕ್ಕೆ ಇವನ ಅಮ್ಮ ಇವನನ್ನು ನಡುಮನೆಗೆ ಕರೆದು "ಇವಳು ನನ್ನ ಬಾಲ್ಯದ ಗೆಳತಿ ವನಿತಾ, ನಮ್ಮ ಕಿಕ್ಕೇರಿಯವಳು. ಇವಳು ಅವಳ ಮಗಳು ಪರಿಣೀತಾ" ಎಂದು ಪರಿಚಯ ಮಾಡಿಕೊಟ್ಟಳು. ಅದೇ ಸಮಯ ಕಾಯುತ್ತಿದ್ದ ಇವನಿಗೆ ಅವಳ ಹೆಸರು ತಿಳಿಯಿತು. ತಕ್ಷಣವೇ "ತುಂಬಾ ಒಳ್ಳೆಯ ಹೆಸರು" ಎಂದು ಇವನ ಬಾಯಿಂದ ಅವರ ಮುಂದೆಯೇ ಮಾತು ಕೂಡ

ಬಂದೇ ಬಿಟ್ಟಿತು. ಇವನ ಮಾತಿಗೆ ಬೆಂಬಲವಾಗಿ ಇವನ ಅಮ್ಮ "ನಿನ್ನ ಹಾಗೇ ಮುದ್ದಾದ ಹೆಸರು ಕೂಡ" ಎಂದು ಪರಿಣೀತಾಳಿಗೆ ಹೇಳಿದರು. ಅಮ್ಮ ಮಗ ಈಗಲೇ ಹೊಗಳುವುದನ್ನು ಕಂಡ ಪರಿಣೀತಾ ನಾಚಿ ನೀರಾದಳು. ಆಗಲೇ ಅವಳ ಒಳ ಮನಸ್ಸು ಈ ಮನೆಗೆ ಸೊಸೆಯಾಗಿ ಬರುವುದನ್ನು ಕನಸು ಕಾಣುತಿತ್ತು. ಅವನು ಕೂಡ ಈ ಮನೆಯ ಮುಂದಿನ ಒಡತಿ ನನ್ನ ಮನದೊಡತಿ ಎರಡೂ ನೀನೇ ಎಂದು ಅವಳ ಮುಖವನ್ನು ಕದ್ದು ನೋಡುತ್ತ ಅಂದುಕೊಳ್ಳುತ್ತಿದ್ದ. ಅಂದಿನಿಂದ ಇಬ್ಬರೂ ಯಾವುದೋ ಕನಸಿನ ಪ್ರೇಮಲೋಕದಲ್ಲಿ ವಿಹರಿಸುತ್ತಿದ್ದರು.

ಅವರ ಅಮ್ಮಂದಿರ ಸ್ನೇಹದಿಂದ ಇವರ ಪ್ರೇಮಕ್ಕೂ ಒಂದು ರೀತಿಯ ಬೆಂಬಲ ಸಿಕ್ಕ ಹಾಗೆ ಆಯಿತು. ಒಟ್ಟಿಗೆ ಒಂದೇ ಬಸ್ಸಿನಲ್ಲಿ ಓಡಾಡಲು ಆರಂಭಿಸಿದರು. ಕೆಲವೊಮ್ಮೆ ಶಿವಮೊಗ್ಗದ ಗಾಂಧಿ ಪಾರ್ಕಿನಲ್ಲಿ ಕುಳಿತು ಹರಟೆ ಹೊಡೆಯುತ್ತಿದ್ದರು. ಆ ಪಾರ್ಕಿನ ಒಂದು ಮೂಲೆಯಲ್ಲಿದ್ದ ಚಿಕ್ಕ ಗುಲ್ ಮೊಹರ್ ಮರದ ಕಾಂಡದ ಮೇಲೆ ಹೃದಯದ ಚಿಹ್ನೆ ಕೊರೆದು ಅದರಲ್ಲಿ ಒಂದು ಬಾಣ ಬರೆದು ತಮ್ಮಿಬ್ಬರ ಹೆಸರನ್ನು ಕೆತ್ತಿದ್ದರು. ಇಬ್ಬರೂ ಜೊತೆಯಾಗಿ ಹಿಂದಿ ಚಲನಚಿತ್ರ "ಬಾಬ" ಮತ್ತು ಆಗತಾನೇ ಬಿಡುಗಡೆಯಾಗಿದ್ದ ಕನ್ನಡ ಚಲನಚಿತ್ರ "ದೇವರ ಗುಡಿ"ಯನ್ನು ಕೂಡ ಮನೆಯವರಿಗೆ ತಿಳಿಯದ ಹಾಗೆ ನೋಡಿದ್ದರು. ಆ ಚಲನಚಿತ್ರದ ಪ್ರಖ್ಯಾತ ಗೀತೆ "ಮಾಮರವೆಲ್ಲೋ ಕೋಗಿಲೆ ಎಲ್ಲೋ ಏನೀ ಸ್ನೇಹ ಸಂಬಂಧ ಎಲ್ಲಿಯದು ಈ ಅನುಬಂಧ" ಇಬ್ಬರಿಗೂ ತುಂಬಾ ಇಷ್ಟವಾಗಿ ಬಹಳ ದಿನಗಳ ಕಾಲ ಯಾವಾಗಲೂ ಅದನ್ನೇ ಗುನುಗುತ್ತಿದ್ದರು. ಇನ್ನೂ ಮುಂದೆ ಹೋಗಿ ಸುಮಾರು ದಿನಗಳ ಕಾಲ ಆ ಚಿತ್ರದ ನಾಯಕನಾಗಿದ್ದ ವಿಷ್ಣುವರ್ಧನ್ ವೆಂಕಟೇಶ್ ಮೇಲೆ ಮತ್ತು ಅದರ ನಾಯಕಿ ಭಾರತಿ ಪರಿಣೀತಾಳ ಮೇಲೆ ಪರಕಾಯ ಪ್ರವೇಶಮಾಡಿದ್ದರು. ಈ ರೀತಿ ಇಬ್ಬರು ಆಟವಾಡುತ್ತ ಪ್ರೇಮಲೋಕದಲ್ಲಿ ವಿಹರಿಸುತ್ತಾ ಪ್ರೌಢಶಾಲೆ ಮುಗಿಸಿದರು. ಇಬ್ಬರೂ ಸಹ್ಯಾದ್ರಿ ಕಾಲೇಜಿಗೆ ಸೇರಿ ಐಚ್ಛಿಕ ವಿಷಯಗಳಾಗಿ ಕನ್ನಡ ಮತ್ತು ಆಂಗ್ಲ ಸಾಹಿತ್ಯವನ್ನು ಆಯ್ಕೆಮಾಡಿಕೊಂಡರು. ಸ್ವಲ್ಪ ದಿನ ಕತೆ, ಕವನ ಮತ್ತು ಕಾದಂಬರಿಗಳೆಂದೂ ಕಾಲ ಕಳೆಯುತ್ತಿರುವಾಗ ಇಬ್ಬರಿಗೂ ಒಂದು ಆಘಾತದ ಸುದ್ದಿ ಬಂತು. ಪರಿಣೀತಾಳ ಅಮ್ಮನ ಕಡೆಯ ದೂರದ ಸಂಬಂಧಿ, ಇಂಜಿನೀಯರ್ ಆಗಿದ್ದ ಹುಡುಗನೊಬ್ಬನಿಗೆ ಪರಿಣೀತಾಳನ್ನು ಮದುವೆ ಮಾಡಿಕೊಳ್ಳುವ ಪ್ರಸ್ತಾಪ ಬಂತು. ಅದಕ್ಕೆ ಪರಿಣೀತಾಳನ್ನೂ ಕೇಳದೆಯೇ ಅವಳ ತಂದೆ ಮದುವೆಗೆ ಒಪ್ಪಿಕೊಂಡಿದ್ದರು. ಪರಿಣೀತಾಳ ಯಾವ ಭಾವನೆಗೂ ಆ ಮನೆಯಲ್ಲಿ ಕವಡೆ ಕಿಮ್ಮತ್ತಿನ ಬೆಲೆ ಕೂಡ ಇರಲಿಲ್ಲ. ವೆಂಕಟೇಶ್ ತನ್ನ ಅಮ್ಮನ ಮೂಲಕ ಆ ಮದುವೆಯನ್ನು ನಿಲ್ಲಿಸಲು ಪ್ರಯತ್ನಿಸಿ ಸೋಲಬೇಕಾಯಿತು. "ನೀನು ಇನ್ನೂ ಹೆಚ್ಚು ಓದಿ ನಿನ್ನ ಕಾಲ ಮೇಲೆ ನೀನು ನಿಲ್ಲಬೇಕು. ಆಗ ಮದುವೆ ಪ್ರಸ್ತಾಪ ಮಾಡಬಹುದು. ಅದಕ್ಕೆ ಇನ್ನು ಏಳೆಂಟು ವರ್ಷಗಳು ಬೇಕು. ಪರಿಣೀತಾಳಿಗೆ ಈಗ ಬಂದಿರುವ ಸಂಬಂಧ ತುಂಬಾ ಶ್ರೀಮಂತ ಮನೆತನದ್ದು, ಅದರಲ್ಲೂ ಹುಡುಗ ಹಿಂದುಸ್ತಾನ್

ಏರೋನಾಟಿಕ್ಸ್ ಲಿಮಿಟೆಡ್ ಸಂಸ್ಥೆಯಲ್ಲಿ ದೊಡ್ಡ ಇಂಜಿನಿಯರ್, ಅದಕ್ಕಿಂತ ಅವಳಿಗೆ ಏನು ಬೇಕು?" ಎಂದು ಅವರು ಇವನನ್ನೇ ಪ್ರಶ್ನೆ ಮಾಡಿ ಸುಮ್ಮನಾಗಿಸಿದರು. "ಈ ವಯಸ್ಸಿನಲ್ಲಿ ಹಾಗೇ ಅನಿಸುವುದು ಸಹಜ. ಸ್ವಲ್ಪ ದಿನ ಕಳೆದ ಮೇಲೆ ನೀನು ಎಲ್ಲವನ್ನು ಮರೆಯುವೆ. ಕಾಲ ಎಲ್ಲಾ ಗಾಯಗಳನ್ನು ಮಾಗಿಸುತ್ತದೆ" ಅಂದರು. ಮದುವೆ ಮಾತುಕತೆ ಶುರುವಾದ ಮೇಲೆ ಪರಿಣೀತಾ ಕೂಡ ಇವನನ್ನು ಒಮ್ಮೆಯೂ ಸಂಧಿಸಲಿಲ್ಲ. ಅದು ವೆಂಕಟೇಶನಿಗೆ ಇನ್ನೂ ಹೆಚ್ಚು ನೋವು ಕೊಟ್ಟಿತ್ತು. ಪರಿಣೀತಾ ಒಬ್ಬ ನಂಬಿಕೆ ದ್ರೋಹಿ, ಮೋಸಗಾರ್ತಿ ಎಂದು ಶಪಿಸಿದ. ಹಾಗೂ ಹೀಗೂ ಪರಿಣೀತಾಳ ಮದುವೆಯಾಗಿ ಅವಳು ಬೆಂಗಳೂರು ಸೇರಿದಳು. ಇತ್ತ ವೆಂಕಟೇಶ್ ಸ್ವಲ್ಪ ದಿನ ಹುಚ್ಚನ ರೀತಿಯಲ್ಲಿ ಗಡ್ಡ ಬಿಟ್ಟು ತಿರುಗುತ್ತಿದ್ದ. ಆದರೂ ಪರಿಣೀತಾಳಲ್ಲಿದ್ದ ಗ್ರಾಮೀಣ ಸೌಂದರ್ಯ ಅವಳು ಧರಿಸುತ್ತಿದ್ದ ಹಳ್ಳಿಯ ವೇಷಭೂಷಣಗಳು, ಅವಳ ಜಡೆಯಲ್ಲಿ ಸದಾ ಮುಡಿದಿರುತ್ತಿದ್ದ ಮಲ್ಲಿಗೆ, ಗುಲಾಬಿ ಹೂಗಳ ಪರಿಮಳ ಅವನಿಗೆ ತುಂಬಾ ದಿನಗಳು ಕಾಡುತ್ತಿದ್ದವು.

* * *

ಪರಿಣೀತಾಳ ನೆನಪು ಪ್ರೊಫೆಸರ್ ವೆಂಕಟೇಶ್ ಅವರ ಮನಸಿನಿಂದ ಹೋಗಲೇ ಇಲ್ಲ. ಆ ನೆನಪನ್ನು ಹೋಗಲಾಡಿಸುವಂತಹ ಸಿಹಿಯಾದದ್ದೋ ಅದ್ಭುತವಾದದ್ದೋ ಘಟನೆ ಅವರ ಬದುಕಿನಲ್ಲಿ ಮತ್ತೆ ಸಂಭವಿಸಲಿಲ್ಲ. ಆ ಹಳೆಯ ನೆನಪುಗಳು ಬೆನ್ನತ್ತಿದ ಬೇತಾಳನ ರೀತಿ ನಲವತ್ತು ವರ್ಷಗಳ ನಂತರವೂ ನಿರಂತರವಾಗಿ ಕಾಡುತ್ತಿದ್ದವು. ಆ ವಿಷಯವನ್ನು ವೆಂಕಟೇಶ್ ಯಾರ ಹತ್ತಿರವೂ ಹೇಳಿಕೊಳ್ಳಲಾಗಲಿಲ್ಲ. ವೆಂಕಟೇಶ್ ತನ್ನ ಅಮ್ಮ ಬದುಕಿರುವ ತನಕ ಪರಿಣೀತಾಳ ಬಗ್ಗೆ ಮತ್ತು ಅವಳ ಕಾಡುವ ನೆನಪುಗಳ ಬಗ್ಗೆ ಮಾತನಾಡುತ್ತಿದ್ದರು. ಅವರ ಅಮ್ಮ ಕೂಡ ಪರಿಣೀತಾಳಿಗೆ ಎರಡು ಅವಳಿ ಹೆಣ್ಣು ಮಕ್ಕಳು ಜನಿಸಿರುವ ವಿಷಯವನ್ನು ತಿಳಿಸಿದ್ದರು. ಆದರೆ, ಅವರ ಮರಣಾನಂತರ ಮನಸ್ಸಿನ ಭಾವನೆಗಳನ್ನು ಹಂಚಿಕೊಳ್ಳಲು ಯಾರೂ ಇಲ್ಲದಾಯಿತು. ಅಮೆರಿಕಾದಲ್ಲಿ ಯಾರಾದರೂ ತನಗೆ ಪರಿಚಿತರು ಸಿಗಬೇಕಾದರೆ ಆರು ತಿಂಗಳೋ ವರ್ಷವೋ ಕಾಯಬೇಕಾಗುತಿತ್ತು. ಹೆಂಡತಿ ಹತ್ತಿರ ಹೇಳಿಕೊಳ್ಳೋಣ ಎಂದರೆ ಮದುವೆಗಿಂತ ಮೊದಲು ಬೇರೊಂದು ಹೆಣ್ಣಿನ ಸಂಬಂಧವಿತ್ತಾ ನಿಮಗೆ? ಎಂದು ಸದಾ ತಲೆತಿನ್ನುವುದನ್ನು ಕಲ್ಪಿಸಿಕೊಂಡು ಅದರಿಂದ ತಪ್ಪಿಸಿಕೊಂಡಿದ್ದರು. ಗಂಡ ತನ್ನನ್ನು ಬಿಟ್ಟು ಬೇರೆ ಯಾರನ್ನೂ ಪ್ರೀತಿಸಿಲ್ಲ ಎಂಬ ತನ್ನ ನಂಬಿಕೆ ಸುಳ್ಳು ಎಂದು ತಿಳಿದರೆ ಶ್ಯಾಮಲ ಅವರ ಮನಸಿನಲ್ಲಿ ಮತ್ತು ಆ ಕುಟುಂಬದಲ್ಲಿ ಸಿಡಿಯುವ ಜ್ವಾಲಾಮುಖಿಯನ್ನು ತಡೆಯಲು ಸಾಧ್ಯವೇ? ಹಾಗಾಗಿ ವೆಂಕಟೇಶ್ ಅವರು ಮೌನಕ್ಕೆ ಮೊರೆಹೋಗುವುದು ಸರಿಯೆಂದು ತಿಳಿದು ಯಾರಿಗೂ ಆ ವಿಷಯವನ್ನು ತಿಳಿಸಲಿಲ್ಲ.

ಇತ್ತ ವೆಂಕಟೇಶ್ ಪತ್ನಿ ಶ್ಯಾಮಲ ಸ್ನಾತಕೋತ್ತರ ಪದವಿ ಮಾಡಿದ್ದರೂ ತನ್ನ ಕಾಲೇಜು ದಿನಗಳಲ್ಲಿ ಯಾರನ್ನೂ ಪ್ರೀತಿಸಿರಲಿಲ್ಲ. ಅದಕ್ಕೆ ಸೂಕ್ತವಾದ ಅವಕಾಶ ಸಿಕ್ಕಿರಲಿಲ್ಲ

ಎಂದೇ ಹೇಳಬೇಕು. ಯಾವಾಗ ಪತಿ ತನ್ನ ಮೇಲೆ ಪ್ರೀತಿಯನ್ನು ತೋರದೆ ನಿರಾಕರಿಸುವದನ್ನು ಕಂಡಾಗ ಅವರಿಗೆ ಯಾವುದೋ ಗತಕಾಲದ ಪ್ರೇಮ ವ್ಯವಹಾರ ಅಥವಾ ಬೇರೆ ಯಾವುದೋ ಅಕ್ರಮ ಸಂಬಂಧ ಇರಬಹುದು ಎಂಬ ಅನುಮಾನ ಸುಮಾರು ವರ್ಷಗಳಿಂದ ಶ್ಯಾಮಲಳಿಗೆ ಕಾಡುತಿತ್ತು. ಅದಲ್ಲದೆ ಗಂಡ ರಾತ್ರಿ ಮಲಗಿರುವಾಗ ಮಾವಿನಮರ, ಕೋಗಿಲೆ ಎಂದು ಕನವರಿಸುವುದು ತುಂಬಾ ವಿಚಿತ್ರ ಅನಿಸುತಿತ್ತು. ಅದು ಒಂದೆರಡು ದಿನಗಳ ಘಟನೆಯಾಗಿರಲಿಲ್ಲ. ಎಷ್ಟೋ ವರ್ಷದಿಂದ ರಾತ್ರಿ ಹೊತ್ತು ಅದೇ ಕತೆಯಾಗಿತ್ತು. ಒಂದು ದಿನ ಬೆಳಿಗ್ಗೆ ಬಿಡುವಿನ ಸಮಯದಲ್ಲಿ ತನ್ನ ಗಂಡನ ಹತ್ತಿರ ಕುಳಿತು "ಅಮೆರಿಕಾದಲ್ಲಿ ಅದರಲ್ಲೂ ವರ್ಜಿನೀಯಾ ಸಂಸ್ಥಾನದಲ್ಲಿ ಮಾವಿನಮರಗಳಿಲ್ಲ. ಭಾರತದಲ್ಲಿ ಕಾಣಸಿಗುವ ಕೋಗಿಲೆಗಳು ಕೂಡ ಇಲ್ಲಿ ಕಾಣಸಿಗುವುದಿಲ್ಲ. ನೀವೇಕೆ ಪ್ರತಿದಿನ ಮಾವಿನಮರ, ಕೋಗಿಲೆ ಎಂದು ಏನೇನೋ ಕನವರಿಸುತ್ತೀರಾ? ನೀವು ಕೇಳಿಸಿಕೊಳ್ಳುವ ಪಕ್ಷಿ ಧ್ವನಿಯೂ ನಿಮ್ಮ ಮನಸಿನ ಭ್ರಮೆ" ಎಂದು ನೇರವಾಗಿ ಹೇಳಿಯೇ ಬಿಟ್ಟಳು. ಕೆಲವೊಮ್ಮೆ ಶ್ಯಾಮಲ ತನ್ನ ಮಗಳಿಗೆ "ನಿಮ್ಮ ಅಪ್ಪನಿಗೆ ಕೋಗಿಲೆಯ ಭೂತ ಹಿಡಿದಿರಬೇಕು. ಆ ಭೂತ ರಾತ್ರಿ ಕೂಡ ಬಂದಿತ್ತು" ಎಂದು ತಮಾಷೆಗೆ ಹೇಳಿ ನಗುತ್ತಿದ್ದಳು. ಮಗಳು ಕೂಡ ಅಪ್ಪನಿಗೆ ಕೆಲವೊಮ್ಮೆ "ರಾತ್ರಿ ನಿಮ್ಮ ಕೋಗಿಲೆ ಇಂಪಾಗಿ ಹಾಡುತಿತ್ತು. ನಾನು ಕೇಳಿಸಿಕೊಂಡೆ" ಎಂದು ತಮಾಷೆ ಮಾಡುತ್ತಿದ್ದಳು.

ಹೀಗೆ ಬದುಕು ನೀರಸವಾಗಿ ಕುಂಟುತ್ತಾ ಸಾಗುತ್ತಿರುವಾಗ ವೆಂಕಟೇಶ್ ಮನಸ್ಸು ಏಕೋ ಖಿನ್ನತೆಗೆ ಒಳಗಾಯಿತು. ವೈದ್ಯರಿಗೆ ತೋರಿಸಿದರೆ "ನಿಮಗೆ ಸ್ವಲ್ಪ ದಿನ ವಿಶ್ರಾಂತಿ ಬೇಕು ಅದಕ್ಕಾಗಿ ಸ್ವಲ್ಪ ದಿನ ನಿಮಗೆ ಪ್ರಿಯವಾದ ಯಾವುದಾದರೂ ಸ್ಥಳಕ್ಕೆ ಹೋಗಿ ಬನ್ನಿ" ಎಂದು ಸಲಹೆ ಕೊಟ್ಟರು. "ಏನು ಡಾಕ್ಟರ್! ವೃತ್ತಿಯಿಂದ ವಿಶ್ರಾಂತಿ ಸಿಕ್ಕಿ ಆಗಲೇ ಎರಡು ವರ್ಷವಾಯಿತು. ಮತ್ತೇಕೆ ವಿಶ್ರಾಂತಿ?" ಎಂದು ವೆಂಕಟೇಶ್ ಕೇಳಿದರೂ, "ನಿಮಗೆ ಬೇಕಿರುವುದು ಕಾಡುವ ನೆನಪುಗಳಿಂದ ವಿಶ್ರಾಂತಿ. ಅವನ್ನು ಮರೆಯಲು ಅವುಗಳಿಂದ ದೂರ ಹೋಗಬೇಕು ಅಥವಾ ಅವುಗಳಿರುವಲ್ಲಿಗೆ ಹೋಗಬೇಕು" ಎಂದು ಮರು ಸಲಹೆಯಿತ್ತರು. ಸ್ವಲ್ಪ ದಿನ ನಿಮ್ಮ ಮಾತೃಭೂಮಿಗೆ ಹೋಗಿ ಬನ್ನಿ ಎಂದು ಕೂಡ ಹೇಳಿದರು.

ವೆಂಕಟೇಶ್ ಅವರಿಗೂ ಅದೇ ಬೇಕಾಗಿತ್ತು. ರೋಗಿ ಬಯಸಿದ್ದೂ ಹಾಲು ಅನ್ನ, ವೈದ್ಯ ಹೇಳಿದ್ದೂ ಹಾಲು ಅನ್ನ. ವೆಂಕಟೇಶ್ ಭಾರತಕ್ಕೆ ಹೊರಟೇಬಿಟ್ಟರು. ಹೆಂಡತಿ ಮತ್ತು ಮಗಳು "ನಾವು ಬರುತ್ತೇವೆ" ಎಂದು ಹೇಳಿದರೂ ಕೇಳದೆ, ಬೇಡ "ನಾನೊಬ್ಬನೇ ಹೋಗಿ ಒಂದು ವರ್ಷ ಅಲ್ಲಿದ್ದು ಬರುತ್ತೇನೆ" ಎಂದು ವಾರದಲ್ಲಿಯೇ ವಿಮಾನವನ್ನು ಏರಿಯೇಬಿಟ್ಟರು.

ವಿಮಾನ ಯೂರೋಪಿನ ಮೇಲೆ ಹಾರುತಿತ್ತು. ವೆಂಕಟೇಶ್ ಅವರಿಗೆ ಒಂದು ವಾರದ ಹಿಂದೆ ಗೆಳೆಯನೊಬ್ಬ ವಾಟ್ಸಪ್ಪಿನಲ್ಲಿ ಒಂದು ಕುತೂಹಲವಾದ ವಿಷಯವನ್ನು

ತಿಳಿಸಿದ್ದ. ಆ ವಿಷಯದಿಂದ ವೆಂಕಟೇಶ್ ತಕ್ಷಣವೇ ತನ್ನ ಸೋಮನಹಳ್ಳಿಗೆ ಹೋಗಬೇಕೆಂದು ನಿರ್ಧಾರ ಮಾಡಿದ್ದರು. ತನ್ನ ಬಾಲ್ಯದ ಪ್ರೇಯಸಿ ಪರಿಣೀತಾ ವೃತ್ತಿಯಿಂದ ನಿವೃತ್ತನಾದ ಅವಳ ಗಂಡನ ಜೊತೆ ಸೋಮನಹಳ್ಳಿಯಲ್ಲಿಯೇ ನೆಲೆಸಲು ನಿರ್ಧಾರ ಮಾಡಿಯಾಗಿತ್ತು. ಅದಕ್ಕಾಗಿ ಇವರ ಹಳೆಯ ಮನೆಯ ಮುಂದೆ ಒಂದು ಜಾಗವನ್ನು ಕೊಂಡು ಅಲ್ಲಿ ಅರಮನೆಯಂತಹ ದೊಡ್ಡದೊಂದು ಮನೆಯನ್ನು ಕಟ್ಟಿಸುತ್ತಿದ್ದಳು. ಅಷ್ಟೇ ಅಲ್ಲದೆ ತಾತ್ಕಾಲಿಕವಾಗಿ ಒಂದು ಮನೆಯನ್ನು ಬಾಡಿಗೆಗೆ ಪಡೆದು ನೆಲೆಸಿದ್ದಳು. ಈ ವಿಷಯವನ್ನು ತಿಳಿದ ವೆಂಕಟೇಶ್ ಅವರು ಒಂದು ರೀತಿಯ ಹೊಸ ಹುರುಪಿನಿಂದ ತಕ್ಷಣವೇ ಸೋಮನಹಳ್ಳಿಗೆ ಹೊರಟಿದ್ದರು. ವಿಮಾನದಲ್ಲಿ ನಿದ್ರೆಯೂ ಬರಲಿಲ್ಲ, ಯಾವುದೇ ಚಲನಚಿತ್ರಗಳನ್ನು ನೋಡಲು ಮನಸ್ಸು ಬರಲಿಲ್ಲ. ಎಲ್ಲಾ ಹಳೆಯ ನೆನಪುಗಳು. ಶಿವಮೊಗ್ಗಕ್ಕೆ ಪ್ರಯಾಣ ಮಾಡುತ್ತಿದ್ದ ಬಸ್ಸುಗಳು, ಗಾಂಧಿಪಾರ್ಕ್, ತುಂಗಾ ನದಿಯ ತೀರ, ತಾನು ಓದಿದ ಪ್ರೌಢಶಾಲೆ, ಜೊತೆಗೆ ಮಾಜಿ ಪ್ರೇಯಸಿ ಪರಿಣೀತಾ. ಆ ನೆನಪುಗಳ ಮಧ್ಯದಲ್ಲಿಯೇ ಜಪಾನಿನ ಪ್ರಖ್ಯಾತ ಸಾಹಿತಿ ಹಾರುಕಿ ಮುರಾಕಮಿಯ ಸಣ್ಣ ಕತೆಗಳ ಪುಸ್ತಕವೊಂದನ್ನು ತೆರೆದು ಓದಲು ಆರಂಭಿಸಿದರು. ಅಲ್ಲಿದ್ದ ಕಥೆಯೊಂದರ ನಾಯಕ ಟೋನಿ ಟಾಕಿಟಾನಿಯ ವಿಷಾದನೀಯ ಬದುಕು ಬಹು ವಿಚಿತ್ರವೆನಿಸಿತು. ಅದರ ಮಧ್ಯ ನಿದ್ರೆ ಯಾವಾಗ ಬಂತು ಎಂದು ಯೋಚಿಸುವಷ್ಟರಲ್ಲಿ ವಿಮಾನ ದುಬೈ ವಿಮಾನ ನಿಲ್ದಾಣದಲ್ಲಿ ಕೆಳಗೆ ಇಳಿಯಿತು.

ದುಬೈ ವಿಮಾನ ನಿಲ್ದಾಣದಲ್ಲಿ ವೆಂಕಟೇಶ್ ಅವರಿಗೆ ಅರವತ್ತೈದರ ಆಸುಪಾಸಿನ ಯಾವುದೇ ಭಾರತೀಯ ಮಹಿಳೆಯನ್ನು ಕಂಡಾಗ ಇವಳೇ ಪರಿಣೀತಾ ಇರಬಹುದಾ ಎಂದು ಅನಿಸುತ್ತಿತ್ತು. ಹಾಗೆ ಮನಸ್ಸಿನಲ್ಲಿಯೇ ಕಲ್ಪಿಸಿಕೊಳ್ಳುತ್ತಿದ್ದರು ಕೂಡ. ತನ್ನತ್ತ ಬರುತ್ತಿದ್ದ ಒಬ್ಬಳು ಮಹಿಳೆಯನ್ನು ಕೈ ತೋರಿಸಿ ನಿಲ್ಲಿಸಿ "ನೀವು ಪರಿಣೀತಾ ಅಲ್ಲವಾ?" ಎಂದು ಕೇಳಿಯೇ ಬಿಟ್ಟರು. ಆ ಮಹಿಳೆಗೆ ಅರ್ಥವಾಯಿತೋ ಇಲ್ಲವೋ, ನೀವು ಯಾರನ್ನಾದರೂ ಹುಡುಕುತ್ತಿದ್ದಿರಾ? ಎಂದು ಇಂಗ್ಲಿಷ್ ಭಾಷೆಯಲ್ಲಿ ಕೇಳಿಯೇ ಬಿಟ್ಟಳು. ಇವನು "ಇಲ್ಲಾ ನನ್ನ ಪರಿಚಿತರೊಬ್ಬರು ನಿಮ್ಮ ಹಾಗೆಯೇ ಇದ್ದಾರೆ. ಅವರೇ ನೀವು ಎಂದು ಸ್ವಲ್ಪ ಗೊಂದಲವಾಯಿತು ಎಂದು ಹೇಳಿ ಕ್ಷಮೆ ಕೇಳಿದರು. ಆ ಮಹಿಳೆ ಆ ವಯಸ್ಸಿನಲ್ಲೂ ನಾಚುತ್ತಾ ಮುಂದೆ ಸಾಗಿದಳು. ಬೆಂಗಳೂರಿಗೆ ಪ್ರಯಾಣಿಸುವ ಟರ್ಮಿನಲ್ಲಿಗೆ ಬಂದಾಗ ಬಹಳಷ್ಟು ಜನ ಆಗಲೇ ಬೋರ್ಡಿಂಗ್ ಆಗಲು ಕ್ಯೂ ನಿಂತಿದ್ದರು. ಇವರು ಬೇಗ ಹೋಗಿ ಕ್ಯೂ ನಿಂತದ್ದು ಮಾತ್ರ ಜ್ಞಾಪಕ. ಆಮೇಲೆ ಬೆಂಗಳೂರು ಯಾವಾಗ ಬಂತು. ಅಲ್ಲಿ ತನಗಾಗಿ ಕಾಯುತ್ತಿದ್ದ ಸ್ನೇಹಿತ ತನ್ನ ಮನೆಗೆ ಯಾವಾಗ ಕರೆದುಕೊಂಡು ಹೋದ. ಅವನ ಮನೆಯಲ್ಲಿ ಸುಮಾರು ನಾಲ್ಕು ದಿನ ತಂಗಿದ್ದನ್ನು ಕೂಡ ವೆಂಕಟೇಶ್ ಮರೆತುಬಿಟ್ಟಿದ್ದರು. ಶಿವಮೊಗ್ಗಕ್ಕೆ ಬಂದು ಅಲ್ಲಿಂದ ಸೋಮನಹಳ್ಳಿಯಲ್ಲಿ ತನ್ನ ದೂರದ ಸಂಬಂಧಿ ಮತ್ತು ಸುಮಾರು ವರ್ಷಗಳಿಂದ ಇವರ ಮನೆ, ತೋಟ, ಜಮೀನಿನ

ಉಸ್ತುವಾರಿ ನೋಡಿಕೊಳ್ಳುತ್ತಿದ್ದ ಮಂಜುನಾಥನ ಮನೆಗೆ ಬಂದು ಉಳಿದುಕೊಂಡರು. ವೆಂಕಟೇಶರಿಗಾಗಿ ಸುಮಾರು ದಿನದಿಂದ ಮಂಜುನಾಥ ಕೂಡ ಕಾಯುತ್ತಿದ್ದ. ವೆಂಕಟೇಶರಿಗೆ ಸಂಜೆಯ ತನಕ ವಿಶ್ರಾಂತಿ ತೆಗೆದುಕೊಳ್ಳಲು ಹೇಳಿದ. ಸಂಜೆ ವೆಂಕಟೇಶ್ ಎದ್ದಾಗ ಆಗಲೇ ನಾಲ್ಕು ಗಂಟೆಯಾಗಿತ್ತು. ತೋಟ, ಗದ್ದೆ, ಸರೋವರ ಎಲ್ಲವನ್ನು ನೋಡಿಕೊಂಡು ಬರೋಣ ಬಾ ಎಂದು ಮಂಜುನಾಥನಿಗೆ ಇವರೇ ಕರೆದುಕೊಂಡು ಹೋದರು.

ಬೆಳಿಗ್ಗೆ ವೆಂಕಟೇಶ್ ಅವರು ಸೋಮನಹಳ್ಳಿಗೆ ಬಂದಾಗ ಇನ್ನು ಕತ್ತಲೆಯಿತ್ತು. ಈಗ ವೆಂಕಟೇಶ್ ಅವರಿಗೆ ಎಲ್ಲವೂ ಬದಲಾಗಿ ತಾನು ಹುಟ್ಟಿ ಬೆಳೆದ ಸೋಮನಹಳ್ಳಿ ಇದಲ್ಲಾ ಎಂಬ ಭಾವನೆ ಬರಲಾರಂಭಿಸಿತು. ಶಿವಮೊಗ್ಗದಿಂದ ನರಸಿಂಹರಾಜಪುರಕ್ಕೆ ಹೋಗುವ ರಸ್ತೆಯಲ್ಲಿದ್ದ ನೂರಾರು ಮಾವಿನಮರ, ನೇರಳೆ, ತಾರೆ, ಹುಣಸೇ, ಹಿಪ್ಪೆ, ಆಲದಮರಗಳನ್ನೆಲ್ಲಾ ವಿಮಾನ ನಿಲ್ದಾಣಕ್ಕಾಗಿ ರಸ್ತೆ ನಿರ್ಮಾಣ ಮಾಡಲು ಹೋಗಿ ಕಡಿದು ಉರುಳಿಸಿದ್ದರು. ಸರೋವರಕ್ಕೆ ಹೋಗುವ ದಾರಿಯಲ್ಲಿ ಪುರುಷರ ಮತ್ತು ಮಹಿಳೆಯರ ಕಾರಾಗೃಹಗಳನ್ನು ಕರ್ನಾಟಕ ಸರ್ಕಾರ ಆರಂಭಿಸಿತ್ತು. ಜೊತೆಗೆ ಕೇಂದ್ರೀಯ ವಿದ್ಯಾಲಯ, ಪೋಧಾರ್ ಅಂತರರಾಷ್ಟ್ರೀಯ ಶಾಲೆ, ಅಲ್ಲಿ ಶಿವಮೊಗ್ಗ-ಭದ್ರಾವತಿ ಅವಳಿ ನಗರಗಳ ಉಪನಗರವೊಂದು ನಿರ್ಮಾಣವಾಗಿ ಸೋಮನಹಳ್ಳಿಯ ಯಾವುದೇ ಕುರುಹುಗಳು ಅಲ್ಲಿರಲಿಲ್ಲ. ಅಲ್ಲಿದ್ದ ಸರೋವರದ ಸುತ್ತಾ ಉಪನಗರದ ಜನರಿಗಾಗಿ ಸುಂದರವಾದ ಉದ್ಯಾನವನ ಮತ್ತು ವಾಯುವಿಹಾರಕ್ಕೆ ಹೋಗುವ ಪಾದಚಾರಿಗಳ ಮಾರ್ಗ ಕೂಡ ನಿರ್ಮಾಣವಾಗಿತ್ತು. ಆಗಲೇ ಅಲ್ಲಿ ಬಹಳಷ್ಟು ಜನರು ವಾಯು ವಿಹಾರ ಮಾಡುತ್ತಿದ್ದರು. ಆದರೆ, ಅಲ್ಲಿ ಏನೋ ಇಲ್ಲಾ ಎಂದು ವೆಂಕಟೇಶ್ ಯೋಚಿಸುವಷ್ಟರಲ್ಲಿ ಆ ಸರೋವರದ ದಂಡೆಯ ಮೇಲೆ ಯಾರೋ ಮುದುಕನೊಬ್ಬ ಹುಲ್ಲು ಕೊಯ್ದು ಒಂದು ಗೋಣಿಚೀಲಕ್ಕೆ ತುಂಬಿಕೊಂಡು ಮೇಲೆ ಬರುತ್ತಿದ್ದ. ಸೋಮನಹಳ್ಳಿ ಮಾಯವಾಗಿ ಅತ್ಯಾಧುನಿಕ ಸ್ಮಾರ್ಟ್ ಸಿಟಿಯ ಭಾಗವಾಗಿ ಬದಲಾಗಿರುವಾಗ ಅಲ್ಲೊಂದು ಹಳ್ಳಿ ಇತ್ತೆಂದು ನೆನಪಿಸಲು ಕುರುಹಾಗಿ ಒಬ್ಬ ವ್ಯಕ್ತಿ ಮಾತ್ರ ಉಳಿದಿರುವ ಹಾಗೆ ಆ ಮುದುಕ ಕಾಣಿಸುತ್ತಿದ್ದ. ಆ ಮುದುಕ ಮಂಜುನಾಥನ ಹತ್ತಿರ ಬಂದು ಇವರು ಎಂಕಟೇಶ ಅಲ್ವಾ? ಎಂದು ಪ್ರಶ್ನಿಸಿದ. ವೆಂಕಟೇಶ್ ಅವರಿಗೂ ಆ ಮುಖ ಎಲ್ಲೋ ನೋಡಿರುವ ಹಾಗೆ ಅನಿಸಿತು. ಅಷ್ಟರಲ್ಲಿ ಆ ಮುದುಕನೇ ನಾನು ಕರಿಬಸ್ಯಾ ಗೊತ್ತಾಗಲಿಲ್ವಾ ಎಂಕಟೇಶ? ಎಂದು ತನ್ನ ಪರಿಚಯದ ನೆನಪನ್ನು ಮಾಡಿಕೊಟ್ಟ. ಅಷ್ಟರಲ್ಲಿ ವೆಂಕಟೇಶ ಅವರಿಗೂ ಅವನು ಗೋವಿಂದಪ್ಪನವರ ಮನೆಯಲ್ಲಿ ದನ ಕಾಯುತ್ತಿದ್ದ ಕರಿಬಸ್ಯಾ ಎಂದು ಗೊತ್ತಾಯಿತು. ಇನ್ನೂ ದನ ಕಾಯೋದನ್ನು ಬಿಟ್ಟಿಲ್ವಾ ಕರಿಬಸ್ಯಾ? ನನಗೆ ನಿನ್ನ ಗುರುತೇ ಸಿಗಲಿಲ್ಲ ಎಂದು ವೆಂಕಟೇಶ ಹೇಳಿದರು. ಕರಿಬಸ್ಯಾ ವೆಂಕಟೇಶನ ಸಮವಯಸ್ಕ. ಆದರೆ, ಬದುಕಿನಲ್ಲಿ ಹೋರಾಡಿ ಹೋರಾಡಿ ಸ್ವಲ್ಪ ಹೆಚ್ಚು ವಯಸ್ಸಾಗಿರುವ ಹಾಗೆ ಕಾಣುತ್ತಿದ್ದ. ಈಗ ಸ್ವಂತವಾಗಿ ಕೆಲವು ಹಸುಗಳನ್ನು ಸಾಕಿಕೊಂಡು ಸ್ವಾವಲಂಬಿಯಾಗಿ ಬದುಕುತ್ತಿದ್ದ.

"ಎಂಕಟೇಶ, ನೀನು ಮಾವಿನ ಮರಕ್ಕೆ ಕಲ್ಲು ಎಸೆದು ಮಾವಿನಕಾಯಿ ಬೀಳಿಸುತ್ತಿದ್ದ ಜಾಗ ಇದೇ ನೋಡಪ್ಪ. ಇಲ್ಲಿ ಈಗ ಒಂದು ಮಾವಿನಮರವೂ ಉಳಿದಿಲ್ಲ. ಸೋಮನಹಳ್ಳಿಯಲ್ಲಿದ್ದ ಎಲ್ಲಾ ಹಿರಿತಲೆಗಳು ಸತ್ತುಹೋದವು. ಇಲ್ಲಿ ಮಾವಿನಮರಗಳು ಹಿಂದೆ ಇದ್ದವು ಎನ್ನುವುದಕ್ಕೆ ಸಾಕ್ಷಿ ನಾನು, ನೀನು ಮತ್ತು ನಿನ್ನ ಕೋಗಿಲೆ ಪಕ್ಷಿಯ ಆ ಹುಡುಗಿ ಮಾತ್ರ ಎಂಕಟೇಶ" ಎಂದು ಉಸಿರನ್ನು ದೀರ್ಘವಾಗಿ ಎಳೆದ. ವೆಂಕಟೇಶ್ ಅವರಿಗೂ ಅಲ್ಲಿ ಮಾವಿನ ಮರಗಳು ಇಲ್ಲಾ ಎಂದು ಈಗ ಹೊಳೆಯಿತು. ಅದೊಂದು ವಿಷಾದ ಭಾವವನ್ನು ಮೂಡಿಸಿದರೂ ಕೋಗಿಲೆಯ ಹುಡುಗಿ ಎಂದು ಕಿವಿಗೆ ಬಿದ್ದದ್ದು ಸವಿನೆನಪುಗಳು ಸಾವಿರ ಸಾವಿರವಾಗಿ ಹೊರಬಂದವು. ವೆಂಕಟೇಶ ತಕ್ಷಣವೇ ಕರಿಬಸ್ಯಾನಿಗೆ ಎಲ್ಲಿ ಪರಿಣೀತಾ ಈಗ? ಎಂದು ಕೇಳಿದ. ಕರಿಬಸ್ಯಾ "ಆವಮ್ಮ ಈಗ ಇದೆ ಊರಲ್ಲಿಯೇ ಇರುವುದು. ಸ್ವಲ್ಪ ಹೊತ್ತು ಕಾಯುತ್ತಾ ಇಲ್ಲಿಯೇ ಕುಳಿತುಕೊಳ್ಳಿ. "ತನ್ನ ಮಕ್ಕಳು ಮೊಮ್ಮಕ್ಕಳ ಜೊತೆ ಓಡುತ್ತಾ ಬರುತ್ತೇ ಮಾತನಾಡಿಸುವಂತೆ" ಎಂದು ಹೇಳಿ ಹಾಲು ಕರೆಯಲು ಸಮಯವಾಗಿದೆ ನಾಳೆ ಸಿಗುತ್ತೇನೆ. ಆವಮ್ಮನ ಮನೆಗೆ ದಿನ ಹಾಲು ಹಾಕುತ್ತೇನೆ. ನಾನೇ ಅವರ ಮನೆಗೆ ಕರೆದುಕೊಂಡು ಹೋಗುತ್ತೇನೆ ಎಂದು ಹೇಳಿ ಹೊರಟುಹೋದ.

ವೆಂಕಟೇಶ್ ಪರಿಣೀತಾಳನ್ನು ನೆನಪು ಮಾಡಿಕೊಂಡರೆ ಪ್ರೀತಿ, ಪ್ರೇಮ, ಪ್ರಣಯ ಚಲನಚಿತ್ರದ ಭಾರತಿ ಜ್ಞಾಪಕಕ್ಕೆ ಬರುತ್ತಿದ್ದದ್ದು ಒಂದು ವಿಚಿತ್ರ. ಪರಿಣೀತಾ ಈಗ ಭಾರತಿಯಾಗಿ ರೂಪಾಂತರಗೊಂಡಿರಬಹುದು ಎಂದುಕೊಂಡ. ಪರಿಣೀತಾ ಒಂದು ಕಾಲದಲ್ಲಿ ಮುದ್ದಾಗಿ ಲಂಗ ದಾವಣಿ ಹಾಕಿಕೊಂಡು ನಗುತ್ತಾ ಬರುತ್ತಿದ್ದದ್ದನ್ನು ಜ್ಞಾಪಕ ಮಾಡಿಕೊಂಡ. ಅವಳ ಪ್ರೌಢಶಾಲೆಯ ಮುಂದೆ ಸಮವಸ್ತ್ರ ಧರಿಸಿ ನಿಲ್ಲುತ್ತಿದ್ದ ಪರಿಣೀತಾ ಜ್ಞಾಪಕಕ್ಕೆ ಬಂದಳು. ಆ ನೆನಪುಗಳೇ ಅವರನ್ನು ಅವ್ಯಕ್ತ ಆನಂದದಿಂದ ಪುಳಕಿತಗೊಳಿಸಿದವು. ಅಲ್ಲಿಯವರೆಗೂ ಏನನ್ನೋ ಯೋಚಿಸುತ್ತಿದ್ದ ಮಂಜುನಾಥ "ವೆಂಕಟೇಶಣ್ಣ, ಆವಮ್ಮ ನಿನಗೆ ಗೊತ್ತಾ ಅಣ್ಣ?" ಎಂದು ಆಶ್ಚರ್ಯವಾಗಿ ಪ್ರಶ್ನಿಸಿದ. "ಆವಮ್ಮ ಯಾವುದೋ ಗಂಧರ್ವಲೋಕದಿಂದ ಇಳಿದು ಬಂದಿರುವುದು! ಇಲ್ಲಿಯ ಹೆಂಗಸಲ್ಲ ಅಣ್ಣ" ಎಂದು ವಿಚಿತ್ರವಾಗಿ ಮಾತನಾಡುತ್ತಿದ್ದ. ಅಷ್ಟರಲ್ಲಿ ಮಂಜುನಾಥನಿಗೆ ಯಾರೋ ಪರಿಚಿತನೊಬ್ಬ ಇಲ್ಲೇ ಸ್ವಲ್ಪ ಕೆಲಸವಿದೆ ಎಂದು ಕರೆದುಕೊಂಡು ಹೋದ. ಮಂಜುನಾಥ, "ಅಣ್ಣ ಇಲ್ಲಿಯೇ ಕುಳಿತಿರು ಹತ್ತು ನಿಮಿಷ" ಎಂದು ಹೋದವನು ಅರ್ಧ ಗಂಟೆಯಾದರೂ ಬರಲಿಲ್ಲ. ವೆಂಕಟೇಶ ಭಾರತಿಯಾಗಿ ರೂಪಾಂತರಗೊಂಡ ಪರಿಣೀತಾಳ ಬರುವಿಕೆಗೆ ಕಾಯುತ್ತಿದ್ದ. ಅಷ್ಟರಲ್ಲಿ ಸುಮಾರು ಮೂವತ್ತರ ಆಸುಪಾಸಿನ ಮೂವರು ಸುಂದರ ಮಹಿಳೆಯರು, ಅವರ ಜೊತೆ ಏಳೆಂಟು ವರ್ಷದವರಿರಬಹುದಾದ ಇಬ್ಬರು ಚಿಕ್ಕ ಹುಡುಗಿಯರು ಓಡಿ ಜಾಗ್ ಮಾಡುತ್ತಿದ್ದರು. ಅವರು ಅಮೆರಿಕಾದಲ್ಲಿ ಅತ್ಯಾಧುನಿಕ ತುಂಡು ಉಡುಪನ್ನು ಧರಿಸಿ ಜಾಗ್ ಮಾಡುವ ಹುಡುಗಿಯರ ಹಾಗೆ ಓಡುತ್ತಿದ್ದರು. ವೆಂಕಟೇಶ್ ಅವರ ಕಡೆ ಹೆಚ್ಚು ಗಮನ ಹರಿಸಲಿಲ್ಲ. ಆದರೂ ಅವರಲ್ಲಿ ಒಬ್ಬ ಮಹಿಳೆ

ಸ್ವಲ್ಪ ವಯಸ್ಸಾಗಿರುವ ಹಾಗೆ ಕಂಡಳು. ವೆಂಕಟೇಶ್ ಅವರ ಬಗ್ಗೆ ಹೆಚ್ಚು ಯೋಚಿಸದೆ ಪರಿಣೀತಾಳ ಬರುವಿಕೆಗೆ ಕಾಯುತ್ತಿದ್ದರು. ಸುಮಾರು ಅರ್ಧ ಗಂಟೆ ಕಾದರೂ ಇತ್ತ ಪರಿಣೀತಾಳೂ ಬರಲಿಲ್ಲ. ಅತ್ತ ಮಂಜುನಾಥನೂ ಬರಲಿಲ್ಲ. ಅಷ್ಟರಲ್ಲಿ ಅತ್ಯಾಧುನಿಕ ಉಡುಗೆಯ ಮಹಿಳೆಯರು ಸರೋವರದ ಸುತ್ತಾ ಮೂರು ಸುತ್ತು ಓಡಿ ಬಂದು ವೆಂಕಟೇಶ್ ಕುಳಿತ ಜಾಗದ ಎದುರಿಗಿದ್ದ ಹಾಸುಕಲ್ಲಿನ ಬೆಂಚಿನ ಮೇಲೆ ದಣಿವಾರಿಸಿಕೊಳ್ಳಲು ಕುಳಿತುಕೊಂಡರು.

ವೆಂಕಟೇಶ್ ಈಗ ಆ ಮಹಿಳೆಯರ ಮುಖವನ್ನು ನೇರವಾಗಿ ನೋಡಿದರು. ಆ ವಯಸ್ಸಾಗಿರುವ ಮಹಿಳೆಯ ಮುಖ ಯಾವುದೋ ಪರಿಚಿತ ಮುಖ ಇದ್ದ ಹಾಗೆ ಇದೆಯಲ್ಲ ಎಂದು ಯೋಚಿಸುತ್ತಿದ್ದ. ಅಷ್ಟರಲ್ಲಿ ಆ ಮಹಿಳೆ ಇವನನ್ನು ನೋಡಿ ನಗುತ್ತಾ ಕೈ ಮಾಡುತ್ತಾ ಹತ್ತಿರ ಬಂದು “ಆರ್ ಯು ಮಿಸ್ಟರ್ ವೆಂಕಟೇಶ್?” ಎಂದು ಕೇಳಿದಳು. ಒಂದು ಕಾಲದ ಸೋಮನಹಳ್ಳಿಯಲ್ಲಿ ಇಷ್ಟೊಂದು ಚೆನ್ನಾಗಿ ಇಂಗ್ಲಿಷ್ ಮಾತನಾಡುವವರು ಯಾರಿರಬಹುದು? ಎಂದು ವೆಂಕಟೇಶ್ ಯೋಚಿಸುವಷ್ಟರಲ್ಲಿ “ಐ ಆಮ್ ಪರಿಣೀತಾ ರಾಜಶೇಖರ್” ಎಂದು ತನ್ನ ಹೆಸರಿನ ಜೊತೆ ತನ್ನ ಗಂಡನ ಹೆಸರನ್ನೂ ಸೇರಿಸಿ ಹಳೆಯ ನೆನಪುಗಳಿಗೆ ಬೆಂಕಿಯನ್ನು ಸುರಿದಳು. ವೆಂಕಟೇಶ್ ಆಶ್ಚರ್ಯಕರವಾಗಿ ಯೋಚಿಸುತ್ತಾ ಅವಳ ಕಡೆ ಕೈಕುಲುಕಲು ಕೈ ಮುಂದೆ ಮಾಡಿದಾಗ ಅವಳು ಕೈಯನ್ನೇನೋ ಕೊಟ್ಟಳು. ಹಾಗೇ ಅಮೆರಿಕನ್ನರ ಹಾಗೆ ತಬ್ಬಿಕೊಂಡಳು ಕೂಡ. ಅವಳ ಅಪ್ಪುಗೆಯಿಂದ ನಲವತ್ತು ವರ್ಷ ಅಮೆರಿಕಾದಲ್ಲಿದ್ದ ವೆಂಕಟೇಶ್ ವಿಚಲಿತನಾಗಿ ಎದುರಿಗಿದ್ದ ಅವಳ ಮಕ್ಕಳು ಏನಂದುಕೊಂಡಾರು ಎಂದು ಹಿಂದೆ ಸರಿದ. ವೆಂಕಟೇಶ್ ಸ್ವಲ್ಪ ಏನನ್ನೋ ಯೋಚಿಸುತ್ತಾ ಇವಳು ಅದೇ ಪರಿಣೀತಾಳೆ ಎಂದು ತನ್ನ ಕಣ್ಣುಗಳನ್ನು ತಾನೇ ನಂಬದಾದ. ಅಷ್ಟರಲ್ಲಿ ಪರಿಣೀತಾ ತನ್ನ ಇಬ್ಬರು ಅವಳಿ ಹೆಣ್ಣು ಮಕ್ಕಳಿಗೆ ಮತ್ತು ಮೊಮ್ಮಕ್ಕಳಿಗೂ ವೆಂಕಟೇಶನ ಪರಿಚಯ ಮಾಡಿಸಿದಳು. ಆ ಹುಡುಗಿಯರು ಯಾವುದೇ ಮುಜುಗರ ಇಲ್ಲದೆ ವೆಂಕಟೇಶ್ ಅವರನ್ನು ಅಪ್ಪಿಕೊಂಡು ಪರಿಚಯ ಮಾಡಿಕೊಂಡರು. ವೆಂಕಟೇಶ್ ಅವರಿಗೆ ಪರಿಣೀತಾ ಆ ದಿನವೇ ಮನೆಗೆ ಕರೆದುಕೊಂಡು ಹೋದಳು. ಪರಿಣೀತಾ ಭಾರತಿಯಾಗಿ ರೂಪಾಂತರವಾಗಿರಬಹುದು ಎಂದು ಅಂದುಕೊಂಡಿದ್ದ ಅವರಿಗೆ, ಇವಳು ಮೂನ್ ಮೂನ್ ಸೇನ್ ಆಗಿ ಬದಲಾಗಿರುವುದನ್ನು ಕಂಡು ಹೃದಯ ಒಡೆದು ಚೂರಾಯಿತು.

* * *

ವೆಂಕಟೇಶ್ ಅಮೆರಿಕಾದಲ್ಲಿ ತನ್ನ ಹೆಂಡತಿ ಶ್ಯಾಮಲ ಮತ್ತು ಮಗಳು ಸಾಗರಿಕಾ ತಮ್ಮ ಉಡುಗೆ ತೊಡುಗೆಯಲ್ಲಿ ಸ್ವಲ್ಪ ಅತೀ ಎನಿಸಿದರೂ ಕೋಪಗೊಳ್ಳುತ್ತಿದ್ದರು. ಮಗಳು ಅಮೆರಿಕಾದಲ್ಲಿ ಜನಿಸಿರುವ ಹುಡುಗಿ, ಹಾಳು ಬಿದ್ದುಹೋಗಲಿ ಎಂದು ಬಿಟ್ಟಿದ್ದರು.

ಆದರೆ, ಶ್ಯಾಮಲಳಿಗೆ ಮಾತ್ರ ಉಡುಗೆಯಲ್ಲಿ ತೊಡುಗೆಯಲ್ಲಿ ದೇಹ ಸರಿಯಾಗಿ ಮುಚ್ಚುವ ಹಾಗೆ ನಿರ್ಬಂಧ ಹಾಕಿದ್ದರು. ಅಷ್ಟೇ ಅಲ್ಲದೇ ಶ್ಯಾಮಲ ಸತ್ಯನಾರಾಯಣ ಪೂಜೆ, ವರಮಹಾಲಕ್ಷ್ಮೀ ವ್ರತ, ಸಂಕಷ್ಟಹರ ಗಣೇಶ ವ್ರತ, ಹಿಂದೂ ಟೆಂಪಲ್ಲಿನ ಪಾರಾಯಣ, ಹರಿಕಥೆ, ಸಾಯಿ ಭಜನೆ, ಅದು–ಇದು ಎಂದು ಸದಾ ಅವುಗಳಲ್ಲಿಯೇ ತನ್ನ ಅಮೆರಿಕಾದ ಜೀವನವನ್ನು ಸಾಗಿಸಿದ್ದಳು. ಪ್ರತಿ ಸೋಮವಾರ ಶಿವನಿಗೆ, ಶನಿವಾರ ವೆಂಕಟೇಶ್ವರ ದೇವಸ್ಥಾನಕ್ಕೆ ಹೋಗಿ ಪೂಜೆ ಮಾಡಿಸುತ್ತಿದ್ದರು. ಅಷ್ಟೇ ಅಲ್ಲದೇ ತಾನು ಓದಿರುವ ಪುಸ್ತಕಗಳಲ್ಲಿ ಶೇಕಡ ಒಂದರಷ್ಟಾದರೂ ಓದು ಎಂದು ಹೆಂಡತಿಗೆ ಸದಾ ಒತ್ತಾಯಿಸುತ್ತಿದ್ದರು. ನನ್ನ ಹಾಗೆ ಲೋಕ ಜ್ಞಾನ ಸಂಪಾದಿಸು, ಹಳ್ಳಿ ಗಮಾರಿಯ ಹಾಗೆ ಇರಬೇಡ ಎಂದು ಸದಾ ಪೀಡಿಸುತ್ತಿದ್ದರು. ಇದು ಅವರೀರ್ವರ ಮಧ್ಯ ಕಂದಕ ನಿರ್ಮಾಣವಾಗಲು ಕಾರಣವಾಗಿತ್ತು. ಆದರೂ, ಹೆಂಡತಿ ಶ್ಯಾಮಲ ಸಮಾಧಾನ ಚಿತ್ತದಿಂದ ಸಂಸಾರ ನೌಕೆಯನ್ನು ಸಾಗಿಸಿದ್ದರು.

ವೆಂಕಟೇಶ್ ಸ್ವಲ್ಪ ದಿನದ ಮಟ್ಟಿಗೆ ಭಾರತಕ್ಕೆ ಹೋದ ಮೇಲೆ ಶ್ಯಾಮಲಾ ಮನೋಶಾಸ್ತ್ರಜ್ಞೆಯಾಗಿದ್ದ ತನ್ನ ಸ್ನೇಹಿತೆ ಮೀರಾಳ ಸಹಾಯದಿಂದ ತನ್ನ ಗಂಡನ ಸಮಸ್ಯೆಯ ಬಗ್ಗೆ ಸ್ವಲ್ಪ ಮಾಹಿತಿಯನ್ನು ಪಡೆದರು. ತಕ್ಷಣ ಅವರ ರಹಸ್ಯ ಪೆಟ್ಟಿಗೆಯನ್ನೆಲ್ಲಾ ಜಾಲಾಡಿ ಒಂದು ಹಳೆಯ ದಿನಚರಿಯನ್ನು ಹುಡುಕಿ ತೆಗೆದಾಗ ಅಲ್ಲಿದ್ದ ಅವರ ಗತಕಾಲದ ರಹಸ್ಯ ಭಗ್ನಪ್ರೇಮದ ಬಗ್ಗೆ ತಿಳಿಯಿತು. ಅವರಿಬ್ಬರೂ ಮಾವಿನ ಮರ ಮತ್ತು ಕೋಗಿಲೆಯನ್ನು ತುಂಬಾ ಇಷ್ಟಪಡುತ್ತಿದ್ದರು ಎಂದು ಕೂಡ ತಿಳಿಯಿತು. ಅದಕ್ಕಾಗಿಯೇ ತನ್ನ ಗಂಡ ರಾತ್ರಿ ಸಮಯದಲ್ಲಿ ಕೋಗಿಲೆ ಕೋಗಿಲೆ ಎಂದು ಕನವರಿಸುತ್ತಿದ್ದದ್ದು ಎಂಬುದು ಕೂಡ ಶ್ಯಾಮಲ ಅವರ ಅರಿವಿಗೆ ಬಂತು. ಆ ಪರಿಣೀತಾ ಇಷ್ಟಪಡುತ್ತಿದ್ದ ಲಂಗ ದಾವಣಿ, ಅವಳು ಹಾಕುತ್ತಿದ್ದ ಜಡೆಯ ಶೈಲಿ, ತುಂಬಾ ಇಷ್ಟವಾದ ಬಣ್ಣ, ಅವರು ಇಷ್ಟಪಡುತ್ತಿದ್ದ "ಮಾಮರವೆಲ್ಲೋ ಕೋಗಿಲೆ ಎಲ್ಲೋ ಏನೀ ಸ್ನೇಹ ಸಂಬಂಧ ಎಲ್ಲಿಯದು ಈ ಅನುಬಂಧ" ಎಂಬ ಹಾಡಿನ ಬಗ್ಗೆ ಕೂಡ ತಿಳಿದುಕೊಂಡರು. ಅದನ್ನು ತನ್ನ ಮಗಳಿಗೂ ಕೂಡ ತಿಳಿಸಿದಳು. ಅಂದಿನಿಂದ ಆ ಪರಿಣೀತಾಳೆ ತನ್ನ ಮೇಲೆ ಪರಕಾಯ ಪ್ರವೇಶ ಮಾಡಿರುವ ಹಾಗೆ ಶ್ಯಾಮಲ ಆ ವಯಸ್ಸಿನಲ್ಲಿಯೂ ಬದಲಾದರು.

ಶ್ಯಾಮಲ ಹಿಂದೆ ಭಾರತಕ್ಕೆ ಹೋದಾಗ ಸಾಹಿತ್ಯ ಸಮ್ಮೇಳನ ಒಂದರಿಂದ ತಂದಿದ್ದ ಅಲ್ಲಮಪ್ರಭುವಿನ ವಚನವೊಂದರ ಚಿತ್ರವನ್ನು ಮತ್ತು ಮಾವಿನ ಮರದ ಕೆಳಗೆ ಕುಳಿತು ಧ್ಯಾನ ಮಾಡುತ್ತಿರುವ ಅಲ್ಲಮಪ್ರಭುವಿನ ಪ್ರತಿಮೆಯನ್ನು ತನ್ನ ಮನೆಯ ನಡುಮನೆಯ ತೋರುಗೂಡಿನಲ್ಲಿ ಎದ್ದು ಕಾಣುವ ಹಾಗೆ ಇಟ್ಟರು. ಆ ಮಾವಿನ ಮರದ ಮೇಲೆ ಕೋಗಿಲೆಯೊಂದು ಕುಳಿತಿತ್ತು.

ಪೂರ್ವ ಕರಾವಳಿಯ ರಿಚ್ಮಂಡಿಗೆ ಬಂದಾಗ ತನ್ನ ಅಮ್ಮನ ವೇಷ ಭೂಷಣದಲ್ಲಿ ಆಗಿರುವ ಮಹತ್ತರವಾದ ಬದಲಾವಣೆಯನ್ನು ಕಂಡ ಸಾಗರಿಕಾಳಿಗೆ ಆಶ್ಚರ್ಯ ಮತ್ತು

ಸಂತೋಷ ಎರಡು ಒಟ್ಟೊಟ್ಟಿಗೆ ಆಗಿತ್ತು. ಅವಳಿಗೆ ಅದು ತಮ್ಮ ಸಂಸಾರದಲ್ಲಿ ಮಹತ್ತರವಾದ ಬದಲಾವಣೆ ತರಬಹುದು ಎಂದು ಅನಿಸಿತು.

* * *

ವೆಂಕಟೇಶ್ ಅವರು ಪರಿಣೀತಾಳ ಮನೆಗೆ ಹೋದಾಗ ಅವಳ ಗಂಡ ರಾಜಶೇಖರ್ ಯಾವುದೋ ಕಾರ್ಯ ನಿಮಿತ್ತ ಯೂರೋಪಿಗೆ ಹೋಗಿದ್ದರು ಎಂದು ತಿಳಿದುಬಂತು. ಮನೆ ಕೂಡ ಅತ್ಯಾಧುನಿಕ ಉಪಕರಣಗಳಿಂದ ಸುಂದರವಾಗಿ ಅಲಂಕರಿಸಲ್ಪಟ್ಟಿತ್ತು. ಎಲ್ಲೆಲ್ಲೂ ರಾಜ ರವಿವರ್ಮ ಬರೆದ ಚಿತ್ರಕಲೆಗಳಿಂದ ಅಲಂಕರಿಸಲ್ಪಟ್ಟಿತ್ತು. ಮನೆಯ ಮಧ್ಯದಲ್ಲಿ ಸುಂದರವಾದ ಕಾರಂಜಿಯಿತ್ತು. ಅದಕ್ಕೆ ಸ್ವಲ್ಪ ದೂರದಲ್ಲಿಯೇ ಒಂದು ಚಿಕ್ಕ ಕೃತಕ ಜಲಪಾತ ಕೂಡ ನಿರ್ಮಾಣವಾಗಿತ್ತು. ಅವಳ ಅಳಿಯಂದಿರಿಬ್ಬರೂ ಗೋವಾದ ಪೋರ್ಚುಗೀಸ್ ಮೂಲದ ಹುಡುಗರು ಎಂದು ಅವಳೇ ತಿಳಿಸಿದಳು. ಜೊತೆಗೆ ಸಂಜೆ ಟೀ ಕುಡಿಯುವ ವೇಳೆಗೆ ದೊಡ್ಡ ವೋಡ್ಕಾದ ಬಾಟಲಿಯೊಂದನ್ನು ತಂದು ವೆಂಕಟೇಶ್ ಅವರ ಮುಂದಿಟ್ಟಳು. ವೆಂಕಟೇಶ್ ಆಲ್ಕೋಹಾಲ್ ಬಾಟಲಿ ನೋಡಿ ದಂಗಾದರು. ಅವರು ನಲವತ್ತು ವರ್ಷದಿಂದ ಅಮೇರಿಕಾದಲ್ಲಿದ್ದರೂ ಒಮ್ಮೆ ಮಾತ್ರ ವಿಮಾನದಲ್ಲಿ ರೆಡ್ ವೈನ್ ಕುಡಿದಿರುವುದನ್ನು ಬಿಟ್ಟರೆ ಎಂದೂ ಆಲ್ಕೋಹಾಲ್ ಮುಟ್ಟಿದವರಲ್ಲ. ವೆಂಕಟೇಶ್ ಅವರು ನೋಡ ನೋಡುತ್ತಿದ್ದಂತೆಯೇ ಪರಿಣೀತಾ ಅರ್ಧ ಬಾಟಲಿಯನ್ನು ಖಾಲಿ ಮಾಡಿದಳು. ಅದೇ ಸಮಯಕ್ಕೆ ಅವಳ ಮೊಮ್ಮಗಳು ರೋಮಿ ಬಂದು "ಅಂಕಲ್ ನೀವು ಅಮೆರಿಕಾದಿಂದ ಬಂದಿರುವುದ? ನಿಮ್ಮನ್ನು ನೋಡಿದರೆ ನೀವು ಸೋಮನಹಳ್ಳಿಯವರು ಅಂದುಕೊಂಡಿದ್ದೆ" ಎಂದು ಹೇಳಿದಳು. ಅದಕ್ಕೆ ಅವನು ಹೌದು, ನಾನು ಸೋಮನಹಳ್ಳಿಯವನೇ ಆದರೆ, ನಲವತ್ತು ವರ್ಷದಿಂದ ಅಮೆರಿಕಾದಲ್ಲಿಯೇ ನೆಲೆಸಿದ್ದೇನೆ ಎಂದು ಹೇಳಿದರು. ಆ ಹುಡುಗಿ ಮತ್ತೇನೋ ಅಂದುಕೊಂಡು ಮಹಡಿಯ ಮೇಲೆ ಹೋದಳು. ಅಷ್ಟರಲ್ಲಿ ಪರಿಣೀತಾ ಬ್ರಾಂಡೆಡ್ ಅಂಡ್ ಸೆಂಟೆಡ್ ಸಿಗರೇಟ್ ಪ್ಯಾಕ್ ಒಂದನ್ನು ತೆಗೆದು ಸಿಗರೇಟ್ ಒಂದನ್ನು ಇವನ ಮುಂದೆ ಹಿಡಿದಳು. ಇವರು ಹೌಹಾರಿ "ನೋ ಥ್ಯಾಂಕ್ಸ್" ಎಂದು ಹೇಳಿ ಹಿಂದೆ ಸೋಫಾಗೆ ಒರಗಿ ಕುಳಿತರು. ಅವಳು ಇವರನ್ನು ನೀನೇನು ಅಮೆರಿಕಾದಲ್ಲಿದ್ದೀಯೋ ಅಥವಾ ಇಲ್ಲೇ ಯಾವುದೋ ಹಳ್ಳಿಯಲ್ಲಿದ್ದೆಯೋ? ಎಂದು ಛೇಡಿಸಿದಳು. "ಹೌದು, ನನಗೂ ಹಾಗೆ ಅನಿಸುತ್ತಿದೆ, ನೀನು ಒಂದು ಕಾಲದಲ್ಲಿ ಸೋಮನಹಳ್ಳಿಯಾಗಿದ್ದ ಹಳ್ಳಿಯ ಜಾಗದಲ್ಲಿದ್ದೀಯೋ ಅಥವಾ ಅಮೆರಿಕಾದಲ್ಲಿದ್ದೀಯೋ? ಎಂದು ನಾನು ಯೋಚಿಸುತ್ತಿದ್ದೇನೆ" ಎಂದು ಹೇಳಿದ. ಹಾಗೆ ಸಂಭಾಷಣೆ ಸಾಗುತಿತ್ತು. ಅವಳ ಹೆಣ್ಣು ಮಕ್ಕಳು ವಿವಿಧ ಬಗೆಯ ಮಾಂಸದ ಖಾದ್ಯವನ್ನು ತಂದು ಅವರ ಮುಂದಿಟ್ಟರು. ಅಮೆರಿಕಾಗೆ ಹೋದ ಮೇಲೆ ಎಲ್ಲಾ ರೀತಿಯ ಮಾಂಸಾಹಾರದ ಅಭ್ಯಾಸ ವೆಂಕಟೇಶ್ ಅವರಿಗೆ ಇದ್ದದ್ದರಿಂದ ಸುಲಭವಾಗಿ ಕೆಲವನ್ನು ತಿಂದು ಮುಗಿಸಿದರು.

ಪರಿಣೀತಾ ಇನ್ನೊಂದು ಬಾಟಲಿಯನ್ನು ಖಾಲಿ ಮಾಡುತ್ತಿದ್ದಳು. ಆಗಲೇ ಅತಿಯಾಗಿ ಏನೇನೋ ಮಾತನಾಡುತ್ತಿದ್ದಳು. "ನಾನು ನಿನಗೆ ಮೋಸ ಮಾಡಿದೆ ವೆಂಕಟೇಶ್, ನನ್ನ ಗಂಡ ನನಗೆ ಮೋಸ ಮಾಡಿದ" ಎಂದು ಗೊಣಗುತ್ತಿದ್ದಳು. ವೆಂಕಟೇಶ್ ಅವರು "ನಾಳೆ ಮತ್ತೆ ಬರುತ್ತೇನೆ" ಎಂದು ಅವಳ ಹೆಣ್ಣು ಮಕ್ಕಳಿಗೆ ಪರಿಣೀತಾಳನ್ನು ಮಲಗಿಸಲು ಹೇಳಿ ಮಂಜುನಾಥನ ಮನೆಗೆ ಹೊರಟು ನಿಂತರು.

ಮಂಜುನಾಥ ಆಗಲೇ ಇವರಿಗಾಗಿ ಕಾದು ಕಾದು ಊಟ ಮಾಡುತ್ತಿದ್ದ. ಮಂಜುನಾಥನ ಹೆಂಡತಿ ಗಿರಿಜಾ ವೆಂಕಟೇಶ್ ಅವರಿಗೆ ಊಟಕ್ಕೆ ಒತ್ತಾಯ ಮಾಡಿದಳು. ಇವರು, "ನಾನು ಈಗಾಗಲೇ ಪರಿಣೀತಾಳ ಮನೆಯಲ್ಲಿ ಊಟ ಮಾಡಿದ್ದೇನೆ" ಎಂದು ಹೇಳಿ ಮಲಗಲು ರೂಮಿಗೆ ಹೋಗಿ ಹಾಸಿಗೆ ಮೇಲೆ ಮೈಚಾಚಿದರು. ಮಂಜುನಾಥ ಊಟ ಮುಗಿಸಿ ಇವರ ರೂಮಿಗೆ ಬಂದು "ಏನಣ್ಣ? ಆವಮ್ಮ ಸರಿಯಿಲ್ಲ, ಅವಳ ಕ್ಯಾರೆಕ್ಟರ್ ಸರಿ ಇಲ್ಲಾ ಅಂತ ಇಲ್ಲಿ ಎಲ್ಲರೂ ಮಾತನಾಡಿಕೊಳ್ಳುತ್ತಾರೆ" ಎಂದು ವಿಚಿತ್ರವಾಗಿ ಅವಳ ನಡತೆಯ ಬಗ್ಗೆ ಸರ್ಟಿಫಿಕೇಟ್ ಕೊಟ್ಟೇಬಿಟ್ಟ. ವೆಂಕಟೇಶ್ ಅವರಿಗೆ ಅದನ್ನು ಕೇಳಿಸಿಕೊಳ್ಳುವಷ್ಟು ವ್ಯವಧಾನವಾಗಲಿ, ಆಸಕ್ತಿಯಾಗಲಿ ಇರಲಿಲ್ಲ. ನಿದ್ರೆ ಬರುತ್ತಿದೆ ಎಂದು ಹೇಳಿ ಮಂಜುನಾಥನಿಗೆ ಮಲಗಲು ಹೇಳಿ ತಾವು ಮಲಗಿಕೊಂಡರು.

ಮರುದಿನ ಬೆಳಿಗ್ಗೆ ಸುಮಾರು ಹನ್ನೊಂದು ಗಂಟೆಯ ಸಮಯಕ್ಕೆ ಪರಿಣೀತಾಳೇ ವೆಂಕಟೇಶ್ ಅವರನ್ನು ಹುಡುಕಿಕೊಂಡು ಮಂಜುನಾಥನ ಮನೆಗೆ ಬಂದು ಅವರನ್ನು ತನ್ನ ಮನೆಗೆ ಕರೆದುಕೊಂಡು ಹೋದಳು. ಅವಳ ಹೆಣ್ಣು ಮಕ್ಕಳು, ಮೊಮ್ಮಕ್ಕಳು ವಾರದ ಮಟ್ಟಿಗೆ ಬೆಂಗಳೂರಿಗೆ ಹೋಗಿದ್ದರು. ಮನೆಯಲ್ಲಿ ಅವಳು ಒಬ್ಬಳೇ ಇದ್ದರೂ ಅಡುಗೆಯವರಿಂದ ಹಿಡಿದು ಎಲ್ಲಾ ಕೆಲಸಗಳಿಗೂ ಆಳುಗಳಿದ್ದರು. ವೆಂಕಟೇಶ್ ಅವರಿಗೆ ಸ್ವಲ್ಪ ತಂಪಾಗಿ ಫ್ರೂಟ್ ಜ್ಯೂಸು ಕೊಟ್ಟು ಅವರು ಕುಡಿದಾದ ಮೇಲೆ ಕೆಲವು ಸ್ವಿಮ್ಮಿಂಗ್ ಬಟ್ಟೆಗಳನ್ನು ಕೊಟ್ಟು ತಾನು ಸ್ವಿಮ್ಮಿಂಗ್ ಡ್ರೆಸ್ ಧರಿಸಿ ಮನೆಯ ಹಿಂದೆ ಇದ್ದ ಸುಂದರವಾದ ಈಜುಕೊಳಕ್ಕೆ ಕರೆದುಕೊಂಡು ಹೋಗಿ ತಾನೇ ಮೊದಲು ನೀರಿಗೆ ಧುಮುಕಿದಳು. ಆಮೇಲೆ ಅವರಿಗೂ ಧುಮುಕಲು ಹೇಳಿದಳು. ಅವರಿಗೆ ಅಮೆರಿಕಾದಲ್ಲಿ ಅಪರಿಚಿತ ಮಹಿಳೆಯರ ಜೊತೆ ಈಜುಕೊಳದಲ್ಲಿ ಈಜಿರುವ ಅನುಭವವಿದ್ದರೂ ಕೂಡ ಇಂದು ಪರಿಣೀತಾಳ ಜೊತೆ ಈಜುಕೊಳದಲ್ಲಿರುವುದು ಏನೋ ಸಂಕೋಚ ಮೂಡಿಸಿತ್ತು. ಅವಳೇ ಇವರ ಹತ್ತಿರ ಬಂದು ಮುಕ್ತವಾಗಿ ಈಜುತ್ತಿದ್ದಳು. ಇವರಿಗೆ ಅವಳ ಮನಸಿನಲ್ಲಿನ ಭಾವನೆ ಅರ್ಥಮಾಡಿಕೊಳ್ಳಲು ತುಂಬಾ ಸಮಯ ಬೇಕಾಗಲಿಲ್ಲ. ಅದು ಅವರಲ್ಲಿಯೂ ಏನೋ ವಿಚಿತ್ರ ಭಾವನೆ ಮೂಡಿಸುತಿತ್ತು. ಅವರು ದೂರ ಹೋದಷ್ಟು ಅವಳು ಹತ್ತಿರ ಬರುತ್ತಿದ್ದಳು. ಅವಳ ದೇಹ ಏನನ್ನೋ ಕಳೆದುಕೊಂಡಿರುವ ಹಾಗೆ ಅವರಿಗೆ ಅನಿಸಿತು. ಆದ್ದರಿಂದ ಅವರಿಗೆ ಅದು ಒಂದು ರೀತಿಯ ಅಸಹ್ಯ ಮೂಡಿಸಿತ್ತು.

ಸ್ನಾನ ಮುಗಿದ ಮೇಲೆ ಪರಿಣೀತಾ ವೆಂಕಟೇಶ್ ಅವರನ್ನು ತನ್ನ ಬೆಡ್ ರೂಮಿಗೆ ಕರೆದುಕೊಂಡು ಹೋದಳು. ಅಲ್ಲಿ "ನನ್ನ ಗಂಡ ಒಬ್ಬ ಷಂಡ. ಅವನಿಗೆ ಬೇರೆ ಗಂಡಸರ ಜೊತೆ ಸಂಬಂಧವಿದೆ. ನನ್ನ ಹೆಣ್ಣು ಮಕ್ಕಳ ತಂದೆ ಅವನಲ್ಲ" ಎಂದು ಏನೇನೋ ಹೇಳುತ್ತಿದ್ದಳು. ಜೊತೆಗೆ ನನಗೆ ಹಲವಾರು ಗಂಡಸರ ಜೊತೆ ಸಂಬಂಧವಿತ್ತು. ಆದರೆ, ನಿನ್ನ ಜೊತೆ ಮಾತ್ರ ಸಾಧ್ಯವಾಗಲಿಲ್ಲ" ಎಂದು ನೇರವಾಗಿಯೇ ವೆಂಕಟೇಶ್ ಅವರಿಗೆ ಹೇಳಿದಳು. ಇವರಿಗೆ ಅವಳ ಮಾತುಗಳೆಲ್ಲಾ ತುಂಬಾ ವಿಚಿತ್ರವೆನಿಸಿತು. ಅರವತ್ತು ದಾಟಿದ ಹೆಣ್ಣಿಗೆ ದೇಹದಲ್ಲಿ ಏನಿರುತ್ತದೆ? ಎಂದು ತಾವೇ ಯೋಚಿಸುತ್ತಿದ್ದರು. ಪರಿಣೀತಾ ಆತುರದಲ್ಲಿ ಟಿವಿಯನ್ನು ಸ್ವಿಚ್ ಆನ್ ಮಾಡಿದರು. ಆ ಟಿವಿಯಲ್ಲಿ ಯಾವುದೋ ಚಲನಚಿತ್ರ ಬರುತಿತ್ತು. ಎಲ್ಲಾ ಚಿತ್ರಗಳು ನೀಲಿ ನೀಲಿಯಾಗಿ ಕಾಣುತ್ತಿದ್ದವು. ಅಷ್ಟರಲ್ಲಿ ಪರಿಣೀತಾ ಮತ್ತೆ ಇವರನ್ನು ತಬ್ಬಿ ಹಿಡಿದು ಹಾಸಿಗೆಯ ಮೇಲೆ ಬರಸೆಳೆದಳು. ಆದರೆ, ವೆಂಕಟೇಶ್ ಅವರಿಗೆ ತಾನು ಯಾವುದೋ ರಾಕ್ಷಸಿಯ ಬಾಹುಬಂಧನದಲ್ಲಿ ಬಂಧಿಯಾಗಿರುವ ಹಾಗೆ ಅನಿಸಿತು. ಅದು ಕವಿ ಅಡಿಗರ "ಹೂವು ಹಾಸಿಗೆ ಚಂದ್ರ ಚಂದನ ಬಾಹುಬಂಧನ ಚುಂಬನ"ವಾಗಿರದೆ ಮುಳ್ಳು ಹಾಸಿಗೆಯಾಗಿತ್ತು. ತಕ್ಷಣವೇ ವೆಂಕಟೇಶ್ ಅವರು ಪರಿಣೀತಾಳನ್ನು ಹಿಂದಕ್ಕೆ ತಳ್ಳಿದರು. ಅವಳು ಕೆಳಗೆ ಬಿದ್ದಳು. ಅವಳ ಆಗಿನ ಮುಖ ಗಾಯಗೊಂಡ ಸಿಂಹಿಣಿಯ ಮುಖವಾಗಿತ್ತು. "ನೀನು ಒಬ್ಬ ಷಂಡ ಕಣೋ. ನೋಡೋ ನಿನಗಾಗಿ ಅಷ್ಟು ವರ್ಷದಿಂದ ಕಾದಿದ್ದೇನೆ!" ಎಂದು ಮತ್ತೇನೋ ಗೊಣಗಿದಳು. ಅವಳು ಷಂಡ ಎಂದು ಕರೆದದ್ದು ವೆಂಕಟೇಶ್ ಕಿವಿಗೆ ಕಾದ ಸೀಸೆಯ ದ್ರವವನ್ನು ಸುರಿದ ಹಾಗಾಯಿತು. ಅಲ್ಲಿ ಹೆಚ್ಚು ಹೊತ್ತು ನಿಂತರೆ ಯಾವುದೋ ಘೋರ ಅಪರಾಧವಾಗುವ ಸಂಭವವಿದೆ ಎಂದು ಅರಿತ ಅವರು ತಕ್ಷಣವೇ ಅಲ್ಲಿಂದ ಜಾಗ ಖಾಲಿ ಮಾಡಿದರು.

ಅವರು ಇತ್ತೀಚೆಗೆ ಆಪ್ತಮಿತ್ರ ಎಂಬ ಚಲನಚಿತ್ರ ನೋಡಿದ್ದರು. ಅದರಲ್ಲಿನ ದುರಂತ ಪಾತ್ರ ನಾಗವಲ್ಲಿ ಅವರನ್ನು ಬಹಳವಾಗಿ ಕಾಡಿದ್ದಳು. ಆ ನಾಗವಲ್ಲಿ ಏನಾದರೂ ಇವಳ ಮೇಲೆ ಪರಕಾಯ ಪ್ರವೇಶ ಮಾಡಿರಬಹುದೇ ಎಂಬ ಅನುಮಾನ ವೆಂಕಟೇಶ್ ಅವರಿಗೆ ಕಾಡಿತು. ಆದರೂ ಮುಂದೆಂದೂ ಅವಳ ಮುಖ ನೋಡಬಾರದು ಎಂದು ನಿರ್ಧರಿಸಿದರು. ಅದಕ್ಕೆ ತಕ್ಕ ಹಾಗೆ ಮನೆಗೆ ಬಂದಾಗ ಮಂಜುನಾಥ "ಆವಮ್ಮ ಹೆಣ್ಣಲ್ಲ. ಅದೊಂದು ರಾಕ್ಷಸಿ" ಎಂದು ಉರಿಯುವ ಬೆಂಕಿಗೆ ಮತ್ತಷ್ಟೂ ತುಪ್ಪ ಸುರಿದ. ಆ ದಿನ ರಾತ್ರಿ ವೆಂಕಟೇಶ್ ಅವರಿಗೆ ನಿದ್ರೆಯೇ ಬರಲಿಲ್ಲ.

ಮರುದಿನ ವೆಂಕಟೇಶ ನರಸಿಂಹರಾಜಪುರದ ಕಡೆ ವಾಯುವಿಹಾರಕ್ಕೆ ಹೋದರು. ಚಿಕ್ಕ ರಸ್ತೆಯಾಗಿದ್ದ ಅದು ರಾಷ್ಟ್ರೀಯ ಹೆದ್ದಾರಿಯಾಗಿ ಮಾರ್ಪಾಡಾಗಿತ್ತು. ಆ ಚತುಷ್ಪಥಗಳಲ್ಲೂ ಸದಾ ವಾಹನಗಳ ಸಂದಣಿ ಹೆಚ್ಚಾಗಿತ್ತು. ರಸ್ತೆಯ ಇಕ್ಕೆಲಗಳಲ್ಲಿ ಹಿಂದೆ ಇದ್ದ ಯಾವುದೇ ಮರಗಳು ಈಗ ಇರಲಿಲ್ಲ. ಅಲ್ಲಿಯೂ ಕೂಡ ಮ್ಯಾಕ್ ಡೊನಾಲ್ಡ್,

ವಾಲ್ಮಾರ್ಟ್, ಕೆ.ಎಫ್.ಸಿ.ಗಳು ತಲೆಯೆತ್ತಿದ್ದವು. ಎತ್ತ ನೋಡಿದರತ್ತ ಕಾಂಕ್ರೀಟ್ ಕಾಡು. ಎತ್ತ ನೋಡಿದರೂ ಧೂಳು, ವಾಹನಗಳ ಹೊಗೆ. ಇದು ನಾನು ಇಷ್ಟಪಡುತ್ತಿದ್ದ ಸೋಮನಹಳ್ಳಿಯೇ? ಅಥವಾ ಅಮೆರಿಕಾವೆ ತಿಳಿಯುತ್ತಿಲ್ಲವಲ್ಲ ಎಂದು ತನಗೆ ತಾನೇ ಹೇಳಿಕೊಂಡರು. ಇಲ್ಲಿ ನನ್ನವರು ಎನ್ನುವವರು ಕೂಡ ಯಾರು ಇಲ್ಲ. ಎಲ್ಲಾ ಸತ್ತು ಹೋಗಿದ್ದಾರೆ. ಇದು ನಾನು ಇಷ್ಟಪಡುತ್ತಿದ್ದ ಸುಂದರವಾದ ಮಲೆನಾಡಿನ ಸೋಮನಹಳ್ಳಿಯಲ್ಲ. ಇಲ್ಲಿಂದ ಆದಷ್ಟೂ ಬೇಗ ಜಾಗ ಖಾಲಿ ಮಾಡಬೇಕು ಎಂದು ಯೋಚಿಸುವಷ್ಟರಲ್ಲಿ ಚತುಷ್ಪಥ ರಸ್ತೆಯ ಒಂದು ಬದಿಯಲ್ಲಿ ದೊಡ್ಡ ಎತ್ತರವಾಗಿದ್ದ ಪಾಪಸ್ಸುಕಳ್ಳಿ ಬೆಳೆದಿತ್ತು. ಅದರ ತುದಿಯಲ್ಲಿ ಕೆಂಪಾದ ಕಳ್ಳಿಯ ಹೂಗಳಿದ್ದವು. ಇವರು ನೋಡ ನೋಡುತ್ತಿದ್ದಂತೆಯೇ ಕೋಗಿಲೆಯೊಂದು ಬಂದು ಕುಳಿತು ಆ ಕಳ್ಳಿಯ ಹೂವನ್ನು ತಿನ್ನಲಾರಂಭಿಸಿತು. ಇವರು ಅದನ್ನೇ ದಿಟ್ಟಿಸಿದರು. ಅದು ಈಗ ಇಂಪಾಗಿ ಹಾಡಬಹುದೇ ಎಂದು ಯೋಚಿಸುತ್ತಿದ್ದರು. ಅಷ್ಟರಲ್ಲಿ ಅದು ಹಾಡಲು ಆರಂಭಿಸಿತು. ಅದು ಯಾವುದೋ ವಿಚಿತ್ರ ಕರ್ಕಶ ಧ್ವನಿಯಾಗಿ ಅವರ ಕಿವಿಯಲ್ಲಿ ಪ್ರತಿಧ್ವನಿಸಿತು. ಅಷ್ಟರಲ್ಲಿ ಮೇಲಿಂದ ಗಿಡುಗವೊಂದು ಬಂದು ಅದರ ಮೇಲೆರಗಿತು. ಆ ಕೋಗಿಲೆ ತಪ್ಪಿಸಿಕೊಂಡು ಮತ್ತಷ್ಟೂ ವಿಚಿತ್ರವಾಗಿ ಅರಚುತ್ತಾ ಯಾವುದೋ ಕಟ್ಟಡದ ಸಂದಿಯಲ್ಲಿ ಹಾರಿಹೋಯಿತು.

ವೆಂಕಟೇಶ್ ಇನ್ನೂ ಆ ಕೋಗಿಲೆಯ ಬಗ್ಗೆ ಯೋಚಿಸುತ್ತಾ ಮುಂದೆ ನಡೆಯುತ್ತಿದ್ದರು. ಅಷ್ಟರಲ್ಲಿ ಹಿಂದಿನಿಂದ ಮಂಜುನಾಥ್ ತನ್ನ ಹೀರೋ ಹೋಂಡದಲ್ಲಿ ಬಂದವನೇ "ಅಣ್ಣ ಬೇಗ ಬನ್ನಿ. ಏನೋ ಅನಾಹುತ ಆಗಿಹೋಗಿದೆ" ಎಂದು ಬೈಕಿನಲ್ಲಿ ಹಿಂದೆ ಕೂರಿಸಿಕೊಂಡು ಪರಿಣೀತಾ ಆತ್ಮಹತ್ಯೆ ಮಾಡಿಕೊಂಡಿರುವ ವಿಚಾರ ತಿಳಿಸಿದ. ಹಿಂದಿನ ರಾತ್ರಿ ವೆಂಕಟೇಶ್ ಅವರಿಗೆ ಒಂದು ಪತ್ರ ಬರೆದಿಟ್ಟು ನಿದ್ರೆ ಮಾತ್ರೆಗಳನ್ನು ಅತಿಯಾಗಿ ನುಂಗಿ ಕಣ್ಮುಚ್ಚಿದ್ದಳು. ವೆಂಕಟೇಶ್ ಅಲ್ಲಿಗೆ ಹೋಗುವಷ್ಟರಲ್ಲಿ ಆಗಲೇ ಅವಳ ಹೆಣ್ಣು ಮಕ್ಕಳು ಬಂದು ಅಳುತ್ತಾ ಕುಳಿತಿದ್ದರು. ಯಾರ್ಯಾರೋ ಬಂಧುಗಳು, ಅವಳ ಪರಿಚಯದವರು ಬಂದು ಅಳುತ್ತಿದ್ದರು. ಅವರನ್ನೆಲ್ಲಾ ನೋಡುತ್ತಿದ್ದರೆ ಯಾವುದೋ ಎಲೈಟ್ ಕ್ಲಾಸ್ ಜನರ ಹಾಗೆ ಕಾಣುತ್ತಿದ್ದರು. ಅದು ಅವರ ಹಾವಭಾವ, ಉಡುಗೆ, ತೊಡುಗೆ, ಅವರ ಕಾರುಗಳಲ್ಲಿ ಎದ್ದು ಕಾಣುತಿತ್ತು. ಆ ಜನರ ಮಧ್ಯದಿಂದಲೇ ಪರಿಣೀತಾಳ ಒಬ್ಬ ಮಗಳು ಬಂದು ಇವರ ಕೈಗೆ ಒಂದು ಪತ್ರವನ್ನಿಟ್ಟಳು. ಆ ಪತ್ರವನ್ನು ತೆಗೆದು ನೋಡಿದಾಗ ಕೆಲವೇ ಸಾಲುಗಳಲ್ಲಿ

"ಪ್ರೀತಿಯ ವೆಂಕಟೇಶ್,

ನಿನಗೆ ತುಂಬಾ ಮೋಸ ಮಾಡಿದೆ. ಅಷ್ಟು ವರ್ಷದ ನಂತರ ನೀನು ಸಿಕ್ಕ ಸಂತೋಷದಲ್ಲಿ ಸ್ವಲ್ಪ ದುಡುಕಿದೆ. ಜೀವನದುದ್ದಕ್ಕೂ ಮೋಸಹೋಗಿ ಸಾಕಾಗಿದೆ. ಇನ್ನು

ಹೆಚ್ಚು ಬದುಕಿ ಪ್ರಯೋಜನವಿಲ್ಲ. ಅದಕ್ಕಾಗಿ ಈ ನಿರ್ಧಾರ ತೆಗೆದುಕೊಂಡಿದ್ದೇನೆ. ನನ್ನನ್ನು ಕ್ಷಮಿಸು. ಮುಂದಿನ ಜನ್ಮದಲ್ಲಾದರೂ ನಿನ್ನನ್ನೇ ಮದುವೆಯಾಗಿ ಸುಖವಾಗಿ ಬದುಕಲು ಬಯಸುತ್ತೇನೆ.

ನಿನ್ನ ಪ್ರೀತಿಯ
ಪರಿಣೀತಾ "

ಎಂದು ಬರೆದಿತ್ತು.

"ಅಂಕಲ್, ರಾತ್ರಿ ಯಾರೋ ಮಹಿಳೆಯೊಬ್ಬರು ಅಮೇರಿಕಾದಿಂದ ಕರೆ ಮಾಡಿ ಅಮ್ಮನ ಹತ್ತಿರ ತುಂಬಾ ಹೊತ್ತಿನವರೆಗೂ ಮಾತನಾಡುತ್ತಿದ್ದರಂತೆ. ಅವರ ಬಗ್ಗೆ ನಿಮಗೇನಾದರೂ ತಿಳಿದಿದಿಯೇ?" ಎಂದು ಪರಿಣೀತಾಳ ಮಗಳು ಇವರನ್ನು ಕೇಳಿದಳು. ಇವರು ಆಶ್ಚರ್ಯದಲ್ಲಿ, ಇಲ್ಲಾ. ನನಗೆ ಹೇಗೆ ತಿಳಿಯುತ್ತದೆ. ಪರಿಣೀತಾಳ ಪರಿಚಿತರೋ ಸ್ನೇಹಿತರೋ ಯಾರೋ ಇರಬೇಕು ಎಂದು ಹೇಳಿ ಸುಮ್ಮನಾದರು. ಇವರಿಗೂ ಅದು ಯಾರಿರಬಹುದು ಎಂದು ಹೊಳೆಯಲಿಲ್ಲ.

ಆ ದಿನ ಸಂಜೆಯೇ ಸೋಮನಹಳ್ಳಿಯ ಸ್ಮಶಾನದಲ್ಲಿ ಪರಿಣೀತಾಳ ದೇಹವನ್ನು ಮಣ್ಣು ಮಾಡಿದರು. ಆ ಸ್ಮಶಾನದಲ್ಲೂ ಮಣ್ಣು ಮಾಡಲು ಒಂದಿಷ್ಟು ಜಾಗ ಕೂಡ ಇರಲಿಲ್ಲ. ಯಾವುದೋ ಮೂಲೆಯಲ್ಲಿ ಸ್ವಲ್ಪ ಜಾಗ ಹುಡುಕಿದ್ದರು. ಸ್ಮಶಾನದ ಸುತ್ತಾ ದೊಡ್ಡ ದೊಡ್ಡ ಬಿಲ್ಡರ್ಸ್‌ಗಳ ಅಪಾರ್ಟ್‌ಮೆಂಟ್ ಕಟ್ಟಡಗಳು ಮುಗಿಲೆತ್ತರಕ್ಕೆ ನಿಂತಿದ್ದವು. ವೆಂಕಟೇಶ್ ಅವರು ಕೂಡ ಮೂಲೆಯೊಂದರಲ್ಲಿ ನಿಂತು ಮಣ್ಣು ಮಾಡುವವರೆಗೂ ಇದ್ದು ವಿಷಾದ ಭಾವನೆಯಿಂದ ವಾಪಸ್ಸು ಮಂಜುನಾಥನ ಮನೆಗೆ ಬಂದು ಸ್ನಾನ ಮಾಡಿ ಊಟ ಮಾಡದೆಯೇ ಮಲಗಿದರು. ಮರುದಿನ ಸೋಮನಹಳ್ಳಿಯ ಸಹವಾಸ ಸಾಕು, ಈ ಊರಿನ ಋಣ ತೀರಿತು. ಇಂದಿಗೆ ಎಳ್ಳುನೀರು ಬಿಟ್ಟೆ ಎಂದು ಮಂಜುನಾಥನಿಗೂ ಹೇಳಿ ಬೆಂಗಳೂರಿನ ಸ್ನೇಹಿತ ರಾಜೇಶನ ಮನೆಗೆ ಹೋಗಿ ತಲುಪಿದರು. ಅಲ್ಲಿಯೂ ಒಂದು ದಿನಕ್ಕಿಂತ ಹೆಚ್ಚು ಕಾಲ ನಿಲ್ಲಲಿಕ್ಕಾಗಲಿಲ್ಲ. ಈಗ ಅವರಿಗೆ ಸೋಮನಹಳ್ಳಿ, ಶಿವಮೊಗ್ಗ, ಬೆಂಗಳೂರುಗಳ ನಡುವೆ ಯಾವುದೇ ವ್ಯತ್ಯಾಸ ತಿಳಿಯದ ಹಾಗೆ ಎಲ್ಲವೂ ಒಂದೇ ರೀತಿ ಬದಲಾಗಿದ್ದವು. ಅಮೇರಿಕಾದ ಸಂಸ್ಕೃತಿ ಅಲ್ಲಿಗಿಂತ ಇಲ್ಲಿಯೇ ಹೆಚ್ಚಾಗಿತ್ತು. ಕಾಲ ಸೋಮನಹಳ್ಳಿಯನ್ನು ಆ ರೀತಿ ಮಾಡಿದರೆ ತಾವು ವಾಸವಿದ್ದ ವರ್ಜೀನಿಯಾ ಸಂಸ್ಥಾನದಲ್ಲಿ ನಮ್ಮ ಮಲೆನಾಡಿಗಿಂತ ಹೆಚ್ಚು ಕಾಡು, ಬೆಟ್ಟಗುಡ್ಡ, ನದಿಗಳಿದ್ದವು. ಕುಡಿಯುವ ಗಾಳಿ, ನೀರು ಶುದ್ಧವಾಗಿದ್ದವು. ವೆಂಕಟೇಶ್ ಅವರಿಗೆ ಬದುಕು ಅಲ್ಲಿಯೇ ಹೆಚ್ಚು ಶಾಂತವಾಗಿದೆ ಎಂದು ಅರಿವಿಗೆ ಬಂತು. ಮರುದಿನವೇ ತುರ್ತು ಟಿಕೆಟ್ ಕಾಯ್ದಿರಿಸಿ ಅಮೇರಿಕಾಗೆ ಹಿಂತಿರುಗಿದರು.

* * *

ವೆಂಕಟೇಶ್ ವಾಷಿಂಗ್ಟನ್ ಡುಲೆಸ್ ಅಂತಾರಾಷ್ಟ್ರೀಯ ವಿಮಾನ ನಿಲ್ದಾಣದಿಂದ ಬಾಡಿಗೆ ಕಾರಿನಲ್ಲಿ ರಿಚ್ಮಂಡ್ ತಲುಪಿ ಮನೆ ಸೇರಿದಾಗ ಮನೆಯ ನಡುಮನೆಯಲ್ಲಿಯೇ ಅಲ್ಲಮಪ್ರಭುವಿನ ದೊಡ್ಡ ಚಿತ್ರದ ಕೆಳಗೆ "ಉಭಯ ದೃಷ್ಟಿ ಏಕದೃಷ್ಟಿಯಲ್ಲಿ ಕಾಂಬಂತೆ, ದಂಪತಿ ಏಕೋಭಾವದಲ್ಲಿ ನಿಂದಲ್ಲಿ ಗುಹೇಶ್ವರನಿಗೆ ಅರ್ಪಿತವಾಗಿತ್ತು"– ಎಂದು ಒಂದು ವಚನವನ್ನು ಸುಂದರವಾಗಿ ಬರೆದಿತ್ತು. ಒಳಗೆ ಹೋದಾಗ ಲಂಗ ದಾವಣಿಯನ್ನು ಧರಿಸಿ ಹೆಂಡತಿ ಶ್ಯಾಮಲ ನಗುತ್ತಾ ಬಂದು ಇವರನ್ನು ಸ್ವಾಗತಿಸಿದರು. ಶ್ಯಾಮಲ ಅವರ ಹೊಸ ಅವತಾರವನ್ನು ಕಂಡಾಗ ವೆಂಕಟೇಶ್ ತಮ್ಮ ಕಣ್ಣುಗಳನ್ನು ತಾವೇ ನಂಬದಂತಾಯಿತು. ತಾನು ನೋಡುತ್ತಿರುವುದು ಶ್ಯಾಮಲಳನ್ನೋ ಅಥವಾ ಪರಿಣೀತಾಳನ್ನೋ ಎಂದು ಅವರಿಗೆ ತಿಳಿಯದಾಯಿತು. ವೆಂಕಟೇಶ್ ಅವರು ತಮ್ಮ ರೂಮಿಗೆ ಹೋಗಿ ಸೂಟ್ ಕೇಸ್ ಇಟ್ಟು ಬರಲು ಮೊದಲ ಮಹಡಿಗೆ ಮೇಲೆ ಏರಿದಾಗ ಅಲ್ಲಿ "ಮಾಮರವೆಲ್ಲೋ ಕೋಗಿಲೆ ಎಲ್ಲೋ ಏನೀ ಸ್ನೇಹ ಸಂಬಂಧ ಎಲ್ಲಿಯದು ಈ ಅನುಬಂಧ" ಹಾಡು ಕೇಳಿಬರುತಿತ್ತು. ಇದೇನು "ತಾನು ಎಲ್ಲಿದ್ದೇನೆ" ಎಂದು ವೆಂಕಟೇಶ್ ತಮ್ಮನ್ನು ತಾವೇ ಇನ್ನೊಮ್ಮೆ ಕೇಳಿಕೊಂಡರು. ರೂಮಿನ ಒಳಗೆ ಹೋದಾಗ ಅಲ್ಲಿ "ಇಲ್ಲೇ ಇರುವ ಪ್ರೀತಿ ಸ್ನೇಹಗಳ ಗುರುತಿಸದಾದೆವು ನಮ್ಮೊಳಗೇ" ಎಂದು ಒಂದು ಗೋಡೆಯ ಮೇಲೆ, ಮತ್ತೊಂದು ಗೋಡೆಯ ಮೇಲೆ "ಹತ್ತಿರವಿದ್ದರೂ ದೂರ ನಿಲ್ಲುವೆವು ನಮ್ಮ ಅಹಂಮಿನ ಕೋಟೆಯಲಿ" ಎಂದು ರಾಷ್ಟ್ರಕವಿ ಜಿ. ಎಸ್. ಶಿವರುದ್ರಪ್ಪನವರ ಅನ್ವೇಷಣೆ ಕವಿತೆಯ ಸಾಲುಗಳಿದ್ದವು. ಮಧ್ಯದ ಗೋಡೆಯ ಮೇಲೆ ಕವಿ ಗೋಪಾಲಕೃಷ್ಣ ಅಡಿಗರ "ಇರುವುದೆಲ್ಲವ ಬಿಟ್ಟು ಇರದುದರೆಡೆಗೆ ತುಡಿವುದೇ ಜೀವನ" ಎಂಬ ಯಾವ ಮೋಹನ ಮುರಳಿ ಕರೆಯಿತು ಕವಿತೆಯ ಸಾಲಿತ್ತು.

ವೆಂಕಟೇಶ್ ಅವರಿಗೆ ಶ್ಯಾಮಲ ಯಾವಾಗ ಇಷ್ಟೊಂದು ಸಾಹಿತ್ಯವನ್ನು ಓದಿಕೊಂಡು ಬುದ್ಧಿವಂತೆಯಾದಳು? ಎಂದು ಆಶ್ಚರ್ಯವಾಯಿತು. ಸ್ನಾನ ಮುಗಿಸಿ ಅವರು ಕೆಳಗೆ ಬಂದು ಕುಳಿತರು. ಅಲ್ಲಿ ನಡುಮನೆಯ ತೋರುಗೂಡಿನಿಂದ ಕೋಗಿಲೆಯ ಕೂಗಿನ ಶಬ್ದ ಕೇಳಿಬರುತ್ತಿತ್ತು. ಆ ಕಡೆ ವೆಂಕಟೇಶ್ ತಿರುಗಿ ನೋಡಿದಾಗ ಅಲ್ಲಿ ಇನ್ನೊಂದು ಆಶ್ಚರ್ಯ ಕಾದಿತ್ತು. ಅಲ್ಲೊಂದು ಅಲ್ಲಮಪ್ರಭು ಧ್ಯಾನ ಮಾಡುತ್ತಾ ಕುಳಿತ ಪ್ರತಿಮೆ. ಆ ಅಲ್ಲಮಪ್ರಭುವಿನ ಬೆನ್ನಿಗೆ ಒಂದು ಮಾವಿನಮರ. ಅದರ ಮೇಲೊಂದು ಕಪ್ಪು ಕೋಗಿಲೆ. ಆ ಕೋಗಿಲೆಗೆ ವಿದ್ಯುತ್ ಹರಿಸುವ ಚಿಕ್ಕ ವೈರ್. ಆ ಅಲ್ಲಮನ ಪ್ರತಿಮೆಯ ಕೆಳಗೆ ಅವನದೇ ಆದ ಎರಡು ವಚನಗಳನ್ನು ಸುಂದರವಾಗಿ ಕೆಳಗಿನಂತೆ ಕೆತ್ತಿದ್ದರು.

**ಎತ್ತಣ ಮಾಮರ ಎತ್ತಣ ಕೋಗಿಲೆ**
**ಎತ್ತಣಿಂದೆತ್ತ ಸಂಬಂಧವಯ್ಯಾ?**
**ಬೆಟ್ಟದ ಮೇಲಣ ನೆಲ್ಲಿಯ ಕಾಯಿ**
**ಸಮುದ್ರದೊಳಗಣ ಉಪ್ಪು**

**ಎತ್ತಣಿಂದೆತ್ತ ಸಂಬಂಧವಯ್ಯಾ?**
**ಗುಹೇಶ್ವರಲಿಂಗಕ್ಕೆಯೂ ಎನಗೆಯೂ ಎತ್ತಣಿಂದೆತ್ತ ಸಂಬಂಧವಯ್ಯಾ.**

**ಭೂಮಿ ನಿನ್ನದಲ್ಲ**
**ಹೇಮ ನಿನ್ನದಲ್ಲ**
**ಕಾಮಿನಿ ನಿನ್ನವಳಲ್ಲ**
**ಅವು ಜಗಕ್ಕಿಕ್ಕಿದ ವಿಧಿ**
**ನಿನ್ನ ಒಡವೆಯೆಂಬುದು ಜ್ಞಾನರತ್ನ**
**ಅಂತಪ್ಪ ದಿವ್ಯರತ್ನವ ಕೆಡಗೊಡದೆ**
**ಆ ರತ್ನವ ನೀನು ಅಲಂಕರಿಸಿದೆಯಾದೆಡೆ**
**ನಮ್ಮ ಗುಹೇಶ್ವರ ಲಿಂಗದಲ್ಲಿ**
**ನಿನ್ನಿಂದ ಬಿಟ್ಟು ಸಿರಿವಂತರಿಲ್ಲ**
**ಕಣಾ ಎಡಬಿಡದೆ.**

ನನ್ನ ಅರಿವಿಗೋಸ್ಕರವೇ ಶ್ಯಾಮಲ ಎಲ್ಲೆಲ್ಲೋ ಹುಡುಕಿ ಇಷ್ಟೆಲ್ಲಾ ಜೋಡಿಸಿರುವುದು ಎಂದು ತಿಳಿಯಲು ಅವರಿಗೆ ತುಂಬಾ ಸಮಯ ಬೇಕಾಗಲಿಲ್ಲ. ಈಗ ಅವರ ಮನಸ್ಸು ತುಂಬಾ ಪ್ರಶಾಂತವಾಗಿತ್ತು. ಶ್ಯಾಮಲ ಪ್ರೀತಿಯಿಂದ ಬಂದು ಊಟ ಬಡಿಸಿದರು. ಇಬ್ಬರು ಹಾಗೆ ಅದು ಇದು ಮಾತನಾಡುತ್ತ ಸಮಯವನ್ನು ಕಳೆದರು. ಸಂಜೆ ಇಬ್ಬರು ವಾಯುವಿಹಾರಕ್ಕೆ ಹೋಗಿ ಬಂದರು. ನಂತರ ಇಬ್ಬರೂ ಹಿಂದೂ ಟೆಂಪಲ್ಲಿಗೆ ಹೊರಡಲು ಸಿದ್ಧರಾದರು. ಆ ದಿನ ರೇಷ್ಮೆ ಸೀರೆ ಉಟ್ಟು ಶ್ಯಾಮಲ ವೆಂಕಟೇಶ್ ಇಷ್ಟಪಡುತ್ತಿದ್ದ ಚಲನಚಿತ್ರ ನಟಿ ಭಾರತಿಯ ರೀತಿ ನಿಧಾನವಾಗಿ ಬಳುಕುತ್ತ ಬಂದು ಕಾರನ್ನೇರಿ ನಗುತ್ತಾ ವೆಂಕಟೇಶ್ ಅವರ ಪಕ್ಕದಲ್ಲಿಯೇ ಕುಳಿತರು. ವೆಂಕಟೇಶ್ ಶ್ಯಾಮಲ ಅವರನ್ನೇ ದಿಟ್ಟಿಸಿ ನೋಡಿದರು. ಆ ರೀತಿ ನೋಡುತ್ತಿರುವಾಗ ವೆಂಕಟೇಶ್ ಅವರಿಗೆ ತಾನೂ ಭಾರತದಲ್ಲಿದ್ದೇನೋ? ಅಥವಾ ಅಮೆರಿಕಾದಲ್ಲಿದ್ದೇನೋ? ಅಥವಾ ಇಡೀ ಭೂಮಿಯನ್ನೇ ಒಂದೇ ಹಳ್ಳಿಯನ್ನಾಗಿ ಮಾಡಿರುವ ಬದಲಾದ ಕಾಲದ ಮಹಿಮೆಯಲ್ಲಿದ್ದೇನೋ ತಿಳಿಯದಾಯಿತು.

*

## ನೆನಪುಗಳೇ ನೀವ್ಯಾಕೆ ಮರೆಯುವುದಿಲ್ಲ...

■ **ಶಾಂತಲಾ ಭಂಡಿ,** Dublin, CA.

ಜಯ ಜಯರಾಮಾ... ಜಯ ಘನಶ್ಯಾಮಾ...

ಹಳೆಯ ಬಾವಿಯಲ್ಲಿ ಹೊಸನೀರು ಬಂದರೆ ನೀರು ಮಾತ್ರ ಹೊಸದು, ಬಾವಿ ಹಳೆಯದೇ. ಹೊಸವರ್ಷಗಳೆಷ್ಟೇ ಉರುಳಿಹೋದರೂ ನಾವು ಮಾತ್ರ ನಾವೇ. ಹೊಸ ಕನಸು ಕಾಣುವಾಗ ಹೊಸಬರು, ಹಳೆ ನೆನಪುಗಳನ್ನು ಮೆಲುಕು ಹಾಕುವಾಗ ಹಳಬರು.

ಆಗ ನನಗೆ ಮೂರು ವರ್ಷವಿದ್ದಿರಬಹುದು. ದೂರದೂರಿನಿಂದ ನಮ್ಮೂರ ಕನ್ನಡ ಶಾಲೆಗೆ ಬರುತ್ತಿದ್ದ ಜಯರಾಮ ಎಂಬ ಹುಡುಗನೊಬ್ಬ ದೊಡ್ಡಜ್ಜನ ಮನೆಗೆ ಮಧ್ಯಾಹ್ನ ಊಟಕ್ಕೆ ಬರುತ್ತಿದ್ದ. ಅವನು ಆಗ ಐದನೇ ಕ್ಲಾಸು ಅನ್ನುವುದು ನನಗೆ ಚೆನ್ನಾಗಿ ನೆನಪಿರುವುದಕ್ಕೆ ಕಾರಣ ಅವನು ಯಾರೆಂಬುದಾಗಿ ನಾನೊಮ್ಮೆ ಅಮ್ಮನಲ್ಲಿ ವಿಚಾರಿಸಿದಾಗ ಅಮ್ಮ ನನಗೆ ಹೇಳಿದ್ದಿಷ್ಟು: "ಅವನು ಜಯರಾಮ, ಅವನ ಊರಿನ ಶಾಲೆಯಲ್ಲಿ ಬರಿಯ ನಾಲ್ಕನೆಯ ತರಗತಿಯತನಕ ಮಾತ್ರ ಇರುವುದರಿಂದ ದಿನಾಲೂ ಅಷ್ಟು ದೂರದಿಂದ ನಮ್ಮೂರ ಶಾಲೆಗೆ ಬರುತ್ತಾನೆ. ಅವನ ಮನೆ ತುಂಬ ದೂರವಿದೆಯಾದ್ದರಿಂದ ಮಧ್ಯಾಹ್ನ ಇಲ್ಲಿಗೆ ಊಟಕ್ಕೆ ಬರುತ್ತಾನೆ" ಎಂಬುದಾಗಿ ಅಮ್ಮ ಹೇಳಿದ್ದರು.

ಶಾಲೆಗೆ ಹೋಗುವ ಮಕ್ಕಳ ಬಗ್ಗೆ ನನಗೆ ಆಗ ಎಲ್ಲಿಲ್ಲದ ಕುತೂಹಲ. "ಅವನು ಶಾಲೆಯಲ್ಲಿ ಎಷ್ಟನೇ ನಂಬರ್(ರ್‍ಯಾಂಕ್) ಬರುತ್ತಾನೆ?" ಅಂತ ನಾನು ಕೇಳಿದ್ದಕ್ಕೆ ಅಮ್ಮ ಹೇಳಿದ್ದರು 'ಕಳೆದ ಬಾರಿ ಅವನು ನಾಲ್ಕನೆಯ ಕ್ಲಾಸಲ್ಲಿ ಫೇಲ್ ಆಗಿದ್ದನಂತೆ, ಆದರೂ ಅವರ ಕ್ಲಾಸಿನಲ್ಲಿ ಮೂರೇ ಜನರಿದ್ದ ಕಾರಣ ಅವನಿಗೇ ಮಾಸ್ತರು ಮೂರನೇ ನಂಬರ್ ಕೊಟ್ಟಿದ್ದರಂತೆ' ಅಂತ ಜಯರಾಮನೇ ಅಮ್ಮನಿಗೆ ಹೇಳಿದ ವಿಚಾರವನ್ನು ಅಮ್ಮ ನನಗೆ ಹೇಳಿದ್ದರು.

ನನಗೆ ಈಗಲೂ ಜಯರಾಮ ದೇವರ ಹಾಗೆ ಆಗಾಗ ನೆನಪಾಗುವುದು ಸುಳ್ಳಲ್ಲ. ಚಿಕ್ಕವಳಿರುವಾಗ ಪೂಜೆಯ ಸಮಯದಲ್ಲಿ ದೇವರಿಗೆ ಲೇಪಿಸಲು ಅಜ್ಜ ತೇಯ್ದಿಟ್ಟ

ಗಂಧವನ್ನು ಮುಖ, ಕೈ ಕಾಲ್ಗಳಿಗೆಲ್ಲ ಬಳಿದುಕೊಂಡುಬಿಡುತ್ತಿದ್ದೆ, ಅದು ನನಗೆ ತುಂಬ ಪ್ರಿಯವಾದ ಕೆಲಸವಾಗಿತ್ತು, ಅದೇ ಕಾರಣಕ್ಕೆ ಅಮ್ಮನ ಹತ್ತಿರ ಬೈಸಿಕೊಳ್ಳುತ್ತಿದ್ದೆ. ಅಮ್ಮ "ಗಂಧವನ್ನು ಹಣೆಗೆ ಮಾತ್ರ ಹಚ್ಚಿಕೋ" ಅಂತ ಎಷ್ಟೇ ಹೇಳಿದರೂ ಗಂಧಬಟ್ಟಲಿನಲ್ಲಿ ಅಜ್ಜ ತೇಯ್ದಿಟ್ಟ ಗಂಧ ಖಾಲಿಯಾಗುವ ತನಕ ಕೈಕಾಲ್ಗಳಿಗೆಲ್ಲ ಬಳಿದುಕೊಳ್ಳುವುದನ್ನು ಬಿಡುತ್ತಿರಲಿಲ್ಲ. ಅದಕ್ಕಾಗಿಯೇ ಇರಬೇಕು ಅಜ್ಜ ಬೆಳಿಗ್ಗೆ ದೇವರ ಪೂಜೆ ಮಾಡುವಾಗ ನಸುನಗುತ್ತ ಒಂದಿಷ್ಟು ಗಂಧವನ್ನು ಜಾಸ್ತಿಯೇ ತೇಯ್ದಿಡುತ್ತಿದ್ದರು. ಅಜ್ಜನಿಗೆ ನಾನು ಮಾಡುವ ಪ್ರತಿಯೊಂದು ಕೆಲಸವೂ ಪ್ರಿಯವೇ ಆಗಿರುತ್ತಿತ್ತು.

ನಾನು ಮೈಗೆಲ್ಲ ಗಂಧ ಬಳಿದುಕೊಂಡು ಉಳಿದ ಗಂಧವನ್ನು ಮನೆಯಲ್ಲಿರುವವರಿಗೆಲ್ಲ "ನಿಂಗೂ ಸ್ವಲ್ಪ ಹಚ್ಚಲಾ, ನಿಂಗೂ ಸ್ವಲ್ಪ ಹಚ್ಚಲಾ" ಅಂತ ಒತ್ತಾಯ ಮಾಡಿ ಕಡೇ ಪಕ್ಷ ಮನೆಯವರೆಲ್ಲರ ಹಣೆಗಾದರೂ ಬಳಿದು ಬಟ್ಟಲಲ್ಲಿ ಹೆಚ್ಚುಳಿದ ಗಂಧವನ್ನು "ಇನ್ಯಾರಿಗೆ ಬಳಿಯಲಿ ಇದಿಷ್ಟನ್ನು" ಅಂತ ಯೋಚಿಸುತ್ತ ಗಂಧಬಟ್ಟಲನ್ನು ಹಿಡಿದು ಮನೆತುಂಬ ಓಡಾಡುತ್ತಿದ್ದೆ. ಹಾಗಂತ ಮನೆಮಂದಿಗೆಲ್ಲ ಮೈಗೆ ಬಳಿಯಲು ಹೋದರೆ ಬೈಸಿಕೊಂಡೇನು ಎನ್ನುವ ಭಯವೂ ಇದ್ದಿದ್ದರಿಂದ ಗಂಧದ ಬಟ್ಟಲನ್ನು ಹಿಡಿದು ಮನೆಯ ಒಳಹೊರಗೆಲ್ಲ ಅಲೆದಾಡುತ್ತಲಿರುವ ದಿನಗಳಲ್ಲಿ ದೇವರ ಹಾಗೆ ಸಿಕ್ಕವನೇ ಈ ಜಯರಾಮ. ನನಗಾಗ ಮೂರು ವರ್ಷ ಮತ್ತು ಜಯರಾಮ ಐದನೇ ಕ್ಲಾಸು.

ಜಯರಾಮ ದಿನಾಲೂ ಮಧ್ಯಾಹ್ನ ಊಟವಾದ ನಂತರ ಶಾಲೆಗೆ ಹೊರಡುವ ಸಮಯದತನಕ ನಮ್ಮ ಮನೆಯ ಎದುರು ಬಾಗಿಲಿಗೆ ಅಂಟಿಕೊಂಡಿರುವ ಮೆಟ್ಟಿಲಿನ ಮೇಲೆ ಕುಳಿತಿರುತ್ತಿದ್ದ. ಅದು ಅವನ ಫೇವರಿಟ್ ಜಾಗ. ಅವನು ಶಾಲೆಯ ಸಮವಸ್ತ್ರ ಅಂದರೆ ಬಿಳಿ ಅಂಗಿ ಹಾಗೂ ನೀಲಿಯ ಚಡ್ಡಿ ಧರಿಸಿರುತ್ತಿದ್ದ. ಮೊದಲು ಗಂಧವನ್ನು ಜಯರಾಮನ ಮುಖಕ್ಕೆ ಬಳಿಯುತ್ತಿದ್ದೆ. ನಗುತ್ತಲೇ ಬಳಿಸಿಕೊಳ್ಳುತ್ತಿದ್ದ. ಅನಂತರ ಅವನು ತೊಟ್ಟಿದ್ದ ಬಿಳಿ ಅಂಗಿಯ ಅರ್ಧ ತೋಳಿನ ನಂತರ ಖಾಲಿ ಇರುತ್ತಿದ್ದ ಅವನ ತೋಳಿಗೆ, ಅವನ ಪಾದದಿಂದ ಮೊಣಕಾಲಿನತನಕವೂ ಗಂಧ ಬಳಿಯುತ್ತಿದ್ದೆ.

ಆ ಸಂಧರ್ಭದಲ್ಲಿ ನನ್ನ ಅಮ್ಮ ಏನಾದರೂ ನಾನು ಹೀಗೆ ಜಯರಾಮನ ಕೈ ಕಾಲ್ಗಳಿಗೆಲ್ಲ ಗಂಧ ಬಳಿಯುತ್ತಿದ್ದುದನ್ನು ನೋಡಿದರೆ ಜಯರಾಮನಿಗೂ 'ಜಯರಾಮ... ನೀನು ಸುಮ್ಮನೆ ಕುಳಿತಿರಬೇಡ, ಮೈಗೆಲ್ಲ ಹಚ್ಚಬೇಡ ಅಂತ ನೀನವಳಿಗೆ ಹೇಳದಿದ್ರೆ ಅವಳಿಗೆ ಗೊತ್ತಾಗುವುದಿಲ್ಲ, ನಿನ್ನ ಮೈ ಪೂರ್ತಿ ಗಂಧಮಯ ಮಾಡಿಬಿಡ್ತಾಳೆ' ಅಂತ ಅವನಿಗೂ ಹೇಳಿಕೊಡುತ್ತಿದ್ದರು. ನನಗೆ ಅಮ್ಮನ ಮೇಲೆ ಕೋಪ ಬರುತ್ತಿತ್ತು, ಅಮ್ಮ ಹೀಗೆಲ್ಲ ಜಯರಾಮನಿಗೆ ಹೇಳಿಕೊಟ್ಟು ನಾಳೆಯಿಂದ ಜಯರಾಮನೂ ಗಂಧ ಬಳಿಸಿಕೊಳ್ಳದೇ ಹೋದರೆ... ಅಂತ ತುಂಬ ಬೇಸರವಾಗಿ ಅಳು ಬರುತ್ತಿತ್ತು. ಜಯರಾಮ ಮಾತ್ರ ಮಾತನಾಡದೇ ಗಂಧ ಬಳಿಸಿಕೊಳ್ಳುತ್ತಿದ್ದ. ಅವನು ಶಾಲೆಗೆ ಹೊರಡುವಷ್ಟರಲ್ಲಿ ಗಂಧ ಆರಿ ಬಿಳಿ ಬಿಳಿಯಾಗಿರುತ್ತಿತ್ತು. ಅವನು ಒಂದಿಷ್ಟೂ ಬೇಸರಿಸಿಕೊಳ್ಳದೇ ನಗುತ್ತಲೇ

ಅದನ್ನಿಟ್ಟುಕೊಂಡು ನನಗೆ ಟಾಟಾ ಹೇಳಿ ಶಾಲೆಗೆ ಹೋಗುತ್ತಿದ್ದ. ಅವನು ಶಾಲೆಗೆ ಹೊರಡುವಾಗ ನನ್ನ ಅಮ್ಮ 'ಜಯರಾಮ, ಆ ಗಂಧವನ್ನ ತೊಳೆದುಕೊಂಡಾದರೂ ಹೋಗೋ ಪುಟ್ಟಾ...' ಅಂತ ಹೇಳಿದರೂ 'ಬೇಡ, ಹಿಂಗೇ ಇರ್ಲಿ' ಅನ್ನುತ್ತ ನಡೆಯುತ್ತಿದ್ದ. ಹಾಗೆಯೇ ಎರಡು ವರ್ಷ ಇದೇ ದಿನಚರಿ ನಡೆದು ಅವನು ಏಳನೆಯ ತರಗತಿ ಮುಗಿಸಿಹೋದವನು ಈಗೆಲ್ಲಿದ್ದಾನೋ ನನಗೆ ಗೊತ್ತಿಲ್ಲ.

ತಮಾಷೆಗೆ ಹೇಳುತ್ತಿಲ್ಲ. ನನಗೆ ಈಗಲೂ ಗಂಧವನ್ನು ನೋಡಿದಾಗ ಜಯರಾಮ ಒಮ್ಮೆ ನೆನಪಾಗುತ್ತಾನೆ. ನಾನು ಬಳಿದ ಗಂಧವನ್ನು ಹಾಗೆಯೇ ಆರಲು ಬಿಟ್ಟು ಸ್ವಲ್ಪವೂ ಬೇಸರಿಸಿಕೊಳ್ಳದೆ ಶಾಲೆಗೆ ಹೋದಾಗ ಮೈತುಂಬ ಗಂಧ ಬಳಿದುಕೊಂಡು ಬಂದದ್ದಕ್ಕಾಗಿ ಜಯರಾಮನಿಗೆ ಮಾಸ್ತರು ಬೈದಿರಲಿಲ್ಲವಾ? ಅವನ ತರಗತಿಯ ಮಕ್ಕಳು ಅವನನ್ನು ನೋಡಿ ನಕ್ಕಿರಲಿಲ್ಲವ? ಯಾಕೆ ಹೀಗೆ ಗಂಧ ಬಳಿದುಕೊಂಡಿದ್ದೀಯ ಅಂತ ಅವರೆಲ್ಲ ಪ್ರಶ್ನಿಸಿರಲಿಲ್ಲವ? ಅವನು ಎಲ್ಲಿರಬಹುದು? ಈಗ ಏನು ಮಾಡುತ್ತಿರಬಹುದು? ಚೆಂದದ ಸಂಸಾರಸ್ಥನಾಗಿ ಬಾಳ್ವೆ ಮಾಡುತ್ತಿರಬಹುದು. ಅವನಿಗೂ ಗಂಧ ನೋಡಿದಾಗ ನನ್ನ ನೆನಪಾಗಬಹುದಾ? ಪಾಪ, ಜಯರಾಮ ಸಂಕೋಚಕ್ಕೆ ಸಿಲುಕಿ ಗಂಧವನ್ನು ಬಳಿಸಿಕೊಳ್ಳುತ್ತಿದ್ದನಾ? ಅಂತೆಲ್ಲ ಅನ್ನಿಸಿ ಅವನು ಸಿಕ್ಕರೆ ಗಂಧ ಹೆಚ್ಚಿದ್ದಕ್ಕಾಗಿ ಕ್ಷಮೆ ಕೇಳಬೇಕು ಅಂತೆಲ್ಲ ಅಂದುಕೊಳ್ಳುತ್ತೇನೆ. ಗಂಧವನ್ನು ಕೈಕಾಲುಗಳಿಗೆಲ್ಲ ಬಳಿಸಿಕೊಳ್ಳುವಾಗ ಇಲ್ಲಿ ಹಚ್ಚು ಇಲ್ಲಿ ಹಚ್ಚು ಅಂತ ಗಂಧ ಹಚ್ಚಲು ಅನುಕೂಲವಾಗುವಂತೆ ಅವನು ತನ್ನ ಮೊಣಕಾಲು ಹಾಗೂ ಮೊಣಕೈಗಳನ್ನು ತಿರುವಿಟ್ಟುಕೊಂಡು ಮೆಟ್ಟಿಲಿನ ಮೇಲೆ ಕೂರುತ್ತಿದ್ದುದು ನೆನಪಾಗಿ ಯಾವುದೇ ಸಂಕೋಚಕ್ಕಾಗಿ ಅವನು ಗಂಧ ಬಳಿಸಿಕೊಳ್ಳುತ್ತಿರಲಿಲ್ಲ, ಪ್ರೀತಿಯಿಂದಲೇ ಬಳಿಸಿಕೊಳ್ಳುತ್ತಿದ್ದ ಅನ್ನಿಸಿ ಸಮಾಧಾನವಾಗುತ್ತದೆ.

ದೇವರಂಥ ಮೌನಿ, ಸದ್ಗುಣಿ ಜಯರಾಮನಿಗೆ ದಿನಾಲೂ ಗಂಧಾರ್ಚನೆ ಮಾಡಿದ್ದೆನಲ್ಲ, ಅವನು ದಿನವೂ ನನ್ನನ್ನು ಹರಸಿದುದೂ ಸಹ ಕಾರಣವಾಗಿರಬೇಕು ಇವತ್ತಿಗೂ ನಾನು ಖುಷಿಯಲ್ಲಿ ಆರಾಮವಾಗಿರುವುದಕ್ಕೆ.

ಹಾಗೆಯೇ ಆವತ್ತು ಗಂಧ ಬಳಿಸಿಕೊಂಡ ದೇವರಂಥ ಜಯರಾಮ ಖುಷಿಯಲ್ಲಿ ಸದ್ಗೃಹಸ್ಥನಾಗಿ ಬಾಳ್ವೆ ನಡೆಸುತ್ತಿರಲಿ ಎಂಬುದಾಗಿ ಭಗವಂತನಲ್ಲಿ ಕೇಳಿಕೊಳ್ಳುತ್ತೇನೆ.

* * *

**ಸ್ವರ ಬಾಂಧವ**

ಪ್ರತಿ ವರ್ಷದಂತೆ ಕಾಲೇಜು ಆರಂಭವಾಗಿತ್ತು. ಕ್ಲಾಸಲ್ಲಿ ಕುಳಿತು ಪಾಠ ಕೇಳುವಾಗಿನ ಮಳೆ ಹೊರಬಂದಾಗ ಇರಲಿಲ್ಲ. ಗೆಳತಿ ಮ್ಯೂಸಿಕ್ ಕ್ಲಾಸಿಗೆ ತೆರಳಿದಳು. ನಾನು ಜಿಮುರುವ ಮಳೆಯ ತಂಪು ಸವಿಯುತ್ತ ಲೈಬ್ರರಿಯ ಕಡೆ ಕಾಲು ಹಾಕುತ್ತಿದ್ದಾಗಲೇ ಒಬ್ಬರು ಎದುರಾಗಿ ನಿಲ್ಲಿಸಿದ್ದರು. 'ನನ್ನ ಹೆಸರು ...., ನಾನು ಸಂಗೀತ ವಿದ್ಯಾರ್ಥಿ. ಸಂಗೀತ

ವಿಭಾಗದ ವತಿಯಿಂದ ಮೂರು ವರ್ಷಗಳಿಂದ ಪಾಕ್ಷಿಕ ಪತ್ರಿಕೆಯೊಂದನ್ನ ನಡೆಸಿಕೊಂಡು ಬಂದಿದ್ದೆ. ಪದವಿ ಮುಗಿಸಿ ಇದೀಗ ತೆರಳುತ್ತಿದ್ದೇನೆ, ಆ ಪತ್ರಿಕೆಯನ್ನ ನೀನು ಮುಂದುವರೆಸುತ್ತೀಯ ದಯವಿಟ್ಟು? ಇಲ್ಲವಾದರೆ ಆ ಪತ್ರಿಕೆ ನಾನು ಕಾಲೇಜು ಮುಗಿಸಿ ಹೋದಮೇಲೆ ಹೇಳುವ ಹೆಸರಿಲ್ಲದೆ ಹೋಗುತ್ತದೆ, ಕೊನೆಯ ಪಕ್ಷ ನೀನು ಈ ಕಾಲೇಜಲ್ಲಿರುವ ತನಕವಾದರೂ ನಮ್ಮ ಈ ಪತ್ರಿಕೆಯ ಜವಾಬ್ದಾರಿ ಹೊತ್ತುಕೊಳ್ಳುವೆ ಎಂಬ ಭರವಸೆಯಿಂದ ಕೇಳುತ್ತಿದ್ದೇನೆ' ಎನ್ನುವಾಗ ಧ್ವನಿಯಲ್ಲಿ 'ಸ್ವರಬಾಂಧವ' ಪತ್ರಿಕೆಯ ಬಗ್ಗೆ ಗೌರವ ತುಂಬಿ ಬರುತ್ತಲಿತ್ತು, ಆ ಪತ್ರಿಕೆ ನಿಲ್ಲಬಾರದು ಎಂಬ ನೋವಿತ್ತು ಧ್ವನಿಯಲ್ಲಿ. ಪರಿಚಯವೇ ಇಲ್ಲದ ಧ್ವನಿ. ಆದರೂ ಆಪ್ತತೆ. 'ನಂಗೆ ಸಂಗೀತ ಅಂದ್ರೆ ಏನು ಅಂತಾನೂ ಗೊತ್ತಿಲ್ಲ, ನಾನು ಹೇಗೆ ಈ ಪತ್ರಿಕೆಯ ಜವಾಬ್ದಾರಿ ಹೊರಲಿ, ಅದಕ್ಕೆ ಸರಕನ್ನ ಎಲ್ಲಿಂದ ತರಲಿ?' ಎಂಬುದಾಗಿ ಹೇಳಿದೆ. 'ಸಂಗೀತದ ಸರಕುಗಳೇ ಬೇಕಂತಿಲ್ಲ, ಅದರೊಳಗಿನ ಸಾಹಿತ್ಯವನ್ನ ಉಳಿಸಿಕೊಂಡು ಹೋಗು ತಕ್ಕಮಟ್ಟಿಗೆ, ನಿನ್ನ ಕೈಲಾದ ಮಟ್ಟಿಗೆ' ಅಂದಾಗ ಇಲ್ಲ ಎನ್ನಲಾಗದೆ "ಸರಿ" ಅಂತ ಗೋಣಲ್ಲಾಡಿಸಿ ಬಂದೆ.

ಹೋಗಿ ಗೆಳತಿಯರನ್ನೆಲ್ಲ ಕೇಳಿದೆ 'ನಮ್ಮ ಕಾಲೇಜಿನ 'ಸ್ವರಬಾಂಧವ' ಪತ್ರಿಕೆಯನ್ನ ನಮ್ಮ ಕೈಲಾದ ಮಟ್ಟಿಗೆ ಉಳಿಸಿಕೊಂಡು ಹೋಗೋಣವಾ?' ಅಂತ. ಯಾರೂ 'ಇಲ್ಲ' ಅನ್ನಲಿಲ್ಲ. ಗೆಳತಿಯರೆಲ್ಲ ಕೊಟ್ಟ ಧೈರ್ಯ ಮತ್ತು ಬೆಂಬಲದಿಂದ ಈ ಕೆಳಗಿನ ಸಂಪಾದಕೀಯದ ಆದಿಯಾಗಿ ಸ್ವರಬಾಂಧವ ಮತ್ತೆ ಹಾಡಲಾರಂಭಿಸಿದ್ದ.

ಸಹೃದಯರೇ...

ವರ್ಷ ಋತು ಬಂತೆಂದರೆ ಹರುಷಗೊಂಡ ಮಯೂರ ಗರಿಬಿಚ್ಚಿ ನಲಿವಂತೆ, ವಸಂತ ಬಂತೆಂದರೆ ಕೋಗಿಲೆ ತನ್ನಿರುವ ಸೂಚ್ಯ ಕೊಡುವ ಪರಿಯಲ್ಲಿ ಹಾಡುವಂತೆ, ಮಾಸದ ಆರಂಭದಲ್ಲೊಮ್ಮೆ ನಮ್ಮ "ಸ್ವರ ಬಾಂಧವ"ನ ಆಗಮನವಾಗಲಿದೆ.

ಉದಯೋನ್ಮುಖ ಕವಿ-ಕವಯಿತ್ರಿ-ಲೇಖಕ-ಲೇಖಕಿ-ಯರಿಂದ ಉದಯಿಸಿದ ಬರಹಗಳಿಗೆ "ಸ್ವರ ಬಾಂಧವ"ನ ಸ್ವಾಗತ.

ಇಂದಿನಿಂದ ಆಗಮಿಸುತ್ತಲಿರುವ "ಸ್ವರ ಬಾಂಧವ"ನ ಸ್ವರವು ಸುಶ್ರಾವ್ಯವಾಗಿ ತೇಲಬೇಕಾದಲ್ಲಿ ಬರಹಗಾರ ಬಾಂಧವರೇ, ನಿಮ್ಮೆಲ್ಲರ ಸಹಕಾರ ಸದಾ ಸಂಪಾದಕೀಯ ವರ್ಗಕ್ಕಿದೆಯೆಂಬ ಅಚಲ ವಿಶ್ವಾಸದೊಂದಿಗೆ ಪುನಃ ಓದುಗರ ಇದಿರು ದರ್ಶನ ನೀಡಲಿದ್ದಾನೆ "ಸ್ವರ ಬಾಂಧವ."

ನಿಮ್ಮೆಲ್ಲರ ಸಹಕಾರ ಕೋರುತ್ತ,
-ಸಂಪಾದಕಿ

ಹೀಗೆ ಸಂಪಾದಕೀಯ ಬರೆದ ನಾಲ್ಕೆಂಟು ದಿನಗಳಲ್ಲಿ ಎಚ್ಚೆತ್ತು ಬಂದಿದ್ದ 'ಸ್ವರ ಬಾಂಧವ'. ಹಲವಾರು ಶ್ರೋತೃಗಳು 'ಸ್ವರ ಬಾಂಧವ'ನ ಕರೆಗೆ ಓಗೊಟ್ಟಾಗ ನಮ್ಮಲ್ಲಿ

ಅತೀವ ಸಂತಸ ಹಾಗೂ ಭರವಸೆ ಮೂಡಿತ್ತು. ವಾಸ್ತವದಲ್ಲಿ ಹಿಂದೆಲ್ಲ 'ಸ್ವರ ಬಾಂಧವ'ನ ಹಿನ್ನೆಲೆಯಲ್ಲಿ ಸಂಗೀತದ ವಿದ್ಯಾರ್ಥಿಗಳೇ ಇದ್ದು, ಸಂಗೀತಕ್ಕೆ ಹೆಚ್ಚು ಪ್ರಾಶಸ್ತ್ಯ ನೀಡಿ 'ಸ್ವರ ಬಾಂಧವ' ಸಂಗೀತಗಾರನೇ ಆಗಿದ್ದ. 'ಸ್ವರ ಬಾಂಧವ'ನ ಸಾಹಿತ್ಯವನ್ನಾದರೂ ಉಳಿಸಿಕೊಳ್ಳುವ ಪುಟಾಣಿ ಪ್ರಯತ್ನ ಕಾಲೇಜಿನ ಎಲ್ಲ ಬರಹಗಾರ/ಬರಹಗಾರ್ತಿಯರ ಮತ್ತು ಉತ್ಸಾಹದ ಚಿಲುಮೆಗಳಂತಿದ್ದ ಪತ್ರಿಕೋದ್ಯಮ ತರಗತಿಗಳಲ್ಲಿ ಓದುತ್ತಿದ್ದ ಗೆಳತಿಯರ ಸಮ್ಮಿಶ್ರ ಸಹಕಾರದಿಂದ ಯಶಸ್ಸು ಕಾಣುತ್ತಿದೆಯಲ್ಲ ಎಂಬ ಖುಷಿ. ಸರ್ವರ ಲೇಖನಿಗಳಿಂದ ಜಾರಿದ ಭಾವನೆಗಳಿಗೆ ಸ್ವಾಗತ ಕೋರುತ್ತ 'ಸ್ವರ ಬಾಂಧವ'ನ ಸಂಪಾದಕ ಬಳಗ ಚಿಗುರೊಡೆದುಕೊಂಡಿತ್ತು.

ಆದಿಗೊಂದು ಅಂತ್ಯವಿರಲೇಬೇಕು.

ಸರಿದು ಹೋದ 'ಸ್ವರ ಬಾಂಧವ'ನಲ್ಲಿ ಸದಾ ಕ್ಷಮೆಯಾಚಿಸುತ್ತಾ...

ಪತ್ರಿಕೆಯನ್ನ ಮುನ್ನಡೆಸಿದ ಸಂಪಾದಕೀಯದ ಹೊಣೆ ಹೊತ್ತವಳು ವರ್ಷಾಂತ್ಯದಲ್ಲಿ ಕಳೆದುಹೋಗುತ್ತಾಳೆ, ಅಷ್ಟು ದಿನಗಳ ತನಕ ಆ ಪತ್ರಿಕೆಯನ್ನು ನಡೆಸಲು ಸಹಕರಿಸಿದ ಎಲ್ಲರನ್ನೂ ನೆನೆಯುತ್ತ ಪದವಿ ಮುಗಿಸಿ ನಡೆಯುತ್ತಾಳೆ. ಕೊನೆಯ ಸಂಪಾದಕೀಯ ಬರೆದ ನೆನಪವಳಿಗೆ ಕಾಣುವುದೇ ಇಲ್ಲ, ಬಹುಶಃ ಕೊನೆಯ ಸಂಪಾದಕೀಯ ಕಾಣದಲೇ 'ಸ್ವರ ಬಾಂಧವ' ಕಣ್ಮರೆಯಾದನಾ! ನೆನಪಾಗುವುದಿಲ್ಲ. ಕ್ರಮೇಣ 'ಸ್ವರ ಬಾಂಧವ' ಮುಂದೇನಾದ ಎನ್ನುವುದನ್ನು ಮರೆತುಹೋದವಳಿಗೆ ಈಗೀಗ 'ಸ್ವರ ಬಾಂಧವ'ನ ನೆನಪು ಪದೇ ಪದೇ ಕಾಡುತ್ತದೆ. 'ಸ್ವರ ಬಾಂಧವ'ನ ಸುಳಿವೇ ಸಿಗುವುದಿಲ್ಲ. ಕಳೆದುಹೋಗಿದ್ದು 'ಸ್ವರ ಬಾಂಧವ'ನಾ ಅಥವಾ ಅದರ ಹೊಣೆ ಹೊತ್ತ ಸಂಪಾದಕಿಯಾ? ಹುಡುಕುತ್ತ ಹೋದಂತೆ ಎಲ್ಲವೂ ಕಳೆದೇ ಹೋಗುತ್ತವೆ. ಹಾಗೆ ಹುಡುಕಲೇಬಾರದು, ಅವಳೂ ಕಳೆದುಹೋಗಿದ್ದಾಳೆ, ಹುಡುಕಿದಷ್ಟೂ ಕಳೆದುಹೋಗುತ್ತಾಳೆ.

* * *

**ನೆನಪುಗಳ್ಯಾಕೆ ಮರೆಯುವುದಿಲ್ಲ?**

ರಸ್ತೆಯ ಪಕ್ಕದಲ್ಲಿ ಮನೆಯೆದುರಿನ ತೆಂಗಿನ ಮರಕ್ಕೆ ಒರಗಿ ನಿಂತು ನಾನು ಬರುವುದನ್ನೇ ಕಾದು ರಸ್ತೆಯ ಆ ತುದಿಯಲ್ಲಿ ನನ್ನ ಮುಖ ಕಂಡ ಕ್ಷಣ ಅದೆಷ್ಟು ಖುಷಿಯಿರುತ್ತಿತ್ತು ಅಮ್ಮನ ಮುಖದಲ್ಲಿ. ಅಮ್ಮ ನನ್ನನ್ನೆತ್ತಿ ಮುದ್ದಿಡುತ್ತಿದ್ದರಲ್ಲ! ಆ ಸಂತಸದ ಕ್ಷಣವನ್ನು ಹಿಡಿದು ನಿಲ್ಲಿಸಬೇಕೆಂದು ನನಗಾಗ ಗೊತ್ತಿರಲಿಲ್ಲ.

ಶಾಲೆಯಿಂದ ನಡೆದು ಬರುತ್ತ ಓಣಿಯೊಳಗೆ ಹರಿಯುತ್ತಿದ್ದ ನೀರನ್ನು ದಾಟುವಾಗ ಅಚಾನಕ್ ಜಿಗಣೆಯೊಂದು ಕಾಲಿಗೆ ಅಂಟಿಕೊಂಡು ಅದೇನಂತ ಗೊತ್ತಾಗದೇ ಅತ್ತರೆ ಅದೇ ರಸ್ತೆಯಲ್ಲಿ ಅಲ್ಲೆಲ್ಲೋ ನಡೆದು ಹೋಗುತ್ತಿದ್ದ ಮಂಜಿ ಓಡಿಬಂದು ಅವಳ ಬಾಯೊಳಗಿನ ತಂಬಾಕಿನ ತಾಂಬೂಲದ ರಸ ಉಗುಳಿ ಪುಟ್ಟ ಕಾಲಿಂದ ಜಿಗಣೆ ಬಿಡಿಸಿ 'ಶಣ್ಣಮ್ಮ,

ಜಿಗಣೆ ಅದೂ... ರಕ್ತ ಹೀರ್ಬುಡ್ತಿತ್ತು ನಾ ಬರ್ದಿದ್ರೆ...' ಅನ್ನುತ್ತ ಮುದ್ದಿಸಿದಾಗ ಅದು ಪ್ರೀತಿ ಎಂಬುದು ನನಗಾಗ ಗೊತ್ತಾಗುವಷ್ಟು ನಾನು ಬೆಳೆದಿರಲಿಲ್ಲ.

ಹಣೆಗೊಂದು ಮುತ್ತಿತ್ತು 'ನೋಡುಲೆ ಪಾಟಿಕಡ್ಡಿ ಹಾಂಗಿದ್ರೂ ಅಕ್ಷರ ಮಾತ್ರ ಗುಂಡಗೆ ಬರೆತೆ, ಚಂದ ಬರೇದ್ಯಲೇ ಕೂಸೆ, ಇನ್ನೂ ಚಂದ ಬರೆಯೂಲೆ ಟ್ರೈ ಮಾಡೋ' ಅಂದ ಮಾಸ್ತರರ ಮಾತು ಮಾರ್ಕ್ಸ್ ಬಗ್ಗೆ ಯೋಚಿಸುವಂತೆ ಮಾಡಿತ್ತೇ ಹೊರತು ಪ್ರೀತಿ ಅಂತ ಗೊತ್ತಾಗಿರಲಿಲ್ಲ.

ಆಗಷ್ಟೇ ನಾ ಮಾತು ಕಲಿತ ದಿನಗಳಲ್ಲಿ ಮನೆಗೆಲಸಕ್ಕೆ ಬರುತ್ತಿದ್ದ ಮಾತಾಡಲೇ ಬಾರದ 'ಹಾದಿ' ಎಂಬ ಪ್ರೀತಿಯ ಹೆಂಗಸಿನ ಮುಂದೆ ಒಂದಿಷ್ಟು ಪ್ರಶ್ನೆ ಕೇಳುವಾಗೆಲ್ಲ ನನಗೆ ಗೊತ್ತಾಗುತ್ತಿರಲಿಲ್ಲ ಅವಳು ಮೂಗಿ ಎಂದು. ನಾನು ಕೇಳಿದ ಪ್ರಶ್ನೆಗಳಿಗೆಲ್ಲ 'ಅ ಆ'ಕಾರದಲ್ಲೇ ಉತ್ತರ ಕೊಟ್ಟು ಮುಗ್ಧವಾಗಿ ಅವಳು ನಕ್ಕು ನನ್ನ ಪುಟ್ಟ ತಲೆಯನ್ನು ನೇವರಿಸಿದ್ದಷ್ಟೇ ನೆನಪಾಗುತ್ತದೆ. ಅವಳ ಆ ಪ್ರೀತಿಯೇ ಒಂದು ಭಾಷೆ ಅಂತ ನನಗೆ ಆಗ ಗೊತ್ತಿರಲಿಲ್ಲ.

ಕವಿತೆ ಬರೆದು ಅಪ್ಪನ ಮುಂದೆ ಓದಿ ಆ ಕವಿತೆಗೆ ಹೀಗೆ ಸ್ಟೆಪ್ಸ್ ಹಾಕಬಹುದು ಅಂತೆಲ್ಲ ನಲಿದು ತಮಾಷೆ ಮಾಡುವಾಗ ಕವಿತೆ ಬರೆಯಬೇಕೆಂದಾಗಲೆಲ್ಲ ಅದು ಹುಟ್ಟುವುದಿಲ್ಲ ಅಂತ ಗೊತ್ತಿರಲಿಲ್ಲ.

ಒಂದು ತುತ್ತನ್ನು ಮೂವತ್ತೆರಡು ಸಲ ಅಗಿದು ನುಂಗೆನ್ನುವ ಅಪ್ಪ, ಇತ್ತ 'ನೀನು ಇಷ್ಟು ನಿಧಾನಕ್ಕೆ ಊಟ ಮಾಡಿದ್ರೆ, ನಾಳೆ ಗಂಡನ ಮನೆಗೆ ಹೋದ್ರೆ ಅಲ್ಲಿ ಉಳಿದೆಲ್ಲ ಕೆಲಸ ಮಾಡಿದಂಗೆ' ಎನ್ನುತ್ತಿದ್ದ ಅಮ್ಮ. ಕನ್ಫ್ಯೂಜ್ ಆಗುತ್ತಿದ್ದ ಆ ಘಳಿಗೆಗಳು ಮತ್ತೆ ಸಿಗುವುದಿಲ್ಲ ಅಂತ ನನಗೆ ಆಗ ಗೊತ್ತಿರಲಿಲ್ಲ.

ಆವತ್ತು ಟೂವ್ಹೀಲರ್‌ನಲ್ಲಿ ಕುಳಿತು ಮನೆಯ ಬಾಗಿಲಿಂದ ಬಾಯ್ ಹೇಳುತ್ತ ಅರ್ಧ ಕಿಲೋಮೀಟರ್ ದೂರ ಹೋಗಿ ಮತ್ತೆ ರಸ್ತೆ ತಿರುವಿನ ಮೂಲೆಯಂಗಡಿಯ ಎರಡು ಕಟ್ಟಡಗಳ ನಡುವಿನ ಇಷ್ಟೇ ಇಷ್ಟು ಗ್ಯಾಪ್ ಮುಂದೆ ಗಾಡಿ ನಿಲ್ಲಿಸಿ ನನ್ನತ್ತ ಕೈಮಾಡಿ ಮುಂದೆ ನಡೆಯುತ್ತಿದ್ದ ಇದೇ ಗೆಳೆಯನ ಪ್ರೀತಿ, ಮುಂದೊಂದು ದಿನ ನಾಲ್ಕು ಗಾಲಿಯ ಮುಚ್ಚಿದ ಗೂಡೊಳಗಿವನು ಕೂತು ನಾನು 'ಬಾಯ್' ಅಂದಾಗ ಅವನು 'ಬಾಯ್' ಅಂದದ್ದು ಅವನ ವಾಹನದ ಕಪ್ಪು ಗಾಜಿನೊಳಗಿಂದ ಕಾಣದೇ ಹೋಗಬಹುದು ಅಂತ ಗೊತ್ತಿರಲಿಲ್ಲ. ಈಗೀಗ ಅವನು ತಿರುವು ದಾಟುವವರೆಗೂ ಅವನಿಗೆ ಕಾಯುತ್ತ ಅಲ್ಲಿ ನಾನ್ಯಾಕೆ ನಿಲ್ಲುವುದಿಲ್ಲ?

ಎಲ್ಲವೂ ಬದಲಾಗುತ್ತದೆ ಕಾಲದೊಂದಿಗೆ, ಇಂದಿನ ಪ್ರೀತಿಯ ರೀತಿ ನಾಳೆ ಬದಲಾಗುತ್ತದೆ. ಮತ್ತೆ ಕೊನೆಯಲ್ಲಿ ಉಳಿಯುವುದೂ ಪ್ರೀತಿಯೊಂದೇ. ಕ್ಷಣಕ್ಷಣದ ಪ್ರೀತಿಯನ್ನೂ ಬಾಚಿ ಹಿಡಿದಿಟ್ಟುಕೊಂಡುಬಿಡಬೇಕು.

*

# ಕೂಪರ್ಟಿನೊ, ಕಾಲಿಫೋರ್ನಿಯ

■ **ಕೃಷ್ಣಪ್ರಿಯ,** Cupertino, CA.

ಮನೆ ಮುಂದೆ ಲಂಟಾನ, ಮನೆ ಹಿಂದೆ ಕಣಿಗಿಲೆ
ಪಕ್ಕದ ಮನೆಯಲ್ಲಿ ಸೊಂಪಾದ ದಾಳಂಬರಿಯ ಕೆಂಪು ಹೂವು, ಹಣ್ಣು
ರಸ್ತೆಯಲ್ಲೊಂದೆರಡು ಹೆಜ್ಜೆ ನಡೆದರೆ ಬಾದಾಮಿ ಮರ
ಕೆಳಗೆಲ್ಲ ಬಿದ್ದಿರುವ ಬೀಜವನ್ನು ಕಲ್ಲಲ್ಲಿ ಕುಟ್ಟಿ ತಿಂದರೆ ಕಹಿ ಅಂದರೆ ಕಹಿ
ಇದೇನಿದು ಬೆಂಗಳೂರೋ, ಮೈಸೂರೋ, ಹಾಸನವೋ ಎಂದುಕೊಳ್ಳುತ್ತಿರುವಾಗ . . .

ಅಡಿಗೆಯ ಮನೆಯ ದೊಡ್ಡ ಗಾಜಿನ ಕಿಟಕಿಯಾಚೆ
ಹಿಂದೆ ಯಾವಾಗಲೋ ಮೇಜಿನ ಕೆಳಗೆ ಕುಳಿತು ಓದಿದ್ದ
ಯುದ್ಧದ ನಂತರದ ಸುವಾಸನೆಯ ಕಾಗದದ ಮೇಲೆ ಇಂಗ್ಲೆಂಡಿನಲ್ಲಿ ಪ್ರಕಟವಾಗಿ
ಹೇಗೋ, ದೊಡ್ಡವರೊಬ್ಬರ ಆಶೀರ್ವಾದದ ಜೊತೆ ಕೈಗೆ ಬಂದಿದ್ದ
ಪ್ರಪಂಚದ ಎಲ್ಲಾ ಕಡೆಯ ಅದ್ಭುತ ಚಿತ್ರವಿಚಿತ್ರಗಳನ್ನದರ ರೊಟ್ಟಿನ ಮಧ್ಯದಲ್ಲಿಟ್ಟುಕೊಂಡಿದ್ದ
ಪುಸ್ತಕದ ಪುಟದಿಂದ ಹಾರಿ ಬಂದ ಹಮಿಂಗ್ಬರ್ಡು
ಹೂವಿನ ಮೇಲೆ ಗಾಳಿಯಲ್ಲೇ ನಿಂತದರ ರಸವನ್ನು ಹೀರುತ್ತಿತ್ತು

*

# ಕಾಣದ ಕಡಲಿಗೆ ಹಂಬಲಿಸುತಿದೆ ಮನ...

■ **ಅನುಪಮಾ ಮಂಗಳವೇಢೆ,** Hoffman Estate, IL.

"ರಾಜಿ, ನಾನು ನಿನ್ನ ಸ್ಥಾನದಲ್ಲಿದ್ದಿದ್ರೆ, ಎಂದೋ ಈ ಮುದುಕಿ ಋಣ ತೀರ್ತು ಅಂತ ದೂರ ಇದ್ದುಬಿಡ್ತಿದ್ದೆ. ಆ ಮುದುಕಿ ನಿನ್ನನ್ನ ಸೊಸೆ ಅಂತ ಒಪ್ಪಿಕೊಳ್ಳುವುದಿರ್ಲಿ, ನೀನೂ ಒಬ್ಬಳು ಮನುಷ್ಯೆ ಅಂತಾನೂ ಅನ್ಕೊಂಡಿಲ್ಲ. ವಿಷಸರ್ಪವಾದ್ರೂ ಅದರ ದ್ವೇಷ ಹನ್ನೆರಡು ವರ್ಷಗಳಂತೆ. ಆದ್ರೆ ಈ ಮುದುಕಿ ಸಾಯೋತನಕ ನಿನ್ನ ಮೇಲಿನ ದ್ವೇಷ ಬಿಡೊಲ್ಲ. ಹಾಗಿರುವಾಗ ನೀನ್ಯಾಕೆ ಇಷ್ಟು ಒದ್ದಾಡ್ತೀಯ. ದೇವ್ರು ನಿನ್ನನ್ನು ಯಾಕಿಷ್ಟು ಒಳ್ಳೆಯವಳನ್ನಾಗಿ ಮಾಡಿ, ಜೊತೆಗೆ ಇಷ್ಟು ಕಷ್ಟಕೊಟ್ನೋ ಗೊತ್ತಿಲ್ಲ. ಹೂಂ ನಿನ್ನ ಮುಂದೆ ಮಾತಾಡಿದ್ರೆ, ಏನ್ ಪ್ರಯೋಜನ. ಕೋಣನ ಮುಂದೆ ಕಿಂದ್ರಿ ಬಾರಿಸ್ದ ಹಾಗೆ. ನೀನು ಮಾತ್ರ ಮಾಡೋದನ್ನ ಬಿಡಲ್ಲ. ಅದೇನು ಶಾಪಿಂಗ್ ಮಾಡ್ಬೇಕು ಅನ್ಕೊಂಡಿದ್ಯೋ ಅದನ್ನ ನೀನೇ ಮಾಡ್ಕೊಂಡು ಬಾ. ನಾನ್ ಬರೊಲ್ಲ. ಅವರಿಗೆಲ್ಲಾ ಬಟ್ಟೆಬರೆ ತೆಗೆದುಕೊಳ್ಳುವುದನ್ನ ನನ್ನ ಕೈಯಲ್ಲಿ ನೋಡಲಾಗಲ್ಲ. ಮೈ ಎಲ್ಲಾ ಉರಿದುಹೋಗುತ್ತೆ. ಸಂಜೆ ನೇರವಾಗಿ ಆಫೀಸು ಮುಗಿಸ್ಕೊಂಡು ಸೇವಾಸದನಕ್ಕೆ ಬರ್ತೀನಿ. ಅಲ್ಲೇ ಸಿಗ್ತೀನಿ" ಎನ್ನುತ್ತಾ ಸುಜಾತ ಊಟದ ಡಬ್ಬಿಯನ್ನು ತನ್ನ ಪರ್ಸ್ನಲ್ಲಿ ಇಟ್ಟುಕೊಳ್ಳುತ್ತಾ ಆಫೀಸಿನತ್ತ ಹೊರಟಳು.

ರಾಜೇಶ್ವರಿಗೆ ತಂಗಿ ಸುಜಾತಳ ಮಾತು ಅಭ್ಯಾಸವಾಗಿಹೋಗಿದೆ. ದಿನವೂ ಅವಳಿಂದ ಬುದ್ಧಿವಾದ ಇದ್ದೇ ಇರುತ್ತೆ. ಅಕ್ಕನ ಸಂಸಾರ ನೋಡಿ ಬೇಸತ್ತು ತನಗೆ ಮದುವೆಯೇ ಬೇಡವೆಂದು ನಿರ್ಧಾರ ಮಾಡಿದವಳವಳು. ಅಕ್ಕನ ಕಂಡರೆ ಅತೀವ ಪ್ರೀತಿ. ರಾಜಿಗೂ ಸುಜಾತಳೇ ಸರ್ವಸ್ವ, ಹಾಗಾಗಿ ಸುಜಾತ ಏನೇ ಗೊಣಗಿದರೂ ರಾಜಿ ಸುಮ್ಮನಿರುತ್ತಾಳೆ. ರಾಜಿ ಸಹನಾ ಮೂರ್ತಿ. ಅವಳ ಅತ್ತೆ 'ಛೀ, ಥೂ', 'ನಿನ್ನ ಜೀವನ ನರಕ ಆಗಲಿ' ಅಂತೆಲ್ಲಾ ಕೋಪದಿಂದ ಶಪಿಸಿದ್ದನ್ನು ಮೌನವಾಗಿ ಸಹಿಸುವವಳಿಗೆ ಪ್ರೀತಿಯ ತಂಗಿಯ ಮಾತುಗಳನ್ನು ಸಹನೆಯಿಂದ ಕೇಳುವುದು ಕಷ್ಟವಲ್ಲ. ಅವಳಿಗೆ ವಯಸ್ಸು ಐವತ್ತಾದರೂ

ಅತ್ತೆಯ ಮನ ಒಲಿಸಿಕೊಳ್ಳಲು ಇನ್ನೂ ಅವಳಿಂದ ಸಾಧ್ಯವಾಗಿಲ್ಲ. ಅಕ್ಷಮ್ಯ ಅಪರಾಧ ಮಾಡಿದ್ದಾಳೆ ಎಂಬ ಭಾವನೆ ಅವರಿಗೆ.

* * *

ರಾಜಿಗೆ ಆಗ ಇಪ್ಪತ್ತೆಂಟು ವಯಸ್ಸು. ಎಮ್.ಎಸ್‌ಸಿ. ಮಾಡಿ ಡಿಗ್ರಿ ಕಾಲೇಜಿನಲ್ಲಿ ಲೆಕ್ಚರರ್ ಆಗಿ ಕೆಲಸ ಮಾಡುತ್ತಿದ್ದಳು. ಜಾಣೆ, ರೂಪವಂತೆ. ಆದರೆ ನಿಂತು ಮದುವೆ ಮಾಡಲು ಅಪ್ಪ ಅಮ್ಮ ಇಬ್ಬರೂ ಆಗಲೇ ಸದ್ಗತಿ ಹೊಂದಿದ್ದರು. ನೆಂಟರಿಷ್ಟರ್‍ಯಾರೂ ಜವಾಬ್ದಾರಿ ತೆಗೆದುಕೊಳ್ಳಲು ಮುಂದೆ ಬಂದಿರಲಿಲ್ಲ. ರಾಜಿಯೂ ಮದುವೆಯ ಯೋಚನೆ ಮಾಡಿರಲಿಲ್ಲ. ಆ ವರ್ಷ, ಮೊದಲನೆ ವರ್ಷದ ಬಿ.ಎಸ್‌ಸಿ.ಗೆ ಸೇರಿದ ಸುನಿಲ್, ಶ್ರೀಮಂತ ಮನೆತನದವನು. ನೋಡಲು ಸ್ಫುರದ್ರೂಪಿ. ನಡೆನುಡಿಗಳಲ್ಲಿ ಆಚಾರ ವಿಚಾರವಂತ. ಕೆಮಿಸ್ಟ್ರಿ ಕ್ಲಾಸ್ ತೆಗೆದುಕೊಳ್ಳುತ್ತಿದ್ದ ರಾಜಿಯನ್ನು ನೋಡಿ ಅವಳಲ್ಲಿ ಆಕರ್ಷಣೆ ಉಂಟಾಗಿ, ಅನುರಾಗ ಮೂಡಿತ್ತು ಸುನಿಲ್‌ಗೆ. ಮೊದಮೊದಲು ಅದನ್ನು ಕೇವಲ ವ್ಯಾಮೋಹ, ದೈಹಿಕ ಆಕರ್ಷಣೆಯಿರಬಹುದು ಎಂದು ತಳ್ಳಿಹಾಕಿದರೂ ರಾಜಿಯನ್ನು ಮನಸ್ಸಿಂದ ತೆಗೆಯಲು ಸಾಧ್ಯವಾಗಿರಲಿಲ್ಲ ಅವನಿಗೆ. ಬಿ.ಎಸ್‌ಸಿ. ಕೊನೆಯ ವರ್ಷದಲ್ಲಿದ್ದಾಗ ತನ್ನ ಮನದ ತೊಳಲಾಟವನ್ನು ಅವಳ ಬಳಿ ತೋಡಿಕೊಂಡ. ಎರಡು ವರ್ಷದಿಂದ ಅವಳನ್ನು ಮನದಲ್ಲೇ ಪ್ರೀತಿಸುತ್ತಿರುವುದರ ಬಗ್ಗೆ ತಿಳಿಸಿದ. ಇದನ್ನು ಕೇಳಿದ ರಾಜಿ ಹೌಹಾರಿದ್ದಳು. ತಮ್ಮಿಬ್ಬರ ನಡುವೆ ಹತ್ತು ವರ್ಷಗಳ ಅಂತರವಿರುವುದರಿಂದ ಇದು ಅಸಾಧ್ಯದ ಮಾತು. ಅದೂ ಅಲ್ಲದೆ ತಾನು ಅವನ ಶಿಕ್ಷಕಿ. ಈ ರೀತಿಯ ಯೋಚನೆಗಳೂ ನಿನ್ನ ಮನದಲ್ಲಿ ಮೂಡಬಾರದು, ಈ ಹುಚ್ಚುತನವನ್ನು ಬಿಟ್ಟುಬಿಡು ಎಂದು ಬುದ್ಧಿ ಹೇಳಿ ಬೈದು ಕಳುಹಿಸಿದ್ದಳು. ಡಿಗ್ರಿ ಮುಗಿದು ಎಮ್.ಎಸ್‌ಸಿ. ಮಾಡಿ, ಅದೇ ಕಾಲೇಜಿನಲ್ಲಿ ಲೆಕ್ಚರರ್ ಗಿರಿಯನ್ನೂ ದಕ್ಕಿಸಿಕೊಂಡು, ರಾಜಿಯ ಸಹೋದ್ಯೋಗಿಯೆನಿಸಿಕೊಂಡ ಸುನಿಲ್. ಅವಳ ಮೇಲಿರುವ ಅಗಾಧ ಪ್ರೀತಿಯನ್ನು ಮತ್ತೊಮ್ಮೆ ತೋಡಿಕೊಂಡಾಗ ಕರಗಿ ನೀರಾಗಿದ್ದಳು ರಾಜಿ. ಐದು ವರ್ಷಗಳಿಂದ ಯಾವುದೇ ರೀತಿಯ ಸಂಪರ್ಕವಿಲ್ಲದಿದ್ದರೂ, ತನ್ನ ಬಗೆಗಿರುವ ಪ್ರೀತಿಯನ್ನು ಹಾಗೆಯೇ ಕಾಪಾಡಿಕೊಂಡಿರುವುದು ಮಾತ್ರವಲ್ಲದೆ, ನನ್ನನ್ನು ಮದುವೆಯಾಗುತ್ತೀಯ ಎಂದು ಕೇಳಿದವನಿಗೆ ಇಲ್ಲವೆನ್ನಲಾಗಲಿಲ್ಲ ರಾಜಿಗೆ. ಅವನಿಗಾಗಿ ಅವಳ ಮನಸ್ಸೂ ಸೋತಿತು. ಸುನಿಲ್ ಮನೆಯಲ್ಲಿ ವಿಷಯ ಗೊತ್ತಾದೊಡನೆ ಅವನಮ್ಮ ಜಾನಕಮ್ಮನಿಗೆ ಹೃದಯವೇ ಒಡೆಯಿತು. ಸುನಿಲ್ ದೃಢನಿರ್ಧಾರ ಮಾಡಿದ್ದರಿಂದ ಜಾನಕಮ್ಮ ಬೇಡಿಕೊಂಡರೂ, ಬೆದರಿಸಿದರೂ ಉಪಯೋಗವಾಗಿರಲಿಲ್ಲ. ಆಕೆಯ ನಿಸ್ಸಹಾಯಕತೆಯನ್ನೂ, ಕೋಪವನ್ನೂ ರಾಜಿಯ ಮೇಲೆ ವ್ಯಕ್ತಪಡಿಸಿದ್ದಳು. 'ಅವನೋ ಹುಡುಗ, ನಿನಗಾದರೂ ಬುದ್ಧಿ ಬೇಡವಾ? ಅಕ್ಕನ ಸ್ಥಾನವನ್ನು ತೆಗೆದುಕೊಳ್ಳುವುದು ಬಿಟ್ಟು ಅವನ ಹೆಂಡತಿಯಾಗಲು ನಾಚಿಕೆಯಾಗಲ್ವ? ನನ್ನ ಮಗನ ಭವಿಷ್ಯವನ್ನೇ ಹಾಳು ಮಾಡಿದ ಪೀಡೆ ನೀನು. ಅದೇನು

ಮಾಯ ಮಾಡಿದ್ಯೆ ವಯ್ಯಾರಿ? ಮಂಕು ಬೂದಿ ಎರಚಿದ್ಯ ಅವನ ಮೇಲೆ. ಮಾಟಗಾತಿ. ಬೇಗ ಸಾಯುಬಾರದ ನೀನು? ಆಗಲಾದರೂ ನನ್ನ ಮಗ ಇನ್ನೊಬ್ಬಳನ್ನ ಮದುವೆಯಾಗಬಹುದು. ಪಾಪಿ ನೀನು. ಈ ಮನೆಯಲ್ಲಿ ನಿನಗೆ ಎಂದೂ ಜಾಗವಿಲ್ಲ. ನನ್ನ ಸಂತೋಷವನ್ನ ಹಾಳು ಮಾಡಿದ್ದೀಯ ಚಾಂಡಾಲಿ. ಈ ಜನ್ಮದಲ್ಲಿ ನಿನಗೆ ಸಂತೋಷ ಸಿಗದಲೇ ಇರಲಿ. ಅದೇ ನನ್ನ ಆಶೀರ್ವಾದ ನಿನಗೆ' ಎಂದಿದ್ದರು ನಮಸ್ಕರಿಸಲು ಬಂದ ಹೊಸ ವಧುವಿಗೆ.

ಸುನಿಲ್ ಬೇರೆ ಮನೆ ಮಾಡಿದ್ದರೂ ತಾಯಿಯನ್ನು ಪ್ರತಿದಿನವೆಂಬಂತೆ ನೋಡಿಕೊಂಡು ಬರುತ್ತಿದ್ದ. ಮನೆಯಲ್ಲಿ ಒಬ್ಬರನ್ನೇ ಇರಿಸುವುದು ರಾಜಿಗೂ ಇಷ್ಟವಿರಲಿಲ್ಲ. ಆದರೆ ಅವಳೊಟ್ಟಿಗೆ ಇರುವುದಕ್ಕೆ ಜಾನಕಮ್ಮ ಸುತರಾಂ ಒಪ್ಪುತ್ತಿರಲಿಲ್ಲ. ಮುಖ ಕಂಡರೆ ಸಿಡಿಮಿಡಿಯುತ್ತಿದ್ದರು. ಜಾನಕಮ್ಮನ ಇನ್ನಿಬ್ಬರು ಗಂಡು ಮಕ್ಕಳಿಗೂ ಮದುವೆಯಾಗಿ ಹಲವಾರು ವರ್ಷಗಳಿಂದ ಮುಂಬೈನಲ್ಲಿ ಇದ್ದರು. ವರ್ಷಕ್ಕೊಮ್ಮೆ ಬಂದು ತಾಯಿಯನ್ನು ನೋಡಿಕೊಂಡು ಹೋಗುತ್ತಿದ್ದರು. ಸುನಿಲನಿಗೆ ತಾಯಿಯ ಬಗ್ಗೆ ಇದ್ದ ಕಾಳಜಿ, ಪ್ರೀತಿ ಆ ಇಬ್ಬರು ಗಂಡುಮಕ್ಕಳಿಗಿರಲಿಲ್ಲ. ಅವರ ಹೆಂಡತಿಯರಂತೂ ತಾವಾಯಿತು, ತಮ್ಮದಾಯಿತು ಎನ್ನುವಂತಿದ್ದರು. ಮದುವೆಯಾದ ಎರಡು ವರ್ಷಕ್ಕೆ ರಾಜಿ ಗಂಡು ಮಗುವಿನ ತಾಯಿಯಾದಳು. ಈಗಲಾದರೂ ಜಾನಕಮ್ಮನ ಮನಸ್ಸು ಬದಲಾಗಬಹುದು ಎಂದು ಎಣಿಸಿದ್ದ ರಾಜಿಗೆ ನಿರಾಸೆಯಾಗಿತ್ತು. ಸುನಿಲ್ ಅಮ್ಮನ ಬಳಿ ಹೋದಾಗಲೆಲ್ಲಾ ಮಗುವನ್ನು ಕರೆದುಕೊಂಡು ಹೋಗುತ್ತಿದ್ದ. ಮಗುವನ್ನು ಎತ್ತಿ ಆಡಿಸುತ್ತಿದ್ದರೇ ವಿನಾ, ಜಾನಕಮ್ಮನ ಹೃದಯ ರಾಜಿಯ ಪಾಲಿಗೆ ಕಲ್ಲಾಗಿಯೇ ಇತ್ತು. ಹೀಗಿರುವಾಗಲೇ ದೊಡ್ಡ ಆಘಾತ ಕಾದಿತ್ತು ರಾಜಿಗೆ. ಒಮ್ಮೆ ಅಮ್ಮನ ಮನೆಯಿಂದ ಮಗುವನ್ನು ಕರೆದುಕೊಂಡು ಸ್ಕೂಟರಿನಲ್ಲಿ ಬರುತ್ತಿರುವಾಗ ಎದುರು ಬರುತ್ತಿದ್ದ ಕಾರಿಗೆ ಡಿಕ್ಕಿ ಹೊಡೆದು ಸುನಿಲ್ ಮತ್ತು ಮಗು ಸ್ಥಳದಲ್ಲಿಯೇ ಮೃತಪಟ್ಟರು. ತಮ್ಮ ಮಗ ಹಾಗು ಮೊಮ್ಮಗನ ಸಾವಿನ ಸುದ್ದಿ ಕೇಳಿ ಜಾನಕಮ್ಮ ಬೆಂದ ಸುಣ್ಣದಂತಾದರು. ಜಾನಕಮ್ಮನ ಶಾಪ ತಟ್ಟಿತೇನೋ ಎಂಬಂತೆ ರಾಜಿಯ ಬಾಳಿನಲ್ಲಿ ಕತ್ತಲಾವರಿಸಿತು. ತಮ್ಮ ಕರುಳು ಬಳ್ಳಿಯನ್ನು ಕಳೆದುಕೊಂಡ ಎರಡು ಹೆಣ್ಣು ಜೀವಗಳು ವಿಲಿವಿಲಿ ಒದ್ದಾಡುತ್ತಿರುವಾಗ, ಪರಸ್ಪರ ಆಸರೆಗಾಗಿ, ಆ ದುಃಖವನ್ನು ಅರ್ಥಮಾಡಿಕೊಳ್ಳಬಲ್ಲ ಇನ್ನೊಂದು ಹೆಣ್ಣು ಹೃದಯಕ್ಕಾಗಿ, ಅತ್ತೆಯ ಸಾನ್ನಿಧ್ಯವನ್ನು ರಾಜಿಯ ಮನ ಬಯಸುತ್ತಿತ್ತು. ಈ ಸಮಯದಲ್ಲೂ ಜಾನಕಮ್ಮನ ಮನಸ್ಸು ಬದಲಾಗಲಿಲ್ಲ. ಬದಲು ಇನ್ನೂ ಕಲ್ಲಾಯಿತು. "ಅವಳು ಯಾವ ಘಳಿಗೆಯಲ್ಲಿ ಬಂದಳೋ, ಸಮಾಜದ ಕಟ್ಟುಪಾಡನ್ನು ಒಡೆದು ನಿಂತಳೋ, ಆಗಲೇ ನನ್ನ ಮಗನ ಬಾಳು ಹಾಳಾಯಿತು. ನನ್ನ ಮಗನ ಸಾವಿಗೆ ಅವಳೇ ಕಾರಣ" ಎನ್ನುತ್ತಿದ್ದರು.

ತಮ್ಮ ಪತಿ ಶಂಕರಯ್ಯನವರ ಸಾವಿನ ನಂತರ ಸುನಿಲನೇ ಜಾನಕಮ್ಮನಿಗೆ ಆಧಾರವಾಗಿದ್ದ. ಸುನಿಲನ ತಾತ ಜಮೀನ್ದಾರನಾಗಿದ್ದರಿಂದ ತನ್ನ ಏಕೈಕ ಪುತ್ರಿಯಾದ

ಜಾನಕಮ್ಮನ ಹೆಸರಿನಲ್ಲೇ ಹೊಲಗದ್ದೆಗಳಿದ್ದವು. ಅದರ ಮೇಲ್ವಿಚಾರಣೆಯನ್ನು ಸುನಿಲನೇ ನೋಡಿಕೊಳ್ಳುತ್ತಿದ್ದ. ಈಗ ಸುನಿಲನೂ ಹೋದ ಮೇಲೆ ಈ ಇಳಿ ವಯಸ್ಸಿನಲ್ಲಿ ಅವರನ್ನು ನೋಡಿಕೊಳ್ಳುವವರು ಯಾರಾದರೂ ಬೇಕಾಗಿತ್ತು. ರಾಜಿ ಗೋಗರೆದುಕೊಂಡರೂ ಅವಳ ಜೊತೆ ಇರಲಿಕ್ಕೆ ಜಾನಕಮ್ಮ ಒಪ್ಪಿರಲಿಲ್ಲ. ಅಮ್ಮನನ್ನು ತಮ್ಮ ಜೊತೆ ಕರೆದುಕೊಂಡು ಹೋಗುತ್ತೇವೆ ಎಂದು ಹೇಳುವ ಸೌಜನ್ಯವೂ ಇಬ್ಬರು ಗಂಡುಮಕ್ಕಳಿಗಿರಲಿಲ್ಲ. ಅದೇ ಊರಿನ ಸೇವಾಸದನ ವೃದ್ಧಾಶ್ರಮಕ್ಕೆ ಸೇರಿಸುವ ಅಭಿಪ್ರಾಯ ಸೂಚಿಸಿದಾಗ ಜಾನಕಮ್ಮ ಆ ವ್ಯವಸ್ಥೆಗೆ ಒಪ್ಪದೆ ವಿಧಿಯಿರಲಿಲ್ಲ. ತಮ್ಮ ಮಗನ ಸಾವಿನ ದುಃಖದಿಂದ ಹೊರಬರಲಾಗದಿದ್ದರೂ ಹೊಲಗದ್ದೆಗಳನ್ನು ಮತ್ತು ಮನೆಯನ್ನೂ ಮಾರಾಟಮಾಡಿ ಆಸ್ತಿಯನ್ನು ಪಾಲುಮಾಡಿ ಕೊಡಬೇಕೆಂಬ ಮಕ್ಕಳ ಒತ್ತಾಯಕ್ಕೆ ಸಿಕ್ಕಿಬಿದ್ದಿದ್ದರು ಜಾನಕಮ್ಮ. ಆಸ್ತಿಯನ್ನು ವಿಭಾಗ ಮಾಡಿದಾಗಲೂ ಗಂಡುಮಕ್ಕಳಿಬ್ಬರಿಗೆ ಕೊಟ್ಟರೇ ವಿನಾ ರಾಜಿಗೆ ಮುಡಿಗಾಸೂ ಕೊಡಲಿಲ್ಲ. "ನನ್ನ ಮಗನೂ ಇಲ್ಲ, ಮೊಮ್ಮಗನೂ ಇಲ್ಲ, ಅವಳಿಗೂ ನನಗೂ ಏನೂ ಸಂಬಂಧ ಇಲ್ಲ" ಎಂದುಬಿಟ್ಟಿದ್ದರು. ರಾಜಿ ಇವ್ಯಾವುದನ್ನೂ ತಲೆಗೆ ಹಾಕಿಕೊಳ್ಳಲಿಲ್ಲ. ವೃದ್ಧಾಶ್ರಮಕ್ಕೆ ಸೇರಿಸಿದ ಮೇಲೆ, ಪ್ರತಿ ದಿನವೂ ಎಂಬಂತೆ ಮನೆಯಿಂದ ಅಡುಗೆಯನ್ನು ಅತ್ತೆಯ ಮಧ್ಯಾಹ್ನದ ಊಟಕ್ಕೆ ತಂದುಕೊಟ್ಟು ತಾನು ಕಾಲೇಜಿಗೆ ಹೋಗುತ್ತಿದ್ದಳು. ತಮ್ಮ ಕೈಅಡುಗೆಯೇ ಅಭ್ಯಾಸವಾಗಿದ್ದ ಜಾನಕಮ್ಮನಿಗೆ ಸೇವಾಸದನದಲ್ಲಿ ಕೊಡುತ್ತಿದ್ದ ಊಟದ ರುಚಿ ಅಷ್ಟಕ್ಕಷ್ಟೆಯಾದದ್ದರಿಂದ ಸೊಸೆ ತಂದುಕೊಡುತ್ತಿದ್ದ ಊಟವನ್ನು ಮರುಮಾತಿಲ್ಲದೆ ಸ್ವೀಕರಿಸುತ್ತಿದ್ದರು. ಆದಾಗ್ಯೂ ಒಂದು ದಿನವೂ ಅವಳ ಬಳಿ ಮಾತನಾಡುತ್ತಿರಲಿಲ್ಲ. ಒಮ್ಮೆ ಬಾತ್ ರೂಮಿನಲ್ಲಿ ಕಾಲುಜಾರಿ ಬಿದ್ದು ಮೂಳೆ ಮುರಿದು ಹಿಪ್ ರೀಪ್ಲೇಸ್ಮೆಂಟ್ ಸರ್ಜರಿ ಆದಾಗ ಸಂಪೂರ್ಣವಾಗಿ ನೋಡಿಕೊಂಡಿದ್ದು ರಾಜಿಯೇ. ಮಕ್ಕಳಿಬ್ಬರಿಗೂ ವಿಷಯ ತಿಳಿಸಿದಾಗ, ಅಲ್ಲಿಗೆ ಬಂದು ನೋಡಿಕೊಳ್ಳುವಷ್ಟು ದಿನ ರಜ ಸಿಗದಿರುವ ಕಾರಣ ಬರಲಿಕ್ಕೆ ಅವಕಾಶವಾಗುತ್ತಿಲ್ಲ. ಸೇವಾಸದನದವರೇ ನಿಗಾವಹಿಸಿ ನೋಡಿಕೊಳ್ಳುತ್ತಾರೆ, ನೀನು ಯೋಚಿಸಬೇಡವೆಂಬ ಉತ್ತರ ಬಂದಿತ್ತು ರಾಜಿಗೆ. ಅತ್ತೆಗೆ ಊಟ ಮಾಡಿಸುವುದು, ತಲೆಗೆ ಎಣ್ಣೆ ಹಚ್ಚಿ ಬಾಚುವುದು, ವೀಲ್ ಚೇರಿನಲ್ಲಿ ಸಂಜೆಯ ಹೊತ್ತು ಕಾಂಪೌಂಡಿನಲ್ಲಿ ಇದ್ದ ಉದ್ಯಾನವನದಲ್ಲೇ ಓಡಾಡಿಸುವುದು ಮಾಡುತ್ತಿದ್ದರೂ, ಜಾನಕಮ್ಮ ಮಾತ್ರ ರಾಜಿಯ ಬಳಿ ಮೂಕರಂತೆ ವರ್ತಿಸುತ್ತಿದ್ದರು.

ಅತ್ತೆಗೆ ಈಗ ಎಂಬತ್ತರ ವಯಸ್ಸಿನ ಪರಿಣಾಮವಾಗಿ ನೆನಪಿನ ಶಕ್ತಿ ಕುಂದುತ್ತಿದೆ ಎಂದು ಮೊದಮೊದಲು ತಿಳಿದರೂ ಆ ನಂತರವೇ ತಿಳಿದದ್ದು ಅವರಿಗೆ ಆಲ್ಜೈಮರ್ಸ್ (Alzheimer's) ಇದೆ ಎಂದು. ರೋಗ ಆವರಿಸಿಕೊಂಡ ಶುರುವಿನಲ್ಲಿ ಹೆಸರುಗಳನ್ನು ಮರೆಯುವುದು, ಕೇಳಿದ್ದೇ ಪ್ರಶ್ನೆಗಳನ್ನು ಮತ್ತೆ ಮತ್ತೆ ಕೇಳುವುದು ಮಾಡುತ್ತಿದ್ದರೂ ತಮ್ಮ ದಿನನಿತ್ಯದ ಕೆಲಸಗಳನ್ನು ತಾವಾಗಿಯೇ ಮಾಡಿಕೊಳ್ಳುತ್ತಿದ್ದರು. ಮಕ್ಕಳು ಯಾವಾಗ ಬರುತ್ತಾರೆ, ಮೊಮ್ಮಕ್ಕಳಿಗೆ ರಜ ಯಾವಾಗ ಎಂದು ಪದೇ ಪದೇ ಕೇಳುತ್ತಿದ್ದರೆ, ಅವರನ್ನು

ನೋಡಿಕೊಳ್ಳುವ ಹುಡುಗಿ ಕಮಲಾಗೆ ಕೆಲವೊಮ್ಮೆ ರೇಗಿ 'ಅದೇನಜ್ಜಿ, ಕೇಳಿದ್ದೇ ಕೇಳ್ತೀರ, ಎಷ್ಟು ಸಲ ಹೇಳಬೇಕು ನಿಮಗೆ' ಎಂದು ಸಿಡಿಮಿಡಿಯುತ್ತಿದ್ದಳು. ಆದರೆ ಇತ್ತೀಚಿನ ದಿನಗಳಲ್ಲಿ ರೋಗ ಉಲ್ಬಣಗೊಂಡು ಕೆಲವೊಮ್ಮೆ ತಾವ್ಯಾರು ಅನ್ನುವುದನ್ನೂ ಮರೆಯುತ್ತಿದ್ದರು. ಬಾಯಲ್ಲಿ ಊಟವಿಟ್ಟರೂ ಅದನ್ನು ನುಂಗಬೇಕೆಂಬ ಜ್ಞಾನ ಇರುತ್ತಿರಲಿಲ್ಲ. ನೀರು ಕೊಟ್ಟರಷ್ಟೇ ಕುಡಿಯುತ್ತಿದ್ದರು, ಬಾಯಾರಿಕೆ ಆಗುತ್ತಿದ್ದರೂ ತಾವಾಗಿಯೇ ನೀರು ಬೇಕೆಂದು ಕೇಳಲು ತಿಳಿಯುತ್ತಿರಲಿಲ್ಲ. ಪರಿಸ್ಥಿತಿ ಹೀಗಿರುವಾಗ ನಿಮ್ಮಮ್ಮನನ್ನು ಒಮ್ಮೆ ನೋಡಿಕೊಂಡು ಹೋಗುವಿರಂತೆ ಎಂದು ರಾಜಿ ಕೇಳಿಕೊಂಡಾಗ ಇಬ್ಬರು ಗಂಡುಮಕ್ಕಳು ತಮ್ಮ ಪತ್ನಿಸಮೇತರಾಗಿ ಬರುವುದಾಗಿ ನಿರ್ಧರಿಸಿದ್ದರು.

* * *

ರಾಜಿ ಆ ದಿನ ಕಾಲೇಜಿಗೆ ರಜ ಹಾಕಿದ್ದರಿಂದ ಸುಜಾತ ಆಫೀಸಿಗೆ ಹೊರಟ ತಕ್ಷಣ ತಾನೂ ರೆಡಿ ಆಗಿ ಮಾರ್ಕೆಟ್ ಕಡೆ ಹೊರಟಳು. ತನ್ನನ್ನು ಅವರ ಮನೆ ಸೊಸೆಯೆಂದು ಸ್ವೀಕರಿಸದಿದ್ದರೇನಂತೆ, ತನ್ನ ಕರ್ತವ್ಯ ತಾನು ಮಾಡಬೇಕೆಂಬುದು ರಾಜಿಯ ನೀತಿಯಾಗಿತ್ತು. ಓರಗಿತ್ತಿಯರಿಬ್ಬರಿಗೂ ಎರಡು ರೇಶ್ಮೆ ಸೀರೆಗಳು ಮತ್ತು ಭಾವಂದರಿಗೆ ಶರ್ಟ್ ಪೀಸ್ ಕೊಂಡ ನಂತರ ಅತ್ತೆಗೂ ಅವರುಡುವಂತಹ ಕಾಟನ್ ಸೀರೆಯನ್ನು ಖರೀದಿಸಿದಳು. ಭಾವಂದಿರ ಮಕ್ಕಳು ಬರಲಿಲ್ಲವಾದರೂ ಅವರಿಗೂ ಚೂಡಿದಾರಿಗೆ ಆಗುವಂತಹ ಬಟ್ಟೆಗಳನ್ನು ಕೊಂಡಳು. ಮಕ್ಕಳನ್ನು ನೋಡಿ ವರ್ಷಗಳೇ ಕಳೆದದ್ದರಿಂದ, ಅವರು ಎಷ್ಟು ಎತ್ತರಕ್ಕೆ ಬೆಳೆದಿದ್ದಾರೆಂಬ ಅಂದಾಜೂ ಇರಲಿಲ್ಲ ರಾಜಿಗೆ.

ಅವಳು ಸೇವಾಸದನ ಸೇರುವ ಹೊತ್ತಿಗೆ ನಾಲ್ಕು ಘಂಟೆಯಾಗಿಹೋಗಿತ್ತು. ಸುಜಾತ ಸ್ವಲ್ಪ ಮುಂಚಿತವಾಗಿಯೇ ಆಫೀಸಿನಿಂದ ಹೊರಟು ರಾಜಿಗಿಂತ ಮೊದಲೇ ಆಶ್ರಮ ಸೇರಿಯಾಗಿತ್ತು. ಅಕ್ಕತಂಗಿಯರಿಬ್ಬರು ಸೇರಿ ಎಲ್ಲರನ್ನು ಬರಮಾಡಿಕೊಳ್ಳುವುದಕ್ಕೆ ಕಾಯುತ್ತಿದ್ದಂತೆ, ನಾಲ್ವರೂ ಟ್ಯಾಕ್ಸಿಯಿಂದ ಇಳಿದರು. ತಾಯಿಯ ಯೋಗಕ್ಷೇಮವನ್ನು ವಿಚಾರಿಸಿಕೊಳ್ಳುತ್ತಾ ಎಲ್ಲರೂ ಕೊಠಡಿಗೆ ಬರುವ ಹೊತ್ತಿಗೆ ಜಾನಕಮ್ಮ ಹಾಸಿಗೆಯ ಮೇಲೆ ಮಲಗಿಕೊಂಡು ಸೂರಿನ ಕಡೆ ದೃಷ್ಟಿಸುತ್ತಿದ್ದರು. ಕಮಲಾ ಅವರ ಬಟ್ಟೆಗಳನ್ನು ಮಡಿಸಿ ಬೀರುವಿನಲ್ಲಿ ಇಡುತ್ತಿದ್ದಳು. ಮಕ್ಕಳಿಬ್ಬರೂ ಬಂದು ಕಾಲಿಗೆ ನಮಸ್ಕರಿಸುತ್ತಾ 'ಅಮ್ಮ ಹೇಗಿದ್ದೀರ? ಕಳೆದ ವರ್ಷ ನೋಡಿದ್ದಕ್ಕಿಂತಲೂ ಈ ಸಲ ಬಹಳ ಸೊರಗಿದ್ದೀರ. ಊಟ ತಿಂಡಿ ಚೆನ್ನಾಗಿ ಮಾಡ್ತಿದ್ದೀರ ತಾನೆ?' ಎಂದು ದೊಡ್ಡ ಮಗ ಕೈಹಿಡಿದು ಮಾತನಾಡಿಸಿದರೆ ಜಾನಕಮ್ಮನ ಮುಖದಲ್ಲಿ ಮಗನನ್ನು ನೋಡಿದ ಯಾವುದೇ ಸಂತೋಷವಾಗಲೀ, ಉತ್ಸಾಹವಾಗಲೀ ಇರಲಿಲ್ಲ. ಅವರ ಕಂಗಳು ಯಾರನ್ನೋ ಹುಡುಕುತ್ತಿರುವಂತೆ ಕಂಡಿತು. ಎರಡನೆಯ ಮಗ ಹತ್ತಿರಕ್ಕೆ ಬಂದು 'ಅಮ್ಮ, ನಾನು ಇಲ್ಲಿದ್ದೇನೆ ನೋಡು. ನಾವೆಲ್ಲರೂ ಬಂದಿದ್ದೇವೆ, ನಿನ್ನ ಇಬ್ಬರು ಸೊಸೆಯರೂ ಇಲ್ಲಿದ್ದಾರೆ,

ನೋಡು' ಎಂದು ಎಲ್ಲರೂ ಅವರ ಮುಖದ ಸಮೀಪಕ್ಕೆ ಬಂದಾಗ ಜಾನಕಮ್ಮ ಬೆದರಿದ ಹರಿಣಿಯಂತೆ ರಾಜಿಯತ್ತ ನೋಡುತ್ತಾ, "ಅಮ್ಮ, ಅಮ್ಮ ಬಾ ಇಲ್ಲಿ, ಇವರ್ಯಾರೋ ಗೊತ್ತಿಲ್ಲ ನನಗೆ. ದಯವಿಟ್ಟು ಹೊರಗೆ ಕಳಿಸು ಇವರನ್ನು. ನೀನಿಲ್ಲೇ ಇರು. ನನ್ನನ್ನು ಬಿಟ್ಟು ಹೊಲದ ಕಡೆ ಹೋಗ್ಬೇಡ. ನಾನಿವತ್ತು ಶಾಲೆಗೆ ಹೋಗಲ್ಲ. ನಿನ್ನ ಜೊತೆ ಮನೇಲಿ ಇರ್ತೀನಿ" ಎನ್ನುತ್ತಾ ಮಗುವಿನಂತೆ ರಾಜಿಯ ಕೈಯನ್ನು ಭದ್ರವಾಗಿ ಹಿಡಿದರು.

ರಾಜಿ ದಿಗ್ಭ್ರಾಂತಳಾದಳು. ಏನು ಮಾಡಬೇಕು, ಏನು ಹೇಳಬೇಕು ಎಂದು ತೋಚಲಿಲ್ಲ. ಒಮ್ಮೆಲೆ ತಿಳಿಯಿತು, ಅವರಿಗೆ ಸಂಪೂರ್ಣವಾಗಿ ಮರೆವು ಬಂದು ತಮ್ಮ ಬಾಲ್ಯದ ನೆನಪು ಮಾತ್ರ ಉಳಿದಿದೆ ಎಂದು. ತನ್ನನ್ನು ಅವರ ತಾಯಿಯೆಂದೇ ಭಾವಿಸಿದ್ದಾರೆ, ತಮಗೆ ಮಕ್ಕಳಿದ್ದಾರೆಂಬುವ ಪರಿಜ್ಞಾನವೂ ಇಲ್ಲವೆಂದು ತಕ್ಷಣವೇ ತಿಳಿಯಿತು. ಅವರ ತಲೆಯನ್ನು ಪ್ರೀತಿಯಿಂದ ನೇವರಿಸುತ್ತಾ ಮಿಕ್ಕೆಲ್ಲರಿಗೂ ದೂರ ಸರಿಯಲು ಕಣ್ಣಿನಲ್ಲೇ ಸನ್ನೆ ಮಾಡಿದಳು. ತಾನು ಅವರ ಮಂಚದ ಬಳಿ ಕುಳಿತು ಅವಳ ಕೈಯನ್ನು ಭದ್ರವಾಗಿ ಹಿಡಿದಿದ್ದ ಜಾನಕಮ್ಮನ ಕೈಗಳನ್ನು ತನ್ನ ಎರಡೂ ಕೈಗಳಿಂದ ಹಿಡಿದಾಗ ಅವರಿಬ್ಬರ ಕಣ್ಣುಗಳು ಸೇರಿದವು. ಜಾನಕಮ್ಮನ ಕಣ್ಣುಗಳು ರಾಜಿಯಲ್ಲಿ ಆಸರೆಯನ್ನು, ಪ್ರೀತಿಯನ್ನು ಬಯಸುತ್ತಿರುವಂತೆ ಕಾಣುತ್ತಿದ್ದವು, ಆ ನೋಟದಲ್ಲಿ ಯಾವ ದ್ವೇಷವಾಗಲಿ, ಕೋಪವಾಗಲಿ ಇರಲಿಲ್ಲ. ನಿರ್ಮಲವಾದ ಮನಸ್ಸು ಕಾಣಿಸಿತು. ರಾಜಿಗೆ ಇಷ್ಟು ದಿನ ಒಳಗೆ ಹಿಡಿದಿಟ್ಟಿದ್ದ ದುಃಖದ ಕಟ್ಟೆ ಒಡೆದು ಬಂದಂತಾಯಿತು. ಅತ್ತೆಗೆ ಈಗಲಾದರೂ ತನ್ನ ಮೇಲಿದ್ದ ಕೋಪ ಹೋಗಿ, ಕ್ಷಮಿಸಿದರಲ್ಲ ಎಂದೆನಿಸಿ ಎಷ್ಟು ತಡೆದರೂ ಕಣ್ಣೀರನ್ನು ಒಳಗೆ ಇಟ್ಟುಕೊಳ್ಳಲಾಗಲಿಲ್ಲ ಅವಳಿಗೆ. ಬಿಕ್ಕಿ ಬಿಕ್ಕಿ ಅತ್ತಳು. ಅತ್ತೆಯನ್ನು ಅಪ್ಪಿದಳು.

ಇವೆಲ್ಲವನ್ನು ನೋಡುತ್ತಿದ್ದ ಸುಜಾತಳಿಗೆ ಸುಮ್ಮನಿರಲಾಗಲಿಲ್ಲ. "ಇವರಲ್ಲಿ ಈ ಬದಲಾವಣೆ ಬರ್ಬೇಕಾದ್ರೆ ದೇವ್ರು ಅವರಿಗೆ ಆಲ್ಝೈಮರ್ಸ್ ರೋಗಾನೇ ಕೊಡ್ಬೇಕಾಯ್ತು. ಜೀವನ್ದಲ್ಲಿ ಆದ್ ಆ ಒಂದ್ ಘಟನೆನ ಮರೆತು ಅವಳ ಪ್ರೀತಿನ ಹಿಂದೆಯೇ ಸ್ವೀಕರಿಸಿದ್ರೆ ಅಕ್ಕಂಗೂ ಎಷ್ಟು ಸಂತೋಷ ಆಗಿರ್ತಿತ್ತು. ಪ್ರಜ್ಞೆ ಇದ್ದಾಗ್ಲೇ ಅವ್ರ ಹಠ ಬಿಟ್ಟು ಬದಲಾಗಿದ್ದಿದ್ರೆ ದೇವ್ರು ಮೆಚ್ಚ್ತಿರ್ತಿದ್ದ. ಅವ್ರ ಬುದ್ಧಿಗೆ ಗೊತ್ತಾಗ್ದೇ ಇದ್ರೂ, ಆ ಒಳ ಮನ್ಸಿಗೆ ಗೊತ್ತಾಗಿದೆ, ಯಾರ್ ಒಳ್ಳೆವ್ರು, ಯಾರ್ ಪ್ರೀತಿ ಮಾಡೋರು ಅಂತ. ಮನುಷ್ಯ ಒಳ್ಳೆಯವನಾಗಿ ಬದ್ಲಾಗಕ್ಕೆ ಸಾಯೋಕಾಲದ ತನಕ ಕಾಯ್ ಬಾರ್ದು" ಅಂತ ಎಲ್ಲರಿಗೂ ಕೇಳುವಂತೆ ವಟಗುಟ್ಟುತ್ತಿದ್ದರೆ, ರಾಜಿ ಮಾತ್ರ ಮಗುವನ್ನು ಸಂತೈಸಿದಂತೆ ಅತ್ತೆಯ ತಲೆಯನ್ನು ನೇವರಿಸುತ್ತಾ ಪ್ರೀತಿಯ ಕಡಲಲ್ಲಿ ತೇಲುತ್ತಿದ್ದಳು.

*

## ಹೂವಿನ ಪೂಜೆ

■ ವಿಮಲಾ ರಾಜಗೋಪಾಲ್, Media, PA.

*(ಸಂ: ೬೦ ವರ್ಷಗಳ ಹಿಂದೆ ಪ್ರಕಟವಾಗಿದ್ದ ಕಥೆ ಇದು. ವಸ್ತು ಮತ್ತು ಪ್ರಸ್ತುತಿಗಳೆರಡರಲ್ಲೂ ಆ ಕಾಲದ ಪ್ರತಿನಿಧಿ ಎನ್ನಬಹುದಾದ ಕಥೆ ಅಂದಿನ ಸಾಹಿತ್ಯದ ಒಲವು, ನಿಲುವುಗಳನ್ನು ನೆನಪಿಸಬಲ್ಲುದು, ಸಾಹಿತ್ಯ ಬೆಳೆದು ಬಂದ ದಾರಿಯನ್ನು ಅವಲೋಕಿಸುವಂತೆ ಮಾಡಬಲ್ಲದು.)*

– ೧ –

ಸುತ್ತಮುತ್ತಲೂ ಗಂಭೀರ ಮೌನ ತುಂಬಿತ್ತು. ಬೆಳದಿಂಗಳು ಸುಂದರವಾಗಿ ಚೆಲ್ಲಿತ್ತು ಆ ಹೂದೋಟದ ಮೇಲೆ. ದೃಷ್ಟಿ ಹರಿದಷ್ಟೂ ಬರೀ ಹೂವೇ. ಬನದಲ್ಲೆಲ್ಲಾ ತುಂಬಿತ್ತು ತೋಟದ ಹೂಗಳ ಕಂಪು. ಕೆಂಪು, ಬಿಳಿ, ನೀಲಿ, ಕನಕಾಂಬರ– ಎಲ್ಲ ಬಣ್ಣದ ಹೂಗಳೂ ಅಲ್ಲಿದ್ದವು.

ತೋಟಗಾರನ ಕಣ್ಣು ಸುಂದರ ಸ್ವಪ್ನವೊಂದನ್ನು ಕಾಣುತ್ತಿರುವಂತೆ ಅರೆನಿಮೀಲಿತವಾಗಿತ್ತು. ಸುತ್ತಲಿದ್ದ ಹೂಗಳ ಸೌಂದರ್ಯವನ್ನು ಸವಿಸವಿದು ಹೊರಗಣ್ಣು ಸುಖಿಸುತ್ತಿತ್ತು. ಆದರೆ ಬಗೆಗಣ್ಣು ಬೇರೊಂದು ಗುಣಾಕಾರ ಹಾಕುತ್ತಿತ್ತು. ನೋಡಿದೊಡನೆ ಕಣ್ಣಿಗೆ ಬಿದ್ದ ಹೊಂಬಣ್ಣದ ಹೂವು ಚಿನ್ನದ ನಾಣ್ಯದ ನೆನಪನ್ನು ತಂದಿತು. ತೋಟಗಾರ ಸುದಾಸ ತನ್ನೊಳಗೇ ತಾನು ತನ್ನದೇ ಏನೋ ಎಣಿಕೆ ಹಾಕಿಕೊಂಡು ನಸುನಕ್ಕನು. ಹೃದಯದ ಅವ್ಯಕ್ತಾನಂದ ಮನಸ್ಸನ್ನು ಪುಳಕಗೊಳಿಸುತ್ತಿತ್ತು.

ತೋಟದ ಕೊಳದ ದಡದಲ್ಲಿ ಕಾಲು ಅವನಿಗರಿವಿಲ್ಲದಂತೆ ಚಲಿಸಿತು. ಹಾಲು ಬೆಳುದಿಂಗಳು ಚೆಲ್ಲಿತ್ತು. ಬೆಳ್ಳಿಯ ತಗಡಿನಂತೆ ತಾವರೆ ಕೊಳದ ಮೇಲೆ ಬೆಳುದಿಂಗಳು ತೆಳುವಾಗಿ ಹರಡಿತ್ತು. ಹಾಲಿನಂಥ ಬೆಳುದಿಂಗಳು ಕೊಳದ ಮೇಲೆ ಹಾಯಾಗಿ, ಮುದ್ದಾಗಿ

ಮಲಗಿತ್ತು. ಕೊಳದ ಮೇಲೆ ಹಾಸಿದ ಬೆಳ್ಳಿಯ ತಗಡಿಗೆ ಅಲ್ಲಲ್ಲಿ ಮುತ್ತು ಹವಳ ಪೋಣಿಸಿದಂತೆ ಬಿಳಿ ತಿಳಿ ಕೆಂಪು ತಾವರೆ ಮೊಗ್ಗುಗಳು ಮುಗ್ಧವಾಗಿ ನಿದ್ರಿಸುತ್ತಿದ್ದವು.

ಊರಿಗೆಲ್ಲ ಹೆಸರುವಾಸಿಯಾದದ್ದು ತನ್ನ ತಾವರೆ ಕೊಳ; ತನ್ನ ತೋಟದ ಉಳಿದ ಹೂಗಳಾದರೂ ಅಷ್ಟೆ ಒಂದಕ್ಕೆರಡು ಬೆಲೆ ಹೇಳಿದರೂ ಜನ ಅದನ್ನು ಕೊಂಡುಕೊಳ್ಳುತ್ತಿದ್ದರು. ಕಾರಣ ಅವುಗಳ ವಿವಿಧತೆ. ಸೌಂದರ್ಯೋಪಾಸಕ ಸುದಾಸನ ಕಣ್ಣು ತಾನು ನಲ್ಮೆಯಿಂದ ಬೀಜ ಬಿತ್ತಿ, ನೀರು ಹಾಕಿ, ಪೋಷಿಸಿ ಬೆಳೆಸಿದ ಗಿಡಗಳ ಮೇಲೆ ಚಲಿಸುತ್ತಿತ್ತು.

ಇದೆಲ್ಲ ನೋಡುತ್ತಿದ್ದಂತೆ ಸೌಂದರ್ಯೋಪಾಸಕ ಸುದಾಸನ ಕಣ್ಣಲ್ಲಿ ನೀರು ತನಗರಿವಿಲ್ಲದಂತೆಯೆ ತುಂಬಿ ಬಂತು. ತನ್ನೆದೆಯಲ್ಲೂ ಯಾವುದೋ ಭಾವತಾವರೆ ಮೊಗ್ಗಿನಂತೆಯೇ ಮೊಗ್ಗಾಗಿ ಮನದಾಳದಲಿ ಸುಪ್ತವಾಗಿ ಅಡಗಿದೆ ಎಂದೆನಿಸುತ್ತಿತ್ತು. ಆದರೆ ಆ ಭಾವದ ತೆರ ಏನು ಎಂಬುದು ತನಗೆ ನಿಲುಕಲಾರದ ವಿಷಯವಾಗಿತ್ತು. ಮನದಲ್ಲಿ ವಿಚಿತ್ರ ಸಂಕಟ ತೂಗುತ್ತಿತ್ತು. ಕಾರಣವರಿಯದ ವಿಚಿತ್ರ ವೇದನೆ!

ಹೂವಾಡಿಗ ಸುದಾಸ ಹುಟ್ಟಿನಿಂದ ಸೌಂದರ್ಯಪ್ರೇಮಿ. ಬಗೆಬಗೆಯ ಹೂಗಳನ್ನು ತನ್ನ ತೋಟದಲ್ಲಿ ಬೆಳೆಸಿದ್ದ. ತನ್ನ ತೋಟದಲ್ಲಿ ನಿಂತು ದೂರದ ಬೆಟ್ಟದಲ್ಲಿ ಸುಂದರವಾಗಿ ಮೂಡಿದ ಬಿಳಿ ಮುಗಿಲನ್ನು ನೋಡಿ ನೋಡಿ ಅವನ ಹೃದಯ ಸಂತಸಗೊಳ್ಳುತ್ತಿತ್ತು. ತನ್ನ ಪುಟ್ಟ ಸುಂದರ ಕೊಳದ ತುಂಬ ಎಳೆ ಬಿಸಿಲಿನಲ್ಲಿ ಹೊಂಬಣ್ಣದ ಕಾಂತಿಯನ್ನು ಕೊಳದ ಮೇಲೆ ಹರಡಿ ಕೊಳದ ದೃಶ್ಯವನ್ನು ಅದ್ಭುತವೆನಿಸಿದ್ದ ಬಿಳಿದಾವರೆ ಅವನ ಹೃದಯವನ್ನು ಪೂರ್ಣವಾಗಿ ಸೆರೆ ಹಿಡಿಯಿತು. ಪ್ರತಿ ದಿನ ಆ ತಾವರೆ ಕೊಳಕ್ಕೆ ಭೇಟಿ ಕೊಡದಿದ್ದಲ್ಲಿ– ಅವನ ಸ್ನೇಹಿತರ ಮಾತಿನಲ್ಲಿ ಹೇಳುವುದಾದರೆ "ಅವನಿಗೆ ತಿಂದ ಅನ್ನ ಮೈಗೆ ಹಿಡಿಯುತ್ತಿರಲಿಲ್ಲ." ಹೊತ್ತು ಮುಳುಗಿದರೂ ಆ ತಾವರೆ ಕೊಳವನ್ನು ಅಗಲಲಾರನವನು.

– ೨ –

ಹೊರಗೆ ಕೊರೆಯುವ ಚಳಿ. ಇಬ್ಬನಿ ಒಂದೇ ಸಮನೆ ಸುರಿಯುತ್ತಿತ್ತು.

"ಈ ಮಾಗಿ ಇಬ್ಬನಿ ಹೀಗೆ ಒಂದೇ ಸಮನೆ ಸುರಿದರೆ ಹೂವಿನ ಗತಿ ಏನಾಗಬೇಕು?" ಸುದಾಸನಿಗೆ ಹಗಲು ರಾತ್ರಿ ಇಬ್ಬನಿಯಲ್ಲಿ ಮುದುಡಿ ಬಾಡಿ ಸೊರಗುತ್ತಿದ್ದ ತನ್ನ ತೋಟದ ಹೂಗಳದೇ ಚಿಂತೆ. ಮಾಗಿಯ ಚಳಿ ಕಂಬಳಿ ಹೊದ್ದು ಮಲಗಿದ್ದ ತನ್ನನ್ನೇ ನಡುಗಿಸುತ್ತಿತ್ತು. ಇನ್ನು ತನ್ನ ಮುದ್ದು ಹೂಗಳು! ಸುದಾಸನಿಗೆ ತನ್ನ ಹೂಗಳ ಯೋಚನೆ ಬಂದರೆ ನಿದ್ದೆ ಬರುತ್ತಿರಲಿಲ್ಲ.

ಪ್ರತಿದಿನ ಬೆಳಗಾಗುತ್ತಲೇ ತನ್ನ ಮನೆಯ ಮುಂದಿನ ಸುಂದರ ಕೈದೋಟದಿಂದ ಬಗೆಬಗೆಯ ಹೂಗಳನ್ನು ಬಿಡಿಸಿ ಸುಂದರವಾಗಿ ಮಾಲೆ ಕಟ್ಟಿ ಅದನ್ನು ಕುಚ್ಚುಗಳಾಗಿ ಮಾಡಿ ಊರೊಳಗಿನ ಪೇಟೆಯಲ್ಲಿ ಮಾರಿ ಬಂದರೆ ಅವನ ದಿನದ ಕೆಲಸ ಮುಗಿಯುತ್ತಿತ್ತು. ಮನೆಯಲ್ಲಿ ತಾನೊಬ್ಬನೇ. ತನ್ನವರಾಗಿ ಮಕ್ಕಳು ಮರಿ ಇದ್ದಿದ್ದರೆ ಅದೆಷ್ಟು ನಲ್ಮೆ

ತೋರುತ್ತಿದ್ದನೋ, ಅದಕ್ಕೆ ನೂರ್ಮಡಿಯಾದ ಅಕ್ಕರೆಯನ್ನು ತನ್ನ ಮುದ್ದು ತೋಟಕ್ಕೆ ಎರೆಯುತ್ತಿದ್ದನು ಸುದಾಸ!

ಈ ಅಕ್ಕರೆಗೆ ಮತ್ತೊಂದು ಕಾರಣವೂ ಇತ್ತು. ಅವನು ಅಕ್ಕರೆಯಿಂದ ನೀರೆರೆದು ಪೋಷಿಸಿದ ಹೂಗಳಿಂದ ಕೈ ತುಂಬ ಸಂಪಾದನೆಯೂ ಆಗುತ್ತಿತ್ತು. "ಸುದಾಸನ ಹೂಗಳನ್ನು ಬಿಟ್ಟರೆ ಇನ್ನಿಲ್ಲ" ಎನ್ನುತ್ತಿದ್ದರು ಜನ. ಅವನು ಒಂದಕ್ಕೆರಡು ಬೆಲೆ ಹೇಳಿದರೂ ಹೆಚ್ಚು ಚೌಕಾಸಿ ಮಾಡದೆ ಕೊಂಡುಕೊಳ್ಳುತ್ತಿದ್ದರು. ಇತರ ಹೂವಾಡಿಗರು ಹೂ ಕಟ್ಟುವಾಗ ಮಾಲೆಯಲ್ಲಿ ಜೋಡಿಸುವ ಬೇರೆಬೇರೆ ಬಣ್ಣದ ಹೂಗಳ ಸಮರಸತೆಗೆ ಅಷ್ಟಾಗಿ ಗಮನ ಕೊಡುತ್ತಿರಲಿಲ್ಲ. ಆದರೆ ಅಂಥ ವಿಚಾರದಲ್ಲಿ ಸುದಾಸ ಅತ್ಯಂತ ಎಚ್ಚರವಹಿಸುತ್ತಿದ್ದ. ಪಚ್ಚೆತೆನೆ, ಮರುಗ ಇವನ್ನು ಕನಕಾಂಬರದೊಡನೆ ಸೇರಿಸಿ ಒತ್ತಾಗಿ ಕಟ್ಟಿದರೆ ಎಷ್ಟು ಚೆಲುವಾಗಿ ಕಂಡೀತು ಎಂದು ಮನಸ್ಸಿನಲ್ಲೇ ಭಾವಿಸಿ ಭಾವಿಸಿ ಆ ಮಾಲೆಯನ್ನು ಕಟ್ಟುತ್ತಲೇ ಪುಳಕಗೊಳ್ಳುವನು.

ಪೇಟೆಯಲ್ಲೂ ಅವನು ನಿರೀಕ್ಷಿಸಿದಷ್ಟು ಹಣ ಕೈ ಸೇರುತ್ತಿತ್ತು. ಅವನ ಬಳಿ ಹೂ ಕೊಳ್ಳುವಾಗ ಗಿರಾಕಿಗಳಿಗೆ ಅವರವರಲ್ಲೇ ಸ್ಪರ್ಧೆ ಉಂಟಾಗುತ್ತಿತ್ತು. 'ತಾನು ಕೇಳಿದ್ದೇ ಬೆಲೆ; ಆಡಿದ್ದೇ ಆಟ' ಎನ್ನಿಸುತ್ತಿತ್ತು ಅವನಿಗೆ ಕೆಲವು ವೇಳೆ. ಹೂವಿನಾಸೆ ಕ್ರಮೇಣ ಹಣದಾಸೆಗೂ ತಿರುಗಿತು. ಹೆಚ್ಚು ಹೆಚ್ಚು ಹಣ ಕೈ ಸೇರಿದಂತೆ 'ಇನ್ನೂ ಹೆಚ್ಚು ಸಂಪಾದಿಸಲು ಏಕೆ ಪ್ರಯತ್ನಿಸಬಾರದು!' ಎನ್ನಿಸುತ್ತಿತ್ತು. ಕೊನೆಕೊನೆಗೆ ಕಷ್ಟಪಟ್ಟು ಬೆಳೆಸಿದ ಹೂವನ್ನು ನೋಡಿ ದೊರೆಯುತ್ತಿದ್ದ ಸಂತೋಷಕ್ಕೂ ಮಿಗಿಲಾಯಿತು ಆ ಹೂವು ಕೈ ತುಂಬ ಸಂಪಾದಿಸಿ ಕೊಡುತ್ತಿದ್ದ ಹಣ ಕೊಟ್ಟ ಸಂತೋಷ. ಅವನ ದೃಷ್ಟಿ ಅಂದಿನವರೆಗೆ ಇಲ್ಲದ ರೀತಿಯಲ್ಲಿ ತಾವರೆ ಕೊಳದ ಕಡೆಗೆ ಹರಿಯಿತು.

– ೩ –

ತಾವರೆ ಕೊಳದ ಬಗೆಗೆ ಇದ್ದ ಅಭಿಮಾನ ಮತ್ತಷ್ಟು ಹೆಚ್ಚಿತು. ಕೆಚ್ಚೆದೆಯಿಂದ ಮಾಗಿಯ ಇಬ್ಬನಿಯನ್ನೂ, ಕೊರೆಯುವ ಚಳಿಯನ್ನೂ ಎದುರಿಸಿ ಸ್ಥೈರ್ಯದಿಂದ ಸ್ನಿಗ್ಧವಾದ ಚೆಲುವನ್ನು ಬೀರುತ್ತಾ ಕೊಳದ ಮಧ್ಯೆ ನಿಂತಿತ್ತು ತಾವರೆ. ಅದನ್ನು ಕಿತ್ತು ತರುವುದು ಎಂಥ ಪ್ರಯಾಸವೆಂಬುದನ್ನು ತಿಳಿದೂ ತಿಳಿದೂ ಆ ವೃತ್ತಿಗೆ ಕೈ ಹಾಕಿದ ಸುದಾಸ. ಜೊತೆಯವರು ಎಷ್ಟು ತಡೆದರೂ ಕೇಳಲಿಲ್ಲ. ಮೊದಮೊದಲು ಒಂದು ತಾವರೆ ಹೂವನ್ನು ಕೀಳಲು ಪಡಬೇಕಾದ ಪ್ರಯಾಸವನ್ನು ನೆನೆದರೆ ಬೇಸರವೇನೋ ಆಗುತ್ತಿತ್ತು. ಏನೇನು ನಿರ್ಧಾರ ಮಾಡಿಕೊಂಡರೂ ಆ ಮುದ್ದು ಬಿಳೀದಾವರೆಯನ್ನು ಕಂಡೊಡನೆಯೇ ಬೇಸರವೆಲ್ಲಾ ಎಲ್ಲೋ ಹಾರಿ ಹೋಗುತ್ತಿತ್ತು. 'ತಾವರೆ ಹೂವಿಗೆ ತುಂಬಾ ಗಿರಾಕಿಯೇನೋ ನಿಜ. ಬೇಕಾದಷ್ಟು ದುಡ್ಡು ಸಿಗುತ್ತದೆ ನಿನಗೆ. ಹಾಗೆಂದ ಮಾತ್ರಕ್ಕೆ ಹಗಲೂ ರಾತ್ರಿ ಅದಕ್ಕಾಗಿ ಪ್ರಾಣ ಬಿಡುವುದು ಯಾವ ದೇವರಿಗೆ ಪ್ರೀತಿ?' ಎಂದು ಜೊತೆಯ ಹೂವಾಡಿಗರು ನುಡಿದರೆ ಏನು ಹೇಳಲೂ ತೋರುತ್ತಿರಲಿಲ್ಲ ಅವನಿಗೆ. ನಿಜವಾಗಿಯೂ ತಾನು

ದುಡ್ಡಿನಾಸೆಗಾಗಿ ತಾವರೆ ಹೂವಿನ ವ್ಯಾಪಾರಕ್ಕೆ ಕೈ ಹಾಕಿದೆನೆ? ಎಂದು ತನ್ನನ್ನು ತಾನೇ ಪ್ರಶ್ನಿಸಿಕೊಳ್ಳುತ್ತಿದ್ದನವನು.

ಆ ಒಂದು ಮುದ್ದು ಬಿಳಿದಾವರೆಯಲ್ಲಿ ತನ್ನ ಜೀವವೇ ಇದೆ ಎನ್ನಿಸುತ್ತಿತ್ತು ಅವನಿಗೆ. ಒಂಟಿಯಾಗಿ ಕೊಳದ ಬಳಿ ನಿಂತಾಗ ತನ್ನನ್ನು ಕುರಿತು ಏನೇನೋ ನುಡಿಯುತ್ತಿದೆ ಅದು ಎನ್ನಿಸುತ್ತಿತ್ತು. ಉಳಿದ ಹೂಗಳು ಚಳಿಗೆ ಬಾಡಿ ಸೊರಗಿರುವಾಗ ಧೈರ್ಯದಿಂದ ತಲೆಯೆತ್ತಿ ನಿಂತಿರುವ ಅದರ ಸ್ಥೈರ್ಯವನ್ನು ಕಂಡು ತಾನು ಮೆಚ್ಚಿ ಮುಗುಳ್ನಕ್ಕರೆ ಅದು ಕಂಡೂ ಕಾಣದಂತೆ ತನ್ನನ್ನು ನೋಡಿ ನಗುತ್ತಿದೆಯೇನೋ ಎನ್ನಿಸುತ್ತಿತ್ತು ಸುದಾಸನಿಗೆ.

'ಹೂವಿನಿಂದ ಎಷ್ಟು ದುಡ್ಡು ಮಾಡಿದರೂ ತೃಪ್ತಿ ಇಲ್ಲ ಸುದಾಸನಿಗೆ' ಎನ್ನುತ್ತಿದ್ದರು ಕೆಲವರು ಗೆಳೆಯರು ಅವನ ಎದುರಿಗೇ, ಅವನಿಗೆ ಕೇಳಿಸಿಯೂ ಕೇಳಿಸದಂತೆ. 'ಅಷ್ಟು ಹಣವನ್ನು ಯಾರಿಗೋಸ್ಕರ ಇಡಬೇಕು? ಮಕ್ಕಳೇ? ಮರಿಯೇ? ನಿನಗೂ ವಯಸ್ಸಾಯಿತು. ಅಷ್ಟು ಚೆನ್ನಾಗಿರುವ ಹೂದೋಟದ ಇತರ ಹೂಗಳನ್ನು ಕೊಯ್ಯುವುದನ್ನು ಬಿಟ್ಟು ಈ ತಾವರೆ ಮೊಗ್ಗಿಗೆ ಅದೆಷ್ಟು ಬವಣೆಪಡುತ್ತೀ!' ಎನ್ನುತ್ತಿದ್ದರು ಮತ್ತೆ ಕೆಲವರು. ಅವರೆಲ್ಲ ಹಾಗೆಂದಾಗ ತನ್ನನ್ನು ತಾನು ಯಾವ ರೀತಿ ಸಮರ್ಥಿಸಿಕೊಳ್ಳಬೇಕೆಂದು ಅವನಿಗೆ ತಿಳಿಯುತ್ತಿರಲಿಲ್ಲ. ಆದರೆ ಮನಸ್ಸಿನಲ್ಲೇನೋ ವಿಚಿತ್ರ ಸಂಕಟವಾಗುತ್ತಿತ್ತು. 'ಸುದಾಸಣ್ಣ ಬರುಬರುತ್ತಾ ಬಲು ಸಾಹುಕಾರನಾಗಿಹೋದ. ತಾವರೆ ವ್ಯಾಪಾರದಲ್ಲಿ ಬದುಕಿ ಹೋದ' ಎನ್ನುವವರ ಕುಹಕದ ನಗೆ ಮಾತಿಗೆ ಸರಿಯಾದ ಉತ್ತರ ಹೇಳಬೇಕು ಎನ್ನಿಸುತ್ತಿತ್ತು. ಆದರೆ ಏನು ಹೇಳಬೇಕೆಂದು ತೋರದೆ ಬೆಪ್ಪನಾಗುತ್ತಿದ್ದ. ಅವರಷ್ಟು ಜಾಣತನದಿಂದ ಮಾತಾಡುವ ಸಾಮರ್ಥ್ಯವಿಲ್ಲ ತನಗೆ. ಕೆಲವು ವೇಳೆ ತನಗೆ ನಿಜವಾಗಿಯೂ ಹಣದಾಸೆ ಬಲು ಜಾಸ್ತಿ. ತಾವರೆ ಹೂವಿನಲ್ಲಿ ಅಷ್ಟು ಮಮತೆ ಇರುವುದಕ್ಕೂ ಕಾರಣ ತನ್ನ ದುಡ್ಡಿನಾಸೆಯೇ ಎಂಬ ಭ್ರಮೆಯುಂಟಾಗುತ್ತಿತ್ತು. 'ತನ್ನ ಹೊಟ್ಟೆ ಬಟ್ಟೆಗೆ ಬೇಕಾದುದಕ್ಕಿಂತ ಸ್ವಲ್ಪ ಹೆಚ್ಚಿಗೆ ಸಂಪಾದನೆ ಮಾಡಿಕೊಂಡರೆ ಅದರಿಂದ ಇವರಿಗೇನು ನಷ್ಟ?' ಎಂದು ಒಮ್ಮೊಮ್ಮೆ ಸಿಡುಕಿಕೊಳ್ಳುತ್ತಿದ್ದನವನು. ಆದರೆ ಅದರಿಂದ ಮನಸ್ಸಿಗೆ ಸಮಾಧಾನ ದೊರೆಯುತ್ತಿರಲಿಲ್ಲ.

– ೪ –

ತನ್ನ ದಿನದ ಅಭ್ಯಾಸದಂತೆ ಸೂರ್ಯ ಹುಟ್ಟುವ ಮೊದಲೇ ಎದ್ದು ಸುದಾಸ ತನ್ನ ತೋಟಕ್ಕೆ ಅಂದೂ ಸಾಗಿದ. ತೋಟದಲ್ಲಿ ಸುತ್ತಾಡಿ ಕೊಳದ ತಡಿಗೆ ಬಂದಾಗ ಕೊಳದ ಮಧ್ಯದಲ್ಲಿ ದಿಟ್ಟಿ ನಾಟಿತು. ಎಲ್ಲ ಹೂಗಳ ಮಧ್ಯೆ ಅತ್ಯಂತ ಸುಂದರವಾದ ಆ ಬಿಳಿದಾವರೆ ಎಣೆಯಿಲ್ಲದ ಚೆಲುವಿನಿಂದ ಶಾಂತವಾಗಿ ಕಂಗೊಳಿಸುತ್ತಿತ್ತು. ಇತರ ಹೂಗಳು ತಮ್ಮ ಚೆಲುವಿಗೆ ತಾವೇ ಮಾರುಹೋಗಿ ಬೆಡಗು ಬೀರುತ್ತಿರುವಂತೆ ಕಂಡರೆ ಇದೊಂದು ಮುದ್ದು ಹೂವು ಹಾಲ್ಗಲ್ಲದ ಹಸುಳೆಯಂತೆ ನಿರಾತಂಕವಾಗಿ ತನ್ನ ಸುತ್ತಮುತ್ತಲ ಪ್ರಪಂಚದ ಪರಿವೆಯಿಲ್ಲದೆ ತಂಗಾಳಿಗೆ ಹಗುರವಾಗಿ ಮೈಯೊಡ್ಡಿತ್ತು. ಮತ್ತೊಂದು ಕ್ಷಣದಲ್ಲೇ ತನ್ನಲ್ಲಿ

ತಾನು ಮಗ್ನನಾಗಿರುವ ಧ್ಯಾನಿಯಂತೆ ಯೋಗಿಯಂತೆ ನಿರ್ಲಿಪ್ತತೆಯಿಂದ ಧ್ಯಾನಿಸುವಂತೆ ಕಾಣುತ್ತಿತ್ತು.

ತನ್ನ ಕಣ್ಮಣಿಯಂತಿದ್ದ ಆ ಬಿಳಿದಾವರೆಯನ್ನು ಕೀಳುವಾಗ ಅವನ ಕೈ ತಡೆಯಿತು. ಎಂದಿನಂತಲ್ಲದೆ ಮನಸ್ಸಿನಲ್ಲಿ ಚಿತ್ರವಿಚಿತ್ರ ಯೋಚನೆಗಳು ಒಂದೇ ಸಮನೆ ನುಗ್ಗಿ ಬರುತ್ತಿದ್ದವು. ಆ ತಾವರೆಯನ್ನು ದೋಟಿಯ ಸಹಾಯದಿಂದ ಕೀಳುವಾಗ ಹೃದಯವೇ ಕಿತ್ತು ಬಂದಂತಾಯಿತು. ಆ ಹೂವನ್ನು ಕಿತ್ತೊಡನೆಯೇ ಕೊಳವೇ ಬರಿದಾಗಿ ಕಂಡಿತು. ಇಡೀ ಕೊಳದ ಕಾಂತಿಯನ್ನೇ ಆ ಹೂವು ತನ್ನೊಡನೆ ಸೆಳೆದುಕೊಂಡಿತ್ತು. ತಾನು ಅಪರಾಧಿ ಎನ್ನಿಸಿತ್ತು. ದೋಟಿಯ ತುದಿಯ ಕೊಕ್ಕೆಯ ಬಿಗಿಯಾದ ಹಿಡಿತಕ್ಕೆ ಸಿಕ್ಕಿದ್ದ ಆ ಮುದ್ದು ಮಿಳಿದಾವರೆಯನ್ನು ಕಂಡಾಗ ಸುದಾಸನ ಎದೆಯ ಬಡಿತ ವೇಗವಾಯಿತು. ಅದರ ಕಡೆಗೆ ತಿರುಗಿ ನೋಡುವ ಧೈರ್ಯವಾಗಲಿಲ್ಲ. ಆ ಹೂವು ಕೀಳುವ ಮೊದಲು ಅದನ್ನು ಕಿತ್ತಾಗ ತನಗೆಷ್ಟು ಆನಂದವಾಗಬಹುದೆಂದು ಕಲ್ಪಿಸಿಕೊಂಡಿದ್ದನೋ ಅವನು! ಆದರೆ ಈಗ?

ಎಂದಿನಂತೆ ಆ ಬಿಳಿದಾವರೆಯನ್ನು ಇತರ ಹೂಗಳೊಂದಿಗೆ ಎಳೆ ಬಾಳೆಯೆಲೆಯಲ್ಲಿ ಸುತ್ತಿ ದೊಡ್ಡ ಕುಕ್ಕೆಯಲ್ಲಿ ಅಣಿ ಮಾಡಿಕೊಂಡು ಪೇಟೆಗೆ ಹೊರಟಾಗ ಮನಸ್ಸು ಕ್ಷುಬ್ಧವಾಗಿತ್ತು; ಚಂಚಲವಾಗಿತ್ತು. ದಾರಿಯಲ್ಲಿ ತಗ್ಗಿಸಿದ ತಲೆ ಎತ್ತಲಿಲ್ಲ. ಅವನಿಗರಿಯದಂತೆ ಅಭ್ಯಾಸ ಬಲದಿಂದ ಕಾಲುಗಳು ಅವನನ್ನು ಪೇಟೆಗೆ ತಂದುಬಿಟ್ಟವು.

ತನಗೇ ಅರಿವಿಲ್ಲದಂತೆ ಯಾಂತ್ರಿಕವಾಗಿ ವ್ಯಾಪಾರ ನಡೆಸಿದ್ದ ಸುದಾಸ. ಎಂದಿನಂತೆಯೇ ಹಿಂಡುಗಟ್ಟಲೆ ಗಿರಾಕಿಗಳು ಒಬ್ಬರ ಮೇಲೊಬ್ಬರು ನುಗ್ಗಿ ಬರುತ್ತಿದ್ದರು. ಬಿಡುವಿಲ್ಲದ ವ್ಯಾಪಾರ. ಗಿರಾಕಿಗಳೊಡನೆ ಬಿಡುವಿಲ್ಲದ ಮಾತುಕಥೆ. ದಿನವೂ ಆಡಿದ ಮಾತೇ! ಆದರೂ ಪ್ರತಿ ದಿನ ಕೇಳಿ ಕೇಳಿ ಕಿವಿಗೆ ಅಭ್ಯಾಸವಾಗಿ ಹೋಗಿದ್ದ ಆ ಮಾತೂ ಏನೋ ವಿಚಿತ್ರವಾಗಿ ಕಂಡುಬಂತು ಅವನ ಮನಸಿಗೆ. ಎಲ್ಲೋ ಕನಸಿನಲ್ಲಿ ತಾನು ಇದೆಲ್ಲವನ್ನೂ ಕಾಣುತ್ತಿರುವೆನೇನೋ ಎನ್ನಿಸುತ್ತಿತ್ತು. ತನ್ನೊಡನೆ ಪ್ರತಿಸ್ಪರ್ಧೆ ನಡೆಸುತ್ತಿದ್ದ ಜೊತೆಯ ಹೂವಾಡಿಗರ ಕೂಗನ್ನು ಮೀರಿಸಿ ತನ್ನ ಹೂವಿನ ಪ್ರಶಂಸೆ ಮಾಡಿ ಗಿರಾಕಿಗಳನ್ನು ತನ್ನೆಡೆಗೆ ಸೆಳೆದುಕೊಳ್ಳುವ ಉತ್ಸಾಹ ಎಲ್ಲೋ ನಾಚಿ ಅವಿತುಕೊಂಡಿತ್ತು.

ಒಂದೇ ನಿಮಿಷದಲ್ಲಿ ಮಿಕ್ಕ ಹೂಗಳೆಲ್ಲ ಮಾರಾಟವಾಗಿ ಹೋದವು. ಇನ್ನುಳಿದದ್ದು ಆ ಮುದ್ದು ಬಿಳಿದಾವರೆ ಹೂವು. ಬಹಳ ಹೊತ್ತಿನವರೆಗೆ ಅದನ್ನು ಅವನು ಹೂಬುಟ್ಟಿಯಿಂದ ಈಚೆಗೆ ತೆಗೆದು ಗಿರಾಕಿಗಳಿಗೆ ಕಾಣುವಂತೆ ಇಟ್ಟೇ ಇರಲಿಲ್ಲ. ಹಾಗೆ ಮಾಡಲು ಅವನಿಗೆ ಕೈ ಬರಲಿಲ್ಲ. ಅಪಾರ ಪ್ರೇಮದಿಂದ ಆ ಹೂವಿನ ಮೇಲೆ ಬೆರಳಾಡಿಸಿದನು. ಕೊಳದಲ್ಲಿ ಪ್ರತಿಬಿಂಬಿತವಾಗಿದ್ದ ಆಕಾಶದ ಸುಂದರ ನೀಲಿಮೆಯ ಮಧ್ಯದಿಂದ ಈ ಬಿಳಿದಾವರೆ ಹೊರಟಂತೆ ಕಾಣುತ್ತಿದ್ದಾಗಿನ ಆ ಸೌಂದರ್ಯ ಇನ್ನೂ ಕಣ್ಣಿಗೆ ಕಟ್ಟಿದಂತಿತ್ತು. ಈಗ ಅದನ್ನು ಅದರ ಸಹಜ ಸುಂದರ ನೆಲೆಯಿಂದ ಕಿತ್ತು ತಂದುದು ಎಣೆ ಇಲ್ಲದ ಅಪರಾಧ ಎಂಬ ಭಾವ ಮನಸ್ಸಿನಲ್ಲಿ ಮೂಡಿತು. 'ಅದರ ಯೋಗ್ಯ ಸ್ಥಾನದಿಂದ ನಾನದನ್ನು ಕಿತ್ತೆ.

ಅದನ್ನು ಅದಕ್ಕೆ ಯೋಗ್ಯವಾದ ಸ್ಥಾನಕ್ಕೆ ಸೇರಿಸಬೇಕು' ಎಂದು ಮನಸ್ಸು ಕಾತರಗೊಂಡಿತು. ಆದರೆ ಮತ್ತೆ ಮರುಕ್ಷಣವೇ ಅವನ ವ್ಯಾಪಾರಿ ಮನೋವೃತ್ತಿ ತಾನೇತಾನಾಯಿತು.

'ಇದೇನು ಮಂಕು ಕವಿದುಕೊಂಡಿತು ನನಗೆ!' ಎಂದು ಕರ್ತವ್ಯ ವಿಮುಖನಾದುದಕ್ಕೆ ತನ್ನನ್ನು ತಾನೇ ನಿಂದಿಸಿಕೊಂಡನು. ಮತ್ತೆ ಹಿಂದಿನ ದಿನಗಳ ಗೆಲುವು ಮೂಡಿತು. 'ಹೂವನ್ನು ಕೀಳುವುದಂತೂ ಕಿತ್ತಾಯಿತು. ಆ ಕೊಳದಲ್ಲೇ ಇದ್ದಿದ್ದರೆ ಎಷ್ಟೋ ಚೆನ್ನಾಗಿರುತ್ತಿತ್ತು ಎಂಬುದೇನೋ ನಿಜ. ಆದರೆ ಈಗ ಕಾರ್ಯ ಮಿಂಚಿದೆ. ಕಿತ್ತ ಮೇಲೆ ಅದನ್ನು ಗಿರಾಕಿಗಳ ಕಣ್ಣಿಗೆ ಬೀಳಿಸದೆ ಬುಟ್ಟಿಯೊಳಗೇ ಅಡಗಿಸಿಟ್ಟು ಅದನ್ನು ಬಾಡಿಸುವುದು ಯಾವ ನ್ಯಾಯ?' ಎಂದು ಅವನೊಳಗಿನ ವಿವೇಕ ನುಡಿಯಿತು.

'ನನ್ನ ಈ ಬಂಗಾರದಂಥ ಹೂವಿನ ಬೆಲೆ ಬಂಗಾರವೇ!' ಎಂದು ತನಗೆ ತಾನೇ ಹೇಳಿಕೊಂಡಾಗ ಅವನ ತುಟಿಯ ಮೇಲೆ ತೃಪ್ತಿಯ ನಗು ಸುಳಿಯಿತು. 'ಬಂಗಾರ! ಬಂಗಾರ!' ಎಂಬುದಾಗಿ ಅವನು ಯೋಚಿಸಿಕೊಂಡಂತೆಲ್ಲ ಮನಸ್ಸಿಗೆ ಹಿಡಿಸಲಾರದಷ್ಟು ಹಿಗ್ಗಾಯಿತು. 'ಬಂಗಾರ ತನ್ನ ಬಗಲಿಗೆ ಬೀಳುತ್ತದೆ' ಎಂಬುದರ ಅರಿವಿನಿಂದ ಆ ಆನಂದ ಅನುಭವವಾಯಿತೋ, ಇಲ್ಲವೇ ತನ್ನ ದೃಷ್ಟಿಯಲ್ಲಿ ಅನರ್ಘ್ಯವೆನಿಸಿದ್ದ ಅಮೂಲ್ಯವೆನಿಸಿದ್ದ ತನ್ನ ಅಚ್ಚುಮೆಚ್ಚಿನ ಮುದ್ದು ಹೂವಿಗೆ ಸರಿಯಾದ ಬೆಲೆಯನ್ನು ತಾನೇ ನಿಗದಿ ಮಾಡುವುದರಲ್ಲಿ ಜಯಶಾಲಿಯಾದೆ ಎಂಬ ಅರಿವಿನಿಂದ ಅಷ್ಟು ಸಂತೋಷವಾಯಿತೋ ಅದನ್ನು ಅವನೇ ನಿರ್ಧರಿಸಲಾರದೆ ಹೋದನು.

ತನ್ನ ಹೂವನ್ನು ಅವನು ಮತ್ತೊಮ್ಮೆ ಕಣ್ತುಂಬ ನೋಡಿದನು. ಅದರ ದಳದಳವೂ ಬಿಡಿಬಿಡಿಯಗಿ ಮುದ್ದಾಗಿ ಬಾಳೆಯ ಹಸಿರಿನ ಹಿನ್ನೆಲೆಯಲ್ಲಿ ಸಿರಿಸಿರಿಯಾಗಿ ಕಣ್ಣಿಗೆ ಸೊಗಸಿನ ಚೆಲುವಿನ ನವದರ್ಶನವನ್ನು ಮಾಡಿಕೊಡುತ್ತಿತ್ತು. ಅದನ್ನು ನೋಡುನೋಡುತ್ತಾ ಸುದಾಸನ ಮನಸ್ಸು ಎಲ್ಲೋ ಸ್ವಪ್ನ ಸಾಮ್ರಾಜ್ಯಕ್ಕೆ ತೇಲಿತು. ವಿಧವಿಧ ಭಾವನೆಗಳು ಹೃದಯವನ್ನು ಮುತ್ತಿದವು. ಹೂವನ್ನು ಕಿತ್ತಾಗಿನ ವೇದನೆ ಈಗ ಮರೆಯಾಗಿತ್ತು.

– ೫ –

"ಈ ಹೂವಿಗೆಷ್ಟು ಬೆಲೆ?"

ಸುದಾಸ ಸ್ವಪ್ನ ಸಾಮ್ರಾಜ್ಯದಿಂದ ಭೂಮಿಗಿಳಿದು ತಲೆ ಎತ್ತಿ ನೋಡಿದ. ಕಣ್ಣೆದುರಿಗೆ ಶುಭ್ರವಸನಧಾರಿ ಯುವಕನೊಬ್ಬ ನಗುನಗುತ್ತಾ ನಿಂತಿದ್ದ. ಪ್ರವಾಸಿಯಂತೆ ಅವನ ವೇಷಭೂಷಣ ಇತ್ತು. ಅವನ ಕೈಯಲ್ಲಿ ತನ್ನ ಅಕ್ಕರೆಯ ಹೂವನ್ನು ಕಂಡಾಗ ಸುದಾಸನ ಎದೆಗೆ ಹಾರೆ ಹಾಕಿದಂತಾಯಿತು. ಹುಚ್ಚನಂತೆ ಚೀರಿದ : "ಕೊಡಿ ಸ್ವಾಮಿ, ಅದನ್ನಿಲ್ಲಿ. ನನ್ನದು ಆ ಹೂವು!"

ಯುವಕನ ಕಣ್ಣು ಆಶ್ಚರ್ಯದಿಂದ ಅರಳಿತು. ""ನಿನ್ನ ಹೂವನ್ನು ನಾನೇನು ಹಾರಿಸಿಕೊಂಡು ಹೋಗಲು ಬಂದಿಲ್ಲ. ತಮ್ಮಾ, ಈ ಹೂವನ್ನು ನಿನ್ನಿಂದ ಕೊಂಡುಕೊಳ್ಳುತ್ತೇನೆ.

ಬೆಲೆ ಎಷ್ಟಾದರೂ ಚಿಂತೆಯಿಲ್ಲ. ಈಗ ನನಗೆ ಹೆಚ್ಚು ಬಿಡುವಿಲ್ಲ. ಬೇಗ ಒಂದು ಬೆಲೆ ಹೇಳು" ಎಂದು ಆ ಯುವಕ ಅತ್ಯಂತ ತುರ್ತಿನ ಕಾರ್ಯದಲ್ಲಿರುವವನಂತೆ ನುಡಿದ.

ಸುದಾಸನಿಗೆ ತನ್ನ ಮರೆವೆಯನ್ನು ಕಂಡು ನಾಚಿಕೆಯಾಯಿತು. "ಕ್ಷಮಿಸಿ ಸ್ವಾಮಿ. ಯಾವುದೋ ಜ್ಞಾನದಲ್ಲಿದ್ದೆ. ಏನೋ ನುಡಿದೆ" ಎಂದ. ಅಷ್ಟಾದರೂ ನಾಲಿಗೆ ಹೂವಿನ ಬೆಲೆ ಹೇಳಲು ಏತಕ್ಕೋ ಹಿಂದೇಟು ಹಾಕುತ್ತಿತ್ತು. ಅದೇಕೆ ಎಂಬುದು ಅವನಿಗೇ ತಿಳಿಯದು.

ಯುವಕನಿಗೆ ಸುದಾಸನ ಕ್ಷಮಾಪಣೆ ಬೇಕಿರಲಿಲ್ಲ. "ಅದಿರಲಿ, ಅದರ ಬೆಲೆ ಹೇಳು. ಹಿಂದೆ ಮುಂದೆ ನೋಡಬೇಡ. ಹೆಚ್ಚಾದರೂ ಚಿಂತೆಯಿಲ್ಲ. ನಿನ್ನ ಮನಸ್ಸಿನಲ್ಲಿರುವುದು ನನಗೆ ಗೊತ್ತು. ನಿನ್ನೊಡನೆ ಮಾತಾಡುತ್ತಾ ನಿಲ್ಲಲು ನನಗೆ ಸಮಯವಿಲ್ಲ" ಎಂದು ಅವಸರಿಸಿದ.

"ಇದರ ಬೆಲೆ... ಒಂದು ಮಾಶ" ಸುದಾಸ ತಡವರಿಸಿದ. 'ಒಂದು ಸಣ್ಣ ಹೂವಿಗೆ ಅಷ್ಟು ಹೆಚ್ಚು ಬೆಲೆ ಹೇಳಿದರೆ ಆ ಯುವಕ ಹಿಂತಿರುಗಿ ಹೋಗುತ್ತಾನೇನೊ. ತನ್ನ ಹೂವು ತನ್ನ ಸ್ವತ್ತಾಗಿಯೇ ಉಳಿಯುತ್ತದೆಯೇನೊ' ಎಂದು ಮನಸ್ಸಿನ ಮೂಲೆಯಲ್ಲಿ ಆಸೆಯೊಂದು ಕುಡಿಯಿಡುತ್ತಿತ್ತು.

ಆದರೆ ಸುದಾಸನ ನಿರೀಕ್ಷೆಗೆ ತೀರಾ ವಿರುದ್ಧವಾಗಿದ್ದಿತು ಆ ಯುವಕನ ಪ್ರತಿಕ್ರಿಯೆ.

"ಅಯ್ಯೋ! ಅಷ್ಟೇ ತಾನೇ! ಒಂದು ಮಾಶ ಈ ಮುದ್ದು ಹೂವಿಗೆ ತೀರಾ ಕಡಿಮೆ!" ಯುವಕ ಆಸೆ ತುಂಬಿದ ಕಣ್ಣುಗಳಿಂದ ಆ ಹೂವನ್ನು ದೃಷ್ಟಿಸುತ್ತ ಒಂದು ಮಾಶ ಬಂಗಾರವನ್ನು ಹೊರತೆಗೆಯಲು ಅನುವಾದ.

ಇನ್ನೇನು ಒಂದೆರಡು ಕ್ಷಣ! ಈ ಹೂವು ಅವನದಾಗುತ್ತದೆ... ಆದರೆ ಒಂದು ಮಾಶ ಬಂಗಾರ ಕೈಗೆ...! ಸುದಾಸನ ಹೃದಯ ಸಂತೋಷ-ದುಃಖಗಳೆರಡರ ನಡುವೆ ಉಯ್ಯಾಲೆಯಾಡಿತು.

ಅಷ್ಟರಲ್ಲಿ ದೂರದಿಂದ ದೊರೆಯ ಮೆರವಣಿಗೆ ಅದೇ ಮಾರ್ಗವಾಗಿ ವಿಜೃಂಭಣೆಯಿಂದ ಬಂದಿತು. ಎಲ್ಲರ ದೃಷ್ಟಿಯೂ ಒಂದು ಕ್ಷಣ ಆ ಕಡೆಗೆ ಹೊರಳಿತು. ಜನರೆಲ್ಲ ಯಾವುದೋ ಉತ್ಸವಕ್ಕೆ ಹೋಗಲು ಸಡಗರದಿಂದ ಸಿದ್ಧರಾಗುತ್ತಿದ್ದರು. ಮರುಕ್ಷಣವೇ ದೃಷ್ಟಿ ತಿರುಗಿಸಿ ತಮ್ಮ ತಮ್ಮ ವ್ಯಾಪಾರದಲ್ಲಿ ಮಗ್ನರಾದರು ಅವರು. ಸುದಾಸ ತನ್ನ ಕಣ್ಣುಗಳನ್ನು ನಂಬದಾದ. ರಾಜನೆಂದರೆ ಎಂಥವರಾದರೂ ಬಾಯಿಬಿಟ್ಟು ನೋಡುತ್ತಾ ನಿಲ್ಲುತ್ತಾರೆ ಎಂಬುದೇ ಅವನ ತಿಳಿವಳಿಕೆ. ಆದರೆ ಇಂದು, ತಾನಿದುವರೆಗೆ ಯಾರನ್ನು ಒಂದು ಅಪೂರ್ವ ವ್ಯಕ್ತಿಯೆಂದು ತಿಳಿದಿದ್ದನೋ, ಆ ಪ್ರಸೇನಜಿತ್ ರಾಜೇಂದ್ರ ತಮ್ಮೆದುರಿಗೇ ಕಾಲ್ನಡಿಗೆಯಲ್ಲಿ ಬರುತ್ತಿದ್ದರೂ ತಿರುಗಿನೋಡಲೂ ಪುರುಸೊತ್ತಿಲ್ಲದ ಸಡಗರದಲ್ಲಿದ್ದರು ಜನರು.

"ಇದೇನು ರಹಸ್ಯ!" ಎಂದುಕೊಂಡ ಸುದಾಸ. ಪ್ರಸೇನಜಿತ್ ರಾಜೇಂದ್ರ ಬರೀ ಕಾಲ್ನಡಿಗೆಯಲ್ಲಿ ಬರುತ್ತಿದ್ದಾನೆ! ಅವನ ಹಿಂದೆ, ಅಪೂರ್ವಕಾಂತಿಯಿಂದ ಥಳಥಳಿಸುತ್ತಿದ್ದ

ರಥದಲ್ಲಿ ಅನರ್ಘ್ಯವಸ್ತುಗಳನ್ನು ತುಂಬಿಕೊಂಡು ರಾಜನ ಸಂಗಡಿಗರು, ಅರಮನೆಯವರು ನಡೆದು ಬರುತ್ತಿದ್ದಾರೆ!

ಕಡೆಗೆ ಮೆರವಣಿಗೆ ಸಮೀಪಿಸಿದಾಗ, ಪ್ರಸೇನಜಿತ್ ತನ್ನ ಬಳಿಗೇ ಬಂದು, ತನ್ನ ಬಳಿಯಿದ್ದ ಆ ತಾವರೆಯ ಬೆಲೆಯನ್ನು ಕೇಳಿದಾಗ ಸುದಾಸ ತನ್ನ ಕಣ್ಣು, ಕಿವಿಗಳನ್ನು ನಂಬಲಾರದೆ ಹೋದ.

ತನ್ನಂಥ ದರಿದ್ರ ಹೂವಾಡಿಗನ ಬಳಿಗೆ ರಾಜ ತಾನೇ ಸ್ವತಃ ವ್ಯಾಪಾರ ನಡೆಸಲು ಬಂದನೆಂದರೆ ತನ್ನ ಭಾಗ್ಯಕ್ಕೆ ಎಣೆಯಿಲ್ಲ!

ಇನ್ನು ತನ್ನ ಅದೃಷ್ಟದ ಬಾಗಿಲು ತೆರೆದಂತಾಯಿತು. ಸುದಾಸನಿಗೆ ಆನಂದದಿಂದ ಮೈಮರೆಯುವಂತಾಯಿತು. ಆದರೆ ಅದರೊಡನೆ ಏನೋ ಆತಂಕ.

"ನಾನು ಬುದ್ಧ ಗುರುವಿಗೆ ಅರ್ಪಿಸಲು ಕೊಂಡೊಯ್ಯುತ್ತಿರುವ ಬೆಲೆಬಾಳುವ ಎಲ್ಲ ವಸ್ತುವೂ ಈ ಒಂದು ಕಮಲ ಪುಷ್ಪದ ಮುಂದೆ ಕೆಲಸಕ್ಕೆ ಬಾರದವು. ಎಲ್ಲಿ ಬೇಗ ಹೇಳು, ಇದರ ಬೆಲೆಯೇನು?"

'ಸ್ವಾಮಿ, ಇದರ ಬೆಲೆ ಒಂದು ಮಾಶ ಬಂಗಾರ. ಈಗ ತಾನೇ ಇವರು ಅದನ್ನು ಅಷ್ಟು ಬೆಲೆಗೆ ಕೇಳಿದ್ದಾರೆ." ಸುದಾಸ ವಿನಯದಿಂದ ನುಡಿದ.

ರಾಜ ನಕ್ಕು 'ಓ ಅಷ್ಟೇನೇ! ಒಂದು ಮಾಶವೇಕೆ? ನಾನಿದಕ್ಕೆ ಹತ್ತು ಮಾಶ ಬಂಗಾರ ಕೊಡಲು ಸಿದ್ಧನಾಗಿದ್ದೇನೆ. ಹೂ ನನಗೆ ಕೊಡು" ಎಂದು ನುಡಿದ.

'ಓ ಇಲ್ಲ, ಅದು ನನಗೆ ಬೇಕು. ನಾನು ಇದಕ್ಕೆ ಇಪ್ಪತ್ತು ಮಾಶ ಹೊನ್ನು ಕೊಡಬಲ್ಲೆ" ಎಂದು ನುಡಿದ ಆ ಯುವಕ ಪ್ರವಾಸಿ.

"ಹೋಗಲಿ, ನನಗೆ ನೂರಕ್ಕೆ ಕೊಡು" ರಾಜ ಕೇಳಿದ.

ರಾಜ ಮತ್ತು ಪ್ರವಾಸಿ ಇವರ ನಡುವೆ ದೊಡ್ಡ ಸ್ಪರ್ಧೆಯೇ ನಡೆಯಿತು. ಯಾರಿಗೆ ಯಾರೂ ಸೋಲಲಿಲ್ಲ.

ತನ್ನ ಮುದ್ದು ಬಿಳಿ ಹೂವಿನ ಬೆಲೆ ಕ್ಷಣಕ್ಷಣಕ್ಕೂ ಏರುತ್ತಿತ್ತು. ಆದರೆ ಅದರಿಂದ ತನ್ನ ಮನಸ್ಸಿಗೆ ಯಾವ ಬಗೆಯ ಸಂತೋಷವೂ ಆಗದುದನ್ನು ಕಂಡು ಸುದಾಸನಿಗೇ ಆಶ್ಚರ್ಯವಾಯಿತು. ತನ್ನ ಹೂವಿಗೆ ಮಣ ಮಣ ಬಂಗಾರ ಕೊಡಲು ಇಂಥವರು ಸಿದ್ಧರಾಗಿದ್ದಾರೆಂದು ಹಿಂದೆ ಯಾರಾದರೂ ತನಗೆ ಹೇಳಿದ್ದರೆ ತಾನು ಆನಂದದಿಂದ ಹುಚ್ಚಾಗುತ್ತಿದ್ದನೇನೋ! ಆದರೆ ಇಂದು ತನ್ನ ಹೂವಿನ ಬೆಲೆ ಏರುತ್ತಾ ಹೋದಂತೆ ಸುದಾಸನ ಹೃದಯವನ್ನು ಗಾಢವಾದ ದುಃಖ ಕವಿಯುತ್ತಾ ಬಂತು. ಕಾರಣ ಅವನಿಗೇ ತಿಳಿಯದು. ಆ ಹೂವು ತನ್ನಿಂದ ದೂರವಾಗುವ ಸಮಯ ಹತ್ತಿರವಾಯಿತೆಂಬ ಕಳವಳ ಹೃದಯದಲ್ಲಿ ಹೆಚ್ಚಿತು.

ಸುದಾಸ ಇನ್ನೂ ಅನುಮಾನಿಸುತ್ತಾ ನಿಂತಿರುವುದನ್ನು ಕಂಡು ಅವನ ಸುತ್ತಲಿದ್ದವರಿಗೆಲ್ಲಾ ಅತ್ಯಾಶ್ಚರ್ಯವಾಗಿತ್ತು.

"ನೂರು ಮಾಶ ಬಂಗಾರ ಕೊಟ್ಟರೂ ನಿನಗೆ ತೃಪ್ತಿ ಇಲ್ಲವೇ?" ಎಂದು ಹಂಗಿಸುವಂತೆ ಅವನನ್ನು ನೋಡುತ್ತಿದ್ದರು.

ಸುದಾಸ ಏನೂ ಮಾತನಾಡಲಾರದೆ, ಸುಮ್ಮನೆ ನಿಂತಿದ್ದ. ತನ್ನ ಮನಸ್ಸಿನ ಪರಿಸ್ಥಿತಿ ಏನೆಂಬುದು ತನಗೇ ತಿಳಿದಿರಲಿಲ್ಲ.

"ಸುಮ್ಮನೆ ವ್ಯರ್ಥ ಮಾತುಕಥೆ ಬೇಡ. ಇನ್ನು ಮೂರು ನಿಮಿಷ ಕಾಲಾವಕಾಶ ಕೊಡುತ್ತೇವೆ. ನಿನಗಿಷ್ಟ ಬಂದ ಬೆಲೆಯನ್ನು ಖಡಾಖಂಡಿತವಾಗಿ ತಿಳಿಸಿಬಿಡು" ಎಂದು ರಾಜ ಮತ್ತು ಪ್ರವಾಸಿ ಇಬ್ಬರೂ ನುಡಿದು, ಬೇರೆ ವ್ಯಾಪಾರ ಮಾಡಲು ತನ್ನ ಬಳಿಯಿಂದ ದೂರ ಹೋದಾಗ, ಸುದಾಸನಿಗೆ ತೃಪ್ತಿಯ ಉಸಿರು ಬಿಡುವಂತಾಯಿತು.

ಆಗ ಸುದಾಸ ಉಕ್ಕಿ ಬಂದ ಭಾವೋದ್ವೇಗವನ್ನು ತಡೆ ಹಿಡಿಯುತ್ತಾ, ತನ್ನ ಬಳಿಗೆ ಬಂದ ಅಪರಿಚಿತನೊಬ್ಬನನ್ನು ನಾಚುತ್ತಾ ಕೇಳಿದ: "ಅಣ್ಣಾ, ಇವತ್ತೇಕೆ ಇಷ್ಟು ಸಂಭ್ರಮ ನಮ್ಮೂರಿನಲ್ಲಿ?"

ಅಪರಿಚಿತ ಮುಗುಳ್ನಗೆ ನಕ್ಕು ನುಡಿದ: "ಒಳ್ಳೇ ಮನುಷ್ಯನಯ್ಯಾ ನೀನು! ಊರೆಲ್ಲಾ ಹೇಳುವುದನ್ನು ಬಂದು ಕಿವೀಲಿ ಹೇಳಿದರು ಎಂದು ಹೇಳುವ ಗಾದೆಯಂತಾಯಿತು ನೀನಾಡುವ ಮಾತು. ನಿನ್ನ ಪ್ರಶ್ನೆಗೆ ಉತ್ತರವನ್ನು ಒಂದು ಸಣ್ಣ ಮಗುವನ್ನು ಕೇಳಿದರೂ ಹೇಳತ್ತೆ." ಸುದಾಸ ನಾಚಿಕೆಯಿಂದ ಭೂಮಿಗಿಳಿದುಹೋದ. ದೈನ್ಯದಿಂದ ಅಪರಿಚಿತನನ್ನು ಅಂಗಲಾಚಿದ: "ನಾನಾಯಿತು, ನನ್ನ ಹೂದೋಟವಾಯಿತು, ಎಂದುಕೊಂಡು ಜೀವಿಸುವ ನನ್ನಂಥ ಮೂಢನಿಗೆ ಹೊರಗಿನ ಪ್ರಪಂಚದ ಆಗುಹೋಗು ಹೇಗೆ ತಿಳಿಯಬೇಕು, ಅಣ್ಣಾ? ತಿಳಿದವನು ನೀನು–ನಿನ್ನಂಥವರು ನನಗೆ ಹೇಳಬೇಕು ಅದನ್ನು. ಅದಿರಲಿ, ನಮ್ಮ ದೊರೆ ಪ್ರಸೇನಜಿತ್ ರಾಜೇಂದ್ರರು ಒಂದು ಸಣ್ಣ ಹೂವನ್ನು ವ್ಯಾಪಾರ ಮಾಡುವುದಕ್ಕಾಗಿ ಸ್ವತಃ ತಾವೇ ಬಿಜಯ ಮಾಡಿದ್ದಾರಲ್ಲಾ! ಅದರ ಗುಟ್ಟಾದರೂ ಏನು?"

ಅಪರಿಚಿತ ನಕ್ಕು ನುಡಿದ: "ನಿನ್ನಂಥವರಿಗೆ ಏನು ಹೇಳಲಿ ನಾನು? ರಾಜಭೋಗವನ್ನು ತ್ಯಜಿಸಿ, ಲೋಕಹಿತಕ್ಕಾಗಿ ಕಾಡಿಗೆ ತೆರಳಿ, ಘೋರವಾದ ತಪಸ್ಸು ಮಾಡಿ, ಸಾವಿರಾರು ಜನ ದುಃಖಾರ್ತರಿಗೆ ಶಾಂತಿ ಸಮಾಧಾನ ನೀಡುತ್ತಿರುವ ಮಹಾತ್ಮನ ದರ್ಶನಾಕಾಂಕ್ಷೆ ಇದ್ದಲ್ಲಿ, ರಾಜನೇನು? ಚಕ್ರವರ್ತಿ ಕೂಡ ನಡೆದು ಬರಬೇಕಾದ್ದೇ!"

ಸುದಾಸನು ಮೈಯೆಲ್ಲಾ ಕಿವಿಯಾಗಿ, ಅಪರಿಚಿತ ನುಡಿದುದನ್ನೆಲ್ಲ ಕೇಳಿಸಿಕೊಂಡ. ಬುದ್ಧನ ವಿಚಾರದಲ್ಲಿ ಭಕ್ತಿಪೂರ್ವಕವಾಗಿ ಆ ಅಪರಿಚಿತ ವ್ಯಕ್ತಿ ಏನೇನೋ ಹೇಳಿದ. ಅವನು ಹೇಳಿದ ಎಲ್ಲಾ ವಿಚಾರಗಳೂ ಸುದಾಸನಿಗೆ ಅರ್ಥವಾಗಲಿಲ್ಲ.

ಕಡೆಗೆ ಸುದಾಸ ಮಗುವಿನಂತೆ ಕುತೂಹಲವನ್ನು ವ್ಯಕ್ತಪಡಿಸುತ್ತಾ ಕೇಳಿದ: "ಇಲ್ಲೇ ನಮ್ಮೂರ ಹೊರಗಿನ ವನದಲ್ಲೇ ನೀ ಹೇಳಿದ ಆ ಮಹಾನುಭಾವ, ಈಗಲೇ ಇದ್ದಾನೆಯೇನು? ನಾನಲ್ಲಿ ಹೋಗಿ ಒಂದೇ ಒಂದು ಸಲ ಈ ಕಣ್ಣಿನಿಂದ ನೋಡುವುದಕ್ಕೆ ಆದೀತೇನಣ್ಣಾ?"

"ಅಯ್ಯೋ ಹುಚ್ಚ, ಆಕಾಶ ನೋಡುವುದಕ್ಕೆ ನೂಕು ನುಗ್ಗಲೇ ಎಂದು ಒಂದು ಗಾದೆ. ಯಾರು ಬೇಕಾದರೂ ಹೋಗಿ ನೋಡಿಬರಬಹುದು. ಆದರೆ ಅಲ್ಲಿ ಹೋಗಿ, ಇಲ್ಲಿ ನನ್ನೆದುರು ಮಾತನಾಡಿದಂತೆ ಮಾತಾಡಿ, ನಿನ್ನ ದಡ್ಡತನ ಪ್ರದರ್ಶಿಸಿಕೊಳ್ಳಬೇಡ."

ಸುದಾಸನ ಕಣ್ಣುಗಳು ಹೊಳೆಯುತ್ತಿದ್ದವು. ಅವನ ಮುಖದ ಮೇಲೆ ಯಾವುದೋ ನಿರ್ಧಾರ ಮೂಡಿಬಂತು. ಕಣ್ಣಿನ ದೃಷ್ಟಿ ಎಲ್ಲೋ ನಾಟಿತು. "ಸಾವಿರ ಜನ್ಮ ಎತ್ತಿ ಬಂದರೂ ನಿನಗೆ ಈ ಪುಣ್ಯ– ಆತನನ್ನು ಹೋಗಿ ನೋಡುವ ಪುಣ್ಯ ದೊರೆತೀತೇ?" ಎಂದು ಮನದಾಳದಲ್ಲಿ ಯಾವುದೋ ಅವ್ಯಕ್ತವಾಣಿ ನುಡಿಯುತ್ತಿತ್ತು.

ತನ್ನ ಸುತ್ತಲ ಗಲಾಟೆ ಗದ್ದಲ, ಕ್ಷಣಗಳ ಹಿಂದೆ ತಾನು ಬಾಯ್ಬಿಟ್ಟು ಕಣ್ಣರಳಿಸಿ ನೋಡಿದ್ದ ಪ್ರಸೇನಜಿತ್ ರಾಜೇಂದ್ರ ಎಲ್ಲವೂ ಅವನ ಅರಿವಿನಿಂದ ಮರೆಯಾದರು.

ತಾನೇನು ಮಾಡುತ್ತಿದ್ದೇನೆಂಬುದನ್ನು ಅರಿಯುವ ಮೊದಲೇ ಅವನ ಕೈಗಳು ತನ್ನ ಅಕ್ಕರೆಯ ಬಿಳಿದಾವರೆಯನ್ನು ಬಿಗಿಯಾಗಿ ಹಿಡಿದುಕೊಂಡಿದ್ದವು.

ಕಾಲು ಅಲ್ಲಿ ನಿಲ್ಲದೆ, ಯಾಂತ್ರಿಕವಾಗಿ ಚಲಿಸಿತು. ಯಾರಾದರೂ ಬಂದು ಪುನಃ ತನ್ನ ಹೂವನ್ನು ಕಿತ್ತುಕೊಂಡು ಹೋದಾರೆಂದು ಭಯಪಟ್ಟು, ಸುದಾಸ ಹಿಂದೆ ಮುಂದೆ ನೋಡಿ, ಅಲ್ಲಿಂದ ಕಾಲುಕಿತ್ತ.

– ೬ –

ಊರ ಹೊರಗಿನ ಆ ವನವನ್ನು ಸಮೀಪಿಸುತ್ತಲೇ ಏಕೋ ಏನೋ ಸುದಾಸನ ಮನಸ್ಸೆಲ್ಲಾ ಒಂದು ಬಗೆಯ ಸುಖಾನುಭವಕ್ಕೆ ಒಳಗಾಯಿತು.

ಕ್ಷಣಕ್ಷಣಕ್ಕೆ ಮನಸ್ಸಿನ ಕುತೂಹಲ, ಉದ್ವೇಗ ಹೆಚ್ಚುತ್ತಿತ್ತು. ಭಯಮಿಶ್ರಿತ ಕುತೂಹಲದಿಂದ ಬುದ್ಧನಿದ್ದ ಸ್ಥಳಕ್ಕೆ ಬಂದ. ಹಿರಿಯಾಲದಡಿ ಕುಳಿತ ಬುದ್ಧನ ಶಾಂತ ಸುಂದರ ಮೂರ್ತಿಯನ್ನು ದೂರದಿಂದಲೇ ಕಂಡ, ಸುದಾಸ. ದೃಷ್ಟಿ ಕದಲಿಸದೆ, ನಿಂತಲ್ಲಿಂದಲೇ ಸುದಾಸ ಆ ದಿವ್ಯ ಮಂಗಳ ಮೂರ್ತಿಯನ್ನು ಕಣ್ತುಂಬ ನೋಡಿದ. ಹೃದಯ ಯಾವುದೋ ದಿವ್ಯ ಅನುಭವಕ್ಕೆ ಒಳಗಾಯಿತು.

ಇದ್ದಕ್ಕಿದ್ದಂತೆ ಮನಸ್ಸಿನಲ್ಲಿ ಏನೋ ಆಯಿತು. ಏನೆಂದು ಅವನಿಗೇ ತಿಳಿಯದು.

ಅಲ್ಲಿ ಬುದ್ಧನ ಸುತ್ತಲೂ ಹಣ್ಣು ಹೂವು ಇತ್ಯಾದಿಗಳೊಡನೆ ನಿಂತಿದ್ದ ಭಕ್ತವೃಂದದ ಕಡೆಗೆ ಅವನ ಗಮನ ಹರಿಯಲಿಲ್ಲ.

ನೇರವಾಗಿ ಸುದಾಸನ ಕಣ್ಣುಗಳು, ಆ ಪ್ರೇಮಮಯಿಯ ಮುಖಕಮಲದ ಮೇಲೆ ನಿಶ್ಚಲವಾಗಿ ನಿಂತವು. ಸುದಾಸನ ಕಣ್ಣ ಮುಂದೆ ಅವನ ಅದುವರೆಗಿನ ಜೀವನದ ವಿವಿಧ ಚಿತ್ರಗಳು ಹಾದುಹೋದುವು.

"ಅಂದು ತನ್ನ ಮುದ್ದು ತಿಳಿಗೊಳದಲ್ಲಿ ಪ್ರತಿಬಿಂಬಿತವಾಗಿದ್ದ ಆಕಾಶದ ಸುಂದರ ನೀಲಿಮೆಯ ಆಳದಿಂದ ಹೊಮ್ಮಿದ್ದ ತನ್ನಕ್ಕರೆಯ ಆ ಬಿಳಿದಾವರೆ... ಅದನ್ನು ಕಿತ್ತಾಗ

ತನಗಾದ ನೋವು...ಇದುವರೆಗೆ ತನ್ನ ಹೃದಯವನ್ನು ಮುಚ್ಚಿದ್ದ ದುಗುಡ... ಆ ಬಿಳಿದಾವರೆಯನ್ನು ಅದರ ಯೋಗ್ಯ ಸ್ಥಾನದಿಂದ ಕಿತ್ತು ಮಹಾಪರಾಧ ಮಾಡಿದೆ. ಅದನ್ನು ಅದರ ಯೋಗ್ಯ ಸ್ಥಾನಕ್ಕೆ ಸೇರಿಸಲೇ ಬೇಕು" ಎಂದು ಈಗ ಸ್ವಲ್ಪ ಹೊತ್ತಿಗೆ ಮುಂಚೆ ಹೃದಯ ಕಾತರಗೊಂಡಿತ್ತು. ಆದರೆ ಈಗೆಲ್ಲಿ ಆ ಅವ್ಯಕ್ತ ವೇದನೆ...?

ಆಗಿನಿಂದ ಮನಸ್ಸನ್ನು ಒಂದೇ ಸಮನೆ ಕೊರೆಯುತ್ತಿದ್ದ ಮೂಕವೇದನೆಯ ಭಾರವು ಬುದ್ಧನ ವದನಕಾಂತಿಯನ್ನು ನೋಡನೋಡುತ್ತಾ ಕರಗತೊಡಗಿತ್ತು.

ಅದುವರೆಗೆ ತನ್ನ ಹೃದಯದಲ್ಲಿ ಅನುಭವವಾಗುತ್ತಿದ್ದ ಅತೃಪ್ತ ತೊಳಲಾಟಕ್ಕೆ ಏನೋ ಸಮಾಧಾನ ದೊರೆತಂತಾಗಿತ್ತು. ಅದುವರೆಗೆ ತಾನು ಅನುಭವಿಸುತ್ತಿದ್ದ ಮಾನಸಿಕ ತೊಳಲಾಟ, ಮಾತರಿಯದ ಮಧುರಯಾತನೆ... ಅದೆಲ್ಲದರ ಅಂತರಾರ್ಥವೇನೆಂದು ಈಗ ಹೃದಯಕ್ಕೆ ಅನುಭವವಾಗತೊಡಗಿತ್ತು.

"ನನ್ನ ಹೂವಿಗೆ ಮಣ ಮಣ ಬಂಗಾರ ಕೊಟ್ಟರೂ ಅದನ್ನು ಯಾರಿಗೂ ಕೊಡಲಾರೆ" ಎಂದಿತ್ತು ತನ್ನ ಮನಸ್ಸು ಒಂದು ಕ್ಷಣದ ಹಿಂದೆ.

ಆದರೆ, ಈಗ... ಆ ಹೃದಯವನ್ನು ಮುಚ್ಚಿಕೊಂಡಿದ್ದ ದುಗುಡ, ಅಶಾಂತಿ ಎಲ್ಲ ಮರೆಯಾಗಿ ಮನಸ್ಸು ಹೂವಿನಂತೆ ಹಗುರವಾಗತೊಡಗಿತ್ತು, ತಿಳಿಯಾಗತೊಡಗಿತ್ತು.

ಭಗವಂತನ ದಿವ್ಯವದನದಲ್ಲಿ, ತನ್ನ ಮುದ್ದು ತಿಳಿಗೊಳವನ್ನೇ, ತನ್ನ ತಿಳಿಗೊಳದ ಧೀರ ಗಂಭೀರತೆಯನ್ನೇ, ಚೆಲುವಿಕೆಯನ್ನೇ, ಅನಂತತೆಯನ್ನೇ ಕಂಡಂತೆ ಸುದಾಸನಿಗೆ ಅನುಭವವಾಯಿತು.

ಸುದಾಸನ ಕಣ್ಣುಗಳಲ್ಲಿ ನೀರಾಡಿತು. ಹೃದಯ ತುಂಬಿಬಂತು.

ಇನ್ನೊಂದು ಕ್ಷಣ ತಡ ಮಾಡದೆ, ಹಿಂದೆ ಮುಂದೆ ನೋಡದೆ, ಸುದಾಸನು ಭಗವಾನ್ ಬುದ್ಧನ ಬಳಿಗೋಡಿ ಬಂದು, ಬುದ್ಧನ ಮುಂದೆ ಮಂಡಿಯೂರಿ ಕುಳಿತು, ತನ್ನ ಪ್ರಾಣಸರ್ವಸ್ವದಂತಿದ್ದ ಹೂವನ್ನು ಬೊಗಸೆಯಲ್ಲಿ ಎತ್ತಿ ಹಿಡಿದು, ಎಳೆಯ ಮಗುವಿನಂತೆ ನುಡಿದ.

"ಇದುವರೆಗೆ ನಿನ್ನನ್ನು ಕಾಣದೆ, ತುಂಬ ನೋವನ್ನು ಅನುಭವಿಸಿದೆ. ಇಂದು, ನಿನ್ನ ದಿವ್ಯವದನದಲ್ಲಿ, ಈ ಮುದ್ದು ಬಿಳಿದಾವರೆಯಂತಿರುವ ನಿನ್ನ ವದನದಲ್ಲಿ ಸಕಲ ಸೌಭಾಗ್ಯವನ್ನೂ ಕಂಡೆ. ಇದನ್ನು, ಈ ನನ್ನ ಮುದ್ದು ಹೂವನ್ನು ನಿನಗಾಗಿ ತಂದಿದ್ದೇನೆ. ತೆಗೆದುಕೊ. ನಾನಿದನ್ನು ಅಗಲಿರಲಾರೆ. ಭಗವನ್, ನಾನು ನಿನ್ನನ್ನೂ ಅಗಲಿರಲಾರೆ."

*

ಅನುಬಂಧ – ೧

# ನಮ್ಮ ಲೇಖಕರು

* **ಅನಿಲ ದೇಶಪಾಂಡೆ**

*[೧೩. ಬಪ್ಪುದೇ ಒಪ್ಪುದು]*

ಅನಿಲ ದೇಶಪಾಂಡೆಯವರು ಈಗ ನೆಲೆಸಿರುವದು ಅಮೇರಿಕೆಯ ಚಿಕಾಗೊ ನಗರದಲ್ಲಾದರೂ, ದಾಸರ ಪದದಲ್ಲಿ ಹೇಳಿರುವಂತೆ "ಅಲ್ಲಿದೆ ನಮ್ಮ ಮನೆ, ಇಲ್ಲಿಗೆ ಬಂದೆವು ಸುಮ್ಮನೆ" ಎನ್ನುವ ರೀತಿಯಲ್ಲಿ ಕನ್ನಡ ಭಾಷೆ, ಸಂಸ್ಕೃತಿ ಮತ್ತು ಕನ್ನಡ ನಾಡಿನ ಬಗೆಗೆ ತುಂಬ ಪ್ರೀತಿ ಮತ್ತು ಕಾಳಜಿಯನ್ನು ಹೊಂದಿದವರಾಗಿದ್ದಾರೆ. ಅವರ ಸಾಹಿತ್ಯ ಚಟುವಟಿಕೆಗಳು; ಕವನಗಳು, ವೈಚಾರಿಕ ಲೇಖನಗಳು, ಪ್ರಬಂಧಗಳು, ನಾಟಕಗಳು, ಆಶು ಕವಿತೆಗಳು, ಹಾಸ್ಯ ಬರಹಗಳು, ಅಧ್ಯಾತ್ಮ ಪ್ರವಚನಗಳು, ಹಾಸ್ಯ ಮಾತುಗಾರಿಕೆ, ಪೋಲಿ ಪದ್ಯಗಳು ಹೀಗೆ ಹಲವು ಬಗೆ! ಚಿಕಾಗೊ ಕನ್ನಡ ಕೂಟದ ಪ್ರಕಟಣೆಗಳು ಅವರ ಕೆಲವು ಕೃತಿಗಳಿಗೆ ಜೀವ ನೀಡಿವೆ. ಅವರು ೨೦೧೦ ರಲ್ಲಿ VKK ಅಧ್ಯಕ್ಷರಾಗಿದ್ದಾಗ, ಸಾಹಿತ್ಯ ಹಾಗು ಸಂಸ್ಕೃತಿ ಉಳಿಸಿ ಬೆಳೆಸಲು ಅನೇಕ ಹೊಸ ಕಾರ್ಯಕ್ರಮಗಳನ್ನು ಹೊಸದಾಗಿ ಪ್ರಾರಂಭಿಸಿದರು. ಅನಿಲ ಅವರು ಚಿಕಾಗೊದಲ್ಲಿ ೨೦೦೮ರಲ್ಲಿ ನಡೆದ AKKA ವಿಶ್ವಕನ್ನಡ ಸಮ್ಮೇಳನದಲ್ಲಿ, "ಅಧ್ಯಾತ್ಮ ಸಮೀತಿ" ಹಾಗು "ಸಾಂಸ್ಕೃತಿಕ ಕಾರ್ಯಕ್ರಮ" ಸಮಿತಿಗಳಲ್ಲಿ ಸೇವೆ ಸಲ್ಲಿಸಿದರು. ನಂತರ ೨೦೧೧-೧೨ರಲ್ಲಿ AKKAದ Board of Director ಆಗಿ ಸೇವೆ ಸಲ್ಲಿಸಿದರು. ಅವರು "ಹಿಂದು ಸ್ವಯಂ ಸೇವಕ ಸಂಘ", "ವಿಶ್ವ ಹಿಂದು ಪರಿಷತ್" ಸಂಸ್ಥೆಗಳಿಗೆ ಸ್ವಯಂಸೇವಕರಾಗಿ ದುಡಿಯುತ್ತಾರೆ. ೨೦೧೩ರಲ್ಲಿ ನಡೆದ ಶ್ರೀ ವಿವೇಕಾನಂದರ ೧೫೦ ಜನ್ಮಶತಾಬ್ದಿ ಕಾರ್ಯಕ್ರಮಗಳಿಗೆ ಅವಿರತವಾಗಿ ಸೇವೆ ಸಲ್ಲಿಸಿದ್ದಾರೆ. ೨೦೧೧ರಿಂದ ಅವರು, ಹಿಂದು ಸ್ವಯಂ ಸೇವಕ ಸಂಘ ಪ್ರೇರಿತ ಸೇವಾ ಸಂಸ್ಥೆ "SEWA International USA, (WWW.SEWAUSA.ORG)" ಸಂಸ್ಥೆಗೆ ಅಮೆರಿಕ ವಿಭಾಗದ "Vice President of Marketing & Development"

ದಾಯಿತ್ವದಲ್ಲಿ ಸ್ವಯಂಸೇವಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ವೃತ್ತಿಯಲ್ಲಿ ಅವರು Price Water House Cooper ಸಂಸ್ಥೆಯ Advisory ವಿಭಾಗದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

Email:anilrd@yahoo.com

* **ಅನುಪಮಾ ಮಂಗಳವೇಢೆ**

*[೩೬. ಕಾಣದ ಕಡಲಿಗೆ ಹಂಬಲಿಸುತಿದೆ ಮನ...(ಕಥೆ)]*

ಅನುಪಮಾ ಮೂಲತಃ ಹಾಸನ ಜಿಲ್ಲೆಯ ಚನ್ನರಾಯಪಟ್ಟಣದವರು. ಶಿಕಾಗೋ ಸಮೀಪ ತಮ್ಮ ಪತಿ ಮತ್ತು ಮಕ್ಕಳೊಡನೆ ವಾಸಿಸುತ್ತಿದ್ದಾರೆ. ಹಾಸನದ ಮಲೆನಾಡು ಎಂಜಿನಿಯರಿಂಗ್ ಕಾಲೇಜಿನಲ್ಲಿ ಬಿ.ಇ. ಕಂಪ್ಯೂಟರ್ ಸೈನ್ಸ್ ಪದವಿ ಗಳಿಸಿ ೧೯೯೮ರಲ್ಲಿ ನಿತಿನ್ ಮಂಗಳವೇಢೆಯವರನ್ನು ಮದುವೆಯಾಗಿ ಅಮೆರಿಕ ದೇಶಕ್ಕೆ ಬಂದು, ಮಾಸ್ಟರ್ಸ್ ಪದವಿ ಪಡೆದರು. ಸಾಫ್ಟ್‌ವೇರ್ ಕ್ಷೇತ್ರದಲ್ಲಿ ಉದ್ಯೋಗ. ತಮ್ಮ ಇಬ್ಬರು ಮಕ್ಕಳಾದ ಮೇಘನಾ ಮತ್ತು ಮಾನಸಿಯನ್ನು ಭರತನಾಟ್ಯ ಕಲಿಕೆಗೆ ಸೇರಿಸಿದರು. ವಾರಾಂತ್ಯಗಳಲ್ಲಿ ಮಕ್ಕಳನ್ನು ಡ್ಯಾನ್ಸ್ ಕ್ಲಾಸ್‌ಗೆ ಕರೆದುಕೊಂಡು ಹೋಗಿ ಬರುವಾಗ, ತಾನೂ ಏಕೆ ಭರತನಾಟ್ಯ ಕಲಿಯಬಾರದು ಎಂಬ ಆಲೋಚನೆ ಬಂತು. ಅನುಪಮಾಗೆ ಆಗ ೩೫ ವರ್ಷ ಪ್ರಾಯ. ಅದೇ ಗುರುಗಳ ಬಳಿ ಛಲದಿಂದ ಕಲಿತರು. ತಮ್ಮ ನಲವತ್ತನೇ ವಯಸ್ಸಿನಲ್ಲಿ ೨೦೧೫ರ ಜುಲೈಯಲ್ಲಿ ಶಿಕಾಗೋದಲ್ಲಿಯೇ ರಂಗಪ್ರವೇಶ ಮಾಡಿದರು. ಬೆಂಗಳೂರಿನ ಶಿವಪ್ರಿಯ ನಾಟ್ಯಸಂಸ್ಥೆಯು 'ಕಲಾಕುಸುಮ' ಗೌರವವನ್ನು ನೀಡಿ ಸನ್ಮಾನಿಸಿದೆ. ಮಕ್ಕಳಿಗೆ ಕನ್ನಡ ಕಲಿಸುವ 'ಸಿರಿಗನ್ನಡ ಶಾಲೆ'ಯನ್ನು ಸುಮಾರು ಹತ್ತು ವರುಷಗಳಿಂದ ನಡೆಸುತ್ತಿದ್ದಾರೆ. ವಿದ್ಯಾರಣ್ಯ ಕನ್ನಡ ಕೂಟದ ಸುದ್ದಿಪತ್ರ 'ಡಿಂಡಿಮ' ಮತ್ತು ಸ್ಮರಣ ಸಂಚಿಕೆ 'ಸಂಗಮ'ಗಳ ಸಂಪಾದಕೀಯ ಮಂಡಳಿಯಲ್ಲೂ ಕಾರ್ಯ ನಿರ್ವಹಿಸಿದ್ದಾರೆ. ಅನುಪಮಾ ಅವರ ಲೇಖನಗಳು, ಕಥೆ–ಕವನಗಳು ಕರ್ನಾಟಕದ ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಈ ಲೇಖನಗಳು ಮತ್ತು ಕಥೆಗಳನ್ನು ಸಂಕಲಿಸಿ, ಜತೆಯಲ್ಲೇ ಭರತನಾಟ್ಯ ಕಲಿಕೆಯ ತನ್ನ ಅನುಭವ ಕಥನದ್ದೊಂದು ವಿಶೇಷ ಲೇಖನವನ್ನೂ ಸೇರಿಸಿ 'ಅಮ್ಮನಾದ ಬಳಿಕ ಅರಂಗೇಟ್ರಂ' ಮಾಡಿದ ಅಮೆರಿಕನ್ನಡಿತಿ: 'ಅನುಪಮ ಕಥನ' ಎಂಬ ಪುಸ್ತಕವನ್ನು ಪ್ರಕಟಿಸಿದ್ದಾರೆ. ಇದು ೨೨ ಜುಲೈ ೨೦೧೭ರಂದು ಬೆಂಗಳೂರಿನಲ್ಲಿ ಬಿಡುಗಡೆಯಾಗಿ ಕನ್ನಡ ಪತ್ರಿಕೆಗಳಿಂದ ಮುಕ್ತಪ್ರಶಂಸೆ ಪಡೆದ ಪುಸ್ತಕ.

Emai: anu2nitin@gmail.com

* **ಆನಂದ ಸಿಂಹ**

*[೫. ಗಾಜಿನ ಗೋಡೆ]*

ಹುಟ್ಟಿದ್ದು ಬೆಂಗಳೂರು. ಹೆಚ್ಚು ಕಮ್ಮಿ ೨೦ ವರ್ಷಗಳಿಂದ ಅಮೆರಿಕದಲ್ಲಿ ನೆಲೆ. ಸದ್ಯಕ್ಕೆ ಕ್ಯಾಲಿಫೋರ್ನಿಯಾದ ಸ್ಯಾನ್ ರಮೋನ್ ನಗರದಲ್ಲಿ ಕುಟುಂಬ ಸಮೇತ

ನಿವಾಸಿ. ಪ್ರತಿಷ್ಠಿತ ಸಾಫ್ಟ್‌ವೇರ್ ಸಂಸ್ಥೆಯಲ್ಲಿ 'ಪ್ರಾಡಕ್ಟ್ ಮ್ಯಾನೇಜರ್' ಹುದ್ದೆಯಲ್ಲಿ ಕೆಲಸ. ಪತ್ರಿಕೆಗಳ 'Letters to the Editor' ಕಾಲಂಗಳಿಗೆ ಬರೆಯುವ ಹವ್ಯಾಸದಿಂದ ಬರವಣಿಗೆಯ ಪ್ರಾರಂಭ. ಬರೆದ ಪತ್ರಗಳಲ್ಲಿ ಸುಮಾರು ೫೦ಕ್ಕೂ ಹೆಚ್ಚು ವಾರ್ತಾ ಪತ್ರಿಕೆ ಯಾ ನಿಯತಕಾಲಿಕಗಳಾದ ಡೆಕ್ಕನ್ ಹೆರಾಲ್ಡ್, ಪ್ರಜಾವಾಣಿ, ಟೈಮ್ಸ್ ಆಫ್ ಇಂಡಿಯಾ, ಇಂಡಿಯನ್ ಎಕ್ಸ್‌ಪ್ರೆಸ್, ಇಂಡಿಯಾ ಟುಡೇ ಮತ್ತು ಅಮೆರಿಕದ ಸ್ಯಾನ್ ಹೊಸೆ ಮರ್ಕ್ಯುರಿ ನ್ಯೂಸ್‌ಗಳಲ್ಲಿ ಪ್ರಕಟವಾಗಿವೆ. ಇದಲ್ಲದೆ ಡೆಕ್ಕನ್ ಹೆರಾಲ್ಡ್ ಪತ್ರಿಕೆಯ ಸಂಪಾದಕೀಯ ಪುಟದಲ್ಲಿ ಪ್ರಕಟವಾಗುವ ಓದುಗರ ಅಚ್ಚುಮೆಚ್ಚಿನ 'Right in the Middle' ಕಿರುಬರಹ ಕಾಲಮ್ಮಿಗೆ ಹಲವು ಬಾರಿ ಬರೆದಿದ್ದಾರೆ. ಕನ್ನಡದಲ್ಲಿ ಬರೆಯುವುದಕ್ಕೆ ಪ್ರಾರಂಭಿಸಿದ್ದು ೨೦೧೨ರಲ್ಲಿ, ಕವನದ ಮೂಲಕ. ಈಗ ಬರವಣಿಗೆ ಕನ್ನಡ ಮತ್ತು ಇಂಗ್ಲಿಷ್ ಎರಡರಲ್ಲೂ ನಡೆಯುತ್ತಿದೆ. ಉತ್ತರ ಕ್ಯಾಲಿಫೋರ್ನಿಯಾ ಕನ್ನಡ ಕೂಟ ಪ್ರಕಟಿಸುವ 'ಸ್ವರ್ಣಸೇತು' ವಾರ್ಷಿಕ ಸಂಚಿಕೆಯಲ್ಲಿ ಇವರ ಬಹುಮಾನಿತ ಕತೆ ಕವನಗಳು ಕಳೆದ ನಾಲ್ಕು ವರ್ಷಗಳಿಂದ ಸತತವಾಗಿ ಪ್ರಕಟವಾಗುತ್ತಿವೆ. ಸದ್ಯಕ್ಕೆ ಟ್ರೈ ವ್ಯಾಲಿ ಕನ್ನಡ ಸಂಘ (TVKS) ಪ್ರಕಟಿಸುವ 'ಮಿನುಗು' ವಾರ್ಷಿಕ ಸಂಚಿಕೆಯ ಪ್ರಧಾನ ಸಂಪಾದಕರಾಗಿದ್ದಾರೆ.

Email: doddanand@hotmail.com

* **ಉಮಾ ವೆಂಕಟೇಶ್**

*[೨೧. ಭಾರತದಲ್ಲಿ ವಿಜ್ಞಾನ ಅಂದು, ಇಂದು]*

ಇವರು ಹುಟ್ಟಿ, ಬೆಳೆದು, ವಿದ್ಯಾಭ್ಯಾಸ ನಡೆಸಿದ್ದು ಸಂಸ್ಕೃತಿಯ ತವರೂರು ಮೈಸೂರು ನಗರದಲ್ಲಿ. ಮುಂದೆ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಸಸ್ಯಶಾಸ್ತ್ರದಲ್ಲಿ ಡಾಕ್ಟರೇಟ್ ಪದವಿ ಪಡೆದು, ಅಲ್ಲಿನ ಸ್ಥಳೀಯ ಕಾಲೇಜಿನಲ್ಲಿ ೨ ವರ್ಷ ಉಪನ್ಯಾಸಕಿಯಾಗಿ ಕಾರ್ಯ ನಿರ್ವಹಣೆ. ಮದುವೆಯಾದ ನಂತರ ಪುಣೆಯಲ್ಲಿ ವಾಸ್ತವ್ಯ. ೧೯೯೬ರಲ್ಲಿ, ಪತಿ ಡಾ. ಬೆಂಗಳೂರು ಸತ್ಯಪ್ರಕಾಶ್, ಮಗಳು ಚೈತ್ರ ಹಾಗೂ ಮಗ ರಜತ್ ಜೊತೆಯಲ್ಲಿ ಯುನೈಟೆಡ್ ಕಿಂಗ್‌ಡಮ್ಮಿನಲ್ಲಿರುವ ಕಾರ್ಡಿಫ್ ನಗರಕ್ಕೆ ವಲಸೆ. ಅಲ್ಲಿ ೨೦ ವರ್ಷಗಳ ವಾಸ್ತವ್ಯದ ನಂತರ, ೨೦೧೬ ಆಗಸ್ಟ್ ತಿಂಗಳಲ್ಲಿ, ಅಮೆರಿಕೆಯ ಪೆನ್ಸಿಲ್ವೇನಿಯ ರಾಜ್ಯದಲ್ಲಿರುವ ಸ್ಟೇಟ್ ಕಾಲೇಜಿಗೆ ಮತ್ತೊಮ್ಮೆ ವಲಸೆ. ಅಲ್ಲಿನ ಪೆನ್ ಸ್ಟೇಟ್ ವಿಶ್ವವಿದ್ಯಾಲಯದ ಸಸ್ಯಶಾಸ್ತ್ರ ವಿಭಾಗದ ತಳಿಶಾಸ್ತ್ರ ಪ್ರಯೋಗಾಲಯದಲ್ಲಿ ಸಂಶೋಧಕಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಬಾಲ್ಯದಿಂದಲೇ ಕನ್ನಡ ಭಾಷೆ ಮತ್ತು ಸಾಹಿತ್ಯದಲ್ಲಿ ಆಸಕ್ತಿ. ಶಾಲಾ ಕಾಲೇಜು ದಿನಗಳಿಂದಲೇ ಕನ್ನಡ ಕಥೆ, ಕಾದಂಬರಿ ಮತ್ತು ಪ್ರಬಂಧಗಳನ್ನು ಓದುವ ಹವ್ಯಾಸ. ಕನ್ನಡದಲ್ಲಿ ಬರೆಯುವ ಹವ್ಯಾಸವಿದ್ದರೂ, ಬರವಣಿಗೆ ಗಂಭೀರರೂಪ ಪಡೆದದ್ದು ಯುನೈಟೆಡ್ ಕಿಂಗ್‌ಡಮ್ಮಿನಲ್ಲಿ ಯು.ಕೆ. ಕನ್ನಡ ಬಳಗದ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ೧೫ ವರ್ಷಗಳ ಕಾಲ ಭಾಗವಹಿಸಿ, ಬಳಗದ ೨೫ನೆಯ ವರ್ಷದ ಬೆಳ್ಳಿ ಹಬ್ಬದ ಸಮಾರಂಭದಲ್ಲಿ ಸಾಹಿತ್ಯಗೋಷ್ಠಿಯ ಆಗುಹೋಗುಗಳನ್ನು ಯಶಸ್ವಿಯಾಗಿ ನಿರ್ವಹಿಸಿದಾಗ ಎನ್ನಬಹುದು. ಜೊತೆಗೆ ಬೆಳ್ಳಿಹಬ್ಬದ

ಸ್ಮರಣ ಸಂಚಿಕೆಯ ಸಂಪಾದಕೀಯದಲ್ಲಿ ಕಾರ್ಯ ನಿರ್ವಹಣೆ. ಮುಂದೆ ಕನ್ನಡ ಬಳಗದ ಸಾಹಿತ್ಯ ವೇದಿಕೆ "ಅನಿವಾಸಿ" ಜಾಲಜಗುಲಿಯ ಸ್ಥಾಪನೆ ಮತ್ತು ವೇದಿಕೆಯ ಕಾರ್ಯಚಟುವಟಿಕೆಗಳಲ್ಲಿ ಮುಂದಾಳತ್ವ ವಹಿಸಿ, ಅನೇಕ ಲೇಖನಗಳನ್ನು ಪ್ರತಿ ವಾರ ಬರೆದು ಪ್ರಕಟಿಸುತ್ತಾ ಬಂದಿದ್ದಾರೆ. ಕರ್ನಾಟಕದ ದಿನ ಮತ್ತು ವಾರಪತ್ರಿಕೆಗಳಲ್ಲಿ ಜನಪ್ರಿಯ ವಿಜ್ಞಾನದ ಲೇಖನಗಳನ್ನು ಬರೆದು ಪ್ರಕಟಿಸಿದ್ದಾರೆ. ಅನಿವಾಸಿ ವೇದಿಕೆಯ ಲೇಖನಗಳನ್ನು ಕ್ರೋಡೀಕರಿಸಿ ಪ್ರಕಟಿಸಿದ "ಅನಿವಾಸಿಗಳ ಅಂಗಳದಿಂದ" ಪುಸ್ತಕದ ಸಂಪಾದಕೀಯವನ್ನು ನಿರ್ವಹಿಸಿದ್ದಾರೆ. "ದಿ ಎಡ್ಜ್ ಆಫ್ ಫಿಸಿಕ್ಸ್" ಎನ್ನುವ ಜನಪ್ರಿಯ ಖಭೌತಶಾಸ್ತ್ರ ಪುಸ್ತಕವನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಸಧ್ಯದಲ್ಲಿ ಈ ಪುಸ್ತಕವನ್ನು ನವಕರ್ನಾಟಕ ಪ್ರಕಾಶಕರು ಪ್ರಕಟಿಸುವ ಸಲುವಾಗಿ ಪರಿಷ್ಕರಿಸುತ್ತಿದ್ದು, ಮುಂದಿನ ವರ್ಷದ ಮಾರ್ಚ್ ತಿಂಗಳಲ್ಲಿ ಬಿಡುಗಡೆ ಮಾಡುವ ಪ್ರಯತ್ನದಲ್ಲಿದ್ದಾರೆ. ಕರ್ನಾಟಕ ಶಾಸ್ತ್ರೀಯ ಸಂಗೀತ, ಗಮಕ ವಾಚನ, ಸಸ್ಯೋದ್ಯಾನಗಳಿಗೆ ಭೇಟಿ, ಚಲನಚಿತ್ರಗಳ ವೀಕ್ಷಣೆ, ಜನಪ್ರಿಯ ವಿಜ್ಞಾನ ಪುಸ್ತಕ, ಕಾದಂಬರಿಗಳನ್ನು ಓದುವುದು ಇವರ ಪ್ರಿಯವಾದ ಹವ್ಯಾಸಗಳು.

Email: venkatesh.uma@gmail.com

* **ಎಮ್. ಜಿ. ಪ್ರಸಾದ್**

*[೩೦. ನಾ ಕಂಡಂತೆ ನ್ಯೂ ಜೆರ್ಸಿ: ಅಂದು – ಇಂದು]*

ಡಾ. ಎಂ. ಜಿ. ಪ್ರಸಾದ್ ಹಾಸನದಲ್ಲಿ ಜನಿಸಿದರು. ಅವರು ೧೯೭೭ ಆಗಸ್ಟ್‌ನಲ್ಲಿ ಬಂದು ಪರ್ಡ್ಯೂ ಯೂನಿವರ್ಸಿಟಿನಲ್ಲಿ ಪಿಎಚ್.ಡಿ. ಮುಗಿಸಿ ಸೆಪ್ಟೆಂಬರ್ ೧೯೮೦ರಲ್ಲಿ ನ್ಯೂ ಜೆರ್ಸಿಯ ಸ್ಟೀವನ್ಸ್ ಇನ್ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯಲ್ಲಿ ಕಳೆದ ೩೭ ವರ್ಷಗಳು ಪ್ರೊಫೆಸರ್ ಆಗಿ ನಿವೃತ್ತರಾದರು. ಈಗ ಅಲ್ಲಿಯೇ ಪ್ರೊಫೆಸರ್ ಎಮೆರಿಟಸ್ ಆಗಿದ್ದಾರೆ. ಪ್ರಸಾದ್ ಹಾಗು ಅವರ ಪತ್ನಿ ಗೀತಾ ಅವರಿಗೆ ಇಬ್ಬರು ಪುತ್ರರು ತೇಜು ಮತ್ತು ರಾಜು. ಪ್ರಸಾದ್ ಅವರು ಶಬ್ದ ನಿಯಂತ್ರಣ ಕ್ಷೇತ್ರದಲ್ಲಿ ನೂರಕ್ಕೂ ಮೀರಿ ಸಂಶೋಧನಾ ಲೇಖನಗಳನ್ನು ಪ್ರಕಟಿಸಿದ್ದಾರೆ. ಈ ಕೊಡುಗೆಗೆ ಅವರು ನಾಲ್ಕು ಸಂಸ್ಥೆಗಳಲ್ಲಿ ಫೆಲೋ ಆಗಿ ಆಯ್ಕೆಗೊಂಡಿದ್ದಾರೆ. ಇವರಿಗೆ ೨೦೧೫ರಲ್ಲಿ ಅತುತ್ತಮ ಶಿಕ್ಷಕ ಪ್ರಶಸ್ತಿ ದೊರಕಿತು. ಪ್ರಸಾದ್ ಅವರು ಅನೇಕ ಕನ್ನಡ ಲೇಖನಗಳನ್ನು ಬರೆದು ಪ್ರಕಟಿಸಿದ್ದಾರೆ. ಇವರ ಎರಡು ಕನ್ನಡ ಪುಸ್ತಕಗಳು (ಭಾವಗುಚ್ಛ, ದೈನಿಕ ಪ್ರಾರ್ಥನೆಗಳು) ಪ್ರಕಟವಾಗಿವೆ. ಪ್ರಸಾದ್ ಹಾಗು ಅವರ ಪತ್ನಿ ಗೀತಾ ಪ್ರಸಾದ್ ಸುಮಾರು ಐವತ್ತಕ್ಕೂ ಮೀರಿ ಕನ್ನಡ ನಾಟಕ ಹಾಗು ನೃತ್ಯ ರೂಪಕಗಳನ್ನು ತರಂಗ ಕಲಾಲಯದ ಮೂಲಕ ಕನ್ನಡ ಸಂಘಗಳಲ್ಲಿ ಮತ್ತು ಹಾಗು ಇತರ ಸಂಸ್ಥೆಗಳಲ್ಲಿ ಪ್ರದರ್ಶಿಸಿದ್ದಾರೆ. ಪ್ರಸಾದ್ ಅವರು ಸಾಂಸ್ಕೃತಿಕ ಹಾಗು ಧಾರ್ಮಿಕ ಸಂಸ್ಥೆಗಳ ಸಲಹಾ ಸಮಿತಿಗಳ ಸದಸ್ಯರಾಗಿದ್ದಾರೆ. ಅವರಿಗೆ ದೆಹಲಿಯಲ್ಲಿ ಅಂತರ್‍ರಾಷ್ಟ್ರೀಯ ಮೈತ್ರಿ ಸಂಸ್ಥೆಯಿಂದ "ಭಾರತ ಗೌರವ ಪ್ರಶಸ್ತಿ", ಅಮೇರಿಕಾದ ಹಿಂದೂ ಜಾಗೃತಿ ಸಂಸ್ಥೆಯಿಂದ "ವಿಶ್ವ ಹಿಂದೂ ರತ್ನ"

ಪ್ರಶಸ್ತಿ, ಬೃಂದಾವನ ಕನ್ನಡ ಸಂಸ್ಥೆಯಿಂದ ಗೌರವ ಪ್ರಶಸ್ತಿ ಹಾಗು ನ್ಯೂಯಾರ್ಕ್ ಕನ್ನಡ ಕೂಟದಿಂದ "ಕನ್ನಡ ಕಲಾ ರತ್ನ" ಪ್ರಶಸ್ತಿ ದೊರಕಿವೆ.

Email: mgprasad@comcast.net)

* **ಕರುಣಾ ಬಿ. ಎಸ್.**

*[೨೬. ಒರಟು ಕಾಗದದಿಂದ ನುಣುಪು ಗಾಜಿನೆಡೆಗೆ]*

ಧಾರವಾಡ ಇವರ ಜನ್ಮ ಸ್ಥಳ ಹಾಗು ಕನ್ನಡ ಮಾಧ್ಯಮದಲ್ಲಿ ಪ್ರಾರಂಭಿಕ ಶಿಕ್ಷಣ. ಅಮೆರಿಕಕ್ಕೆ ಬಂದು ೫ ವರ್ಷಗಳು ಕಳೆದಿವೆ. ವೃತ್ತಿಯಲ್ಲಿ Cybersecurity ಕ್ಷೇತ್ರದಲ್ಲಿ QA Engineer ಆಗಿದ್ದು, ವರ್ಜೀನಿಯಾದಲ್ಲಿ ಉದ್ಯೋಗ ಹಾಗು ವಾಸ. ಇವರ ಸಣ್ಣ ಕಥೆಗಳು, ಪ್ರವಾಸಿ ಬರಹಗಳು, ಅನುವಾದಿತ ಲೇಖನಗಳು ಕನ್ನಡದ ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಇವರ 'ಗಾಳಿ ಪಳಗಿಸಿದ ಬಾಲಕ' ಈ ಅನುವಾದಿತ ಪುಸ್ತಕಕ್ಕೆ ೨೦೧೪ನೇ ಸಾಲಿನ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಬೇಂದ್ರೆ ಪ್ರಶಸ್ತಿ, ಶಿವಮೊಗ್ಗ ಕನ್ನಡ ಸಂಘದ ಪ್ರಶಸ್ತಿ ಸಂದಿವೆ. ಶಾಸ್ತ್ರೀಯ ಸಂಗೀತ, ವಿಜ್ಞಾನ, ಕಲೆ, ಸಹಜ ಕೃಷಿ ಇವರ ಆಸಕ್ತಿಯ ವಿಷಯಗಳು.

Email: karuna.chin@gmail.com

* **ಕಾವ್ಯಾ ಕಡಮೆ ನಾಗರಕಟ್ಟೆ**

*[೪. ನಿತ್ಯದಾಟ (ಕಥೆ)]*

ಕಾವ್ಯಾ ಕಡಮೆ ನಾಗರಕಟ್ಟೆ, ಉತ್ತರ ಕನ್ನಡ ಜಿಲ್ಲೆಯ ಕಡಮೆಯವರು. ೧೯೮೮ ರಲ್ಲಿ ಜನನ. ಬಿಎಸ್ಸಿ ನಂತರ ಕರ್ನಾಟಕ ವಿವಿಯಿಂದ ಆರು ಚಿನ್ನದ ಪದಕಗಳೊಂದಿಗೆ ಪತ್ರಿಕೋದ್ಯಮ ಎಂ.ಎ. ಪದವಿ. ೨೦೧೩ರಿಂದ ಅಮೆರಿಕಾದ ನ್ಯೂಜೆರ್ಸಿಯಲ್ಲಿ ವಾಸ. ಧ್ಯಾನಕೆ ತಾರೀಖಿನ ಹಂಗಿಲ್ಲ, ಜೀನ್ಸು ತೊಟ್ಟ ದೇವರು ಪ್ರಕಟಿತ ಕವನ ಸಂಕಲನಗಳು. ಪುನರಪಿ ಕಾದಂಬರಿ. ಆಟದೊಳಗಾಟ ಮತ್ತು ಡೋರ್ ನಂಬರ್ ಎಂಟು ಇವರ ಮೊದಲ ನಾಟಕಗಳ ಸಂಕಲನ. ಇವರ ಕೃತಿಗಳಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ 'ಯುವ ಪುರಸ್ಕಾರ,' ಯುವ ಬರಹಗಾರರಿಗೆ ನೀಡುವ ಟೋಟೋ ಪುರಸ್ಕಾರ, ಗುಲ್ಬರ್ಗ ಜಿಲ್ಲೆಯ ಸೇಡಂನ ಅಮ್ಮ ಪ್ರಶಸ್ತಿ, ಬೇಂದ್ರೆ ಗ್ರಂಥ ಬಹುಮಾನ, ರತ್ನಮ್ಮ ಹೆಗ್ಗಡೆ ಗ್ರಂಥ ಬಹುಮಾನ, ಕಡಂಗೋಡ್ಲು ಕಾವ್ಯ ಪುರಸ್ಕಾರ, ದಿನಕರ ಕಾವ್ಯ ಪ್ರಶಸ್ತಿ ಮತ್ತು ನಾಟಕ ಅಕಾಡಮಿಯ ನಾಟಕ ಬಹುಮಾನ ದೊರೆತಿವೆ.

Email: kavya.kadame@gmail.com

* **ಎಚ್. ಕೆ. ಕೃಷ್ಣಪ್ರಿಯ**

*[೩೫. ಕೂಪರ್ಟೀನೊ, ಕಾಲಿಫ಼ೋರ್ನಿಯ (ಕವನ)]*

ಪಂಪಾಪುರದ ಕುರುಡು ಘನಪಾಠಿ ಕೃಷ್ಣಯ್ಯಂಗಾರ್ರ ಮನೆತನದವರು. ಇವರು ಬೆಂಗಳೂರಿನಲ್ಲಿ ಬೆಳೆದು ಮುಂಬಯಿ, ನ್ಯೂಯಾರ್ಕ್, ಅಯೋವಗಳ ಮೂಲಕ ಕ್ಯಾಲಿಫೋರ್ನಿಯಾಕ್ಕೆ ಬಂದು ನೆಲೆಸಿದ್ದಾರೆ. ಉದರನಿಮಿತ್ತವಾಗಿ ಇವರು ಹಾಕಿರುವ ವೇಷಗಳು – ಗಣಿತಾನ್ವೇಷಕ, ಗಣಿತಬೋಧಕ, ಆಸ್ಪತ್ರೆಯಲ್ಲಿ ಹೌಸ್‌ಕೀಪರ್ ಮತ್ತು ಟ್ರಾನ್ಪೋರ್ಟೇಷನ್ ಅಸಿಸ್ಟಂಟ್, ಕಂಪ್ಯೂಟರ್ ಎಂಜಿನಿಯರ್. ಬರೆಯುವ ಹವ್ಯಾಸವಿರುವ ಸಂಸಾರದಲ್ಲಿ ಹುಟ್ಟಿ ಬೆಳೆದ ಇವರು ಈಚೆಗೆ ತಮ್ಮ ಕೆಲವು ರಚನೆಗಳನ್ನು ದಟ್ಸ್‌ಕನ್ನಡ.ಕಾಂ ತಾಣದಲ್ಲಿ, ಉತ್ತರ ಕ್ಯಾಲಿಫೋರ್ನಿಯಾದ ವಾರ್ಷಿಕ ಸಂಚಿಕೆಯಾದ ಸ್ವರ್ಣಸೇತುವಿನಲ್ಲಿ, ಮತ್ತಿತರ ಪತ್ರಿಕೆಗಳಲ್ಲಿ ಪ್ರಕಟಿಸಿದ್ದಾರೆ. 'ಕನ್ನಡದಮರಚೇತನ' ಎಂಬ ಮಾಸ್ತಿಯವರ ಜೀವನ, ಸಾಹಿತ್ಯದ ಮೇಲಿನ ಲೇಖನಗಳ ಸಂಕಲನದ ಸಹಸಂಪಾದಕರಾಗಿ ಕೆಲಸಮಾಡಿದ್ದಾರೆ.

Email: hkrishna_98@yahoo.com

* **ಗುರುಪ್ರಸಾದ್ ಕಾಗಿನೆಲೆ**

*[೨೪. ಲೋಲ (ಕಥೆ)]*

ಹುಟ್ಟಿದ್ದು ಶಿವಮೊಗ್ಗ. ಬೆಳೆದದ್ದು ಮೈಸೂರು ಮತ್ತು ಮಂಡ್ಯ ಜಿಲ್ಲೆಯ ನಾಗಮಂಗಲದಲ್ಲಿ. ಬಳ್ಳಾರಿಯ ಸರಕಾರಿ ವೈದ್ಯಕೀಯ ವಿದ್ಯಾಲಯದಲ್ಲಿ ಎಂ.ಬಿ.ಬಿ.ಎಸ್. ಮತ್ತು ಎಂ.ಡಿ. ಪದವಿ ಪಡೆದು ತುಮಕೂರಿನ ಸಿದ್ಧಾರ್ಥ ವೈದ್ಯಕೀಯ ವಿದ್ಯಾಲಯದಲ್ಲಿ ಉಪನ್ಯಾಸಕರಾಗಿ ಕೆಲಸ. ೧೯೯೫ರಲ್ಲಿ ಅಮೆರಿಕೆಗೆ ವಲಸೆ. ಡೆಟ್ರಾಯ್ಟ್‌ನ ವೇಯ್ನ್‌ಸ್ಟೇಟ್ ವಿಶ್ವವಿದ್ಯಾನಿಲಯ ಹಾಗೂ ವಿಸ್ಕಾನ್ಸಿನ್ ವಿಶ್ವವಿದ್ಯಾನಿಲಯಗಳಲ್ಲಿ ತರಬೇತಿ. ಸದ್ಯಕ್ಕೆ ಮಿನೆಸೊಟಾ ರಾಜ್ಯದ ರಾಚೆಸ್ಟರ್‌ನಲ್ಲಿ ಪತ್ನಿ ಪದ್ಮ ಮತ್ತು ಮಕ್ಕಳಾದ ಪ್ರಣೀತ ಮತ್ತು ಪ್ರಭವರೊಂದಿಗೆ ವಾಸ. ನಾರ್ತ್ ಮೆಮೊರಿಯಲ್ ಆಸ್ಪತ್ರೆಯ ಎಮರ್ಜೆನ್ಸಿ ಮೆಡಿಸಿನ್ ವಿಭಾಗದಲ್ಲಿ ಎಮರ್ಜೆನ್ಸಿ ವೈದ್ಯನಾಗಿ ಕೆಲಸ. ಪ್ರಕಟಿತ ಕೃತಿಗಳು: ನಿರ್ಗುಣ (೨೦೦೩), ಶಕುಂತಳಾ (೨೦೦೭)– ಕಥಾಸಂಕಲನಗಳು: ವೈದ್ಯ, ಮತ್ತೊಬ್ಬ (೨೦೦೫)– ಲೇಖನ ಸಂಗ್ರಹ. ಸಂಪಾದಿತ ಕಥಾಸಂಕಲನ– ಆಚೀಚೆಯ ಕಥೆಗಳು (೨೦೦೫). ಬಿಳಿಯ ಚಾದರ (೨೦೦೭), ಗುಣ (೨೦೧೦) ಮತ್ತು ಹಿಜಾಬ್ (೨೦೧೭)– ಕಾದಂಬರಿಗಳು. ಕೆಲವು ಕಥೆಗಳು ಮರಾಠಿ, ತೆಲುಗು ಮತ್ತು ಕೊಂಕಣಿ ಭಾಷೆಗಳಿಗೆ ಅನುವಾದವಾಗಿವೆ.

Email: gkaginele@hotmail.com

* **ಗುಂಡೂ ಶಂಕರ್**

*[೨೭. ಇಪ್ಪತ್ತನೆಯ ಶತಮಾನದ ರಾಜಕೀಯ ಸ್ಥಿತಿ–ಗತಿ]*

ಪತ್ನಿ ಶೈಲಜ ಮತ್ತು ಇಬ್ಬರು ಮಕ್ಕಳೊಂದಿಗೆ ಫ್ರೀಹೋಲ್ಡ್ ನ್ಯೂಜೆರ್ಸಿಯಲ್ಲಿ ವಾಸ ಮಾಡುತ್ತಿದ್ದಾರೆ. B. Tech. ಡಿಗ್ರಿ Indian Institute of Science, Bangalore ಮತ್ತು Indian Institue of Management, Calcutta ನಿಂದ M.B.A.. ಡಿಗ್ರಿ ಪಡೆದರು. ಈಗ Management Consultant ಆಗಿ ಕೆಲಸ ಮಾಡುತ್ತಿದ್ದಾರೆ. ಸಾಹಿತ್ಯ ಮತ್ತು ಕಲೆಯಲ್ಲಿ ಆಸಕ್ತಿ. ಕನ್ನಡ ಸಾಹಿತ್ಯ ರಂಗ ಸಂಸ್ಥೆಯ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುತ್ತಾರೆ.

Email: gundu.shankar@gmail.com

* **ಜ್ಯೋತಿ ಮಹಾದೇವ್**

*[೧೯. ವಾವೆ ವರಸೆಗಳ ಭಾವ ಸರಸಗಳು]*

ವಿದ್ಯಾರ್ಹತೆ: ಬಿಎಸ್ಸಿ, ಕನ್ನಡ ಎಂಎ, ಸೈಕಾಲಜಿ ಎ.ಎ, ಹಿಪ್ನೋಥೆರಪಿ, ಪರ್ಸನಲ್ ಫಿಟ್ನೆಸ್ ಟ್ರೈನರ್.

ಪ್ರಕಟಿತ ಕೃತಿಗಳು: ಭಾವಲಹರಿ, ಭಾವಗಾನ, ಭಾವಬಿಂಬ, ಭಾವಲೋಕ, ಅಗ್ನಿಮುಡಿ (ಕವನ ಸಂಕಲನಗಳು); ಭಾವಯಾನ (ಕಥೆ–ಹರಟೆ ಸಂಕಲನ); ಮಿನುಗು ಮಿಂಚು (ಬೆಳಗು–ಬೈಗಿರುಳುಗಳ ಸಂದೇಶ–ಸಾಲ್ಮಿಂಚುಗಳ ವಿಶಿಷ್ಟ ಸಂಕಲನ). 'ಕನ್ನಡ ಸಾಹಿತ್ಯ ರಂಗ'ದ ಆಡಳಿತ ಮಂಡಳಿಯ ಸದಸ್ಯೆಯಾಗಿಯೂ 'ಕನ್ನಡ ಸಾಹಿತ್ಯ ರಂಗ' ಹಾಗೂ 'ಉತ್ತರ ಕ್ಯಾಲಿಫೋರ್ನಿಯಾ ಕನ್ನಡ ಕೂಟ'ಗಳಿಗಾಗಿ ಶ್ರೀಗಂಧ, ಸ್ವರ್ಣಸೇತು, ಬೇರು–ಸೂರು, ಅಮೆರಿಕನ್ನಡ ಬರಹಗಾರರು, ರಂಗ–ತರಂಗ ಕೃತಿಗಳ ಸಹ–ಸಂಪಾದಕರಾಗಿಯೂ ಕೆಲಸ ಮಾಡಿದ್ದಾರೆ. ಆಳ್ವಾಸ್ ನುಡಿಸಿರಿಯೂ ಸೇರಿದಂತೆ ಹಲವಾರು ಕವಿಗೋಷ್ಠಿಗಳಲ್ಲಿ ಭಾಗವಹಿಸಿದ್ದಾರೆ. ಆಕಾಶವಾಣಿ ಮತ್ತು ದೂರದರ್ಶನಗಳಲ್ಲಿ ಸಂದರ್ಶನಗಳು, ಕವನವಾಚನ ಕಾರ್ಯಕ್ರಮಗಳು ಪ್ರಸಾರವಾಗಿವೆ. 'ಸಾಹಿತ್ಯ ಲಹರಿ ವಾಟ್ಸ್ಯಾಪ್ ಬಳಗ'ವೆಂಬ ಸಮೂಹ ಮಾಧ್ಯಮವೊಂದರ ಸದಸ್ಯೆಯಾಗಿ 'ಕಬ್ಬದೊಕ್ಕಲು' ಹಾಗೂ 'ಸೂರ್ಯಕಾಂತಿ' ಕೃತಿಗಳ ಸಂಪಾದಕರಾಗಿದ್ದಾರೆ. ಹಲವಾರು ವರ್ಷಗಳ ಕಾಲ ಅಮೆರಿಕದಲ್ಲಿದ್ದು, ಪ್ರಸ್ತುತ ೨೦೧೦ರಿಂದ ಮಣಿಪಾಲ ಅನಂತನಗರದಲ್ಲಿ 'ಹಿಪ್ನೋಥೆರಪಿಸ್ಟ್' ಆಗಿ ಸ್ವೋದ್ಯೋಗದಲ್ಲಿದ್ದಾರೆ. ಕೆಲವಾರು ಶಾಲೆ–ಕಾಲೇಜುಗಳಲ್ಲಿ ವಿದ್ಯಾರ್ಥಿಗಳನ್ನುದ್ದೇಶಿಸಿ ಮನಃಸ್ವಾಸ್ಥ್ಯದ ಬಗೆಗೆ ಉಪನ್ಯಾಸಗಳನ್ನು ನೀಡುತ್ತಿದ್ದಾರೆ.

Email: jyothimahadev@gmail.com

* **ತ್ರಿವೇಣಿ ಶ್ರೀನಿವಾಸರಾವ್**

*[೧೮. ಜಗದ ನಿಯಮ (ಕಥೆ) ] [೩೨. ಹೇಗಿತ್ತು? ಹೇಗಾಯ್ತು? (ಕವನ)]*

ಹುಟ್ಟೂರು ಚಿಕ್ಕಮಗಳೂರು ಜಿಲ್ಲೆಯ ಕಡೂರು. ಪ್ರಸ್ತುತ ಪತಿ ಮತ್ತು ಮಕ್ಕಳೊಂದಿಗೆ ಅಮೆರಿಕದ ಇಲಿನಾಯ್ ರಾಜ್ಯದ ಅರೋರ ನಗದಲ್ಲಿ ವಾಸ. 'ತುಳಸಿವನ' ಮತ್ತು

'ತಿಳಿನೀಲಿ ಪೆನ್ನು' ಎಂಬೆರಡು ಪ್ರಕಟಿತ ಪುಸ್ತಕಗಳು. ಕರ್ನಾಟಕದ ಪ್ರಮುಖ ಪತ್ರಿಕೆಗಳಲ್ಲಿ ಕಥೆ, ಲೇಖನಗಳು ಪ್ರಕಟಗೊಂಡಿವೆ. ಲಲಿತಪ್ರಬಂಧಗಳು, ವೈಚಾರಿಕ ಲೇಖನ, ಸಿನೆಮಾ, ಸಂಗೀತ, ನಾಟಕ, ದಾಸಸಾಹಿತ್ಯದಲ್ಲಿ ಹೆಚ್ಚಿನ ಆಸಕ್ತಿ. ಕನ್ನಡ ಸಾಹಿತ್ಯ ರಂಗದ ಪದಾಧಿಕಾರಿಗಳಲ್ಲೊಬ್ಬರು ಮತ್ತು ಅವರ ವೆಬ್ ತಾಣದ ನಿರ್ವಾಹಕಿ. ಕನ್ನಡ ಸಾಹಿತ್ಯ ರಂಗವು ಪ್ರಕಟಿಸಿದ 'ಮಥಿಸಿದಷ್ಟೂ ಮಾತು', 'ಬೇರು ಸೂರು' ಗ್ರಂಥಗಳ ಸಂಪಾದಕ ಮಂಡಳಿಯಲ್ಲಿದ್ದು ಕಾರ್ಯ ನಿರ್ವಹಿಸಿರುವುದರ ಜೊತೆಗೆ, ರಂಗವು ಹೊರತಂದ ಎಲ್ಲ ಗ್ರಂಥಗಳಲ್ಲಿಯೂ ತ್ರಿವೇಣಿಯವರ ಲೇಖನಗಳು ಪ್ರಕಟಗೊಂಡಿವೆ. 'ತುಳಸಿವನ.ಕಾಂ' ಎಂಬ ಸ್ವಂತ ಅಂತರ್ಜಾಲ ತಾಣವಿದೆ. ವಿದ್ಯಾರಣ್ಯ ಕನ್ನಡ ಕೂಟದ 'ಸಂಗಮ' ಸಂಚಿಕೆಯ ಸಂಪಾದಕತ್ವ ನಿರ್ವಹಣೆಯ ಅನುಭವವಿದೆ.

Email: sritri@gmail.com

* **ನಳಿನಿ ಮಯ್ಯ**

*[೧೪. ಹೆಡೆ ಎತ್ತಿ ಬುಸುಗುಟ್ಟಿದಳು ಹೆಣ್ಣು]*

*[೨೯. ಮಾತೃಭೂಮಿ ಶಾಪಿಂಗ್ ಮಾಲ್ ಆದಾಗ (ಕವನ)]*

ಬಾಲ್ಯ ಮೈಸೂರಿನ ಹತ್ತಿರದ ಹುಣಸೂರಿನಲ್ಲಿ. ಅಮೆರಿಕಾಗೆ ವಲಸೆ ೧೯೬೯ರಲ್ಲಿ. ವೃತ್ತಿಯಲ್ಲಿ ಆಕ್ಯುಪೇಷನಲ್ ಥೆರಪಿಸ್ಟ್. ಈಗ ನಿವೃತ್ತರಾಗಿದ್ದಾರೆ. ಶಿಕಾಗೊ ವಿದ್ಯಾರಣ್ಯ ಕನ್ನಡ ಕೂಟದ ಸಕ್ರಿಯ ಸದಸ್ಯೆ. ಬರೆಯುವ ಹವ್ಯಾಸ ಶುರುವಾಗಿದ್ದು 'ಅಮೆರಿಕನ್ನಡ' ಪತ್ರಿಕೆಯ ಮೂಲಕ. ಕರ್ನಾಟಕದ ಹಲವಾರು ಪತ್ರಿಕೆಗಳಲ್ಲಿ ಇವರ ಕಥೆ, ಪ್ರಬಂಧಗಳು ಪ್ರಕಟವಾಗಿವೆ. 'ಮರೀಚಿಕೆ ಮತ್ತು ಇತರ ಕಥೆಗಳು' ಕಥಾ ಸಂಕಲನ ಹಾಗೂ 'ಬಂದೀತು ಆ ದಿನ' ಪ್ರಬಂಧ ಸಂಕಲನಗಳು ಪ್ರಕಟವಾಗಿವೆ. 'ಬೇಂದ್ರೆ ಅಂದ್ರೆ' ಎಂಬ ಬೇಂದ್ರೆ ಅವರ ಬಗೆಗಿನ ಗ್ರಂಥಕ್ಕೂ, ಮತ್ತು 'ಮನಸಿನ ಓಣಿಯಾಗ ಮಿನುಗುತಾವ ದೀಪ' ಎಂಬ ಶಿವರುದ್ರಪ್ಪನವರ ಬಗೆಗಿನ ಗ್ರಂಥಕ್ಕೂ ನಾಗ ಐತಾಳರ ಜೊತೆ ಸಹಸಂಪಾದಕಿಯಾಗಿ ಕೆಲಸ ಮಾಡಿದ್ದಾರೆ. 'ಕನ್ನಡ ಸಾಹಿತ್ಯ ರಂಗ' ಪ್ರಕಟಿಸಿದ 'ಅವರವರ ಭಕುತಿಗೆ' ಪುಸ್ತಕಕ್ಕೆ ಪ್ರಧಾನ ಸಂಪಾದಕಿಯಾಗಿದ್ದರು. ಪ್ರಸ್ತುತ ಡೇರಿಯನ್, ಇಲಿನಾಯ್‌ನಲ್ಲಿ ಪತಿ ಸುಬ್ರಾಯ ಮೈಯ ಅವರೊಡನೆ ವಾಸವಾಗಿದ್ದಾರೆ.

Email: nmaiya@gmail.com

* **ನಾಗ ಐತಾಳ**

*[೧. ಬದುಕು – ಬದಲಾವಣೆ –ವಲಸೆ ಜೀವನ] [೮. ಜನಪದ ಕಲೆಯ ಮೇಲೆ ಸುಧಾರಣೆಯ ಪರಿಣಾಮ]*

ಹುಟ್ಟೂರು ಕರ್ನಾಟಕದ ಕರಾವಳಿಯ ಕೋಟ. ಪ್ರಾಥಮಿಕ ವಿದ್ಯಾಭ್ಯಾಸವನ್ನು ಕೋಟದಲ್ಲಿ ಮುಗಿಸಿ, ಹೈಸ್ಕೂಲು, ಕಾಲೇಜು ವಿದ್ಯಾಭ್ಯಾಸ ಬೆಂಗಳೂರಿನಲ್ಲಿ. ಮುಂದೆ

ಬನಾರಸ್‌ನಲ್ಲಿ B.Pharm. ಡಿಗ್ರಿ ಪಡೆದು, ಬೆಂಗಳೂರಿನ Indian Institute of Science ನಲ್ಲಿ ಬಯೋಕೆಮಿಸ್ಟ್ರಿಯಲ್ಲಿ M.Sc., & Ph.D. ಪದವಿಗಳನ್ನು ಗಳಿಸಿದ್ದಾರೆ. ಬಯೋಕೆಮಿಸ್ಟ್ರಿಯಲ್ಲಿ ಹೆಚ್ಚಿನ ತರಬೇತಿ ಪಡೆಯಲು ೧೯೬೯ರಲ್ಲಿ ಅಮೆರಿಕಕ್ಕೆ ವಲಸೆ. ಮೊದಲಿಗೆ ಲಾಸ್ ಏಂಜಲಿಸ್‌ನ USC School of Medicineನಲ್ಲಿ ಮೂರು ವರ್ಷ, ಕೆನಡಾದಲ್ಲಿ ಮೂರು ವರ್ಷ, University of Chicagoದಲ್ಲಿ ೨೫ ವರ್ಷ ಸಂಶೋಧನಾ ಅಧ್ಯಾಪಕನಾಗಿ ಕೆಲಸ. ೨೦೦೧ರಲ್ಲಿ ನಿವೃತ್ತಿ ಪಡೆದು, ಲಾಸ್ ಏಂಜಲಿಸ್‌ನ ನೆರೆ ಬಡಾವಣೆ ಆರ್ಕೇಡಿಯದಲ್ಲಿ ಮಡದಿ ಲಕ್ಷ್ಮಿ, ಮಗಳು ಅನುರಾಧಾರೊಡನೆ ಹಾಗೂ, ನ್ಯೂಜೆರ್ಸಿಯಲ್ಲಿರುವ ಮಗ ಅರವಿಂದ, ಸೊಸೆ ಸೆಪಿಡೆ, ಮೊಮ್ಮಕ್ಕಳು – ಅಲೆಕ್ಸಾಂಡರ್ ಕೃಷ್ಣ, ಕ್ಯಾಮರಾನ್ ಕವಿನ್–ರ ಜೊತೆ ತಮ್ಮ ನಿವೃತ್ತ ಜೀವನವನ್ನು ತೃಪ್ತಿಕರವಾಗಿ ಕಳೆಯುತ್ತಿದ್ದಾರೆ. ಹವ್ಯಾಸಕ್ಕೆಂದು ಅಷ್ಟಿಷ್ಟು ಬರಹದಲ್ಲಿ ತೊಡಗಿಸಿಕೊಂಡಿದ್ದಾರೆ. ಕಾರಂತ, ಕುವೆಂಪು, ಮಾಸ್ತಿ, ಬೇಂದ್ರೆ ಮುಂತಾದವರ ಕುರಿತು ೭ ಸಂಪಾದಿತ ಕೃತಿ, ಹಾಗೂ, ಅಮೆರಿಕದ ಕನ್ನಡ ಬರಹಗಾರರ ಕಿರುಪರಿಚಯದ (ಜ್ಯೋತಿ ಮಹದೇವರೊಡನೆ) ಒಂದು ಸಂಪಾದಿತ ಕೃತಿ. ಅಲ್ಲದೆ ಸ್ವಂತ ಲೇಖಕನಾಗಿ (ಎರಡು ಕಾದಂಬರಿ, ಎರಡು ಪ್ರಬಂಧ ಸಂಕಲನ, ಎರಡು ಕಥಾಸಂಕಲನ, ಒಂದು ವೈಜ್ಞಾನಿಕ ಗ್ರಂಥ, ಎರಡು ಅನುಭವ ಕಥನ) ೯ ಕೃತಿಗಳನ್ನೂ ಪ್ರಕಟಿಸಿದ್ದಾರೆ.

ಕನ್ನಡ ಸಾಹಿತ್ಯ ರಂಗ ಪ್ರಕಟಿಸಿದ ಕೃತಿಗಳ ಸಂಪಾದಕ ಮಂಡಲಿಯಲ್ಲಿಯೂ ಕೆಲಸ ಮಾಡಿದ್ದಾರೆ. ಪ್ರಸ್ತುತ ಕನ್ನಡ ಸಾಹಿತ್ಯ ರಂಗದ ಆಡಳಿತ ಮಂಡಲಿಯ ಅಧ್ಯಕ್ಷ.

Email: nagaaithal@gmail.com

* **ಪ್ರಕಾಶ್ ನಾಯಕ್**

*[೧೦. ಪಿತೃಕಾಮೇಷ್ಟಿ (ಕಥೆ)]*

ಉತ್ತರ ಕನ್ನಡ ಜಿಲ್ಲೆಯ ಹನೇಹಳ್ಳಿಯವರು. ಉತ್ತರ ಕ್ಯಾಲಿಫೋರ್ನಿಯದ ಕೂಪರ್ಟಿನೋದಲ್ಲಿ ವಾಸ. ಸಾಂತಾ ಕ್ಲಾರದಲ್ಲಿನ ಮಾರ್ವೆಲ್‌ನಲ್ಲಿ ಪ್ರಾಡೆಕ್ಟ್ ಮ್ಯಾನೇಜರ್ ಆಗಿ ಕೆಲಸ. ಮಯೂರ ಮತ್ತು ಉದಯವಾಣಿ ವಿಶೇಷಾಂಕಗಳಲ್ಲಿ ಕಥೆಗಳು ಪ್ರಕಟವಾಗಿವೆ. ಪ್ರಕಟಿತ ಕಥಾಸಂಕಲನ – 'ಅಮೂರ್ತ ಚಿತ್ತ'.

Email - phn066@gmail.com; Blog - prakashnayak.in

* **ಪ್ರಸನ್ನ ಸಂತೇಕಡೂರು**

*[೩೩. ಎತ್ತಣ ಮಾಮರ ಎತ್ತಣ ಕೋಗಿಲೆ (ಕಥೆ)]*

ಪ್ರಸನ್ನ ಸಂತೇಕಡೂರುರವರು ಮೂಲತಃ ಶಿವಮೊಗ್ಗ ಸಮೀಪದ ಸಂತೇ ಕಡೂರಿನವರು. ಶಿವಮೊಗ್ಗದ ಸಹ್ಯಾದ್ರಿ ವಿಜ್ಞಾನ ಕಾಲೇಜಿನಲ್ಲಿ ಬಿ.ಎಸ್‌ಸಿ ಪದವಿ, ಮೈಸೂರು

ವಿಶ್ವವಿದ್ಯಾನಿಲಯದಿಂದ ಜೈವಿಕ ತಂತ್ರಜ್ಞಾನದಲ್ಲಿ ಸ್ನಾತಕೋತ್ತರ ಮತ್ತು ಡಾಕ್ಟರೇಟ್ ಪದವಿಯನ್ನು ಪಡೆದು ಸುಮಾರು ಹತ್ತು ವರ್ಷಗಳ ಕಾಲ ಅಮೇರಿಕಾದಲ್ಲಿ ನೆಲೆಸಿದ್ದರು. ಮೊದಲು ವರ್ಜೀನಿಯಾ ಸಂಸ್ಥಾನದ ರಿಚ್ಮಂಡ್ ನಗರದ ವರ್ಜೀನಿಯಾ ಕಾಮನ್‌ವೆಲ್ತ್ ವಿಶ್ವವಿದ್ಯಾನಿಲಯದಲ್ಲಿ ಪೋಸ್ಟ್ ಡಾಕ್ಟೋರಲ್ ಫೆಲೋ ಆಗಿ ನಂತರ ಅಲ್ಲಿಯೇ ಹಂಟರ್ ಹೋಲ್ಮ್ ಮ್ಯಾಕ್ವಾಯಿರ್ ಸಂಶೋಧನಾ ಕೇಂದ್ರ ಮತ್ತು ವರ್ಜೀನಿಯಾ ಕಾಮನ್‌ವೆಲ್ತ್ ವಿಶ್ವವಿದ್ಯಾನಿಲಯದಲ್ಲಿ ಸಹಾಯಕ ಪ್ರಾಧ್ಯಾಪಕರಾಗಿದ್ದರು. ಇತ್ತೀಚೆಗೆ ಭಾರತ ಸರ್ಕಾರದ ಜೈವಿಕ ತಂತ್ರಜ್ಞಾನ ಮಂಡಳಿಯಿಂದ ಹೆಸರಾಂತ ರಾಮಲಿಂಗಸ್ವಾಮಿ ಫೆಲೋಶಿಪ್ಪನ್ನು ಪಡೆದು ತಮ್ಮ ಸಂಶೋಧನೆಯನ್ನ ಮೈಸೂರಿನ ಜೆ.ಎಸ್.ಎಸ್. ಉನ್ನತ ಶಿಕ್ಷಣ ಸಂಸ್ಥೆಯ ಸೆಂಟರ್ ಆಫ್ ಎಕ್ಸೆಲೆನ್ಸ್ ಇನ್ ಮಾಲಿಕ್ಯುಲರ್ ಬಯಾಲಜಿ ಅಂಡ್ ರಿಜೆನೆರೇಟಿವ್ ಮೆಡಿಸಿನ್ (Center of Excellence in Molecular Biology and Regenerative Medicine (CEMR)) ವಿಭಾಗದಲ್ಲಿ ಮುಂದುವರೆಸಿದ್ದಾರೆ. ಇವರು ವಿಜ್ಞಾನದ ಜೊತೆಗೆ ಸಾಹಿತ್ಯದಲ್ಲಿಯೂ ಕೂಡ ಅಪಾರವಾದ ಆಸಕ್ತಿ ಹೊಂದಿದ್ದಾರೆ. ಜೊತೆಗೆ ಸದ್ಯದಲ್ಲಿಯೇ ಕೆಲವು ಕತೆಗಳನ್ನ ಸೇರಿಸಿ ಒಂದು ಕಥಾಸಂಕಲನ ಮತ್ತು ಶ್ರೀರಮಣ ಮಹರ್ಷಿಯವರ ಆಧ್ಯಾತ್ಮಿಕ ಜೀವನದ ಮೇಲೆ ಹನ್ನೆರಡನೇ ಶತಮಾನದಲ್ಲಿದ್ದ ವಿಶ್ವದ ಮಹಾ ದಾರ್ಶನಿಕರಲ್ಲಿ ಒಬ್ಬನಾಗಿರುವ ಅಲ್ಲಮಪ್ರಭುದೇವನ ಪ್ರಭಾವವನ್ನ ಕುರಿತು ಒಂದು ಕಿರು ಹೊತ್ತಿಗೆಯನ್ನ ಹೊರತರುತ್ತಿದ್ದಾರೆ.

Email: pksgoldenhelix@gmail.com

* **ಮಾನಸ ವೆಂಕಟಸುಬ್ಬಯ್ಯ**

*[೧೫. ಚಿರಜೀವಿನೀ (ಕವನ)]*

ಬೆಂಗಳೂರಿನಲ್ಲಿ ಹುಟ್ಟಿಬೆಳೆದ ಮಾನಸ ವೆಂಕಟಸುಬ್ಬಯ್ಯ, ಕ್ಯಾಲಿಫೋರ್ನಿಯಾದ ಸ್ಯಾನ್ ಫ್ರಾನ್ಸಿಸ್ಕೋ ಬೇ ಏರಿಯಾದಲ್ಲಿ ಪತಿ ಮತ್ತು ಮಗನೊಂದಿಗೆ ನೆಲೆಸಿದ್ದಾರೆ; ಅಣು ಜೀವವಿಜ್ಞಾನದಲ್ಲಿ ಎಂ.ಎಸ್. ಪದವಿ ಹೊಂದಿದ್ದು, ಕನ್ನಡ, ಸಂಸ್ಕೃತ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಆಸಕ್ತಿಯುಳ್ಳವರಾಗಿದ್ದಾರೆ. ಸಾಹಿತ್ಯವಿಮರ್ಶೆ, ಅನುವಾದ, ಮತ್ತು ರಂಗಭೂಮಿಯತ್ತಲೂ ಒಲವಿರುವ ಇವರು ನಟನೆ, ನಿರೂಪಣೆ, ಧ್ವನಿದಾನಗಳನ್ನೂ ಮಾಡಿದ್ದಾರೆ. ಇವರ ಕೆಲವು ಬರಹಗಳು "ಕಸ್ತೂರಿ" ಹಾಗೂ "ಹೊಸತು" ಪತ್ರಿಕೆಗಳಲ್ಲೂ, ಅನುವಾದಿತ ಕವನಗಳು ಕನ್ನಡ ಸಾಹಿತ್ಯ ಅಕಾಡೆಮಿಯ "ಅನಿಕೇತನ" ದಲ್ಲೂ ಪ್ರಕಟವಾಗಿವೆ. ಮಾನಸ, ಉತ್ತರ ಕ್ಯಾಲಿಫೋರ್ನಿಯ ಕನ್ನಡ ಕೂಟದ ವಾರ್ಷಿಕ ಸಂಚಿಕೆಗಳ ಸಂಪಾದಕ ಮಂಡಳಿಯ ಸದಸ್ಯರಾಗಿಯೂ, ೨೦೧೪ರ "ಅಕ್ಕ" ವಿಶ್ವಕನ್ನಡ ಸಮ್ಮೇಳನದ ಸ್ಮರಣಸಂಚಿಕೆ ಸಮಿತಿಯ ಸಹ – ಅಧ್ಯಕ್ಷರಾಗಿಯೂ ಕೆಲಸ ಮಾಡಿದ್ದಾರೆ.

Email: mvensh@yahoo.com

* **ಮೀನಾ ಸುಬ್ಬರಾವ್**

*[೧೨ ಕಾಲಾಯ ತಸ್ಮೈ ನಮಃ]*

ಮೈಸೂರು ವೈದ್ಯಕೀಯ ವಿದ್ಯಾಲಯದಲ್ಲಿ ವೈದ್ಯಕೀಯ ಪದವಿಯನ್ನು ಪಡೆದು, ಯುನಿವರ್ಸಿಟಿ ಆಫ್ ಲಾಸ್ ಏಂಜಲಿಸ್‌ನಲ್ಲಿ ಮಕ್ಕಳ ವೈದ್ಯಶಾಸ್ತ್ರದಲ್ಲಿ ಉನ್ನತ ಶಿಕ್ಷಣ ಪಡೆದು, ಪ್ರಸ್ತುತ ಸಲಿನಾಸ್ ಕ್ಯಾಲಿಫೋರ್ನಿಯಾದಲ್ಲಿ ಸುಮಾರು ೨೦ ವರ್ಷಗಳಿಂದ ಮಕ್ಕಳ ತಜ್ಞೆಯಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಸಂಗೀತ, ಸಾಹಿತ್ಯ, ನಾಟಕ, ನೃತ್ಯ, ಕಲೆ, ಫೋಟೋಗ್ರಫಿ ಮತ್ತು ಪ್ರವಾಸಗಳಲ್ಲಿ ಆಸಕ್ತಿಯಿದ್ದು, ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಬರೆಯುವ ಹವ್ಯಾಸವನ್ನು ಇಟ್ಟುಕೊಂಡಿದ್ದಾರೆ. ಇವರ ಲೇಖನಗಳು, ಕವನಗಳು, ವರದಿಗಳು, ಪ್ರಬಂಧಗಳು ದಟ್ಸ್ ಕನ್ನಡ, ಸಂಪದ, ಕನ್ನಡ ಧ್ವನಿ, ಸ್ವರ್ಣಸೇತು, ಅಲೆವಾಣಿ ಮುಂತಾದ ತಾಣ ಮತ್ತು ಸಂಚಿಕೆಗಳಲ್ಲಿ ಪ್ರಕಟವಾಗಿವೆ.

Email: subbaraomeena@yahoo.com

* **ಮೀರಾ ಪಿ. ಆರ್.**

*[೨೩. ಬದಲಾವಣೆಯೆಂಬ ಸಹಜಾವಸ್ಥೆ]*

ಭಾಷಾವಿಜ್ಞಾನದಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ಸ್ನಾತಕೋತ್ತರ ಪದವಿ ಪಡೆದಿರುವ ಮೀರಾ ಶಿಕ್ಷಕಿಯಾಗಿ ಹಾಗು ಮೈಸೂರು, ಬೆಂಗಳೂರು ಆಕಾಶವಾಣಿಯಲ್ಲಿ ಹಲವು ವರ್ಷ ಅರೆಕಾಲಿಕ ಉದ್ಘೋಷಕಿಯಾಗಿ ಕೆಲಸ ಮಾಡಿದ್ದಾರೆ. ಈಗ ಸಧ್ಯಕ್ಕೆ ನ್ಯೂಜೆರ್ಸಿಯ 'ನಾದ' ಸಂಗೀತ ಶಾಲೆಯ ಸಂಸ್ಥಾಪಕಿ ಮತ್ತು ಶಿಕ್ಷಕಿಯಾಗಿದ್ದಾರೆ. ಕನ್ನಡದ ಹಲವು ನಿಯತಕಾಲಿಕೆಗಳಲ್ಲಿ, ವಿಶೇಷಾಂಕಗಳಲ್ಲಿ ಮತ್ತು ವೆಬ್ ಪೋರ್ಟಲ್‌ಗಳಲ್ಲಿ, ಕನ್ನಡ ಸಾಹಿತ್ಯ ರಂಗ ಮತ್ತು ಅಮೆರಿಕದ ಕನ್ನಡ ಕೂಟಗಳ ಹಲವು ಪ್ರಕಟಣೆಗಳಲ್ಲಿ ಇವರ ಹಲವು ಕಥೆ, ಕವಿತೆ, ಪ್ರಬಂಧ, ವಿಮರ್ಶೆ, ಅಂಕಣ ಬರಹಗಳು ಪ್ರಕಟವಾಗಿವೆ. ಮಕ್ಕಳ ಸಾಹಿತ್ಯ ಇವರ ವಿಶೇಷ ಪ್ರೀತಿ. 'ಅಕ್ಕ ೨೦೧೦'ರ ಅಂಗವಾಗಿ ಪ್ರಕಟಗೊಂಡ ಮಕ್ಕಳ ವಿಶೇಷ ಸಂಚಿಕೆ 'ಗುಬ್ಬಿಗೂಡು' ಪುಸ್ತಕದ ಸಂಪಾದಕಿ. ಇವರ ಅಂಕಣ ಬರಹ ಮತ್ತಿತರ ಲೇಖನಗಳ ಸಂಗ್ರಹವಾಗಿ ಹೊರಬಂದ ಪುಸ್ತಕ 'ದೂರಸಾಗರ' ೨೦೧೭ರಲ್ಲಿ ಅಭಿನವ ಪ್ರಕಾಶನದಿಂದ ಪ್ರಕಟವಾಗಿದೆ. 'ಅಕ್ಕ ೨೦೧೨' ಸಮ್ಮೇಳನದ ಅಂಗವಾಗಿ ಹೊರಬರುತ್ತಿದ್ದ 'ಜಗಲಿ' ವಾರ್ತಾಪತ್ರಿಕೆಯ ಸಂಪಾದಕ ಮಂಡಳಿಯಲ್ಲಿ ಮತ್ತು ಕನ್ನಡ ಸಾಹಿತ್ಯ ರಂಗದ ಪುಸ್ತಕ ಮಾಲೆ – ೭ರ ಪ್ರಕಟಣೆಗಳಾದ 'ಅನುವಾದ ಸಂವಾದ' ಮತ್ತು 'A Little Taste of Kannada in English' ಕೃತಿಗಳ ಸಂಪಾದಕ ಮಂಡಳಿಯಲ್ಲಿಯೂ ಕೆಲಸ ಮಾಡಿದ್ದಾರೆ. 'ಅಕ್ಕ ೨೦೧೬' ಸಮ್ಮೇಳನಕ್ಕಾಗಿ ಮಕ್ಕಳ ಕಿರುಚಿತ್ರವೊಂದನ್ನು ಬರೆದು, ನಿರ್ದೇಶಿಸಿದ್ದಾರೆ. ತಮ್ಮದೇ ಸಂಗೀತ ಶಾಲೆಯೊಂದನ್ನು ನಡೆಸುತ್ತಿರುವ ಮೀರಾ ಸಾಹಿತ್ಯ, ಸಂಗೀತ, ನೃತ್ಯ, ಚಿತ್ರಕಲೆ, ಸಿನಿಮಾ, ವೆಬ್ ಮತ್ತು ಗ್ರಾಫಿಕ್ ಡಿಸೈನಿಂಗ್ ಹೀಗೆ ಹತ್ತು ಹಲವು ಆಸಕ್ತಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಭಾರತದಿಂದ ಅಮೆರಿಕಾಗೆ

ವರ್ಷ ೨೦೦೦ದಲ್ಲಿ ಬಂದ ಇವರು, ಸಧ್ಯಕ್ಕೆ ನ್ಯೂಜೆರ್ಸಿಯ 'ಎಡಿಸನ್' ಎಂಬಲ್ಲಿ ತಮ್ಮ ಪತಿ ಭಾರ್ಗವ ಹಾಗು ಮಗ ನಿಶಾಂತರ ಜೊತೆ ನೆಲೆಸಿದ್ದಾರೆ.

Email: bhameera@gmail.com;

* **ಮೈ. ಶ್ರೀ. ನಟರಾಜ**

*[೬. ಅದಲು ಅಮೆರಿಕ – ಬದಲು ಭಾರತ!] [೨೮. ಐದು ದಶಕಗಳ ಐತಿಹ್ಯ– ಅಮೆರಿಕಾ ರಾಜಕೀಯದ ಒಂದು ಹಿನ್ನೋಟ]*

ಆಳ್ವಾಸ್ ನುಡಿಸಿರಿ ಪ್ರತಿಷ್ಠಾನದ ೨೦೧೮ರ ಪ್ರಶಸ್ತಿಗೆ ಭಾಜನರಾದ ಡಾ. ಮೈ. ಶ್ರೀ. ನಟರಾಜರ ಹುಟ್ಟೂರು ಹಾಸನ, ಅರುವತ್ತರ ದಶಕದ ಕೊನೆಯಲ್ಲಿ ಅಮೆರಿಕೆಗೆ ಆಗಮಿಸಿ, ಅಮೆರಿಕದ ಅಣುಶಕ್ತಿ ನಿಯಂತ್ರಣ ಆಯೋಗದಲ್ಲಿ ರಾಕ್ ಮೆಕ್ಯಾನಿಕ್ಸ್ ವಿಭಾಗಾಧಿಕಾರಿ ಮತ್ತಿತರ ವಿವಿಧ ಜವಾಬ್ದಾರಿಗಳೊಂದಿಗೆ ಸೇವೆ ಸಲ್ಲಿಸಿ ನಿವೃತ್ತರಾಗಿ ಮೇರೀಲ್ಯಾಂಡಿನಲ್ಲಿ ಪತ್ನಿ ಗೀತಾಳೊಂದಿಗೆ ವಾಸ. "ನಾನೂ ಅಮೆರಿಕನ್ ಆಗಿಬಿಟ್ಟೆ," "ಮಧುಚಂದ್ರ, ಸಿರಿಕೇಂದ್ರ" (ಕವನ ಸಂಕಲನಗಳು), "ಮೀನಿನ ಹೆಜ್ಜೆ" ಮತ್ತು "ನೇಣು" "ಪರದೇಶಿಗಳ ಪಾರ್ಟಿ ಮತ್ತು ಇತರ ಮೂರು ನಾಟಕಗಳು" ಮತ್ತು "I am Brahman" (ನಾಟಕಗಳು), "ಜಾಲತರಂಗ" ಮತ್ತು "ಜಾಲತರಂಗಿಣಿ" (ಅಂಕಣ ಬರಹಗಳು), "ಮಾಯಾವಿ ಸರೋವರ" (ಅನುವಾದಿತ ನಾಟಕ), "The Void and The Womb" ("ಬಯಲು–ಬಸಿರು" ಕನ್ನಡ ಕಾದಂಬರಿಯ ಆಂಗ್ಲಾನುವಾದ), "ಭಾಷೆಯಿಂದ ಭಾಷೆಗೆ" ಮತ್ತು "Beyond Words" (ಅನುವಾದಿತ ಕವನ ಸಂಕಲನಗಳು), "ಸಿರಿಗನ್ನಡ ಗೀತರಾಮಾಯಣ" (ನೀಳ್ಗಾವ್ಯ), "ಕಥೆಯಂ ಕೇಳೆಲೊ ಕಂದ" (ಕಥಾ ಸಂಕಲನ), ಇವು ಇವರ ಮುಖ್ಯ ಪ್ರಕಟಿತ ಕೃತಿಗಳು. "ಕನ್ನಡ ಕಾದಂಬರಿ ಲೋಕದಲ್ಲಿ ಹೀಗೆ ಹಲವು," "ತಂತ್ರ ವಿಜ್ಞಾನವಾಹಿನಿ," "ಸ್ನೇಹದಲ್ಲಿ ನಿಮ್ಮ, ಹರಿ," "ದೀಪ ತೋರಿದೆಡೆಗೆ," (ಕಥಾ ಸಂಕಲನ), "ನಾರೀಗೀತ" (ಹಾಸನದ ರಾಜಾರಾಯರ ಕಾದಂಬರಿಯ ಮರುಸೃಷ್ಟಿ), "ರಂಗ ತರಂಗ–ಕನ್ನಡದ ಮುನ್ನಡೆಯ ಮಿಂಚು ನೋಟ" (ಆಹ್ವಾನಿತ ಭಾಷಣಗಳ ಸಂಗ್ರಹ), ಇವು ಇವರು ಸಂಪಾದಿಸಿದ ಮುಖ್ಯ ಕೃತಿಗಳು. ಕಾವೇರಿ ಕನ್ನಡ ಸಂಘದ ಕಾರ್ಯಕಾರೀ ಸಮಿತಿಯ ಮತ್ತು ಆಡಳಿತ ಮಂಡಲಿಯ ಅಧ್ಯಕ್ಷತೆ, ಕನ್ನಡ ಸಾಹಿತ್ಯ ರಂಗದ ಅಧ್ಯಕ್ಷತೆ, ಹಲವು ಪತ್ರಿಕೆಗಳ ಮತ್ತು ಸ್ಮರಣ ಸಂಚಿಕೆಗಳ ಸಂಪಾದಕತ್ವ, ಕನ್ನಡ ನಾಟಕ ತಂಡವನ್ನು ತಯಾರುಮಾಡಿ ಊರೂರಿಗೆ ಕೊಂಡೊಯ್ದ ಖ್ಯಾತಿ, ಸಂಸ್ಕೃತದಲ್ಲಿ "ನವರತ್ನಮಾಲಿಕಾ" ಎಂಬ ಒಂಬತ್ತು ಕೃತಿಗಳ ಹಾಗೂ ಕನ್ನಡದಲ್ಲಿ "ನವಮಣಿಮಾಲಿಕಾ" ಎಂಬ ಒಂಬತ್ತು ಕೃತಿಗಳ ಸಾಹಿತ್ಯ ರಚನೆ, ಇವು ಇವರ ಇತರ ಸಾಧನೆಗಳು. ಸಾಹಿತ್ಯಕ್ಷೇತ್ರದಲ್ಲಿ, "ತ್ರಿವೇಣಿ" ಸಂಸ್ಥೆ ಕೊಟ್ಟ "ನೀಲಮ್ಮ ಮೆಟ್‌ಗುಡ್" ಪಾರಿತೋಷಕ; 'ಕಾವೇರಿ ಕನ್ನಡ ಸಂಘ' 'ಹ್ಯೂಸ್ಟನ್ ಕನ್ನಡ ವೃಂದ' ಮತ್ತು 'ಅಕ್ಕ' ಸಂಸ್ಥೆ ಕೊಟ್ಟ ವಿಶೇಷ ಪ್ರಶಸ್ತಿ ಫಲಕಗಳು;

ಮಂಗಳೂರಿನ ಪತ್ರಿಕೆ "ಹೃದಯವಾಹಿನಿ" ಕೊಟ್ಟ "ಹೃದಯವಂತರು" ಪಾರಿತೋಷಕ ಮತ್ತು ಎಲ್ಲಕ್ಕಿಂತ ಮುಖ್ಯವಾಗಿ "ಮಧುಚಂದ್ರ-ಸಿರಿಕೇಂದ್ರ" ಕವನ ಸಂಕಲನಕ್ಕೆ ಕನ್ನಡ ನಾಡಿನಲ್ಲಿ ಸಂದ "ಗೊರೂರು" ಪ್ರಶಸ್ತಿ. ಇವುಗಳ ಜೊತೆಗೆ, ಇವರ ತಾಂತ್ರಿಕ ನೈಪುಣ್ಯವನ್ನು ಮತ್ತು ಉತ್ತಮ ಸೇವೆಯನ್ನು ಗುರುತಿಸಿ ಅಣುಶಕ್ತಿ ನಿಯಂತ್ರಣ ಆಯೋಗ ಕೊಟ್ಟು ಗೌರವಿಸಿದ ಆಯೋಗದ ಅತ್ಯುನ್ನತ ಪ್ರಶಸ್ತಿಗಳಲ್ಲೊಂದಾದ "ವಿಶಿಷ್ಟ ಸೇವಾ ಪ್ರಶಸ್ತಿ" ಹಾಗು ರಾಜಧಾನಿಯ National Council of Asian Indian Associations ಕೊಟ್ಟ ಸೇವಾ ಪ್ರಶಸ್ತಿ, ಇವು ಇವರಿಗೆ ಸಂದ ಪ್ರಶಸ್ತಿಗಳ ಪೈಕಿ ಕೆಲವು. ಯು.ಕೆ. ಕನ್ನಡಿಗರು ಮತ್ತು ಟೊರಾಂಟೋ/ಕೆನಡಾ ಕನ್ನಡಿಗರು ಸಹ ಇವರನ್ನು ಮುಖ್ಯ ಅತಿಥಿಯನ್ನಾಗಿ ಆಹ್ವಾನಿಸಿ ಗೌರವಿಸಿದ್ದಾರೆ.

Email: mysreena@aol.com

### * ಮಂಗಳಾ ಕುಮಾರ್

*[೧೬. ಜಡೆಬಿಲ್ಲೆ (ಕಥೆ)]*

ಮಂಗಳಾ ಹುಟ್ಟಿ, ಬೆಳೆದಿದ್ದು ಬೆಂಗಳೂರಿನಲ್ಲಿ. ವಿಶ್ವೇಶ್ವರಯ್ಯ ಇಂಜಿನಿಯರಿಂಗ್ ಕಾಲೇಜಿನಿಂದ ೧೯೭೭ರಲ್ಲಿ ಎಲೆಕ್ಟ್ರಿಕಲ್ ಇಂಜಿನಿಯರಿಂಗ್ ಪದವಿ ಪಡೆದು, ೧೯೮೦ ರಲ್ಲಿ ಅಮೇರಿಕಾಗೆ ಬಂದು ನೆಲೆಸಿದ ಮಂಗಳಾ ಅವರು ನಾರ್ಟೆಲ್, ಸೀಮೆನ್ಸ್, ಆಸ್ಪೆಕ್ಟ್ ಕಮ್ಯೂನಿಕೇಷನ್ಸ್ ಮುಂತಾದ ಹೈಟೆಕ್ ಕಂಪನಿಗಳಲ್ಲಿ ಉನ್ನತ ವರ್ಗದ ಅಧಿಕಾರಿಯಾಗಿ ಕೆಲಸ ಮಾಡಿದ್ದಾರೆ. ಜೊತೆಗೇ ಹಲವಾರು ಸಾಮಾಜಿಕ ಮತ್ತು ಸಾಂಸ್ಕೃತಿಕ ಸೇವಾ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸುತ್ತ ಬಂದಿದ್ದಾರೆ. ೧೯೯೬ರಿಂದ ಪತಿ ಅರುಣ್ ಮತ್ತು ಮಗ ನಿಶಾಂತನೊಂದಿಗೆ ಕ್ಯಾಲಿಫೋರ್ನಿಯ ಬೇ ಏರಿಯಾ ನಿವಾಸಿ. ಹವ್ಯಾಸಿ ಬರಹಗಾರ್ತಿ ಮಂಗಳಾ ಅವರ ಕನ್ನಡ ಮತ್ತು ಇಂಗ್ಲಿಷ್ ಕಥೆಗಳು, ವೈಚಾರಿಕ ಲೇಖನಗಳು ಮತ್ತು ವಿಮರ್ಶೆಗಳು ಹಲವಾರು ಪತ್ರಿಕೆಗಳಲ್ಲಿ, ಪುಸ್ತಕಗಳಲ್ಲಿ, ಜಾಲತಾಣಗಳಲ್ಲಿ ಪ್ರಕಟಿತವಾಗಿವೆ. ಮಂಗಳಾ ಅವರ ಕಿರುಕಥೆಗಳು ಉತ್ತರ ಕ್ಯಾಲಿಫೋರ್ನಿಯ ಕನ್ನಡ ಕೂಟದ "ಸ್ವರ್ಣಸೇತು" ವಾರ್ಷಿಕ ಸಂಚಿಕೆಯ ಕಥಾಸ್ಪರ್ಧೆಯಲ್ಲಿ ಸತತವಾಗಿ ೧೦ ವರ್ಷಗಳಿಗೂ ಮೀರಿ ಬಹುಮಾನ ಗಳಿಸಿವೆ.

Email: mangalakumar@gmail.com

### * ಮಂಜುಳ ಭದ್ರಸ್ವಾಮಿ

*[೭. ಭಾರತ ಬದಲಾಗುತ್ತಿದೆ...]*

ವೃತ್ತಿಯಿಂದ ಬರಹಗಾರ್ತಿ. ಹುಟ್ಟಿದೂರು ಮೈಸೂರು. ಮೈಸೂರು ವಿಶ್ವ ವಿದ್ಯಾನಿಲಯ ಹಾಗು ಸ್ಯಾನ್ ಫ್ರಾನ್ಸಿಸ್ಕೋ ಸ್ಟೇಟ್ ಯೂನಿವರ್ಸಿಟಿಯಿಂದ ಅರ್ಥಶಾಸ್ತ್ರದಲ್ಲಿ ಮಾಸ್ಟರ್ಸ್ ಪದವಿ. ಅಮೆರಿಕ ದೇಶದಲ್ಲಿ ಕಳೆದ ಹದಿನೈದು ವರ್ಷಗಳಿಂದ ವಾಸ. ಪ್ರಸ್ತುತ ಕ್ಯಾಲಿಫೋರ್ನಿಯಾದ ಫ್ರಿಮಾಂಟ್‌ನಲ್ಲಿ ಪತಿ ಹಾಗು ಪುತ್ರಿಯೊಂದಿಗೆ ವಾಸ್ತವ್ಯ.

ಕಥೆ, ಲೇಖನಗಳು ಕನ್ನಡ ಹಾಗು ಇಂಗ್ಲಿಷ್ ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ಪ್ರಕಟಿತ ಕಥಾ ಸಂಗ್ರಹ 'ಕಥಾಗುಚ್ಛ'(೨೦೧೬), ಪ್ರಕಟಿತ ಲೇಖನಗಳ ಸಂಗ್ರಹ 'ಇನ್ ದ ಲ್ಯಾಂಡ್ ಆಫ್ ಗೋಲ್ಡನ್ ಗೇಟ್ ಬ್ರಿಜ್' (೨೦೧೭). ಉತ್ತರ ಕ್ಯಾಲಿಫೋರ್ನಿಯ ಕನ್ನಡ ಕೂಟದಿಂದ ಪ್ರಕಟವಾಗುವ 'ಸ್ವರ್ಣಸೇತು' ವಾರ್ಷಿಕ ಪತ್ರಿಕೆಯ ೨೦೧೩ರ ಸಂಪಾದಕ ಮಂಡಳಿಯಲ್ಲಿ ಸದಸ್ಯರಾಗಿ ಕಾರ್ಯ ನಿರ್ವಹಣೆ.

Email: manjula_bs_7@yahoo.com

* **ರವಿ ಗೋಪಾಲರಾವ್**

*[೧೭. ಮೂರು ತಲೆಮಾರುಗಳ ಮೂಲಭೂತ ಮೌಲ್ಯಗಳು]*

ಮೂಲತಃ ಬೆಂಗಳೂರಿನವರಾದ ರವಿ ಗೋಪಾಲರಾವ್ ಅಮೆರಿಕಾಗೆ ಬಂದದ್ದು ವಿದ್ಯಾರ್ಥಿಯಾಗಿ. ಯೂನಿವರ್ಸಿಟಿ ಆಫ್ ಪೆನ್ಸಿಲ್ವೇನಿಯದಿಂದ ಡಾಕ್ಟೊರೇಟ್ ಪದವಿ ಪಡೆದು, ಕಳೆದ ಎರಡೂವರೆ ದಶಕಗಳಿಂದ ಸಿಲಿಕಾನ್ ಕಣಿವೆಯಲ್ಲಿ ಶೈಕ್ಷಣಿಕ, ಕನ್ಸಲ್ಟಿಂಗ್ ಮತ್ತು ಐ. ಟಿ. ಉದ್ಯಮದಲ್ಲಿ ತೊಡಗಿದ್ದಾರೆ. ಕನ್ನಡಾಭಿಮಾನಿ ರವಿಯವರು ಕೆಲವು ಸಣ್ಣ ಕತೆ ಹಾಗು ಕವನಗಳನ್ನು ಪ್ರಕಟಿಸಿದ್ದಲ್ಲದೆ ಉತ್ತರ ಕ್ಯಾಲಿಫೋರ್ನಿಯ ಕನ್ನಡ ಕೂಟದ ೨೦೦೪ ಮತ್ತು ೨೦೧೬ರ ಸ್ವರ್ಣಸೇತುವಿನ ಪ್ರಧಾನ ಸಂಪಾದಕರಾಗಿ ಅಳಿಲುಸೇವೆ ಸಲ್ಲಿಸಿದ್ದಾರೆ. ನೆಬ್ರಾಸ್ಕ ಕನ್ನಡ ಕೂಟದ ಸ್ಥಾಪಕರಾಗಿ ಮತ್ತು ಅಕ್ಕ ೨೦೧೪ ಸಾಹಿತ್ಯ ವೇದಿಕೆ ಬಿಡುಗಡೆ ಮಾಡಿದ 'ಕಥಾಸಂಭ್ರಮ'ದ ಸಹಸಂಪಾದಕರಾಗಿ ಕೆಲಸ ನಿರ್ವಹಿಸಿದ್ದಾರೆ. ಕನ್ನಡ ಸಾಹಿತ್ಯ ರಂಗ (ಯು.ಎಸ್.ಎ.) ಪ್ರಕಟಣೆಗಳಾದ 'ಆಚೀಚೆಯ ಕಥೆಗಳು,' 'ಅನುವಾದ ಸಂವಾದ,' ಮತ್ತು 'ಅವರವರ ಭಕುತಿಗೆ' ಪುಸ್ತಕಗಳಲ್ಲಿ ಇವರ ಲೇಖನಗಳು ಪ್ರಕಟವಾಗಿವೆ. ತಮ್ಮ ಬಿಡುವಿನ ವೇಳೆಯಲ್ಲಿ ರವಿಯವರು ಕನ್ನಡ ಪುಸ್ತಕಗಳನ್ನು ಓದುವುದು ಹಾಗು ಸಂಗೀತ ಕೇಳುವ ಹವ್ಯಾಸದೊಂದಿಗೆ ಛಾಯಾಚಿತ್ರ ಮತ್ತು ತಮ್ಮದೇ ಬ್ಲಾಗ್ 'ಗಂಧಾಕ್ಷತೆ'ಗೆ ಬರೆಯುವುದರಲ್ಲಿ ಉತ್ಸುಕರಾಗಿರುತ್ತಾರೆ. ಪತ್ನಿ ಪ್ರತಿಭಾ ಮತ್ತು ಇಬ್ಬರು ಪುತ್ರಿಯರೊಂದಿಗೆ San Jose, CA ನಗರದಲ್ಲಿ ನೆಲಸಿದ್ದಾರೆ.

Email: ravi.gopalarao@gmail.com

* **ಶಶಿಕಲಾ ಚಂದ್ರಶೇಖರ್**

*[೩೧. ಮುಕ್ತಾ (ಕಥೆ)]*

ಮೂಲತಃ ತುಮಕೂರಿನವರು. ಈಗ ವಾಷಿಂಗ್ಟನ್ ಡಿ. ಸಿ. ಪ್ರದೇಶದಲ್ಲಿ ವಾಸ. ಹನಿಗವನ, ಕವನ, ಸಣ್ಣ ಕಥೆ ಬರೆಯುವ ಹವ್ಯಾಸ. ಪ್ರಕಟವಾಗಿರುವ ಸಣ್ಣಕಥಾ ಸಂಕಲನ 'ದೀಪವು ನಿನ್ನದೆ ಗಾಳಿಯು ನಿನ್ನದೆ'ಗೆ ಕನ್ನಡ ಸಾಹಿತ್ಯ ಪರಿಷತ್ತಿನ ರೇವಯ್ಯ ದತ್ತಿ ಪ್ರಶಸ್ತಿ ಬಂದಿದೆ.

Email: shashi.chandra@gmail.com

* **ಶಂಕರ ಹೆಗಡೆ**

*[೧೧. ಜನನಿ ಜನ್ಮಭೂಮಿಶ್ಚ...]*

ಹುಟ್ಟಿ ಬೆಳೆದದ್ದು ಉತ್ತರ ಕನ್ನಡ ಜಿಲ್ಲೆಯ ಶಿರಸಿಯ ಹತ್ತಿರದ ಒಂದು ಚಿಕ್ಕ ಹಳ್ಳಿ. ಹೆಚ್ಚಿನ ವಿದ್ಯಾಭ್ಯಾಸ ಕರ್ನಾಟಕ ವಿಶ್ವವಿದ್ಯಾಲಯ ಮತ್ತು ಕೆನಡಾದ ಸಸ್ಕಾಚೆವಾನ ವಿಶ್ವವಿದ್ಯಾಲಯಗಳಲ್ಲಿ. ಪ್ರಸ್ತುತ ಇಲಿನಾಯ್ ಪ್ರಾಂತದ ನೇಪರವಿಲ್ ಎಂಬ ಊರಿನಲ್ಲಿ ಪತ್ನಿಯೊಂದಿಗೆ ವಾಸಿಸುತ್ತಿದ್ದಾರೆ. ಭಾರತ ಮತ್ತು ಅಮೆರಿಕೆಯ ವಿಶ್ವವಿದ್ಯಾಲಯಗಳಲ್ಲಿ ಹಲವು ವರ್ಷ ಗಣಿತ ಮತ್ತು ಕಂಪ್ಯೂಟರ್ ವಿಜ್ಞಾನ ವಿಷಯಗಳ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ಈಗ ನಿವೃತ್ತರಾಗಿದ್ದಾರೆ. ತನ್ಮಧ್ಯೆ ಕೆಲವು ವರ್ಷಗಳ ಕಾಲ ಲೂಸೆಂಟ್ ಟೆಕ್ನೋಲೋಜಿ ಟೆಲಿಕಮ್ಯುನಿಕೇಶನ್ ಕಂಪನಿಯ ವಿವಿಧ ವಿಭಾಗಗಳಲ್ಲಿ ಇಂಜನಿಯರ್/ಮ್ಯಾನೇಜರ್ ಆಗಿಯೂ ಕೆಲಸ ಮಾಡಿದ್ದಾರೆ. ಕಾಲೇಜು ದಿನಗಳಲ್ಲಿ ಇವರ ಕೆಲವು ಲೇಖನ, ಕಥೆಗಳು ಸ್ಥಳೀಯ ಕನ್ನಡ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದವು. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿದ್ದಾಗ ಇವರು ಕನ್ನಡದಲ್ಲಿ ಬರೆದ 'ಬೀಜಗಣಿತ ಪ್ರವೇಶ' ಎಂಬ ಪಠ್ಯಪುಸ್ತಕ ವಿಶ್ವವಿದ್ಯಾಲಯದಿಂದ ಪ್ರಕಟವಾಗಿದೆ. ೧೯೭೩ರಲ್ಲಿ ಅಮೆರಿಕೆಗೆ ವಲಸೆ ಬಂದ ನಂತರ ಸ್ಥಗಿತವಾಗಿದ್ದ ಇವರ ಸಾಹಿತ್ಯಾಸಕ್ತಿ ಕನ್ನಡ ಸಾಹಿತ್ಯ ರಂಗದ ಸದಸ್ಯತ್ವದೊಂದಿಗೆ ಪುನರ್ಚೇತನಗೊಂಡಿತು. ಸಾಹಿತ್ಯ ರಂಗದ ಸಮ್ಮೇಳನಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತ ಬಂದಿದ್ದಲ್ಲದೆ ಸದ್ಯದ ಪದಾಧಿಕಾರಿಗಳಲ್ಲೊಬ್ಬರು. ವಿದ್ಯಾರಣ್ಯ ಕನ್ನಡ ಕೂಟದ 'ಸಂಗಮ' ಪತ್ರಿಕೆ ಮತ್ತು ಅಮೆರಿಕೆಗಳ ಹವ್ಯಕ ಸಮ್ಮೇಳನಗಳ ಸ್ಮರಣ ಸಂಚಿಗಳಲ್ಲಿ ಇವರ ಹತ್ತಾರು ಲೇಖನಗಳು ಪ್ರಕಟವಾಗಿವೆ. ೨೦೧೭ನೇ ಹವ್ಯಕ ಸಮ್ಮೇಳನದ ಸ್ಮರಣ ಸಂಚಿಕೆಯ ಸಂಪಾದಕರಲ್ಲೊಬ್ಬರಾಗಿಯೂ ಕೆಲಸ ಮಾಡಿದ್ದಾರೆ.

Email: shankranna@gmail.com

* **ಶಾಂತಲಾ ಭಂಡಿ**

*[೩೪. ನೆನಪುಗಳೇ ನೀವ್ಯಾಕೆ ಮರೆಯುವುದಿಲ್ಲ]*

ಹುಟ್ಟೂರು: ಬೆಂಗಳೆ, ಶಿರಸಿ. ಊರು: (ಭಂಡಿಮನೆ), ಮೆಣ್ಸಿಕೇರಿ. ಶಿರಸಿ. ಪ್ರಸ್ತುತ ವಾಸ (೨೦೦೬ರಿಂದ): ಡಬ್ಲಿನ್, ಕ್ಯಾಲಿಫೋರ್ನಿಯ, ಯು.ಎಸ್.ಎ. ವಿದ್ಯಾಭ್ಯಾಸ : ಭೂಗೋಳಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ. ಪ್ರಕಟಿತ ಕೃತಿಗಳು: 'ಬೊಗಸೆಯಲ್ಲಿ ಬೆಳದಿಂಗಳು' (ಕವನ ಸಂಕಲನ), 'ಬೆಳದಿಂಗಳ ಬೇರು' (ಸಣ್ಣ ಕಥೆಗಳು).

Email: shantalabhandi@gmail.com

* **ಶಿಶಿರ ಹೆಗಡೆ**

*[೨೫. ಬದಲಾಗುತ್ತಿರುವ ಸಮೂಹ ಮಾಧ್ಯಮ]*

ಹೆಸರು ಶಿಶಿರ ಹೆಗಡೆ. ಜನ್ಮಸ್ಥಳ ಉತ್ತರ ಕನ್ನಡದ ಕುಮಟಾ ತಾಲೂಕಿನ ಮೂರೂರು. ೬ ವರ್ಷದ ಹಿಂದೆ ಅಮೆರಿಕಾಗೆ ವಲಸೆ. ಪ್ರಸ್ತುತ ಚಿಕಾಗೋದಲ್ಲಿ ದುಡಿಮೆ. ವೃತ್ತಿಯಿಂದ ಸಾಫ್ಟ್‌ವೇರ್ ಇಂಜನೀಯರ್. ನಾಲ್ಕು ವರ್ಷದ ಮಗಳು ಮೈನಾ ಮತ್ತು ಹೆಂಡತಿ ಮೇಘಾ ಹೆಗಡೆಯೊಂದಿಗೆ ಚಿಕಾಗೋ ಸಮೀಪದ ವೆಸ್ಟ್‌ಮಾಂಟ್‌ನಲ್ಲಿ ವಾಸಿಸುತ್ತಿದ್ದಾರೆ. ಕನ್ನಡ ಪತ್ರಿಕೆಗಳಾದ ವಿಜಯ ಕರ್ನಾಟಕ, ಕನ್ನಡಪ್ರಭ ಮತ್ತು ವಿಶ್ವವಾಣಿ ಪತ್ರಿಕೆಗಳಲ್ಲಿ ಬರೆದ ಹತ್ತು ಹಲವು ಲೇಖನಗಳು ಪ್ರಕಟವಾಗಿವೆ. ವಿದ್ಯಾರಣ್ಯ ಕನ್ನಡ ಕೂಟದ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತ ಬಂದಿದ್ದಾರೆ. ಅಮೇರಿಕೆಗಳ ಹವ್ಯಕ ಸಂಘದ ೨೦೧೭ನೇ ರಾಷ್ಟ್ರೀಯ ಸಮ್ಮೇಳನದ ಸ್ಮರಣ ಸಂಚಿಕೆ "ಹವ್ಯಸಿರಿ"ಯ ಸಂಪಾದಕರಾಗಿ ಕೆಲಸ ಮಾಡಿದ್ದಾರೆ.

Email : shishirh@gmail.com

* **ಶ್ರೀನಾಥ್ ಭಲ್ಲೆ**

*[೩. ಹೊಸ ದೇಶದಲ್ಲಿ ನೆಲೆಯಾಗುವ ರೀತಿ]*

ಶ್ರೀನಾಥ್ ಭಲ್ಲೆ ಮೂಲತಃ ಬೆಂಗಳೂರಿನವರು. ಸದ್ಯ, ಅಮೇರಿಕಾದ 'ಈಸ್ಟ್ ಕೋಸ್ಟ್'ನಲ್ಲಿ ವರ್ಜೀನಿಯಾ ರಾಜ್ಯದ ರಿಚ್ಮಂಡ್ ನಗರದಲ್ಲಿ ಮಾರ್ಚ್ ೨೦೦೦ದಿಂದ ಹೆಂಡತಿ ಮತ್ತು ಮಗನೊಡನೆ ವಾಸ ಮಾಡುತ್ತಿದ್ದಾರೆ. ಮೊದಲಿನಿಂದಲೂ ಬರೆಯಬೇಕು ಎಂಬ ಅದಮ್ಯ ಆಸೆ ಇದ್ದು, ಒಮ್ಮೆ ಧೈರ್ಯವಹಿಸಿ ಶುರುಮಾಡಿದ್ದು ಇಂದಿಗೂ ಸುಲಲಿತವಾಗಿ ಸಾಗಿದೆ. ಅಲ್ಲದೇ, ರಿಚ್ಮಂಡ್ ಕನ್ನಡ ಸಂಘದ ಅಧ್ಯಕ್ಷತೆಯನ್ನೂ ಒಮ್ಮೆ ನಿರ್ವಹಿಸಿದ್ದಾರೆ. ಹಲವಾರು ವರ್ಷಗಳ ಹಿಂದೆ ನಾಟಕವನ್ನೂ ಬರೆದಿದ್ದಾರೆ. ಅಲ್ಲದೇ, ನಿರ್ದೇಶನವನ್ನೂ ಮಾಡಿ ಅಭಿನಯಿಸಿದ್ದಾರೆ. ಈವರೆಗೆ ಹದಿನೈದಕ್ಕೂ ಹೆಚ್ಚು ಹಾಸ್ಯ ನಾಟಕಗಳನ್ನೂ ಬರೆದಿದ್ದಾರೆ. 'ಅಕ್ಕ' ರಂಗದ ಮೇಲೂ ನಾಟಕ ಮಾಡಿದ್ದಾರೆ. ಈಚೆಗೆ 'ದಟ್ಸ್ ಕನ್ನಡ'ದಲ್ಲಿ freelance ಅಂಕಣಕಾರರಾಗಿದ್ದಾರೆ. ಒಂದು ಕನ್ನಡ ಕಿರುಚಿತ್ರಕ್ಕೆ ಕಥೆ, ಚಿತ್ರಕಥೆ, ಸಂಭಾಷಣೆ ಮತ್ತು ಹಾಡು ಬರೆವ ಜವಾಬ್ದಾರಿಯನ್ನು ಹೊತ್ತಿದ್ದರು. 'ಗಂಗಾವತರಣ' ನಾಟಕದಲ್ಲಿ ವರಕವಿ ಬೇಂದ್ರೆಯಾಗಿ ಅಭಿನಯಿಸಿದ್ದಾರೆ.

Email: srinathbhalle@yahoo.com

* **ಶ್ರೀಕಾಂತ್ ಬಾಬು**

*[೨೨. ಬದಲಾವಣೆಯೇ ಪ್ರಗತಿ!]*

ಇವರು ನ್ಯೂಜೆರ್ಸಿಯಲ್ಲಿ ನೆಲೆಸಿದ್ದು, ನ್ಯೂಯಾರ್ಕ್‌ನ CITI Bankನಲ್ಲಿ IT Manager ಆಗಿ ಕೆಲಸ ನಿರ್ವಹಿಸುತ್ತಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ಹಾಗೂ ಭಾರತೀಯ ಸಂಗೀತದಲ್ಲಿ ತುಂಬಾ ಆಸಕ್ತಿ. ಆದರೆ ಸಾಹಿತ್ಯ ರಚನೆ ತಮ್ಮ ಹವ್ಯಾಸವಲ್ಲ, ಎನ್ನುತ್ತಲೇ ಉತ್ತಮ ಲೇಖನಗಳನ್ನು ಬರೆಯುತ್ತಿದ್ದಾರೆ.

Email: svenkatesha@hotmail.com

* **ಸರಿತಾ ನವಲಿ**

*[೯. ಮನೆ-ಮನಗಳು ಬದಲಾವಣೆ ಕಂಡಾಗ]*

ಮೂಲತಃ ಉತ್ತರ ಕರ್ನಾಟಕದವರಾದ ಸರಿತಾ ನವಲಿ, ತಮ್ಮ ಶಾಲಾ ಶಿಕ್ಷಣವನ್ನು ಕರ್ನಾಟಕದ ಹಲವಾರು ಜಿಲ್ಲೆಗಳಲ್ಲಿ ನಡೆಸಿ, ಕಾಲೇಜು ಮತ್ತು ಸ್ನಾತಕೋತ್ತರ ಪದವಿಯನ್ನು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಿಂದ ಪಡೆದಿದ್ದಾರೆ. ೨೦೦೪ರಲ್ಲಿ ಭಾರತದಿಂದ ಅಮೆರಿಕಾದ ಅರಿಜೋನ ರಾಜ್ಯದ ಫೀನಿಕ್ಸ್‌ಗೆ ಆಗಮಿಸಿದ್ದು, ೨೦೦೮ರಿಂದ ತಮ್ಮ ಪತಿ ಮತ್ತು ಮಗನೊಂದಿಗೆ ನ್ಯೂ ಜೆರ್ಸಿಯಲ್ಲಿ ನೆಲೆಸಿದ್ದಾರೆ. ಶಾಲಾ-ಕಾಲೇಜು ದಿನಗಳಿಂದಲೂ ಇದ್ದ ಕನ್ನಡ ಸಾಹಿತ್ಯದ ಒಲವು ಮುಂದುವರೆದು, ನ್ಯೂಜೆರ್ಸಿಯ 'ಬೃಂದಾವನ' ಕನ್ನಡ ಕೂಟದ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ, ೨೦೧೪ರಲ್ಲಿ 'ಸಾಹಿತ್ಯ ಬೃಂದಾವನ' ಪ್ರಾರಂಭಿಸಿದ ದ್ವೈಮಾಸಿಕ ಪತ್ರಿಕೆಯಾದ 'ಬೃಂದಾವನ ವಾಣಿ'ಯ ಮೊದಲ ಸಂಪಾದಕಿಯಾಗಿ ಕೆಲಸ ನಿರ್ವಹಿಸಿದ್ದಾರೆ. ಇವರ ಕಥೆ, ಕವನ, ಪ್ರಬಂಧಗಳು, ಅಂಕಣ ಬರಹಗಳು ಕರ್ನಾಟಕ ರಾಜ್ಯದ ಹಲವಾರು ದಿನಪತ್ರಿಕೆಗಳಲ್ಲಿ ಪ್ರಕಟವಾಗಿವೆ. ೨೦೧೬ರ 'ಅಕ್ಕ' ವಿಶ್ವಕನ್ನಡ ಸಮ್ಮೇಳನದ 'ಸ್ಮರಣ ಸಂಚಿಕೆ', 'ನಿರೂಪಣೆ' ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳ ತಂಡಗಳಲ್ಲಿ ಭಾಗಿಯಾಗಿದ್ದು, ಕರ್ನಾಟಕದ 'ಯುನೆಸ್ಕೋ ವಿಶ್ವ ಪರಂಪರೆಯ ತಾಣ'ಗಳ ಕುರಿತು ಛಾಯಾಚಿತ್ರ-ಮಾಹಿತಿ ಒದಗಿಸುವ 'ಐಸಿರಿ' ಕಾಫಿ ಟೇಬಲ್ ಪುಸ್ತಕವನ್ನು ವಿನ್ಯಾಸ ಮಾಡಿ ಪ್ರಕಟಿಸಿದ್ದಾರೆ. ನೃತ್ಯರೂಪಕಗಳ ಪರಿಕಲ್ಪನೆ-ಸಂಭಾಷಣೆ, ನಿರೂಪಣೆ, ನಾಟಕ ಅನುವಾದ, ನಟನೆ ಮತ್ತು ನಿರ್ದೇಶನ ಇವರ ಇನ್ನೊಂದು ಹವ್ಯಾಸ. ನ್ಯೂಯಾರ್ಕಿನ ಆಫ್ ಬ್ರಾಡ್ ವೇ, ಬ್ರೂಕ್ಲಿನ್ ಮತ್ತು ಅಮೆರಿಕಾದ ಹಲವಾರು ಕಡೆ ಪ್ರದರ್ಶನಗೊಂಡು, ಮೆಚ್ಚುಗೆ ಗಳಿಸಿದ 'Muslim in the Midst', ಇಂಗ್ಲೀಷ್ ನಾಟಕವನ್ನು ಇವರು 'ನಮ್ಮೊಳಗೊಬ್ಬ ಮುಸಲ್ಮಾನ' ಎಂದು ಕನ್ನಡಕ್ಕೆ ಅನುವಾದಿಸಿದ್ದು, ಮುಖ್ಯ ಪಾತ್ರದಲ್ಲಿ ನಟಿಸಿ ಮೆಚ್ಚುಗೆ ಗಳಿಸಿದ್ದಾರೆ. ತಮ್ಮ ಕಥಾ ಸಂಕಲನ ಮತ್ತು ಕವನ ಸಂಕಲನಗಳನ್ನು ಪ್ರಕಟಿಸುವ ಯೋಜನೆಯಲ್ಲಿದ್ದಾರೆ. ನ್ಯೂಜೆರ್ಸಿಯ 'ಬೃಂದಾವನ' ಕನ್ನಡ ಕೂಟದ ೨೦೧೯-೨೦ರ ಸಾಲಿನ ನಿರ್ದೇಶಕರ ಮಂಡಳಿಯ ಸದಸ್ಯರಾಗಿ ಕಾರ್ಯ ನಿರ್ವಹಿಸಲಿದ್ದಾರೆ.

Email: saritha13@gmail.com

* **ಸಂಧ್ಯಾ ರವೀಂದ್ರನಾಥ್**

*[೨. ಪರಿವರ್ತನೆ (ಕಥೆ)]*

ಚನ್ನರಾಯಪಟ್ಟಣದ ವಿಶಾಲ ಮತ್ತು ರಂಗಸ್ವಾಮಿಯವರ ಪುತ್ರಿ. ರವಿ ರವೀಂದ್ರನಾಥ್ ಅವರನ್ನು ಮದುವೆಯಾಗಿ ಉತ್ತರ ಅಮೇರಿಕಾಗೆ ಬಂದದ್ದು ೧೯೭೪ರಲ್ಲಿ. ಸ್ಯಾನ್ ಫ್ರಾನ್ಸಿಸ್ಕೋ ಬೇ ಏರಿಯಾದ ಮಿಲ್ ಪೀಟಸ್ ನಗರದಲ್ಲಿ ವಾಸಿಸುತ್ತಿರುವ ಇವರಿಗೆ ಇಬ್ಬರು ಮಕ್ಕಳು. ಇಂಟೆಲ್ ಕಾರ್ಪೊರೇಶನ್ನಲ್ಲಿ ೨೦ ವರ್ಷ ಕೆಲಸ ಮಾಡಿರುವ ಇವರ ಹವ್ಯಾಸ ಕನ್ನಡದಲ್ಲಿ ಬರೆಯುವುದು ಮತ್ತು ಸುಗಮ ಸಂಗೀತ ಹಾಡುವುದು. ಇವರು ಬರೆದ ಕಥೆ, ಕವನ, ನಾಟಕಗಳು ಅಮೆರಿಕನ್ನಡ, ದಟ್ಸ್ ಕನ್ನಡ ಡಾಟ್ ಕಾಮ್, ತರಂಗ ಮುಂತಾದ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಇವರ ಕವಿತೆಗಳಿಗೆ ಪತಿ ರವೀಂದ್ರನಾಥ್ ಸಂಗೀತ ಸಂಯೋಜಿಸಿ, "ಸಂಧ್ಯಾ", "ವಿಶ್ವಕನ್ನಡ" ಮತ್ತು "ದಿವ್ಯ" ಎನ್ನುವ ಭಾವಗೀತೆ ಮತ್ತು ಭಕ್ತಿಗೀತೆಗಳ ಸೀ.ಡಿ.ಗಳನ್ನು ಹೊರತಂದಿದ್ದಾರೆ. ಇವರು ಬರೆದ ಸಣ್ಣಕಥೆಗಳ ಸಂಗ್ರಹ "ಮರಳಿ ಬರುವೆ ನಾ" ೨೦೦೩ರಲ್ಲಿ ಪ್ರಕಟಗೊಂಡಿತು. "ಆಟದೊಡನೆ ಪಾಠ" ಎನ್ನುವ ಧ್ಯೇಯವನ್ನಿಟ್ಟುಕೊಂಡು ೨೦೦೬ರಲ್ಲಿ ಇವರ ನೇತೃತ್ವದಲ್ಲಿ ಪ್ರಾರಂಭವಾದ "ಕನ್ನಡ ಕಲಿ" ಕಾರ್ಯಕ್ರಮ ಅತ್ಯಂತ ಯಶಸ್ವಿಯಾಗಿ ನಡೆದು ಬಂದಿದೆ ಹಾಗೂ ನೂರಾರು ಮಕ್ಕಳಿಗೆ ಕನ್ನಡ ಕಲಿಸುವುದರಲ್ಲಿ ಯಶಸ್ವಿಯಾಗಿದೆ.

Email: sandhya_ravindranath@yahoo.com

* **ವಿಮಲ ರಾಜಗೋಪಾಲ್**

*[೩೭. ಹೂವಿನ ಪೂಜೆ (ಕಥೆ)]*

ವಿಮಲ ರಾಜಗೋಪಾಲ್ ಹುಟ್ಟಿದ್ದು ಬೆಂಗಳೂರು. ತಂದೆ ಪ್ರಸಿದ್ಧ ಲೇಖಕ ಎಲ್. ಗುಂಡಪ್ಪ ಮತ್ತು ತಾಯಿ ಶಾರದಮ್ಮ. ಬೆಂಗಳೂರು ಸೆಂಟ್ರಲ್ ಕಾಲೇಜಿನಿಂದ ಬಿ.ಎ. (ಇಂಗ್ಲಿಷ್) ಆನರ್ಸ್. ರೇಡಿಯೋ ಮತ್ತು ಸಾರ್ವಜನಕ ವೇದಿಕೆಗಳಲ್ಲಿ L .G. Sisters ತಂಡ (ಡಾ. ಎಲ್. ಜಿ. ಸುಮಿತ್ರಾ, ವಿಮಲ, ಕಮಲ) ಜಾನಪದ ಗೀತಗಾಯನಕ್ಕೆ ಸುಪ್ರಸಿದ್ಧರಾಗಿದ್ದರು. ಆಕಾಶವಾಣಿ ವಿಜಯವಾಡದಲ್ಲಿ Transmission Executive ಕೆಲಸ. ೧೯೬೭ರಲ್ಲಿ ಅಮೆರಿಕಾಗೆ ಪತಿ H.Y. ರಾಜಗೋಪಾಲರ Ph. D.ಗಾಗಿ ಪ್ರಯಾಣ. ಮೂರು ಮಕ್ಕಳು, ಇಬ್ಬರು ಮೊಮ್ಮಕ್ಕಳು. Immaculata University ನಲ್ಲಿ ಮ್ಯೂಸಿಕ್ ಥೆರಪಿಯಲ್ಲಿ ಶಿಕ್ಷಣ. Elwyn, Inc.ನಲ್ಲಿ Recreation Therapist (೧೯ years), University of Pennsylvania South Asia Regional Studies ವಿಭಾಗದಲ್ಲಿ ಕನ್ನಡ, ತೆಲುಗು ಭಾಷಾ ಬೋಧನೆ (೧೫ years); "Kannada Through Music" ಅಂತರ್ಜಾಲ ತಾಣದ ನಿಯೋಜನೆ. ಪ್ರಕಟಿತ ಪುಸ್ತಕ, "ತುಂಟರ ತೇರು". ಅಮೇರಿಕದ ಕನ್ನಡ ಸಾಹಿತ್ಯ ರಂಗದ ಪ್ರಕಟಣೆಗಳಲ್ಲಿ, ಪ್ರಜಾವಾಣಿ ಮತ್ತಿತರ ಪ್ರಮುಖ ಪತ್ರಿಕೆಗಳಲ್ಲಿ ಅನೇಕ ಲೇಖನ,

ಕತೆಗಳು. ಒಂದು ಅನನ್ಯ ಜಾನಪದ ಹಾಡುಗಳ ಧ್ವನಿ ಸುರುಳಿ: "ನಾಡಪದಗಳು." ವಿಶ್ವಕನ್ನಡ ಸಮ್ಮೇಳನಗಳಲ್ಲಿ ಹಾಡುಗಾರಿಕೆ ಮತ್ತು ಪುರಸ್ಕೃತರು (Manchester UK, Boston, Chicago, New Jersey, California, Maryland, Washington DC, Canada). Philadelphia Franklin Instituteನ Fels Planetoriumನಲ್ಲಿ ಕನ್ನಡ ಜಾನಪದ ಗೀತೆಯ ಅಪೂರ್ವ ಕಾರ್ಯಕ್ರಮ.

E-mail: hyrajagopal@gmail.com

* **ವೈಶಾಲಿ ಹೆಗಡೆ**

*[೨೦. ಆಸೆಯೇ ಜೀವಜಲ]*

ಊರು, ಪಿಯುಸಿವರೆಗಿನ ಓದು, ಉತ್ತರ ಕನ್ನಡ ಜಿಲ್ಲೆಯ ಅಂಕೋಲಾ. ಇವರ ಪ್ರಕಟಿತ ಪುಸ್ತಕ 'ಒದ್ದೆಹಿಮ... ಉಪ್ಪುಗಾಳಿ' ಪ್ರಬಂಧ ಸಂಕಲನ. ಹುಬ್ಬಳ್ಳಿಯ ಬಿ.ವಿ.ಬಿ. ಎಂಜಿನಿಯರಿಂಗ್ ಕಾಲೇಜಿನಲ್ಲಿ ಇಲೆಕ್ಟ್ರೋನಿಕ್ಸ್ ಹಾಗೂ ಕಮ್ಯುನಿಕೇಶನ್ ಕ್ಷೇತ್ರದಲ್ಲಿ ಬಿ.ಇ. ಪದವಿ. ಯುನಿವರ್ಸಿಟಿ ಆಫ್ ಮ್ಯಸ್ಸಚುಸೆಟ್ಸ್‌ನಿಂದ ಕಂಪ್ಯೂಟರ್ ಸೈನ್ಸ್‌ನಲ್ಲಿ ಮಾಸ್ಟರ್ಸ್ ಪದವಿ. ಮಾಸ್ಟರ್ಸ್ ಥೀಸಿಸ್ ಪ್ರಬಂಧ ಲೇಖನ IEEE ಕಾನ್ಫರೆನ್ಸಿನಲ್ಲಿ ಮಂಡಿತವಾಗಿದೆ. ಪ್ರಸ್ತುತ ಸಾಫ್ಟ್‌ವೇರ್ ಇಂಜಿನಿಯರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಅಮೆರಿಕೆಯ ಬಾಸ್ಟನ್ ಸಮೀಪದ ವೆಸ್ಟ್‌ಫೋರ್ಡ್‌ನಲ್ಲಿ ವಾಸವಾಗಿದ್ದಾರೆ. ಅಮೆರಿಕೆಯ ಹವ್ಯಾಸಿ ಯಕ್ಷಗಾನ ತಂಡ 'ಯಕ್ಷಲೋಕ'ದ ಪಾತ್ರಧಾರಿಗಳಲ್ಲೊಬ್ಬರು. ಬರವಣಿಗೆಯ ಜೊತೆಯಲ್ಲಿ ಆಗಾಗ ನೃತ್ಯ, ನಾಟಕ, ರಂಗಪ್ರದರ್ಶನಗಳನ್ನು ಸಂಯೋಜಿಸುತ್ತ ಬಂದಿದ್ದಾರೆ. ಬಾಸ್ಟನ್ ಕನ್ನಡ ಕೂಟದಲ್ಲಿ ಮನರಂಜನಾ ಸಮಿತಿಯ ಮುಖ್ಯಸ್ಥರಾಗಿ ಕಾರ್ಯ ನಿರ್ವಹಿಸಿದ್ದಾರೆ. ನಾವಿಕ ಎರಡನೇ ವಿಶ್ವ ಸಮ್ಮೇಳನದ ಸಾಹಿತ್ಯ ಸಮಿತಿಯ ಮುಖ್ಯಸ್ಥರಾಗಿ ನೇಮಕಗೊಂಡಿದ್ದಾರೆ.

email: vaishalimadhu@gmail.com

*

ಅನುಬಂಧ ೨

# ಕನ್ನಡ ಸಾಹಿತ್ಯ ರಂಗದ ಪ್ರಕಟಣೆಗಳು

* **೨೦೧೭: "ಅವರವರ ಭಕುತಿಗೆ"**
  **ಪ್ರಧಾನ ಸಂಪಾದಕಿ: ನಳಿನಿ ಮೈಯ**

ಬದುಕಿನ ಕನ್ನಡಿಯಾದ ಸಾಹಿತ್ಯದಲ್ಲಿ ಭಕ್ತಿ ಒಂದು ಸುಂದರ ಅಭಿವ್ಯಕ್ತಿಯನ್ನು ಪಡೆದಿದೆ. ಪಂಪ, ರನ್ನರ ಕಾಲದಿಂದ ಹಿಡಿದು ಇತ್ತೀಚಿನ ಕವಿಗಳಾದ ಕುವೆಂಪು, ಬೇಂದ್ರೆ, ಪುತಿನ, ಶಿವರುದ್ರಪ್ಪ ಮುಂತಾದವರವರೆಗೂ ಕನ್ನಡ ಸಾಹಿತ್ಯದಲ್ಲಿ ಭಕ್ತಿಯ ಪ್ರವಾಹ ಪ್ರವಹಿಸುತ್ತಿದೆ. ಈ ಪ್ರವಾಹದ ತುಂತುರು ಹನಿಗಳನ್ನು ಹಿಡಿದು ಅದರಲ್ಲಿ ಸೂಸುವ ಕಾಮನಬಿಲ್ಲನ್ನು ಕಂಡು ಆನಂದಿಸುವ ಪ್ರಯತ್ನ ಮಾಡಿದ್ದೇವೆ ನಾವು ಈ ಗ್ರಂಥದಲ್ಲಿ. ಪರಿಶುದ್ಧ ಸಾಹಿತ್ಯದಲ್ಲಿ 'ದೇವರು' ಎಂದರೆ ಎಲ್ಲಕ್ಕೂ ಮೀರಿದ ಉನ್ನತ ಚೈತನ್ಯ. ಜಗತ್ತನ್ನು ಆವರಿಸಿರುವ ಕ್ಷುಲ್ಲಕಗಳನ್ನು ಅಧ್ಯಾತ್ಮದ ಮೂಲಕ ಮೀರಲು, ಏರಲು ಸಾಧ್ಯವಾಗಿಸುವ ಸರ್ವನಿಯಾಮಕ ಚೈತನ್ಯ. ಈ ಪರಿಕಲ್ಪನೆಯ ಗ್ರಹಿಕೆ ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆಯಾಗಿ ಕಂಡರೂ ಮೂಲದಲ್ಲಿ ಜಗತ್ತಿನ ಎಲ್ಲ ಕಾವ್ಯಗಳು ಈ ಒಂದೇ ಭಾವವನ್ನು ಸ್ಫುರಿಸುತ್ತದೆ. ಈ ಜಿಜ್ಞಾಸೆಯನ್ನು ಈ ಪುಸ್ತಕದ ಮೂಲಕ ಮತ್ತೆ ಮುನ್ನೆಲೆಗೆ ತಂದು ಜನಮಾನಸದಲ್ಲಿ ಭಕ್ತಿಯ ಕುರಿತು ಯೋಚನೆಗೆ ಹಚ್ಚುವದೇ ನಮ್ಮ ಉದ್ದೇಶವಾಗಿದೆ.

* **೨೦೧೬: "ರಂಗ ತರಂಗ" ಕನ್ನಡದ ಮುನ್ನಡೆಯ ಮಿಂಚುನೋಟ**
  **ಸಂಪಾದಕರು: ಮೈ.ಶ್ರೀ.ನಟರಾಜ, ನಾಗ ಐತಾಳ ಮತ್ತು ಜ್ಯೋತಿ ಮಹಾದೇವ್**

ಕರ್ನಾಟಕದ ಹೆಮ್ಮೆಯ ಕಬ್ಬನ್ ಉದ್ಯಾನವನದಲ್ಲಿರುವ ರಾಜ್ಯ ಕೇಂದ್ರ ಗ್ರಂಥಾಲಯದ (ದಿವಾನ್ ಬಹದ್ದೂರ್ ಶೇಷಾದ್ರಿ ಅಯ್ಯರ್ ಮೆಮೋರಿಯಲ್ ಬಿಲ್ಡಿಂಗ್) ತನ್ನ ನೂರನೇ ವರ್ಷದ ಹಬ್ಬವನ್ನು ಸಂಭ್ರಮದಿಂದ ಆಚರಿಸಿದ ಸುಸಂದರ್ಭದಲ್ಲಿ ಅಮೆರಿಕದ ಕನ್ನಡಿಗರ ಪರವಾಗಿ ಕನ್ನಡ ಸಾಹಿತ್ಯ ರಂಗ ಅರ್ಪಿಸಿದ ಗೌರವದ

ನುಡಿಕಾಣಿಕೆಯೇ ಈ ಗ್ರಂಥ ಕುಸುಮ. ಕಳೆದ ಏಳು ವಸಂತ ಸಾಹಿತ್ಯೋತ್ಸವದ ಸಂದರ್ಭದಲ್ಲಿ ಮುಖ್ಯ ಅತಿಥಿಗಳು ಮಾಡಿದ ಭಾಷಣಗಳ ಮಾಲಿಕೆಯೇ ಈ ಗ್ರಂಥದ ವಸ್ತು. ಈ ಗ್ರಂಥದ ಬಗ್ಗೆ ಪ್ರಸಿದ್ಧ ಬರಹಗಾರರೂ ವಿಮರ್ಶಕರೂ ಆದ ಎಲ್. ಎಸ್. ಶೇಷಗಿರಿರಾಯರು ಬೆನ್ನುಡಿಯಲ್ಲಿ ಹೀಗೆ ಬರೆಯುತ್ತಾರೆ: "ವಿವಿಧ ವಿಷಯಗಳ ಮೇಲೆ ಅಧಿಕಾರದಿಂದ ಮಾತಾಡಬಲ್ಲ ವಿದ್ವಾಂಸರ ಸಮೀಕ್ಷೆಗಳು ಕನ್ನಡ ನಾಡಿನಲ್ಲಿರುವ ಕನ್ನಡಿಗರಿಗೆ ಮತ್ತು ವಿದ್ಯಾರ್ಥಿಗಳಿಗೆ ಅಮೂಲ್ಯವಾಗಿವೆ. ಇವು ಕನ್ನಡ ಸಾಹಿತ್ಯದ ಸಾಧನೆಯನ್ನು ಚಿತ್ರಿಸುವುದಲ್ಲದೇ ನಾಡಿನ ಮುಂದಿರುವ ಸವಾಲುಗಳನ್ನು ಗಮನಿಸಿ ಕನ್ನಡದ ಮುನ್ನಡೆಗೆ ದಾರಿಯನ್ನು ಸಿದ್ಧಗೊಳಿಸುವ ಪ್ರಕಟಣೆಗಳು." ತಮ್ಮ ವಿದ್ವತ್ಪೂರ್ಣವಾದ ಮುನ್ನುಡಿಯನ್ನು ಮುಗಿಸುತ್ತಾ, ನರಹಳ್ಳಿ ಬಾಲಸುಬ್ರಹ್ಮಣ್ಯ ಅವರು ಹೀಗೆ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ: "ಈ ಸಂಕಲನ ನಿಸ್ಸಂದೇಹವಾಗಿ ಒಂದು ಪರಾಮರ್ಶನ ಗ್ರಂಥ. ಕನ್ನಡ ಭಾಷೆ, ಸಾಹಿತ್ಯವನ್ನು ಒಟ್ಟಂದದಲ್ಲಿ ಹಿಡಿಯುವ ಪ್ರಯತ್ನ ಇಲ್ಲಿದೆ. ಚರಿತ್ರೆಯನ್ನು ಹೀಗೂ ರೂಪಿಸಬಹುದು ಎಂಬ ಸಾಧ್ಯತೆಯನ್ನು ಈ ಸಂಕಲನ ತೋರಿಸಿಕೊಡುತ್ತದೆ. ಕನ್ನಡ ಸಾಹಿತ್ಯರಂಗಕ್ಕೆ ಅಭಿನಂದನೆಗಳು."

* **೨೦೧೫: "ಅನುವಾದ ಸಂವಾದ" ಮತ್ತು "A Little of taste of Kannada in English"**
  **ಪ್ರಧಾನ ಸಂಪಾದಕ: ಶ್ರೀಕಾಂತ್ ಬಾಬು**

ಕನ್ನಡ ಸಾಹಿತ್ಯ ರಂಗದ ಏಳನೆಯ ಸಮ್ಮೇಳನದ ಮುಖ್ಯ ವಸ್ತು "ಅನುವಾದ". ಈ ಸಮ್ಮೇಳನದಲ್ಲಿ ಎರಡು ಪುಸ್ತಕಗಳನ್ನು ಪ್ರಕಟಿಸಲಾಯಿತು. ಮೊದಲನೆಯದು 'ಅನುವಾದ ಸಂವಾದ'– ಬೇರೆ ಭಾಷೆಗಳಿಂದ ಕನ್ನಡಕ್ಕೆ ಅನುವಾದಿತ ಕೃತಿಗಳು. ಎರಡನೆಯದು 'A Little Taste of Kannada in English' ಕನ್ನಡದಿಂದ ಇಂಗ್ಲಿಷ್‌ಗೆ ಅನುವಾದಿತ ಕೃತಿಗಳು. ಅಮೆರಿಕಾದ ಕನ್ನಡಿಗರಿಗೆ ಇತರ ಸಂಸ್ಕೃತಿಗಳನ್ನು ಹತ್ತಿರದಿಂದ ನೋಡುವ ಅವಕಾಶವಿದೆ. ಈ ಸಂಸ್ಕೃತಿಗಳ ಸಂಪರ್ಕ ಮತ್ತು ಅವುಗಳ ಸಾಹಿತ್ಯವನ್ನು ಅಭ್ಯಾಸ ಮಾಡುವ ವಿಶೇಷ ಅವಕಾಶವನ್ನು ಉಪಯೋಗಿಸಿಕೊಂಡು ಇತರ ಭಾಷೆಗಳ ಉತ್ತಮ ಕೃತಿಗಳನ್ನು ಕನ್ನಡಕ್ಕೂ ಮತ್ತು ಕನ್ನಡದ ಆಯ್ದ ಕೃತಿಗಳನ್ನು ಇಂಗ್ಲೀಷಿಗೂ ಅನುವಾದಿಸಲು ವಿಪುಲವಾದ ಸೌಲಭ್ಯಗಳಿವೆ. 'ಮಾತೃಭಾಷೆಗೆ ಮತ್ತು ಕನ್ನಡಿಗರಿಗೆ ನಿರಾಯಾಸವಾಗಿ ಕೊಡಬಹುದಾದ ಒಳ್ಳೆಯ ಕೊಡುಗೆ' ಇದು ಎಂದು ನಂಬಿ ಸಾಹಿತ್ಯ ರಂಗದ ಬರಹಗಾರರು ಪ್ರಕಟಿಸಿದ ಗ್ರಂಥಗಳಿವು. ಮೊದಲ ಪುಸ್ತಕದಲ್ಲಿ ಒಟ್ಟು ೩೦ ಅನುವಾದಿತ ಲೇಖನಗಳನ್ನು ಕಥೆ, ಕಾವ್ಯ, ಪ್ರಬಂಧ ಮತ್ತು ನಾಟಕದ ವಿಭಾಗಗಳಲ್ಲಿ ಜೋಡಿಸಲಾಗಿದೆ. ಈ ಪ್ರಯೋಗದಲ್ಲಿ ವಿಶ್ವದ ಅನೇಕ ಶ್ರೇಷ್ಠ ಕೃತಿಗಳ ಅನುವಾದಗಳು ವಿವಿಧ ಭಾಷೆಗಳ ಮೂಲದಿಂದ ಹರಿದು ಬಂದಿವೆ. ವೈವಿಧ್ಯಮಯವಾದ ಚಿಂತನೆಗಳು, ವಿಚಾರಗಳು ಅನುವಾದದ ಮೂಲಕ ಕನ್ನಡಿಗರಿಗೆ ಲಭ್ಯವಾಗಿವೆ. ಸಮ್ಮೇಳನದ ಮುಖ್ಯ

ಅತಿಥಿಗಳಾಗಿದ್ದ ಪ್ರಧಾನ್ ಗುರುದತ್ತ ಅವರ ಅನುವಾದ ಸಾಹಿತ್ಯವನ್ನು ಕುರಿತಾದ ವಿದ್ವತ್ಪೂರ್ಣ ಭಾಷಣವೂ ಈ ಪುಸ್ತಕದಲ್ಲಿದೆ. ಎರಡನೆಯ ಪುಸ್ತಕ ಕನ್ನಡದ ಕತೆ, ಕವಿತೆ, ಪ್ರಬಂಧ ಮುಂತಾದುವನ್ನು ಕನ್ನಡೇತರರಿಗೆ ಆಂಗ್ಲಭಾಷೆಯ ಮೂಲಕ ತಲುಪಿಸುವ ಒಂದು ಅಪೂರ್ವ ಯತ್ನ. ಒಟ್ಟಿನಲ್ಲಿ ಈ ಎರಡು ಹೊತ್ತಗೆಗಳು ಕನ್ನಡ ಸಾಹಿತ್ಯ ರಂಗ ಕನ್ನಡಾಂಬೆಗೆ ಅರ್ಪಿಸಿದ ಎರಡು ಉತ್ತಮ ಪ್ರಯೋಗಗಳು.

* **೨೦೧೩: "ಬೇರು ಸೂರು"**

**ಪ್ರಧಾನ ಸಂಪಾದಕ: ಗುರುಪ್ರಸಾದ್ ಕಾಗಿನೆಲೆ**

ವಲಸಿಗರಾಗಿ ಅಥವಾ ವಿದ್ಯಾರ್ಥಿಗಳಾಗಿ ಬಂದು ಅಮೆರಿಕವನ್ನು ತಮ್ಮ ದೇಶವನ್ನಾಗಿಸಿಕೊಂಡು ಅಮೆರಿಕದ ಬದುಕಿನ ಪಾಲಾಗುತ್ತಾ ಗಳಿಸಿದ ಅನುಭವಗಳು. ಪಟ್ಟ ಸುಖಗಳು, ನೊಂದ ನೋವುಗಳು ಇವೆಲ್ಲವನ್ನೂ ಒಳಗೊಂಡ ವೈವಿಧ್ಯಮಯ ಬರಹಗಳ ಸಂಕಲನವೇ 'ಬೇರು ಸೂರು'. ಹಿರಿಯರು, ಕಿರಿಯರು, ಉದ್ಯೋಗಪತಿಗಳು, ವೈದ್ಯರು, ಇಂಜಿನಿಯರುಗಳು, ಗೃಹಿಣಿಯರು, ಶಿಕ್ಷಣತಜ್ಞರು–ಅಮೆರಿಕಾವನ್ನೇ ಕರ್ಮಭೂಮಿ ಮಾಡಿಕೊಂಡ ಅನೇಕರು ಅಮೆರಿಕಾ ಅವರಿಗೆ ಹೇಗೆ ಕಾಣಿಸಿದೆ ಎಂದು ಬರೆದಿದ್ದಾರೆ. ವಲಸೆ ಮೂಡಿಸುವ ಬೆರಗು ದೈನಿಕವಾಗುವ ರೂಪಾಂತರ ಕ್ರಿಯೆ ಇಲ್ಲಿನ ಪ್ರತಿ ಲೇಖನಗಳಲ್ಲಿಯೂ ಪಕ್ಕಾಗಿ ಹಾಸುಹೊಕ್ಕಿದೆ. ಆತ್ಮಚರಿತ್ರಕ ಕಥಾನಕಗಳಿಂದ ಹಿಡಿದು ಪ್ರತಿ ವಲಸಿಗನ ಅಸ್ಮಿತೆಯನ್ನು ಪ್ರಶ್ನಿಸುವ ಹಾಗೆಯೇ ಈ ವಲಸೆ ಎಂಬ ಪ್ರಕ್ರಿಯೆಯನ್ನೇ ವಿಶ್ಲೇಷಿಸುವ ಅನೇಕ ಅಧ್ಯಯನಯುಕ್ತ ಮೌಲಿಕ ಲೇಖನಗಳಿವೆ. ಈ ಪುಸ್ತಕದ ವೈಶಿಷ್ಟ್ಯವೆಂದರೆ ಬಹಳಷ್ಟು ಲೇಖನಗಳು ವಲಸೆಗಾರರ ಹಳವಂಡ, ನಾಸ್ಟಾಲ್ಜಿಯಾವನ್ನು ಮೀರಿ ವಲಸೆಕ್ರಿಯೆಯ ಮೂಲವನ್ನು ಹುಡುಕುತ್ತಾ ಹೋಗುತ್ತವೆ. ವಲಸೆಯ ಸಾಂಸ್ಕೃತಿಕ ಹಾಗೂ ರಾಜಕೀಯ ಆಯಾಮಗಳನ್ನು ಈ ಪುಸ್ತಕ ಚರ್ಚಿಸುತ್ತದೆ.

* **೨೦೧೧: "ಮಥಿಸಿದಷ್ಟೂ ಮಾತು"**

**ಸಂಪಾದಕರು : ತ್ರಿವೇಣಿ ಶ್ರೀನಿವಾಸರಾವ್ ಮತ್ತು ಎಂ. ಆರ್. ದತ್ತಾತ್ರಿ**

ಹಲವಾರು ಉತ್ತಮ ಲಲಿತ ಪ್ರಬಂಧಗಳ ಸಂಪುಟ ಈ "ಮಥಿಸಿದಷ್ಟೂ ಮಾತು" ಸಂಕಲನ. ಈ ಸಂಪುಟದ ಬಗ್ಗೆ ಪ್ರಸಿದ್ಧ ಬರಹಗಾರರಾದ ರಹಮತ್ ತರೀಕೆರೆ ಅವರು ಹೀಗೆ ಬರೆಯುತ್ತಾರೆ: "ಅಮೆರಿಕದ ಬಗ್ಗೆ ಅದರ ಹೊರಗಿರುವ ನಮ್ಮಂತಹವರಿಗೆ ಎರಡು ಅತಿರೇಕದ ಗ್ರಹಿಕೆಗಳಿದ್ದಂತಿವೆ. ಒಂದು ರೆಡ್ ಇಂಡಿಯನ್ನರನ್ನು ಕೊಂದು ದೇಶವನ್ನು ಆಕ್ರಮಿಸಿಕೊಂಡು, ಗುಲಾಮಗಿರಿಯನ್ನು ಎಗ್ಗಿಲ್ಲದೆ ಮಾಡುತ್ತ, ತಮ್ಮ ಹಿತಾಸಕ್ತಿಗಳಿಗೆ ಯುದ್ಧಖೋರ ನೀತಿಯನ್ನು ಮಾಡುತ್ತಿರುವ ದೊಡ್ಡಣ್ಣ ಎಂಬುದು; ಇನ್ನೊಂದು ಅಮೆರಿಕವು ತಂತ್ರಜ್ಞಾನ ವಿಜ್ಞಾನದಲ್ಲಿ ಶಿಕ್ಷಣವುಳ್ಳ ಮಂದಿಗೆ ತೆರೆದಿರುವ ಬುವಿಯ ಮೇಲಣ ಸ್ವರ್ಗ

ಎಂಬುದು. ಈ ಎರಡನೆಯ ಚಿತ್ರಕ್ಕೆ ಕಾರಣ, ಪ್ರವಾಸಿಗರಾಗಿ ಅಮೆರಿಕಕ್ಕೆ ಹೋಗಿಬಂದವರ ಪ್ರವಾಸ ಕಥನಗಳೂ ಇರಬೇಕು. ಆದರೆ ಈ ಎರಡಕ್ಕೂ ಹೊರತಾಗಿ, ಅಲ್ಲಿಯೇ ಬದುಕುತ್ತಿರುವ ಜನರ ಗ್ರಹಿಕೆಗಳು ಬೇರೆ ಬೇರೆ ತರಹ ಇವೆ ಎಂಬುದನ್ನು ಈ ಕೃತಿ ಸಾದರಪಡಿಸುತ್ತದೆ." "ಅಮೆರಿಕೆಯಲ್ಲಿ ಬಿಡಾರ ಹೂಡಿರುವ ಕನ್ನಡ ಪರಿಸರದ ಸ್ಥಾಯೀ ಮತ್ತು ಸಂಚಾರೀ ಭಾವಗಳ, ವೈವಿಧ್ಯಪೂರ್ಣ ಆಧುನಿಕ ಅಭಿವ್ಯಕ್ತಿಯ ವಿಶಿಷ್ಟ ಸಂಕಲನ ಇದು. ಕಾವ್ಯದ ಧ್ವನಿಶಕ್ತಿಯ ಜೊತೆಗೆ ಕಥನದ ಕುತೂಹಲವನ್ನೂ ಹೊಂದಿರುವ ಈ ಲಲಿತ ನಿಬಂಧಗಳು, ತಮ್ಮ ಅನುಭವಜನ್ಯ ವಿವರಗಳಲ್ಲಿ ಮೈದಾಳುತ್ತಲೇ, ಅದರಾಚೆಗೂ ಚಿಂತನಶೀಲವಾಗಿ ರೆಕ್ಕೆ ಬಿಚ್ಚುವ ರೀತಿ ಭಾವೋದ್ದೀಪಕವಾಗಿದೆ. ಹೊಸ ಆವರಣ, ಜೀವನ ಶೈಲಿಯ ವಿವರ, ಮಾಹಿತಿಗಳಷ್ಟೆ ಪ್ರಬಂಧವಾಗಲಾರವು. ವಿವರಗಳು ಅರಿವಿನೆಡೆಯ ಕಿಟಕಿಗಳೂ, ಕಾಲ್ದಾರಿಗಳೂ ಆದಾಗ ಮಾತ್ರ ಅದು ಸಾರ್ಥಕ ಸಲ್ಲಾಪ" ಎಂಬುದಾಗಿ ಪ್ರಸಿದ್ಧ ಸಾಹಿತಿ ಜಯಂತ ಕಾಯ್ಕಿಣಿ ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ.

* **೨೦೦೯: "ಕನ್ನಡ ಕಾದಂಬರಿ ಲೋಕದಲ್ಲಿ.....ಹೀಗೆ ಹಲವು..."**
**ಸಂಪಾದಕರು: ಮೈ. ಶ್ರೀ. ನಟರಾಜ**

ಇದು ಕನ್ನಡ ಸಾಹಿತ್ಯ ರಂಗದ ಪುಸ್ತಕ ಮಾಲೆಯ ನಾಲ್ಕನೆಯ ಹೂವು. ೨೦೦೯ರಲ್ಲಿ ಅಮೆರಿಕದ ರಾಜಧಾನಿ ಪ್ರದೇಶದ ಕಾವೇರಿ ಕನ್ನಡ ಸಂಘದ ಆಶ್ರಯದಲ್ಲಿ ನಡೆದ ನಾಲ್ಕನೆಯ ಅಧಿವೇಶನದ ಸಂದರ್ಭದಲ್ಲಿ ಪ್ರಕಟವಾದ ಪುಸ್ತಕ ಇದು. "ಇಪ್ಪತ್ತಕ್ಕೂ ಮಿಕ್ಕಿದ ಹಿರಿಕಿರಿಯ, ಪಳಗಿದ ಹಾಗೂ ಉದಯೋನ್ಮುಖ ಬರಹಗಾರರು, ಹವ್ಯಾಸಿಗರು ಹಾಗೂ ಹರಿತ ಓದುಗರ ಮೂಲಕ ಕನ್ನಡದ ಕೆಲ ಮುಖ್ಯ ಕಾದಂಬರಿಗಳ ಕುರಿತು ಇಲ್ಲಿ ಅವಲೋಕನವಿದೆ. ಒಮ್ಮೆಗೆ ಒಟ್ಟಿಗೆ ತೆರೆದುಕೊಂಡ ಈ ರೀತಿಯ ಕಾದಂಬರಿಯ ಅವಲೋಕನವೂ, ಚರ್ಚೆಯೂ ಕನ್ನಡ ಸಾಹಿತ್ಯದ ಮಟ್ಟಿಗೆ ಪ್ರಾಯಶಃ ಪ್ರಪ್ರಥಮ ಎನ್ನಿಸುತ್ತಿದೆ." ಈ ರೀತಿ ಅಭಿಪ್ರಾಯ ವ್ಯಕ್ತಪಡಿಸಿದ ಕನ್ನಡದ ಖ್ಯಾತ ಕತೆಗಾರ್ತಿ ವೈದೇಹಿ ಅವರು ಈ ಸ್ತುತ್ಯ ಪ್ರಯತ್ನವನ್ನು ಕುರಿತು "ಒಂದು ರೀತಿಯಲ್ಲಿ ಇದು ಗೋಳದ ಇನ್ನೊಂದು ಬದಿಯಲ್ಲಿ ನಡೆಯುತ್ತಿರುವ ಕನ್ನಡದ ಉಸಿರಾಟ, ಅಥವಾ ಪ್ರಾಣಾಯಾಮವೆಂದರೂ ಸರಿಯೆ" ಎಂದು ಉದ್ಗಾರ ತೆಗೆದಿದ್ದಾರೆ. ಅಮೆರಿಕದಲ್ಲಿ ನೆಲೆಸಿರುವ ಬರಹಗಾರರು ಅಭಿವ್ಯಕ್ತಿಗೊಳಿಸಿದ ಕನ್ನಡದ ಇಪ್ಪತ್ನಾಲ್ಕು ಕಾದಂಬರಿಗಳ ಅವಲೋಕನವನ್ನು 'ಸಹೃದಯ ವಿಮರ್ಶೆ' ಎಂಬುದಕ್ಕೆ ಒಂದು ಉತ್ತಮ ಮಾದರಿ ಎಂದಿದ್ದಾರೆ ವೈದೇಹಿ ಅವರು. ಕನ್ನಡದ ಉದ್ದಾಮ ಪಂಡಿತರಾದ ಜಿ. ಎಸ್. ಆಮೂರರ ವಿದ್ವತ್ಪೂರ್ಣ ಮುನ್ನುಡಿಯನ್ನೊಳಗೊಂಡ ಸುಮಾರು ನಾನೂರು ಪುಟಗಳ ಈ ಗ್ರಂಥಕ್ಕೆ ಕನ್ನಡದ ಹಲವಾರು ವಿದ್ವಾಂಸರ ಮೆಚ್ಚುಗೆ ದೊರೆತಿರುವುದು ಅಚ್ಚರಿಯ ಮಾತಲ್ಲ. "ತಮಗೆ ಕನ್ನಡದ ಮೂಲಕ ಒಡಲು ಸೇರಿದ ಸಾಹಿತ್ಯಾನುಭವವನ್ನು ತಮಗೂ ಇತರರಿಗೂ

ಅನುಭವಿಸುವಂತೆ ಮಾಡುವ ಸ್ತುತ್ಯ ಯತ್ನವಿದು" ಎಂಬ ವೈದೇಹಿಯವರ ಮಾತುಗಳು ಕನ್ನಡ ಸಾಹಿತ್ಯ ರಂಗದ ಕಿರೀಟದ ಮಣಿಗಳಂತಿವೆ.

* **೨೦೦೭: "ನಗೆಗನ್ನಡಂ ಗೆಲ್ಗೆ!"**
**ಸಂಪಾದಕರು: ಎಚ್. ಕೆ. ನಂಜುಂಡಸ್ವಾಮಿ ಮತ್ತು ಎಚ್. ವೈ. ರಾಜಗೋಪಾಲ್**

ಶತಾಯುಷಿ ಜಿ. ವೆಂಕಟಸುಬ್ಬಯ್ಯ ಅವರ ಅಭಿಪ್ರಾಯದಲ್ಲಿ– 'ಈ ಗ್ರಂಥ ಒಂದು ಸಾಹಿತ್ಯಕ ಚರಿತ್ರೆ ಮತ್ತು ಸಾಹಿತ್ಯದ ಹಾಸ್ಯ ಸಂಕಲನ ಎರಡೂ ಒಂದೆಡೆ ಸೇರಿ ರಚಿಸುವ ಒಂದು ರಮ್ಯ ಲೋಕ! ಇದರಲ್ಲಿ ಲೇಖಕರ ಸಾಹಿತ್ಯದ ರಸಪ್ರಜ್ಞೆ ನಿರಂತರವಾಗಿ ಪ್ರಕಟಗೊಂಡಿದೆ....ಈ ಬೃಹತ್ ಸಂಕಲನ ಕನ್ನಡ ಸಾಹಿತ್ಯದಲ್ಲಿ ಒಂದು ಪ್ರಮುಖ ರೆಕಾರ್ಡ್ ಆಗಿರುತ್ತದೆ ಸದಾಕಾಲ.' ಸಾಹಿತಿ ಮತ್ತು ಪ್ರಸಿದ್ಧ ವಿಮರ್ಶಕ ಪ್ರೊ. ಎಚ್. ಎಸ್. ರಾಘವೇಂದ್ರರಾವ್ ಅವರು ಈ ಗ್ರಂಥದ ಬಗ್ಗೆ ನುಡಿಯುತ್ತಾ, "ಕತೆ, ಕವಿತೆ ಮತ್ತು ಕಾದಂಬರಿಗಳಿಗೆ ಅತಿಯಾದ ಮಹತ್ವಕೊಟ್ಟು, ಉಳಿದ ಪ್ರಕಾರಗಳನ್ನು ನಿರ್ಲಕ್ಷಿಸಿರುವ ಕರ್ನಾಟಕದ ನಮಗೆ ಬುದ್ಧಿ ಕಲಿಸುವಂತೆ, ಈ ಕೃತಿಯು ಪ್ರಕಟವಾಗಿದೆ....ಕನ್ನಡದ ಹಾಸ್ಯ ಸಾಹಿತ್ಯವನ್ನು ಬೆಳೆಸಿದ ಮಹನೀಯರ ಸಾಧನೆಗಳನ್ನು ಬಹುಮಟ್ಟಿಗೆ ಮೆಚ್ಚಿಗೆಯಿಂದ ಅಪರೂಪಕ್ಕೆ ವಿಮರ್ಶಾತ್ಮಕವಾಗಿ ನೋಡಿರುವ ಲೇಖನಗಳು ಈ ಪುಸ್ತಕದ ಮಹತ್ವವನ್ನು ಹೆಚ್ಚಿಸಿವೆ. ಕೈಲಾಸಂ, ರಾಜರತ್ನಂ, ರಾಶಿ, ಬಿ. ಜಿ. ಎಲ್. ಸ್ವಾಮಿ, ಅ.ರಾ.ಸೇ. ಅವರಂತಹ ಹಿರಿಯರಿಂದ ಮೊದಲಾಗಿ ದುಂಡಿರಾಜ್ ಅವರವರೆಗೆ ಈ ಲೇಖನಗಳ ಹರಹಿದೆ. ಕರಾವಳಿ, ಉತ್ತರ ಕರ್ನಾಟಕ, ಜಾನಪದ ಮುಂತಾದವಕ್ಕೆ ವಿಶಿಷ್ಟವಾದ ಹಾಸ್ಯ–ವಿನೋದಗಳ ಸಮೀಕ್ಷೆಯೂ ಇಲ್ಲಿ ನಡೆದಿದೆ. ಇದು ಉಪಯುಕ್ತವಾದ, ಸಂತೋಷಕೊಡುವ ಸಂಪುಟ. ನಗೆಗನ್ನಡವು ಇಲ್ಲಿ ಗೆದ್ದಿದೆ" ಎಂದು ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ. "ಈ ಕೃತಿಯಲ್ಲಿ ನಗೆಗನ್ನಡ ನಲಿದಿದೆ, ವಿಜೃಂಭಿಸಿದೆ. ಕನ್ನಡದ ಹಾಸ್ಯಾಸಕ್ತರೆಲ್ಲರೂ ಅಭಿಮಾನದಿಂದ ತಮ್ಮ ಮೆಚ್ಚಿನ ಹಿರಿ ಕಿರಿಯ ಹಾಸ್ಯಸಾಹಿತಿಗಳನ್ನು ಓದಿ ಅವರ ಕುರಿತು ಪ್ರಬುದ್ಧ ಪರಿಚಯವನ್ನು ಮಾಡಿಕೊಂಡು ಕೃತಾರ್ಥ ಭಾವ ತಾಳುವಂತೆ ಪುಸ್ತಕ ಹೊರಬಂದಿದೆ... ಹೊರನಾಡ ಬಂಧುಗಳ ಕನ್ನಡ ಪ್ರೇಮ ಅನುಕರಣೀಯವಾದುದು" ಎಂದು ಹೆಸರಾಂತ ಹಾಸ್ಯ ಲೇಖಕಿ ಭುವನೇಶ್ವರಿ ಹೆಗಡೆ ಅಭಿಪ್ರಾಯಪಟ್ಟಿದ್ದಾರೆ. 'ಅಪರಂಜಿ'ಯ ಸಂಪಾದಕರಾದ ಶಿವು, ನಿವೃತ್ತ ಇಂಗ್ಲಿಷ್ ಅಧ್ಯಾಪಕರಾದ ಶ್ರೀನಿವಾಸ ಉಡುಪ, ಲೇಖಕಿಯರಾದ ನೀಳಾದೇವಿ, ಎಚ್. ಎಸ್. ಪಾರ್ವತಿ ಮುಂತಾದವರೂ 'ನಗೆಗನ್ನಡಂ ಗೆಲ್ಗೆ!'ಯನ್ನು ಮನಸಾರೆ ಹಾಡಿ ಹೊಗಳಿದ್ದಾರೆ.

*  **೨೦೦೫: "ಆಚೀಚೆಯ ಕಥೆಗಳು"**
**ಸಂಪಾದಕರು: ಗುರುಪ್ರಸಾದ್ ಕಾಗಿನೆಲೆ**

ಕನ್ನಡದ ಪ್ರಸಿದ್ಧ ಕಥೆಗಾರ ದಿವಂಗತ –ಯಶವಂತ ಚಿತ್ತಾಲರು 'ಆಚೀಚೆಯ ಕಥೆಗಳು' ಬಗ್ಗೆ ಬರೆಯುತ್ತಾ, ಇದನ್ನು "ಕನ್ನಡದಲ್ಲಿ ನಡೆದ ಇತ್ತೀಚಿನ ಆಕರ್ಷಕ ಪ್ರಯೋಗ" ಎಂದಿದ್ದಾರೆ. "ತಾಯಿ ನೆಲದಿಂದ ದೂರವಾದ, ಕನ್ನಡದ ಜೀವಂತ ಸಂಪರ್ಕ ಅಸಾಧ್ಯವಾದ ಜಾಗದಲ್ಲಿ ಕುಳಿತು ಕೇವಲ ಮಾತೃಭಾಷೆಯ ಪ್ರೀತಿಗಾಗಿ 'ಎಂದೆಂದಿಗೂ ಕನ್ನಡವಾಗಿ'ರುವ ಹಟದಲ್ಲಿ ರಚಿಸಿದ ಈ ಕತೆಗಳು ಕನ್ನಡ ಕಥಾ ಸಾಹಿತ್ಯಕ್ಕೆ ಕಡಲಾಚೆಯ ಕನ್ನಡಿಗರಿತ್ತ ಅಪೂರ್ವ ಕೊಡುಗೆಯಾಗಿದೆ" ಎಂದೂ ಉದ್ಗಾರವೆತ್ತಿದ್ದಾರೆ. ಕನ್ನಡದ ಬರಹಗಾರ್ತಿ ಸುನಂದಾ ಪ್ರಕಾಶ ಕಡಮೆಯವರ ಮಾತುಗಳು ಈ ಸಂಪುಟವನ್ನು ಚೆನ್ನಾಗಿ ವಿವರಿಸುತ್ತದೆ. "ಈ ಕೃತಿಯ ಮಾಲೆಯಲ್ಲಿ ಸೇರಿರುವ ಇಪ್ಪತ್ತೆರಡು ಹೊಚ್ಚಹೊಸ ಕತೆಗಳಲ್ಲಿ ಪ್ರತಿಯೊಂದು ಹೂವೂ ಬೇರೆ ಬೇರೆ ರೀತಿಯ ಬರವಣಿಗೆಯನ್ನು ಹೊಂದಿದೆ. ಓದಿ ಮುಗಿಸಿದ ಮೇಲೆ ಇಪ್ಪತ್ತೆರಡು ವಿವಿಧ ಮನಸ್ಸಿನೊಂದಿಗೆ ಒಡನಾಡಿದ, ಅಲ್ಲಿಯ ಪಾತ್ರಗಳೊಂದಿಗೆ ಮೌನ ಸಂವಾದ ನಡೆಸಿದ ಅನುಭವವಾಗುತ್ತದೆ."

*  **೨೦೦೩: ಕುವೆಂಪು ಸಾಹಿತ್ಯ ಸಮೀಕ್ಷೆ**
**ಸಂಪಾದಕರು: ಆಹಿತಾನಲ (ನಾಗ ಐತಾಳ)**

ಕುವೆಂಪು ಸಾಹಿತ್ಯದ ಹಲವು ಮುಖಗಳನ್ನು ಕುರಿತು ಕಡಲಾಚೆಯ ಕನ್ನಡಿಗರು ಬರೆದ ಲೇಖನಗಳ ಸಂಪುಟ. "ಅಮೆರಿಕದಲ್ಲಿದ್ದೂ ತಮ್ಮ ಕನ್ನಡ ವ್ಯಕ್ತಿತ್ವವನ್ನು ಉಳಿಸಿಕೊಳ್ಳುವ ಸಂರಕ್ಷಕ ಕವಚಗಳನ್ನು ಕಂಡುಕೊಳ್ಳುವುದು ಅವರಿಗೆ ಅಗತ್ಯವಾಗಿದೆ. ತಮ್ಮೊಳಗಿನ ಕನ್ನಡತನವನ್ನು ತುಕ್ಕು ಹಿಡಿಯದಂತೆ ಕಾಪಾಡಿಕೊಂಡಿದ್ದಾರೆ. ಹೀಗೆ ತಮ್ಮ ಕನ್ನಡತನವನ್ನು ಉಳಿಸಿಕೊಂಡಿದ್ದರ ಸಂಕೇತವೇ ಈ 'ಕುವೆಂಪು ಸಾಹಿತ್ಯ ಸಮೀಕ್ಷೆ.' ಕುವೆಂಪು ಸಾಹಿತ್ಯ ನಿರ್ಮಿತಿಯನ್ನು ಕುರಿತು ಒಂದು ಒಳ್ಳೆಯ ಸಮೀಕ್ಷೆ ಇದು" ಎಂದು ರಾಷ್ಟ್ರಕವಿ, ದಿವಂಗತ ಜಿ. ಎಸ್. ಶಿವರುದ್ರಪ್ಪನವರು ಅಭಿಪ್ರಾಯಪಟ್ಟಿದ್ದಾರೆ. ಅದೇ ರೀತಿ, ಕನ್ನಡದ ಖ್ಯಾತ ಲೇಖಕ ಪ್ರಭುಶಂಕರರು "ಅನಿವಾಸಿ ಕನ್ನಡಿಗರ ಈ ಕೊಡುಗೆ ಕುವೆಂಪು ಅವರಿಗೆ ಅರ್ಪಿಸುವ ಒಂದು ದೊಡ್ಡ ನಮನ. ಕರ್ನಾಟಕದ ಸಮಕಾಲೀನ ಲೇಖಕರ ಮಟ್ಟಕ್ಕೇನೂ ಕಡಿಮೆ ಇಲ್ಲದ ಲೇಖನಗಳು ಇಲ್ಲಿ ಹೊರಬಂದಿವೆ ಎನ್ನಲು ಹೆಮ್ಮೆಯಾಗುತ್ತದೆ" ಎಂದು ಅಭಿಪ್ರಾಯಪಟ್ಟಿದ್ದಾರೆ. "ಕುವೆಂಪು ಸಾಹಿತ್ಯ ಸಮೀಕ್ಷೆಯಲ್ಲಿ ಅಧ್ಯಯನಪೂರ್ಣ ಲೇಖನಗಳನ್ನು ಬರೆದಿರುವ ಅಮೆರಿಕದ ಲೇಖಕರ ಬಗ್ಗೆ ಕರ್ನಾಟಕದ ಕನ್ನಡಿಗರೂ ಹೆಮ್ಮೆಪಡಬೇಕು. ಕುವೆಂಪು ಸಾಹಿತ್ಯದ ವಿವಿಧ ಮುಖಗಳನ್ನು ಆಸಕ್ತಿಯಿಂದ ಚರ್ಚಿಸಿದ ಎಲ್ಲ ಲೇಖಕ ಲೇಖಕಿಯರೂ ತಾವು ಆರಿಸಿಕೊಂಡ ವಸ್ತುವಿನ ಬಗ್ಗೆ ಸಮರ್ಥವೆನಿಸುವ ಗ್ರಹಿಕೆಯನ್ನು ವ್ಯಕ್ತಪಡಿಸಿದ್ದಾರೆ ಎಂದು ಮತ್ತೊಬ್ಬ ವಿದ್ವಾಂಸರಾದ ವ್ಯಾಸರಾಯ ಬಲ್ಲಾಳರ ಅನಿಸಿಕೆ.

ಅನುಬಂಧ ೩

# ನಮ್ಮ ಪ್ರಕಟಣೆಗಳ ಬಗೆಗೆ ಕೆಲವು ಅಭಿಪ್ರಾಯಗಳು

**೧. ಅವರವರ ಭಕುತಿಗೆ (೨೦೧೭) ಪ್ರಕಾಶನ: ಕನ್ನಡ ಸಾಹಿತ್ಯ ರಂಗ, ಯು.ಎಸ್.ಎ. (ವಿತರಣೆ ಅಭಿನವ, ಬೆಂಗಳೂರು) ಪ್ರಧಾನ ಸಂಪಾದಕರು: ನಳಿನಿ ಮೈಯ**

* 'ಅವರವರ ಭಕುತಿಗೆ' ಪುಸ್ತಕ ಭಕ್ತಿಯನ್ನು ಕುರಿತ ಸಣ್ಣ ಮಟ್ಟಿನ ಒಂದು ಆಕರ ಗ್ರಂಥವೆಂದೇ ಹೇಳಬೇಕು. ಸಣ್ಣ ಮಟ್ಟಿನ ಎಂದೆ-ಕಾರಣ ಮಾತನಾಡಿದಷ್ಟೂ ಬೆಳೆಯುವ, ಇನ್ನೂ ಬಾಕಿ ಉಳಿಯುವ ವಿಚಾರ ಭಕ್ತಿ. ಸಾಮಾನ್ಯವಾಗಿ ಭಕ್ತಿಯಂತಹ ವಸ್ತು ವಿಷಯದ ಕುರಿತು ಮಾತಾಡಲು ಹೊರಟಾಗ ತುಸು ತಾಳ ತಪ್ಪಿದರೂ ಬೇಸರ ಬರುವಂಥ ಜಡ ನಿರೂಪಣೆಗೆ ಪಕ್ಕಾಗುವುದೇ ಹೆಚ್ಚು. ಆದರೆ ಇಲ್ಲಿ ಹಾಗಾಗಿಲ್ಲ. ಈ ಕೃತಿಯಲ್ಲಿ ವಿವಿಧ ಕಲಾರಂಗಗಳಲ್ಲಿ ಕಾಣುವ ಭಕ್ತಿಯ ಸುತ್ತಣ ಜಿಜ್ಞಾಸೆ, ವಿವಿಧ ದೃಷ್ಟಿಯ, ವಿವಿಧ ರೂಪದ ಭಕ್ತಿ ಅಭಿವ್ಯಕ್ತಿಗಳ ಸಾಧಾರ ಸಂಗ್ರಹವಿದೆ. ಒಳನೋಟಗಳಿಂದ ಕೂಡಿದ ಘನ-ಗಾಢ ಲೇಖನಗಳಿವೆ. ಒಮ್ಮೆ ಕೈಗೆತ್ತಿಕೊಂಡರೆ ಒಂದು ಲೇಖನವನ್ನು ಓದಿ ಮುಗಿಸದೆ ಏಳಲು ಬಿಡದ ಸ್ವಾರಸ್ಯಕರ ಮತ್ತು ವಿದ್ವತ್ ಪೂರ್ಣ ಚಿಂತನೆಗಳಿವೆ. ಸಂಪಾದಕ ವರ್ಗದ ಪರಿಕಲ್ಪನೆ ನಿಜಕ್ಕೂ ಸಾರ್ಥಕವಾಗಿದೆ. ಇಂಥ ಒಂದು ಸಂಗ್ರಹಯೋಗ್ಯ ಕೃತಿಯನ್ನು ನೀವು ಆ ದೂರದಲ್ಲಿದ್ದೂ ಸಾಧಿಸಲು ಸಾಧ್ಯವಾಗಿದ್ದು ನಿಜಕ್ಕೂ ಸಾಹಸವೇ ಸರಿ.

– **ವೈದೇಹಿ** (ಸಾಹಿತಿ, ಕಥೆಗಾರ್ತಿ)

* ಅಂತರಂಗದ ಪಿಸುನುಡಿಯು ಭಕ್ತಿಯ ರೂಪಕವಾಗಿ ಧ್ಯಾನವನ್ನು ಸಂಚಲನ-ಗೊಳಿಸುತ್ತದೆ. ಈ ನೆಲೆಯಲ್ಲಿ ಸಾವಿರಾರು ಮೈಲಿ ದೂರದಲ್ಲಿದ್ದೂ 'ಅವರವರ ಭಕುತಿಗೆ'ಯಂಥ ಮಹತ್ವಪೂರ್ಣ ಕೃತಿಯನ್ನು ಅಮೆರಿಕಾದ 'ಕನ್ನಡ ಸಾಹಿತ್ಯ ರಂಗ' ಸಂಪಾದಿಸಿ ಪ್ರಕಟಿಸಿರುವುದು ಬಹು ದೊಡ್ಡ ಮೆಚ್ಚಿಗೆಯ ಗುಣವಾಚಕವನ್ನು ಬಯಸುತ್ತದೆ. ದೇವರು, ಧರ್ಮ, ಗುಡಿ ಗೋಪುರಗಳ ಬಗ್ಗೆ ಅತ್ಯಂತ ಕೃತಕವಾಗಿ ನೋಡುತ್ತಿರುವ ಈ ಸಮಯದಲ್ಲಿ ಇಂಥದೊಂದು ಅಮೂಲ್ಯ ಕೃತಿಯನ್ನು ಓದುಗರಿಗೆ ಕೊಡಬೇಕೆಂದು

ಯೋಚಿಸಿರುವುದೇ ಅಪೂರ್ವಸಂಗತಿ. ಧ್ಯಾನಸ್ಥ ನೆಲೆಯಲ್ಲಿ ನಿಂತು ಸ್ಮರಣೀಯ ಮಾದರಿಗಳನ್ನು ನಮ್ಮ ಸಂತ ಮಹನೀಯರು ಬಿಟ್ಟುಹೋಗಿದ್ದಾರೆ. ಅದು ಬೇರೆ ಬೇರೆ ರೂಪದಲ್ಲಿರಬಹುದು. ಅವುಗಳ ಚೇತೋಹಾರಿ ನೋಟವನ್ನು ಇಲ್ಲಿಯ ಕೆಲವು ಲೇಖನಗಳು ನನಗೆ ಕೊಟ್ಟಿವೆ. 'ಭಕ್ತಿ ಎಂಬ ಜೀವರಸ' ಲೇಖನದಲ್ಲಿ ನಮ್ಮ ನಡುವಿನ ಮಹತ್ವಪೂರ್ಣ ವಿದ್ವಾಂಸ ಲಕ್ಷ್ಮೀಶ ತೋಳ್ಪಾಡಿಯವರು ಗಂಭೀರವಾದ ಚರ್ಚೆ ನಡೆಸಿದ್ದಾರೆ. ಈ ಕೃತಿ ನನ್ನ ಪರಿಚಿತರಾದ ಹಲವು; ಲೇಖಕರು ಗುಂಪುಗೂಡಿ 'ನಾವು ಹೀಗೆಲ್ಲ ಯೋಚಿಸುತ್ತಿದ್ದೇವೆ' ಎಂದು ಹೇಳುವಂತಿದೆ. ಸಾಹಿತ್ಯದ ಮಹೋನ್ನತಿ ಎಂದರೆ ಇದೇ ಅಲ್ಲವೆ? ಸಮೃದ್ಧತೆಯ ನೆಲೆಯಲ್ಲಿ ಗುಣಾತ್ಮಕತೆಯನ್ನು ಈ ರೀತಿ ಗ್ರಹಿಸಬೇಕು ಎಂದು ಸೂಚಿಸುವ ರೀತಿಯಲ್ಲಿವೆ ಇಲ್ಲಿಯ ಬಹುಪಾಲು ಲೇಖನಗಳು. ನಮ್ಮ ಸಂತ ಮಹನೀಯರ ಬಳಿಗೆ ಮತ್ತೆ ಕರೆದೊಯ್ಯುವಂಥವು. ಈ ಕೃತಿಯು ಬಹು ದೊಡ್ಡ ಪ್ರಮಾಣದಲ್ಲಿ ಸಂವಾದವನ್ನು ಬಯಸುವಂಥದ್ದು. ಸಂಪಾದಕತ್ವದ ಸೂಕ್ಷ್ಮ ಮನಸ್ಸುಗಳಿಗೆ ಧನ್ಯವಾದಗಳು.

– **ಶೂದ್ರ ಶ್ರೀನಿವಾಸ್** (ಸಾಹಿತಿ, ಕಾದಂಬರಿಕಾರ)

* ಈ ತರಹದ ಪ್ರಯತ್ನ ಕನ್ನಡಕ್ಕೆ ಹೊಸದು. ಒಂದೆಡೆ ಭಕ್ತಿ ಮಾರ್ಗದಿಂದ ದೀಪ ಬೆಳಗಿಸಿದ, ಮಳೆ ಸುರಿಸಿದ ದೃಷ್ಟಾಂತಗಳನ್ನು ಕೇಳುತ್ತಲೇ ಬೆಳೆದ ನಮ್ಮ ಭಾವಲೋಕಕ್ಕೆ, ಇನ್ನೊಂದೆಡೆ ಭಕ್ತಿ ಎಂಬುದು ಒಂದು ಗುಲಾಮಗಿರಿ ಎಂಬರ್ಥದಲ್ಲಿ ಚಿಂತನೆಗೆ ಒಳಪಡಿಸಿರುವ ವೈಚಾರಿಕ ಕಾಲಘಟ್ಟದಲ್ಲಿಯೂ ಈ ಕೃತಿ ಕುತೂಹಲದಿಂದಲೇ ಓದಿಸಿಕೊಳ್ಳುವ ಸಾಮರ್ಥ್ಯ ಹೊಂದಿದೆ ಎಂಬುದು ಇದರ ಹೆಗ್ಗಳಿಕೆ. ಇಲ್ಲಿಯ ಕೊನೆಯ ಮೂರು ಲೇಖನಗಳು ವಿಜ್ಞಾನ, ನಂಬಿಕೆ ಮತ್ತು ವೈದ್ಯ ಶಾಸ್ತ್ರಗಳ ಪ್ರಸ್ತಾಪದೊಂದಿಗೆ ವಿಭಿನ್ನವಾದ ಹೊಳಹುಗಳನ್ನು ನೀಡುವಂತಿವೆ. ನನಗೆ ವೈಯಕ್ತಿಕವಾಗಿ ಭಕ್ತಿ ಎಂದರೆ ಧ್ಯಾನ ಮಾತ್ರ. ಮನಸ್ಸನ್ನು ಕೇಂದ್ರೀಕರಿಸಿ ಬರವಣಿಗೆಗೆ ಬೇಕಾದ ಧ್ಯಾನಸ್ಥ ಮನಸ್ಥಿತಿ ಪಡೆಯಲು ಒಂದು ಅಲೌಕಿಕ ರೂಪದ ಅಗತ್ಯ ಅಷ್ಟೇ. ಇಂತೆಲ್ಲ ಭಕ್ತಿಯ ಹಲವು ಮಜಲುಗಳನ್ನು ಒಳಗೊಂಡ 'ಅವರವರ ಭಕುತಿಗೆ' ಕೃತಿ ಮತ್ತೆ ಮತ್ತೆ ಓದುವ ಬರಹಗಳ ಗುಚ್ಛ.

– **ಸುನಂದಾ ಕಡಮೆ** (ಸಾಹಿತಿ, ಕಥೆಗಾರ್ತಿ)

* 'ಅವರವರ ಭಕುತಿಗೆ' – ಭಕ್ತಿಯ ಪರಿಕಲ್ಪನೆಯನ್ನು ವಿವಿಧ ಕೋನಗಳಿಂದ, ವಿವಿಧ ಸ್ತರಗಳಲ್ಲಿ ಪರಿಶೀಲಿಸುವ ಮಹತ್ವದ ಪ್ರಕಟಣೆ. ಅದರ ಹೆಸರಿನಂತೆ ಎಲ್ಲರಿಗೆ ಸ್ವೀಕಾರ್ಯವಾಗಿ ಇದೆ. ವಿಸ್ತಾರವಾದ ಹರಹು, ಗಹನ – ಸರಳ ಪರಾಮರ್ಶೆಗಳಿಂದ, ಮಾಹಿತಿ ವಿಶ್ಲೇಷಣೆಗಳಿಂದ ಕೂಡಿದ, ಓರಣವಾಗಿ ಸಂಪಾದಿತವಾದ ಅಧ್ಯಯನ ಯೋಗ್ಯವಾದ ಸಂಕಲನ. ಕನ್ನಡತನವನ್ನು, ಭಾರತೀಯತೆಯನ್ನು ಉಜ್ಜೀವಿಸುವ ಸತ್ಕಾರ್ಯ ಕೂಡಾ. ಇದರ ಯೋಚನೆ, ಯೋಜನೆ ಮತ್ತು ನಿರ್ವಹಣೆಗಳಿಗಾಗಿ ನಿಮ್ಮ ಬಳಗಕ್ಕೆ ಅಭಿನಂದನೆ.

– **ಡಾ. ಎಂ. ಪ್ರಭಾಕರ ಜೋಶಿ** (ಯಕ್ಷಗಾನ ಕಲಾವಿದ)

* ಆಶ್ಚರ್ಯಕರ ಮತ್ತು ಪ್ರಶಂಸನೀಯ ವಿಚಾರವೆಂದರೆ ಕರ್ನಾಟಕದಲ್ಲಿ ಕಳೆದ ಒಂದು ಸಾವಿರ ವರ್ಷಗಳಿಂದಲೂ ಸಾಗಿ ಬಂದಿರುವ ಒಂದು ವಿಶಿಷ್ಟ ಆಧ್ಯಾತ್ಮಿಕ ಪರಂಪರೆ, ದಾರ್ಶನಿಕ ಪ್ರಕಾರ–ಭಕ್ತಿ ಮಾರ್ಗವನ್ನು ಅಮೆರಿಕೆಗೆ ಬರಮಾಡಿಕೊಂಡು ಅದನ್ನು, ಅದರ ಆಯಾಮಗಳನ್ನು ಅರಿಯುವ, ಅರ್ಥೈಸುವ ಪ್ರಕ್ರಿಯೆಯನ್ನು ಅಮೆರಿಕಾದ ಕನ್ನಡಿಗರು ಕೈಗೆತ್ತಿಕೊಂಡದ್ದು. 'ಅವರವರ ಭಕುತಿಗೆ' ಈ ಪ್ರಯತ್ನದ ಫಲ. ಕ್ರಿಸ್ತ ಪೂರ್ವ ಪಾಣಿನಿಯಿಂದ ಹಿಡಿದು (ವಾಸುದೇವ ಭಕ್ತಿಯ ಉಲ್ಲೇಖ) ಮುಂದಿನ ವೇದೇತರ ಮಾರ್ಗವಾದ ಮಹಾಭಾರತ, ಗೀತೆ, ಸಾತ್ವತ ಸಂಹಿತೆ, ವಿಷ್ಣು ಪುರಾಣ, ನಾರದ ಮತ್ತು ಶಾಂಡಿಲ್ಯ ಭಕ್ತಿಸೂತ್ರ, ಭಾಗವತ, ಹರಿವಂಶ, ಯಮುನಾಚಾರ್ಯ, ರಾಮಾನುಜ, ಮಧ್ವ, ವಚನಕಾರರು, ದಾಸಪಂಥ– ಇತ್ಯಾದಿ ದಾರ್ಶನಿಕ ದಾಖಲೆಗಳ ಮೂಲಕ ಉಳಿದು ಬಂದ , ಹರಿದು ಬಂದ ಆತ್ಮ–ಪರಮಾತ್ಮ ಸಂಬಂಧದ ದಾರ್ಶನಿಕ ಮಾರ್ಗದ ಬಗ್ಗೆ ತಂತಮ್ಮ ಅರಿವು, ಚಿಂತನೆ, ಭಾವನೆಗಳ ನೆಲೆಯಲ್ಲಿ ಅರ್ಥೈಸುವ ಆಕರವೇ ಈ ಹೊತ್ತಗೆ–'ಅವರವರ ಭಕುತಿಗೆ'. ಎಲ್ಲರೂ ಒಂದೇ ರೀತಿಯಲ್ಲಿ ಅರ್ಥೈಸಿಲ್ಲ, ಅರ್ಥೈಸಲು ಸಾಧ್ಯವೂ ಇಲ್ಲ, ಅರ್ಥೈಸಲೂ ಬಾರದು. 'ಅವರವರ ಭಕುತಿಗೆ' ಪ್ರತಿಯೊಬ್ಬನ ವೈಯಕ್ತಿಕ ಅರಿವಿಗೆ ಹಿಡಿದ ಕನ್ನಡಿ. ವ್ಯಕ್ತವನ್ನು ಅವ್ಯಕ್ತದೊಡನೆ ಅನುಸಂಧಾನ ಮಾಡುವ, ಭಾವುಕವಾಗಿ ಅನನ್ಯತೆಯನ್ನು, ಲೀನತೆಯನ್ನು ಸಾಧಿಸುವ ವಿಧಾನ 'ಭಗವದನುರಾಗ – ಭಕ್ತಿ'. ಇದನ್ನು ಅರ್ಥೈಸುವ ನಮ್ಮ ಅಮೆರಿಕಾದ ಬಂಧುಗಳ ಪ್ರಯತ್ನ 'ಅವರವರ ಭಕುತಿಗೆ' ಸಾರ್ಥಕತೆಯನ್ನು ಸಾಧಿಸಿದೆ.

– **ಶ್ರೀಪತಿ ತಂತ್ರಿ** (ಸಮಾಜ ಶಾಸ್ತ್ರಜ್ಞರು)

* ...ಹೊರನಾಡ ಕನ್ನಡಿಗರಿಗೆ ಕನ್ನಡ ಎಂಬುದು ಒಂದು ಭಾಷೆಯಲ್ಲ, ಕನ್ನಡವೆಂಬುದು ಒಂದು ಜೀವನ ದೃಷ್ಟಿ, ಒಳಗಿನಿಂದಲೇ ಅರಳಿ ನಿಲ್ಲುವ ಒಂದು ಜೀವಂತ ಸೃಷ್ಟಿ ಎಂಬ ಸಂಪಾದಕರ ಮಾತಿಗನುಗುಣವಾಗಿ ಸಂಪುಟದ ಬರಹಗಳ ಆಳ, ವೈವಿಧ್ಯ, ವಿಷಯ ವ್ಯಾಪ್ತಿ ಶ್ರೀಮಂತವಾಗಿದೆ. ಯಕ್ಷಗಾನ ಸಾಹಿತ್ಯದಲ್ಲಿ ಭಕ್ತಿ, ಬೇಂದ್ರೆಯವರು ಕಂಡ ಅಭಂಗ ವಿಟ್ಟಲ, ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ದೇವರು, ವಚನಗಳಲ್ಲಿ ಮಾಯೆಯ ಕಲ್ಪನೆ, ಶತಮಾನಗಳಾಚೆಯ ಶರಣರ ಸಂದೇಶ, ಬಸವಣ್ಣ–ಒಂದು ಬೆರಗು, ಕಠೋಪನಿಷತ್ತಿನ ನಚಿಕೇತನ ಭಕ್ತಿ, ಅರಿವನರಿವ ಹಾದಿಗೆ ಹೆಣ್ಣೆಂಬ ಹೆಸರು, ಆಧುನಿಕ ವೈದ್ಯಶಾಸ್ತ್ರ ಮತ್ತು ಭಕ್ತಿ ಎಂಬ ಉದ್ಯಮ...ಹೀಗೆ ವಿಷಯ ವ್ಯಾಪ್ತಿ ಬೆಳೆಯುತ್ತಲೇ ಹೋಗುತ್ತದೆ. ಪ್ರತಿ ಲೇಖನದಲ್ಲೂ ಅಡಕವಾಗಿರುವ ಉಲ್ಲೇಖಗಳು, ವಿಮರ್ಶಾತ್ಮಕ ದೃಷ್ಟಿಕೋನ ಗಮನ ಸೆಳೆಯುತ್ತದೆ. ..ಭಕ್ತಿ ಸಾಹಿತ್ಯ ಕುರಿತಂತೆ ಕನ್ನಡದಲ್ಲಿ ಇರುವ ಗ್ರಂಥಗಳಿಗೆ ಈ ಸಂಪುಟ ಒಂದು ಮೌಲಿಕ ಸೇರ್ಪಡೆ.

– **ಕೆ. ಸತ್ಯನಾರಾಯಣ**

(ವಿಜಯ ಕರ್ನಾಟಕ ಪತ್ರಿಕೆಯ ಅಂಕಣ 'ಒಳಕಥನ'ದಿಂದ)

* ...ಒಂದೇ ಮಾತಿನಲ್ಲಿ ಹೇಳುವುದಾದರೆ ಈ ಗ್ರಂಥ ಕನ್ನಡ ಸಾಹಿತ್ಯ ಲೋಕಕ್ಕೊಂದು ಅತಿ ವಿಶಿಷ್ಟ ಮತ್ತು ಅತ್ಯಂತ ಮೌಲ್ಯಯುತ ಸೇರ್ಪಡೆ...ವಚನಕಾರರು ಮತ್ತು ಅವರ ವಚನಗಳ ಕುರಿತು, ಸಾಕಷ್ಟು ಅಧ್ಯಯನ ನಡೆಸಿ ಬರೆದ ಪ್ರಬುದ್ಧ ಪ್ರಬಂಧಗಳು ಈ ಗ್ರಂಥದಲ್ಲಿವೆ. ಕುವೆಂಪು, ಬೇಂದ್ರೆ, ಪುತಿನ ಮುಂತಾದ ಕನ್ನಡದ ರಸಋಷಿಗಳು ಭಕ್ತಿಯನ್ನು ಹೇಗೆ ಪರಿಕಲ್ಪಿಸಿದ್ದಾರೆಂಬ ವಿವರಗಳಿವೆ. ಜನಪದ ಸಾಹಿತ್ಯದಲ್ಲಿ ಭಕ್ತಿ ಸಿಂಚನ, ಯಕ್ಷಗಾನ ಸಾಹಿತ್ಯದಲ್ಲಿ ಭಕ್ತಿ, ಸುಗಮ ಸಂಗೀತದಲ್ಲಿ ಭಕ್ತಿ, ಗ್ರಾಮೀಣ ಮಹಿಳೆಯರ ಜೀವನದ ಅಂತರ್ಗಾಮಿ ಭಕ್ತಿ...ಮುಂತಾದ ಶೀರ್ಷಿಕೆಗಳಿಂದಲೇ ಗ್ರಂಥದ ಆಳ, ಹರವಿನ ಅಂದಾಜಾಗುತ್ತದೆ. ....ಇವಿಷ್ಟು ಭಕ್ತಿ ಹೂರಣವು ಪುಸ್ತಕದ ಒಳಗೆ ತುಂಬಿದ್ದರೆ ಇದಕ್ಕೆ ಸಂಗಾತಿಯಾಗಿ, ಸಂವಾದಿಯಾಗಿ ಒಂದು ಧ್ವನಿಸಂಪುಟವೂ ಇದೆ. ಇದು ಹಿಂದೂಸ್ಥಾನಿ ಸಂಗೀತಗಾರ, ಅಪ್ಪಟ ಕನ್ನಡಿಗ ಪ್ರತಿಭೆ ಪಂ. ನಾಗರಾಜ ಹವಾಲ್ದಾರ್ ಅವರ ಪರಿಶ್ರಮದಿಂದ ಮೂಡಿ ಬಂದ ನಾದಕುಸುಮ. ಹೀಗೆ ಭಕ್ತಿಯ ಕುರಿತಂತೆ ಕನ್ನಡದಲ್ಲಿ ಸಾಹಿತ್ಯ–ಸಂಗೀತ ಸಂಗಮವೊಂದು ಸಪ್ತ ಸಾಗರದಾಚೆ ಅಮೆರಿಕಾದಲ್ಲಿ ಸಾಕಾರಗೊಳ್ಳುತ್ತಿದೆ ಎನ್ನುವುದು ಸಾಂಸ್ಕೃತಿಕ, ಪ್ರಜ್ಞಾವಂತ ಕನ್ನಡಿಗರಿಗೆಲ್ಲ ರೋಮಾಂಚನದ ಸಂಗತಿಯೇ.

**– ಶ್ರೀವತ್ಸ ಜೋಶಿ**

(ವಿಶ್ವವಾಣಿ ಪತ್ರಿಕೆಯ ಅಂಕಣ 'ತಿಳಿರು ತೋರಣ'ದಿಂದ)

**೨. ಬೇರು ಸೂರು (೨೦೧೩) ಪ್ರಕಾಶನ: ಕನ್ನಡ ಸಾಹಿತ್ಯ ರಂಗ, ಯು.ಎಸ್.ಎ. ಹಾಗೂ ವಸಂತ ಪ್ರಕಾಶನ, ಬೆಂಗಳೂರು. ಪ್ರಧಾನ ಸಂಪಾದಕರು: ಗುರುಪ್ರಸಾದ್ ಕಾಗಿನೆಲೆ**

* 'ಬೇರು ಸೂರು' ಗ್ರಂಥದಲ್ಲಿ ಅನೇಕ ಕತೆಗಳಿವೆ, ವೈಚಾರಿಕ ಲೇಖನಗಳಿವೆ: ಕಾರ್ಪೊರೇಟ್ ಜಗತ್ತಿನಲ್ಲಿ ದುಡಿಯುವಾಗ ಗಳಿಸಿದ ಜ್ಞಾನ ಅನುಭವಗಳ ಚಿತ್ರಣವಿದೆ– ದೇವಾಲಯಗಳ ಪರಿಚಯವಿದೆ– ರಂಗಭೂಮಿಯ ಅನುಭವ ಕಥನವಿದೆ– ಒಟ್ಟು ಅಮೆರಿಕದಲ್ಲಿರುವ ಕನ್ನಡಿಗರ ಇಂದಿನ ಜೀವನದ, ಬಹುಮುಖಿಯಾದ ಪರಿಚಯವನ್ನು ಮಾಡಿಕೊಡುವ ವಿವಿಧ ಬರಹಗಳ ಜೇನುಗೂಡು ಈ ಬೇರು ಸೂರು. ನಮ್ಮವರು ಅಲ್ಲಿ ಕಟ್ಟಿಕೊಂಡು ಬಾಳುತ್ತಿರುವ ಸೂರಿನೊಳಗೆ ಹೊಕ್ಕು ಬರೋಣವೆಂದನ್ನಿಸುವಷ್ಟು ಗಮನಿಸಲೇಬೇಕಾದ ತೀರ ಉಪಯುಕ್ತವಾದ ಮಾಹಿತಿಕೋಶ ಇದಾಗಿದೆಯೆಂದು ನಾನಿದರ ಆದ್ಯಂತ ಕಣ್ಣಾಡಿಸಿದಾಗ ಅನ್ನಿಸಿತು. ನಾನು ಓದುವುದರಲ್ಲಿ ಬಹಳ ಹಿಂದೆ. ಆದರೆ ಇದರ ಪ್ರತಿಯೊಂದು ಲೇಖನವೂ ಓದಿಸಿಕೊಂಡು ಹೋಗಿದೆ. ಶ್ರೀಕಾಂತ ಬಾಬುರವರ ನೀಲಿ ಡಬ್ಬಿಯ ಶ್ರೀಖಂಡವು ನನ್ನ ನಿದ್ದೆಯನ್ನು ಕೆಡಿಸಿದ ಕಥೆ– ಅಮೆರಿಕದಲ್ಲಿ ಮಕ್ಕಳ ಬದುಕಿಗೆ ಕನ್ನಡಿ ಹಿಡಿಯುತ್ತದೆ. ಇದಕ್ಕೆ ಪೂರಕವಾದ ಬರವಣಿಗೆ ಎಚ್. ವೈ. ರಾಜಗೋಪಾಲರ 'ಹೊಸ ನೆಲದಲ್ಲಿ ಹೊಸ ಸಸಿಗಳು'. ಈ ಸಸಿಗಳ ಬೇರು ಮತ್ತು ಸೂರು– ಎರಡೂ ಅಮೆರಿಕವೇ. Gene ಮಾತ್ರ ಕನ್ನಡದ್ದು. ತಮ್ಮ 'ಜೀನ್' ಎರಡೋ

ಮೂರೋ ತಲೆಮಾರಿನಲ್ಲಿ ಮರೆತೇ ಹೋಗುವ ಸಾಧ್ಯತೆಯೂ ಇದೆ. ಕನ್ನಡಿ ನೋಡಿಯೇ ಇದರ ಮೂಲವನ್ನು ತಿಳಿದುಕೊಳ್ಳಬೇಕಾದೀತು. ಕನ್ನಡ ನಾಡಿನಿಂದ ಅಮೆರಿಕ ಪ್ರವೇಶಿಸಿ ಅಲ್ಲಿಯ ಸೂರಿನೊಳಗೆ ಬದುಕಲು ಬೇಕಾದ ಸಿದ್ಧತೆಯ ಬಗ್ಗೆ ನಳಿನಿ ಮಯ್ಯರ ಸುಂದರ ಚಿತ್ರಣ, ನಾಗ ಐತಾಳರ ಕಾದಂಬರಿಯನ್ನು ನೆನಪಿಸುವಂಥದ್ದು. ಕಾಗಿನೆಲೆಯವರು ಅಮೆರಿಕದಲ್ಲೇ ನೆಲೆಯನ್ನು ಕಂಡುಕೊಂಡ ಒಬ್ಬ ಶ್ರೇಷ್ಠ ಬರಹಗಾರನೆಂದು ಅವರ 'ನಾನು–ನೀನು' ಓದಿದಾಗ ತಿಳಿಯಿತು. ಶ್ರೀವತ್ಸರು ತನ್ನ ಬರಹಗಳ ಮೂಲಕ ಕರ್ನಾಟಕದಲ್ಲೂ ಪರಿಚಿತರು. ಗುಂಡೂ ಶಂಕರರಲ್ಲೂ ಒಬ್ಬ ಉತ್ತಮ ಬರಹಗಾರನನ್ನು ನಾನು ಗುರುತಿಸಿದ್ದೇನೆ. 'ಅಮೆರಿಕ– ಒಂದು ವಿಶಿಷ್ಟ ರಾಷ್ಟ್ರವೆ?'– ಈ ಲೇಖನ ಒಬ್ಬ ತನ್ನನ್ನು ತಾನೇ ತಿಳಿಯಬಯಸುತ್ತಿರುವ, ಅಮೆರಿಕಕ್ಕೇ ಹೋಗಿ ಬಾಳುವವನ ಒಳಯೋಚನೆಗಳನ್ನು ಬಿಚ್ಚಿಡುತ್ತದೆ. ವಿಮಲಾ ರಾಜಗೋಪಾಲರ ಉಸಿರಿನಲ್ಲೇ ಸಂಗೀತವಿದೆ. ಸುಪ್ತದೀಪ್ತಿಯವರ ವಲಸೆ ವೃತ್ತದ ವರಸೆಯೊಳಗೆ ಅವರ ಸಮ್ಮೋಹನಗೊಳಿಸುವ ಭಾವಗೀತೆಗಳಿಗಿಂತ ಭಿನ್ನವಾದ ಗದ್ಯವನ್ನು ಬರೆಯುವ ಸಾಮರ್ಥ್ಯ ಕಾಣುವ ಅವಕಾಶ. ಮೀರಾ ರಾಜಗೋಪಾಲರು ಒಬ್ಬ ಗಮನಾರ್ಹ ಲೇಖಕಿಯಾಗಿ ಇಲ್ಲಿ ಎದ್ದು ಕಾಣುತ್ತಾರೆ. ಇದೇ ರೀತಿ ಪಟ್ಟಿ ಮಾಡಲು, ಎಚ್. ಕೆ. ಚಂದ್ರಶೇಖರ್, ವೈಶಾಲಿ ಹೆಗಡೆ, ತ್ರಿವೇಣಿ ಶ್ರೀನಿವಾಸರಾವ್, ವತ್ಸ ಕುಮಾರ್, ಎಸ್. ಎನ್. ಶ್ರೀಧರ್, ಕೃಷ್ಣರಾಜು, ಕೆ. ಜಿ. ವಿ. ಕೃಷ್ಣ– ಹೀಗೆ ಎಲ್ಲರ ಬಗ್ಗೆಯೂ ನನ್ನ ಮೆಚ್ಚುಗೆಯನ್ನು ಪ್ರಕಟಿಸಬೇಕಾಗುತ್ತದೆ.

ಸಮ್ಮೇಳನಗಳು ಇಂತಹ ಕೃತಿಯನ್ನು ಹೊರತಂದಲ್ಲಿ ಅವು ಚಿರಸ್ಮರಣೀಯ ವಾಗುತ್ತವೆ; ಹಕ್ಕಿಗಳು ಒಂದು ಒಳ್ಳೆಯ ಹಣ್ಣಿನ ಮರದ ಹಣ್ಣುಗಳನ್ನು ಕಚ್ಚಿಕೊಂಡು ಗಗನಕ್ಕೆ ಹಾರಿ ಬೀಜ ಪ್ರಸಾರ ಮಾಡಿದಂತೆ.

**– ಪ್ರೊ. ಶ್ರೀಪತಿ ತಂತ್ರಿ**

* 'ಬೇರು ಸೂರು' ಕೃತಿಯನ್ನು ಬಂದ ಕೂಡಲೇ ಓದಲು ಆರಂಭಿಸಿದ ಮೇಲೆ ನಿಲ್ಲಿಸಲು ಆಗಲಿಲ್ಲ. ಎಲ್ಲ ಲೇಖನಗಳೂ ಆಸಕ್ತಿದಾಯಕವಾಗಿವೆ. ಈ ಬರಹಗಳಿಗೆ ಕರ್ನಾಟಕದ ಹೊರಗಿನವರು, ಅಮೆರಿಕಾ ದೇಶದಲ್ಲಿ ಕನ್ನಡದ ಜೀವಂತ ಪರಿಸರದಿಂದ ದೂರ ಇರುವವರು, ಪಾಪ, ಅವರು ಕನ್ನಡದಲ್ಲಿ ಬರೆದದ್ದೇ ಹೆಚ್ಚು ಎಂಬ ಯಾವ ರಿಯಾಯಿತಿಯೂ ಬೇಕಾಗಿಲ್ಲ. ಪ್ರಬುದ್ಧ ಚಿಂತನೆ, ಪ್ರಬುದ್ಧ ಬರವಣಿಗೆ. ಇಲ್ಲಿಯವರು ಬರೆಯಲಾರದಂಥ ಅನೇಕ ವಿಷಯಗಳು ಇಲ್ಲಿ ಬಂದಿವೆ. ಇಲ್ಲಿಂದ ಅಲ್ಲಿಗೆ ಹೋದವರ ಆರಂಭದ ಪರದೇಶಿತನ, ಹೊಂದಿಕೊಂಡ ಮೇಲಿನ ನಿರಾಳತೆ, ಬಿಟ್ಟು ಬಂದಿದ್ದಕ್ಕಾಗಿ ಒಂದು ಬಗೆಯ ವಿಷಾದ, ಅದನ್ನು ಗೆಲ್ಲುವ ಹುನ್ನಾರ, ಅಲ್ಲೇ ನಿಲ್ಲಬೇಕಾದ ಅನಿವಾರ್ಯತೆ, ತಿರುಗಿ ಬಂದವರ ತುಮುಲ– ಇತ್ಯಾದಿಗಳೆಲ್ಲ ಈ ಬರಹಗಳಲ್ಲಿ ಬಹಳ ಚೆನ್ನಾಗಿ ಬಂದಿವೆ. ಸೈಕಾಲಜಿಯ ದೃಷ್ಟಿಯಿಂದ ಈ ಲೇಖನಗಳನ್ನು ವಿಶ್ಲೇಷಿಸಿದರೆ ಕುತೂಹಲಕರವಾದ

ಒಳನೋಟಗಳು ಸಿಗಬಹುದು. ಅಲ್ಲಿಗೆ ಹೋಗುವವ ಯಾರಾದರೂ ತರುಣರು ಸಂಶೋಧನೆಗೆ ಈ ವಿಷಯ ಆರಿಸಿಕೊಳ್ಳಬಹುದು. ಇದೆಲ್ಲದರ ನಡುವೆ ಅಲ್ಲಿ ಕನ್ನಡತನವನ್ನು ಉಳಿಸಿಕೊಳ್ಳುವ ಪ್ರಯತ್ನಗಳನ್ನು ನೋಡಿ ನನಗೆ ಬಹಳ ಎಂದರೆ ಬಹಳ ಸಂತೋಷವಾಯಿತು. ಅನೇಕ ಲೇಖನಗಳಲ್ಲಿ ಇಂಥ ಪ್ರಸ್ತಾಪಗಳಿವೆ. ಮುಂದಿನ ಪೀಳಿಗೆಗೆ ಕನ್ನಡ ಹೇಗೂ ದಾಟಲಾರದು. ಇಲ್ಲಿಂದ ನಡೆದಿರುವ ಬಹಳ ದೊಡ್ಡ ವಲಸೆಯನ್ನು ನೋಡಿದರೆ ಹೊಸದಾಗಿ ಹೋಗುವವರಿಗಾದರೂ ಅಲ್ಲಿಯ ಕನ್ನಡ ಸಂಘ-ಸಂಸ್ಥೆಗಳು ಆಸರೆಯಾದಾವು. ಇಂದಿನ ಇಂಗ್ಲಿಷ್ ಮೀಡಿಯಂನ ಭರಾಟೆಯನ್ನು ನೋಡಿದರೆ ಇಲ್ಲಿಂದ ಹೋಗುವವರು ಕನ್ನಡವನ್ನು ಇಲ್ಲೇ ಬಿಟ್ಟು ಹೋದಾರು ಎನಿಸುತ್ತದೆ.

ಆದರೆ, ಮನೆಯಲ್ಲಾದರೂ ಕನ್ನಡ ಯಾಕೆ ಅಲ್ಲಿ ಉಳಿದಿಲ್ಲ ಎಂಬುದೊಂದು ಸೋಜಿಗ. ಎಲ್ಲ ಒತ್ತಡಗಳ ನಡುವೆಯೂ ಅನೇಕ ಸಮುದಾಯಗಳು ಹಾಗೆ ತಮ್ಮ ಭಾಷೆಗಳನ್ನು ಉಳಿಸಿಕೊಂಡಿವೆ- ಇಲ್ಲಿ ತುಳುವಿನಂತೆ. ಕನ್ನಡ ಯಾಕೆ ಅಲ್ಲಿ ಉಳಿಯುತ್ತಿಲ್ಲ? ಇರಲಿ. ಕನ್ನಡ ಸಾಹಿತ್ಯ ರಂಗಕ್ಕೆ ಹೋಗುವ ಅವಕಾಶ ಒಮ್ಮೆ ಬಂದಿತ್ತು, ವೀಸಾ ಸಿಗಲಿಲ್ಲ. ಅಲ್ಲಿಯ (ಕಸಾರಂದ) ಎಲ್ಲ ಸ್ನೇಹಿತರಿಗೂ ವಂದನೆಗಳು.

– **ಪ್ರೊ. ಗಿರಡ್ಡಿ ಗೋವಿಂದರಾಜು**, ಧಾರವಾಡ

* 'ಬೇರು ಸೂರು' ಪರಿಣಾಮಕಾರಿಯಾದ, ಅಷ್ಟೇ ಕಲಾತ್ಮಕವಾದ ಸಂಕಲನ. ಗುರುಪ್ರಸಾದರ ಮುನ್ನುಡಿ ಬಹಳ ಅರ್ಥಪೂರ್ಣವಾಗಿದೆ. ಲೇಖನಗಳು ಮನಸ್ಸು ತಟ್ಟುತ್ತವೆ. ನಿಮ್ಮೆಲ್ಲರ ಕರ್ತೃತ್ವಶಕ್ತಿ, ಬದ್ಧತೆ, ಪ್ರತಿಭೆಗಳು ನಿಜವಾಗಿ ಪ್ರಶಂಸನೀಯ. ಅಭಿನಂದನೆಗಳು.

– **ಡಾ. ವೀಣಾ ಶಾಂತೇಶ್ವರ**, ಧಾರವಾಡ

* 'ಬೇರು ಸೂರು' ತುಂಬ ಪ್ರೌಢವೂ ಆತ್ಮೀಯವೂ ವಿಚಾರ ಸೀಮೆಯನ್ನು ಹಲವಾರು ಗವಾಕ್ಷಿಗಳಿಂದ ನೋಡಬಲ್ಲ ಸಾಮರ್ಥ್ಯ ಉಳ್ಳವೂ ನೈಜ ಕಳಕಳಿಯವೂ ಆಗಿರುವುದು ನಿಜವಾಗಿ ಕನ್ನಡದ ನಿಲುವುಗಳನ್ನು ಎತ್ತರಿಸುವ ಸದ್-ಪ್ರಯತ್ನ ಎನ್ನಬಹುದಾದ ಸ್ವಾಗತಾರ್ಹ ಸಂಕಲನ. ಶಾಂತಾರಾಮ ಸೋಮಯಾಜಿಗಳು ನಮ್ಮ ಢೋಂಗಿ ಸಂಸ್ಕೃತಿಯನ್ನು ಬಿಚ್ಚಿಟ್ಟಿರುವ ರೀತಿ ಶಾಕ್ ಕೊಡುವಂಥದಾಗಿದೆ. ಎಲ್ಲರ ಬರಹಗಳಲ್ಲಿ ಶಬ್ದಸಿದ್ಧಿ, ನಿರೂಪಣ ಕೌಶಲ, ಮತ್ತು ಪ್ರಾಮಾಣಿಕ ಮಾನಸಿಕ ಒತ್ತಡಗಳನ್ನು ಕಾಣಬಹುದಾಗಿದೆ. ೩೮ ಮಂದಿಯ ಬರಹಗಳಲ್ಲಿ ಮೂರನೆಯ ಒಂದು ಭಾಗವನ್ನು ಮಹಿಳೆಯರು ಹಂಚಿಕೊಂಡು ಸಮತೂಕದ ಬರಹಗಳನ್ನು ನೀಡಿದ್ದಾರೆ. ಯಾವ ದೃಷ್ಟಿಯಿಂದ ನೋಡಿದರೂ ಇದೊಂದು ಸಂಗ್ರಹಯೋಗ್ಯವಾದ ಬರಹಗಳ ಗುಚ್ಛವಾಗಿದೆ.

ಎಲ್ಲ ರಚಯಿತರಿಗೂ ಅವರ ಹಿಂದೆ ನಿಂತು ಬೆಂಬಲಿಸಿರುವ ಹಿರಿ-ಕಿರಿಯರಿಗೂ ನನ್ನ ಆತ್ಮೀಯ ನೆನಪುಗಳು.

– **ಪ್ರೊ. ಅ. ರಾ. ಮಿತ್ರ**, ಬೆಂಗಳೂರು.

* 'ಬೇರು ಸೂರು' ಕುತೂಹಲಕಾರಿಯಾಗಿದೆ. ಆಸಕ್ತಿಯಿಂದ ಕಣ್ಣಾಡಿಸಿದೆ. ಹೊತ್ತಗೆಯ ವೈಶಿಷ್ಟ್ಯಕ್ಕೆ ಕುಂದಿಲ್ಲ. ಅಲ್ಪಾವಧಿಯಲ್ಲಾದರೂ ಆ ನಾಡಿನಲ್ಲಿ ಕೆಲಮಂದಿ ಸಹಜೀವಿಗಳೊಡನೆ ಭಾವನೆಗಳನ್ನು ಹಂಚಿಕೊಂಡ ನೆನಪು ಸದಾ ನನ್ನನ್ನು ಕಾಡುತ್ತಿರುವುದರಿಂದ ಬರಹಗಳ ಅನೇಕ ಸಾಲುಗಳು ಮನಸ್ಸನ್ನು ತಟ್ಟಿದವು. 'ವಲಸೆ' ವ್ಯವಹಾರವನ್ನು ಮೀರಿ ಅಂತರಂಗದಲ್ಲಿ ಭಾವನೆಗಳ ಮೊಟ್ಟೆಗೆ ಕಾವು ಕೊಡುವಂತೆ ಮೂಡಿ ಬಂದುದನ್ನೆಲ್ಲ ಓದಿ ಆಸ್ವಾದಿಸಿದೆ. ಅರ್ಬುದದಿಂದ ಹಿಡಿದು ಹಿಂದೂ ದೇವಾಲಯದ ತನಕ 'ಕಾಯ' ಕಾಯುವ ಕನಸುಗಳ ಅನಾವರಣ ಈ ಬೇರು ಸೂರು.

ಸೂರು ನೂರಾಗಿಸಿದ ನಿಮಗೆಲ್ಲರಿಗೆ ನಮೋ ಎನ್ನುವೆ.

**– ಉದ್ಯಾವರ ಮಾಧವ ಆಚಾರ್ಯ**, ಉಡುಪಿ.

* 'ಬೇರು ಸೂರು' ಓದಿದೆ. ದೂರದ ನಾಡಿನಲ್ಲಿದ್ದು ಕನ್ನಡದಲ್ಲಿ ಬರೆಯುವ ನಿಮ್ಮ ಪ್ರಯತ್ನ ಸ್ತುತ್ಯಾರ್ಹವಾದದ್ದು. ನಿಮ್ಮೆಲ್ಲರನ್ನೂ ಅಭಿನಂದಿಸುತ್ತೇನೆ.

**– ಎಸ್. ಎಲ್. ಭೈರಪ್ಪ,** ಮೈಸೂರು

**೩. ಮಥಿಸಿದಷ್ಟೂ ಮಾತು (೨೦೧೧) ಪ್ರಕಾಶನ: ಕನ್ನಡ ಸಾಹಿತ್ಯ ರಂಗ, ಯು.ಎಸ್.ಎ. ಹಾಗೂ ಅಭಿನವ, ಬೆಂಗಳೂರು. ಪ್ರಧಾನ ಸಂಪಾದಕರು: ತ್ರಿವೇಣಿ ಶ್ರೀನಿವಾಸರಾವ್.**

* 'ಅಮೆರಿಕೆಯಲ್ಲಿ ಬಿಡಾರ ಹೂಡಿರುವ ಕನ್ನಡ ಪರಿಸರದ ಸ್ಥಾಯೀ ಮತ್ತು ಸಂಚಾರೀ ಭಾವಗಳ, ವೈವಿಧ್ಯಪೂರ್ಣ ಆಧುನಿಕ ಅಭಿವ್ಯಕ್ತಿಯ ವಿಶಿಷ್ಟ ಸೊಲ್ಲುಗಳ ಸಂಕಲನ ಇದು. ಕಾವ್ಯದ ಧ್ವನಿಶಕ್ತಿಯ ಜೊತೆಗೆ ಕಥನದ ಕುತೂಹಲವನ್ನೂ ಹೊಂದಿರುವ ಲಲಿತ ನಿಬಂಧಗಳು, ತಮ್ಮ ಅನುಭವಜನ್ಯ ವಿವರಗಳಲ್ಲಿ ಮೈದಾಳುತ್ತಲೇ, ಅದರಾಚೆಗೂ ಚಿಂತನಶೀಲವಾಗಿ ರೆಕ್ಕೆ ಬಿಚ್ಚುವ ರೀತಿ ಭಾವೋದ್ದೀಪಕವಾಗಿದೆ. ...ಇಲ್ಲಿನ ಹೆಚ್ಚಿನ ಬರಹಗಳು ಕನ್ನಡ ಸಂವೇದನೆಯನ್ನು ಹಿಗ್ಗಿಸುವಷ್ಟು ಸತ್ವಶಾಲಿಯಾಗಿವೆ.'

**– ಜಯಂತ ಕಾಯ್ಕಿಣಿ** (ಬೆನ್ನುಡಿಯಲ್ಲಿ)

* 'ಈ ಸಂಕಲನದಲ್ಲಿರುವ ಬರಹಗಳನ್ನು ಸಂಪಾದಕರು ಸಲ್ಲಾಪ, ಹರಟೆ, ಚಿಂತನೆ ಎಂದು ಮೂರು ಭಾಗಗಳಲ್ಲಿ ವಿಂಗಡಿಸಿದ್ದಾರೆ. ಆದರೆ ಅನುಭವ ಮತ್ತು ಚಿಂತನಾ ಪ್ರಧಾನವಾದ ಈ ಬರಹಗಳನ್ನು ಒಟ್ಟಾರೆಯಾಗಿ ಪ್ರಬಂಧಗಳು ಎನ್ನಬಹುದು. ಈ ಪ್ರಬಂಧಗಳನ್ನು ಓದುತ್ತ ನನಗೆ ಅಮೆರಿಕ ಕನ್ನಡಿಗರ ಬಾಳಿನ ಒಂದು ಮುಖದ ದರ್ಶನವಾದಂತಾಯಿತು. ಬೇರೆಬೇರೆ ಕ್ಷೇತ್ರದಲ್ಲಿ ಹಾಗೂ ಜ್ಞಾನಶಿಸ್ತಿನಲ್ಲಿ ಕೆಲಸ ಮಾಡುವ ಜನರು ಕನ್ನಡದೊಳಗೆ ಬರೆಯುವುದರಿಂದ ಕನ್ನಡ ಬರಹಕ್ಕೆ ಹೊಸಶಕ್ತಿಯ ಆವಾಹನೆಯಾಗುತ್ತದೆ ಎಂದು ನಂಬಿದವನು ನಾನು. ಈ ಬರಹಗಳನ್ನು ಓದಿದ ಮೇಲೆ, ಬೇರೆಬೇರೆ ದೇಶಗಳಲ್ಲಿ ಇರುವ ಕನ್ನಡಿಗರು ಬರೆದಾಗಲೂ ಕನ್ನಡಕ್ಕೆ ಹೊಸ ಆಯಾಮದ

ಕೂಡಿಕೆಯಾಗುತ್ತದೆ ಎಂದು ಅನಿಸುತ್ತಿದೆ. ಈ ಬರಹಗಳ ಹಿನ್ನೆಲೆಯಲ್ಲಿ ಅಮೆರಿಕಕ್ಕೆ ಹೋಗಿಬಂದವರು ಬರೆದ ಅನೇಕ ಪ್ರವಾಸಕಥನಗಳ ಮಿತಿಯೂ ಹೊಳೆಯುತ್ತಿದೆ.'

**– ರಹಮತ್ ತರಿಕೆರೆ**

**೪. ಕನ್ನಡ ಕಾದಂಬರಿ ಲೋಕದಲ್ಲಿ...ಹೀಗೆ ಹಲವು... (೨೦೦೯) ಪ್ರಕಾಶನ: ಕನ್ನಡ ಸಾಹಿತ್ಯ ರಂಗ, ಯು.ಎಸ್.ಎ. ಹಾಗೂ ಅಭಿನವ, ಬೆಂಗಳೂರು. ಪ್ರಧಾನ ಸಂಪಾದಕರು: ಎಂ. ಎಸ್. ನಟರಾಜ್.**

* 'ಕಾದಂಬರಿ ಲೋಕದಲ್ಲಿ...' ಬಹಳ ವಿಶಿಷ್ಟವಾದ ಪ್ರಯತ್ನ. ನಾನು ೧೯೮೦ರಿಂದ ನೋಡುತ್ತಿದ್ದೇನೆ. ಅಮೆರಿಕದ ಕನ್ನಡಿಗರು ಬಹಳ ಶ್ರದ್ಧೆಯಿಂದ ಕೆಲಸಮಾಡುತ್ತಿದ್ದಾರೆ. ಇಂಥ ಪ್ರಯತ್ನವನ್ನು ನೋಡಿದಾಗ... (ಅವರು) ಕನ್ನಡದ ಕ್ಷಿತಿಜವನ್ನು ಹೆಚ್ಚಿಸಿದ್ದಾರೆನಿಸುತ್ತದೆ...

**– ರಾಷ್ಟ್ರಕವಿ ಡಾ. ಜಿ. ಎಸ್. ಶಿವರುದ್ರಪ್ಪ**

('ಅಭಿನವ'ದ ರವಿಕುಮಾರ್ ಅವರೊಂದಿಗೆ ನಡೆಸಿದ ದೂರವಾಣಿ ಸಂಭಾಷಣೆಯಲ್ಲಿ)

* ಈ ಪುಸ್ತಕದಲ್ಲಿ ಎದ್ದು ಕಾಣುವ ಒಂದು ವೈಶಿಷ್ಟ್ಯವೆಂದರೆ ಇಲ್ಲಿ ಓದಿಗಾಗಿ ಆಯ್ದುಕೊಂಡ ಎಲ್ಲ ಕಾದಂಬರಿಗಳು... ಕಳೆದ ಮೂರು ದಶಕಗಳಲ್ಲಿ ಪ್ರಕಟವಾದವು. ಇವುಗಳಲ್ಲಿ ಬಹಳಷ್ಟು ಕೃತಿಗಳ ಬಗ್ಗೆ ವಿಶೇಷ ಚರ್ಚೆ ನಡೆದಿಲ್ಲ. ಅಷ್ಟೇ ಮಹತ್ವದ ಇನ್ನೊಂದು ವೈಶಿಷ್ಟ್ಯವೆಂದರೆ ಈ ಪುಸ್ತಕಕ್ಕೆ ಸೇರಿದ ಲೇಖನಗಳನ್ನು ಬರೆದವರಲ್ಲಿ ಹೆಚ್ಚಿನವರು ಸಾಹಿತ್ಯ ಕ್ಷೇತ್ರಕ್ಕೆ ಹೊರಗಿನವರು... ಸಾಹಿತ್ಯೇತರ ಕ್ಷೇತ್ರಗಳಲ್ಲಿ ಆಸಕ್ತಿ ಹೊಂದಿದವರು, ಕನ್ನಡ ಓದುಗರಿಗೆ ಹೊಸಬರು. ಆದರೆ ಚೆನ್ನಾಗಿ ಬರೆಯಬಲ್ಲವರು. ಇವರನ್ನು ಒಳಗೊಳ್ಳುವ ಮೂಲಕ ಪುಸ್ತಕಕ್ಕೆ ತಾಜಾತನ ಹಾಗೂ ವೈವಿಧ್ಯ ಬಂದಿದೆ... ಈ ಪುಸ್ತಕದ ಲೇಖನಗಳಲ್ಲಿ ಹೆಚ್ಚಿನವು ಪರಿಚಯಾತ್ಮಕ ಬರಹಗಳು... ಆದರೆ ಕೃತಿಗಳೊಡನೆ ಇನ್ನೂ ಹೆಚ್ಚು ಗಂಭೀರವಾದ ತೊಡಗಿಕೊಳ್ಳುವಿಕೆಯನ್ನು ತೋರುವ ಹಲವಾರು ಲೇಖನಗಳೂ ಈ ಪುಸ್ತಕದಲ್ಲಿವೆಯೆನ್ನುವುದು ಮಹತ್ವದ್ದಾಗಿದೆ... ಆವರಣದ ವಿಶ್ಲೇಷಣೆ ಭೈರಪ್ಪನವರ ಈ ಕಾದಂಬರಿಯನ್ನು ಕುರಿತು ಬಂದ ಅತ್ಯುತ್ತಮ ಲೇಖನಗಳಲ್ಲೊಂದಾಗಿದೆ...

**– ಡಾ. ಜಿ. ಎಸ್. ಆಮೂರ** (ಮುನ್ನುಡಿಯಲ್ಲಿ)

* ಕನ್ನಡ ಸಾಹಿತ್ಯ ರಂಗ... ಕನ್ನಡದ ಕೆಲ ಮುಖ್ಯ ಕಾದಂಬರಿಗಳ ಕುರಿತು ಇಲ್ಲಿ ಅವಲೋಕನ ನಡೆಸಿದೆ. ಒಮ್ಮೆಗೇ ಒಟ್ಟಿಗೇ ತೆರೆದುಕೊಂಡ ಈ ರೀತಿಯ ಕಾದಂಬರೀ ಅವಲೋಕನವೂ ಚರ್ಚೆಯೂ ಕನ್ನಡ ಸಾಹಿತ್ಯದ ಮಟ್ಟಿಗೆ ಪ್ರಾಯಶಃ ಪ್ರಪ್ರಥಮ ಎನ್ನಿಸುತ್ತದೆ... 'ಸಹೃದಯ ವಿಮರ್ಶೆ' ಎಂಬುದಕ್ಕೆ ಈ ಹೊತ್ತಗೆ ಒಂದು ಉತ್ತಮ ಮಾದರಿಯೆನ್ನಬಹುದು. ಇಂಥ ಸಾರ್ಥಕ ಹೊಳವಿಗಾಗಿ ಅಮೆರಿಕದ ಕನ್ನಡ ಸಾಹಿತ್ಯ ರಂಗಕ್ಕೆ, ಅದರ ರೂವಾರಿಗಳಿಗೆ ನಮ್ಮೆಲ್ಲರ ಅಭಿನಂದನೆ ಜೊತೆಗೆ ಕೃತಜ್ಞತೆಯೂ ಸಲ್ಲಲೇ ಬೇಕು.

**– ವೈದೇಹಿ** (ಬೆನ್ನುಡಿಯಲ್ಲಿ)

೩. **ನಗೆಗನ್ನಡಂ ಗೆಲ್ಗೆ! (೨೦೦೭) ಪ್ರಕಾಶನ: ಕನ್ನಡ ಸಾಹಿತ್ಯ ರಂಗ, ಯು.ಎಸ್.ಎ. ಹಾಗೂ ಅಭಿನವ ಪ್ರಕಾಶನ, ಬೆಂಗಳೂರು. ಸಂಪಾದಕರು: ಎಚ್. ಕೆ. ನಂಜುಂಡಸ್ವಾಮಿ ಮತ್ತು ಎಚ್. ವೈ. ರಾಜಗೋಪಾಲ್.**

* '...ಒಂದು ಸಾಹಿತ್ಯಕ ಚರಿತ್ರೆ ಮತ್ತು ಸಾಹಿತ್ಯದ ಹಾಸ್ಯ ಸಂಕಲನ ಎರಡೂ ಒಂದೆಡೆ ಸೇರಿ ರಮ್ಯಲೋಕವನ್ನು ಪ್ರಕಟಿಸಿಬಿಟ್ಟಿದ್ದೀರಿ...'

**ಪ್ರೊ. ಜಿ. ವೆಂಕಟಸುಬ್ಬಯ್ಯ**

('ಅಭಿನವ'ದ ಶ್ರೀ ರವಿಕುಮಾರ್ ಅವರಿಗೆ ಬರೆದ ಪತ್ರದಲ್ಲಿ)

* '...ಈ ಕೃತಿಯಲ್ಲಿ ನಗೆಗನ್ನಡ ನಲಿದಿದೆ, ವಿಜೃಂಭಿಸಿದೆ. ಕನ್ನಡದ ಹಾಸ್ಯಾಸಕ್ತರೆಲ್ಲರೂ ಅಭಿಮಾನದಿಂದ ತಮ್ಮ ಮೆಚ್ಚಿನ ಹಿರಿಕಿರಿಯ ಹಾಸ್ಯಸಾಹಿತಿಗಳನ್ನು ಓದಿ, ಅವರ ಕುರಿತು ಪ್ರಬುದ್ಧ ಪರಿಚಯವನ್ನು ಮಾಡಿಕೊಂಡು ಕೃತಾರ್ಥಭಾವ ತಾಳುವಂತೆ ಪುಸ್ತಕ ಹೊರಬಂದಿದೆ... ಹೊರನಾಡ ಬಂಧುಗಳ ಕನ್ನಡ ಪ್ರೇಮ ಅನುಕರಣೀಯವಾದುದು...'

**– ಭುವನೇಶ್ವರಿ ಹೆಗಡೆ**

(ವಾರ್ತಾ ಭಾರತಿ ಪತ್ರಿಕೆಯ ಅಂಕಣದಲ್ಲಿ)

೬ **ಆಚೀಚೆಯ ಕಥೆಗಳು (೨೦೦೫) ಪ್ರಕಾಶನ: ಕನ್ನಡ ಸಾಹಿತ್ಯ ರಂಗ, ಯು.ಎಸ್.ಎ. ಹಾಗೂ ಅಭಿನವ, ಬೆಂಗಳೂರು. ಪ್ರಧಾನ ಸಂಪಾದಕರು: ಗುರುಪ್ರಸಾದ್ ಕಾಗಿನೆಲೆ**

* 'ಆಚೀಚೆಯ ಕಥೆಗಳು' ಕನ್ನಡದಲ್ಲಿ ನಡೆದ ಇತ್ತೀಚಿನ ಆಕರ್ಷಕ ಪ್ರಯೋಗವಾಗಿದೆ. ತಾಯಿನೆಲದಿಂದ ದೂರವಾದ– ಕನ್ನಡದ ಜೀವಂತ ಸಂಪರ್ಕ ಅಸಾಧ್ಯವಾದ–ಜಾಗದಲ್ಲಿ ಕುಳಿತು ಕೇವಲ ತಮ್ಮ ಮಾತೃಭಾಷೆಯ ಪ್ರೀತಿಗಾಗಿ, 'ಎಂದೆಂದಿಗೂ ಕನ್ನಡವಾಗಿರುವ' ಹಠದಲ್ಲಿ ರಚಿಸಿದ ಈ ಕತೆಗಳು ಕನ್ನಡ ಕಥಾಸಾಹಿತ್ಯಕ್ಕೆ ಕಡಲಾಚೆಯ ಕನ್ನಡಿಗರಿತ್ತ ಅಪೂರ್ವ ಕೊಡುಗೆಯಾಗಿವೆ...'

**– ಯಶವಂತ ಚಿತ್ತಾಲ** (ಬೆನ್ನುಡಿಯಿಂದ)

೭. **ಕುವೆಂಪು ಸಾಹಿತ್ಯ ಸಮೀಕ್ಷೆ (೨೦೦೪) ಪ್ರಕಾಶನ: ಕನ್ನಡ ಸಾಹಿತ್ಯ ರಂಗ, ಯು.ಎಸ್.ಎ. ಹಾಗೂ ವಸಂತ ಪ್ರಕಾಶನ, ಬೆಂಗಳೂರು. ಪ್ರಧಾನ ಸಂಪಾದಕರು: ಆಹಿತಾನಲ**

* '...ಅನಿವಾಸಿ ಕನ್ನಡಿಗರ ಈ ಕೊಡುಗೆ ಕುವೆಂಪು ಅವರಿಗೆ ಅರ್ಪಿಸುವ ಒಂದು ದೊಡ್ಡ ನಮನ. ಕರ್ನಾಟಕದ ಸಮಕಾಲೀನ ಲೇಖಕರ ಮಟ್ಟಕ್ಕೇನೂ ಕಮ್ಮಿಯಿಲ್ಲದ ಲೇಖನಗಳು ಇಲ್ಲಿ ಹೊರಬಂದಿವೆ ಎನ್ನಲು ಹೆಮ್ಮೆಯಾಗುತ್ತದೆ.'

**– ಪ್ರಭುಶಂಕರ**

***

ಸ್ವತಃ ನಮಗೇ ಸೋಜಿಗ ತರುವಂತಹ ನವನವೀನ ಮರುಹುಟ್ಟುಗಳು ನಿತ್ಯವೂ ನಮ್ಮ ದಾರಿಗೆ ಒದಗಿಬಾರದಿದ್ದರೆ ಪಯಣ ಎಷ್ಟೇ ಹೂವಿನ ಹಾಸಿಗೆಯಾಗಿದ್ದರೂ ಅದು ನೀರಸವೇ. ಅಂತೆಯೇ ಬದಲಾವಣೆಯು ಸಹಜವಾಗಿಯೇ ಬೆಳವಣಿಗೆಯ ಬೆನ್ನಟ್ಟಿ ಓಡುತ್ತಿರುತ್ತದೆ ಅಥವಾ ವೈಸಾವರ್ಸಾ. ಇಂತಹ ಒಂದಿಲ್ಲೊಂದು ರೀತಿಯ ಬದಲಾದ ಚಿತ್ರಗಳನ್ನು ಇಲ್ಲಿಯ ಅನಿವಾಸಿ ಭಾರತೀಯರ ಬರಹಗಳು ಅತ್ಯಂತ ಸೂಕ್ಷ್ಮವಾಗಿ ಹಿಡಿದಿಟ್ಟಿವೆ.

ಡಿಜಿಟಲ್ ಕ್ರಾಂತಿಯು ಬದುಕಿನ ಮೌಲ್ಯಗಳ ಮೇಲೆ ಬೀರಿದ ಪರಿಣಾಮ, ಆಸ್ಥೆಯಿಂದ ವಿದೇಶದಲ್ಲಿ ಓದಲು ಬರುವ ಯುವ ಮನಸ್ಸಿನ ತಲ್ಲಣ, ವಿಸ್ಮೃತಗೊಂಡ ಅಮೆರಿಕೆಯ ರಾಜಕೀಯ ಮತ್ತು ಸಾಮಾಜಿಕ ಇತಿಹಾಸ, ಕೌಟುಂಬಿಕತೆಯ ಚೌಕಟ್ಟಿಗೆ ಮುಖಾಮುಖಿಯಾಗಿ ನಿಲ್ಲುವ ಸಮತೆಯ ಸಮಾಜ, ಮನೆಯೊಳಗೆ ಶೌಚಾಲಯ ನಿರ್ಮಿಸಲು ತಡೆಯೊಡ್ಡುವ ಉತ್ತರ ಪ್ರದೇಶದ ಹಳ್ಳಿಗಳಲ್ಲಿ ಇಂದಿಗೂ ಜೀವಂತವಾಗಿರುವ ಸನಾತನ ಸಂಪ್ರದಾಯ, ಪತ್ರ ಸಂಸ್ಕೃತಿಯ ಆಪ್ತತೆಯೊಂದು ಮರೆಯಾದ ಸನ್ನಿವೇಶ, ಅಂತಃಕರಣ ವಿಹೀನರಾಗುತ್ತಿರುವ ಇಂದಿನ ಯುವ ಪೀಳಿಗೆ, ಮಗಳು ತಾಯಾಗಿ, ತಾಯಿ ಮಗಳಾಗಿ ಸ್ಥಿತ್ಯಂತರಗೊಳ್ಳುವ ಬೆರಗು, ನೆನಪುಗಳ ಹಿತವನ್ನು ಕಸಿಯುವ ಅಲ್ಜ಼ೈಮರ್ಸ್ ಮನಃಸ್ಥಿತಿ... ಹೀಗೆ ತಂತಮ್ಮ ಜೀವನ ಕ್ರಮದಲ್ಲಿ ಕಂಡುಂಡ ಪರಿವರ್ತನೆಗಳನ್ನು ಇಲ್ಲಿ ಬರೆದ ಪ್ರತಿ ಲೇಖಕರೂ ವಿಶಾಲಾರ್ಥದಲ್ಲಿ ಗ್ರಹಿಸಿದ್ದಾರೆ.

ಇಲ್ಲಿಯ ಒಟ್ಟಾರೆ ಬರಹಗಳ ಹೂರಣವು, ಬದಲಾವಣೆ ಎಂಬ ಸ್ಥಿತಿ 'ಒಳ್ಳೆಯದನ್ನು ಉಳಿಸಿ ಕೆಟ್ಟದ್ದನ್ನು ಅಳಿಸಲಿ' ಎಂಬ ಅರ್ಥಪೂರ್ಣ ಸದಾಶಯವನ್ನು ಇರಿಸಿಕೊಂಡಿವೆ. ಈ ವಲಸೆ ನೆಲದ ಭಿನ್ನ ಸ್ವಭಾವಗಳನ್ನು ತಮ್ಮೊಳಗೆ ಹಂತಹಂತವಾಗಿ ಬಿಟ್ಟುಕೊಳ್ಳುತ್ತ ಮೆಲ್ಲಗೆ ಅರಳಿದ ಕತೆ ಕವಿತೆ ಲೇಖನಮಾಲೆಗಳ ಈ ವಿಶಿಷ್ಟ ಕೃತಿ, ಬದಲಾದ ಸಮಾಜದ ಜಾಗತಿಕ ಬಿಂಬಗಳನ್ನು ಕಟ್ಟಿಕೊಡುತ್ತಲೇ ಓದುಗರಲ್ಲಿ ಬಹುಮುಖ್ಯವಾದ ಪ್ರಶ್ನೆಗಳನ್ನು ಉದ್ದೀಪಿಸುತ್ತದೆ.

–ಸುನಂದಾ ಕಡಮೆ

ಬದಲಾವಣೆಯ ಅಗ್ನಿದಿವ್ಯವೇ ಮನುಷ್ಯನೊಬ್ಬ ವಲಸೆ ಹೋಗುವ ಕ್ರಿಯೆಯಾಗಿದೆ. ತಾನು ಹುಟ್ಟಿ ಬೆಳೆದ ನೆಲವನ್ನು ಬಿಟ್ಟು, ಮತ್ತೊಂದೆಡೆ ಬದುಕಿಗಾಗಿ ಹೋಗುವ ಪರಿ ಅನನ್ಯವಾದದ್ದು. ಇತಿಹಾಸದುದ್ದಕ್ಕೂ ಈ ಪ್ರಕ್ರಿಯೆ ನಿರಂತರವಾಗಿ ನಡೆದಿದೆ. ತನ್ನದಲ್ಲದ್ದನ್ನು ಒಪ್ಪಿಕೊಳ್ಳಲು ತೆರೆದ ಮನಸ್ಸು ಇರಬೇಕಾಗುತ್ತದೆ. ಯಾವುದೇ ಸಿನಿಕತನ, ಆತ್ಮಪ್ರಶಂಸೆಯಲ್ಲಿದ್ದವರು ವಲಸೆಯಂತಹ ಕಷ್ಟದ ಕೆಲಸವನ್ನು ಮಾಡಲಾರರು. ನಮ್ಮೂರಿನ ಶ್ರೇಷ್ಠತೆಯ ಮಾನದಂಡವನ್ನೆಲ್ಲಾ ಹಿನ್ನೆಲೆಗೆ ಸರಿಸಿ, ಮತ್ತೆ ಹೊಸ ಪ್ರಮಾಣಗಳನ್ನು ಕಲಿತು ಬದುಕು ಪ್ರಾರಂಭಿಸಬೇಕಾಗುತ್ತದೆ. ನಮ್ಮ ಶಕ್ತಿ ಮತ್ತು ದೌರ್ಬಲ್ಯಗಳೆರಡೂ ತಿಳಿಯುವುದು ಈ ಗಳಿಗೆಯಲ್ಲಿಯೇ! ಇಲ್ಲಿ ಗೆದ್ದವನು ಎಲ್ಲಿಯೂ ಗೆಲ್ಲಬಲ್ಲ...

– ವಸುಧೇಂದ್ರ (ಒಳಪುಟಗಳಿಂದ)




ಕನ್ನಡ ಸಾಹಿತ್ಯ ರಂಗ, ಯು.ಎಸ್.ಎ.